# ಕನ್ನಡದ ಸಂತ ಕವಿಗಳ ಕೃತಿಗಳಲ್ಲಿ ಭಕ್ತಿಸೂತ್ರಗಳ ಪ್ರತಿಪಾದನೆ

## - ಒಂದು ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ ಪದವಿಗಾಗಿ ಅರ್ಪಿಸಿರುವ

**ಮಹಾಪ್ರಬಂಧ**


ಸಂಶೋಧಕರು

ಗುರುದಾಸ್ ಎಸ್ ಪಿ

ಉಪನ್ಯಾಸಕರು, ಎಸ್.ಎನ್.ಎಂ. ಪಾಲಿಟೆಕ್ನಿಕ್

ಕೊಡಂಗಲ್ಲು, ಮೂಡಬಿದಿರೆ-574197

ಮಾರ್ಗದರ್ಶಕರು

ಡಾ. ಈ. ಮಹಾಬಲ ಭಟ್ಟ

ಮುಖ್ಯಸ್ಥರು, ಸಂಸ್ಕೃತ ವಿಭಾಗ, ಶ್ರೀ ಧ.ಮಂ.ಕಾಲೇಜು

ಉಜಿರೆ, ದ.ಕ

ಡಾ. ಹಾಮಾನಾ ಸಂಶೋಧನಾ ಕೇಂದ್ರ,

ಶ್ರೀ ಧ.ಮಂ.ಕಾಲೇಜು ಆವರಣ, ಉಜಿರೆ-574240

ದ.ಕ








೨೦೧೧

# ಕನ್ನಡದ ಸಂತ ಕವಿಗಳ ಕೃತಿಗಳಲ್ಲಿ ಭಕ್ತಿಸೂತ್ರಗಳ ಪ್ರತಿಪಾದನೆ

## – ಒಂದು ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ ಪದವಿಗಾಗಿ ಅರ್ಪಿಸಿರುವ

**ಮಹಾಪ್ರಬಂಧ**

**ಸಂಶೋಧಕರು**

**ಗುರುದಾಸ್ ಎಸ್. ಪಿ.**

ಉಪನ್ಯಾಸಕರು, ಎಸ್.ಎನ್.ಎಂ. ಪಾಲಿಟೆಕ್ನಿಕ್

ಕೊಡಂಗಲ್ಲು,ಮೂಡಬಿದಿರೆ-574197

**ಮಾರ್ಗದರ್ಶಕರು**

**ಡಾ। ಈ. ಮಹಾಬಲ ಭಟ್ಟ**

ಮುಖ್ಯಸ್ಥರು, ಸಂಸ್ಕೃತ ವಿಭಾಗ, ಶ್ರೀ ಧ.ಮಂ.ಕಾಲೇಜು,

ಉಜಿರೆ, ದ.ಕ.

**ಡಾ। ಹಾಮಾನಾ ಸಂಶೋಧನಾ ಕೇಂದ್ರ,**

ಶ್ರೀ ಧ.ಮಂ.ಕಾಲೇಜು ಆವರಣ, ಉಜಿರೆ-574240

ದ.ಕ.



೨೦೧೧




# ಪ್ರಮಾಣ ಪತ್ರ

**'ಕನ್ನಡದ ಸಂತ ಕವಿಗಳ ಕೃತಿಗಳಲ್ಲಿ ಭಕ್ತಿಸೂತ್ರಗಳ ಪ್ರತಿಪಾದನೆ–ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಪಿ.ಎಚ್.ಡಿ ಪದವಿಗಾಗಿ ಸಿದ್ಧಪಡಿಸಲಾಗಿದೆ. ಡಾ। ಈ.ಮಹಾಬಲಭಟ್ಟ, ಮುಖ್ಯಸ್ಥರು, ಸಂಸ್ಕೃತ ವಿಭಾಗ, ಶ್ರೀ.ಧ.ಮಂ.ಕಾಲೇಜು, ಉಜಿರೆ, ಇವರು ಈ ಮಹಾಪ್ರಬಂಧ ರಚನೆಗೆ ಮಾರ್ಗದರ್ಶನ ಮಾಡಿರುತ್ತಾರೆ. ಈ ಮಹಾಪ್ರಬಂಧವನ್ನಾಗಲೀ ಅಥವಾ ಇದರ ಯಾವುದೇ ಭಾಗವನ್ನಾಗಲೀ ಈ ಮೊದಲು ಯಾವುದೇ ಪದವಿಗಾಗಲಿ ಇಲ್ಲವೇ ಪ್ರಕಟಣೆಗಾಗಲೀ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಉಜಿರೆ

ದಿನಾಂಕ: 10 –10 –2011

**ಗುರುದಾಸ್.ಎಸ್.ಪಿ**

ಸಂಶೋಧಕರು.






# ದೃಢೀಕರಣ ಪತ್ರ

ಗುರುದಾಸ್.ಎಸ್.ಪಿ ಇವರು 'ಕನ್ನಡದ ಸಂತಕವಿಗಳ ಕೃತಿಗಳಲ್ಲಿ ಭಕ್ತಿಸೂತ್ರಗಳ ಪ್ರತಿಪಾದನೆ – ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಂಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿರುತ್ತಾರೆ. ಈ ಮಹಾಪ್ರಬಂಧವನ್ನಾಗಲೀ ಅಥವಾ ಇದರ ಯಾವುದೇ ಭಾಗವನ್ನಾಗಲೀ ಅಭ್ಯರ್ಥಿಯು ಈ ಮೊದಲು ಯಾವುದೇ ಪದವಿಗಾಗಲೀ ಇಲ್ಲವೇ ಪ್ರಕಟನೆಗಾಗಲೀ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

Mahabalabhatta

**ಡಾ। ಈ. ಮಹಾಬಲ ಭಟ್ಟ**
ಮುಖ್ಯಸ್ಥರು,
ಸಂಸ್ಕೃತ ವಿಭಾಗ,
ಶ್ರೀ ಧ.ಮಂ.ಕಾಲೇಜು
ಉಜಿರೆ

ಸ್ಥಳ: ಉಜಿರೆ
ದಿನಾಂಕ: 10 – 10 –2011



# ಅನುಕ್ರಮಣಿಕೆ

**ಅಧ್ಯಾಯ ೭ ಉಪಸಂಹಾರ**



**ಅನುಬಂಧ**

## ಸಂಕೇತ ಸೂಚಿ

| | | |
|---|---|---|
| 1. | ದೇ.ನಾ.ಭ. | ದೇವರ್ಷಿ ನಾರದರ ಭಕ್ತಿಸೂತ್ರಗಳು |
| 2. | ಶಾಂ.ಭ.ಸೂ. | ಶಾಂಡಿಲ್ಯ ಭಕ್ತಿ ಸೂತ್ರಗಳು |
| 3. | ಭಾಗ. | ಶ್ರೀಮದ್ಭಾಗವತ |
| 4. | ಗೀತಾ. | ಭಗವದ್ಗೀತೆ |
| 5. | ಉ.ಭಾ. | ಉಪನಿಷತ್‌ಭಾವಧಾರೆ |
| 6. | ಪು.ದಾ.ಕೀ. | ಪುರಂದರದಾಸರ ಕೀರ್ತನೆಗಳು |
| 7. | ಬ.ವ. | ಬಸವಣ್ಣನವರ ವಚನಗಳು |
| 8. | ಅ.ವ. | ಅಕ್ಕಮಹಾದೇವಿಯ ವಚನಗಳು |
| 9. | ವ.ಸಾ.ಸಂ. | ವಚನ ಸಾಹಿತ್ಯ ಸಂಗ್ರಹ |
| 10. | ಭ.ಭಾ. | ಭಕ್ತಿ ಭಾರತೀ |
| 11. | ಸ.ದಾ.ಸ. | ಸಮಗ್ರ ದಾಸ ಸಾಹಿತ್ಯ |
| 12. | ಸಾ.ಕೀ. | ಸಾವಿರಾರು ಕೀರ್ತನೆಗಳು |
| 13. | ಕ.ಸಾ.ಸಂ. | ಕನಕದಾಸ ಸಾಹಿತ್ಯದರ್ಶನ ಸಂಪುಟ |
| 14. | ಶ್ರೀ.ಮ.ಗ್ರಂ. | ಶ್ರೀ ಮನ್ಮಧ್ವಸಿದ್ಧಾಂತ ಗ್ರಂಥಾಲಯ |
| 15. | ಪ್ರ. | ಪ್ರಕಾಶನ |
| 16. | ಸಂ. | ಸಂಪಾದನೆ |
| 17. | ಮೊ. ಮು. | ಮೊದಲ ಮುದ್ರಣ |
| 18. | ಕೀ.ಸಂ. | ಕೀರ್ತನ ಸಂಖ್ಯೆ |
| 19. | ಉ.ಸಂ. | ಉಗಾಭೋಗ ಸಂಖ್ಯೆ |
| 20. | ಭ.ರ. | ಭಗವದ್ಭಕ್ತಿ ರಸಾಯನಂ |

# ಅಧ್ಯಾಯ ೧.

## ೧.೧ ಪ್ರಸ್ತಾವನೆ

ಭಕ್ತಿಯ ಮೂಲಭೂತವಾದ ಸಿದ್ಧಾಂತದ ಅಧ್ಯಯನ, ಅನುಷ್ಠಾನ ಹಾಗೂ ಪ್ರಚಾರದ ಮೂಲಕ ಸಮಾಜದಲ್ಲಿ, ಸಹಿಷ್ಣುತೆ, ಭಾವೈಕ್ಯ, ಸೌಹಾರ್ದವನ್ನು ಮೂಡಿಸಲು ಸಾಧ್ಯ ಎನ್ನುವುದಕ್ಕೆ ಈ ನಾಡಿನ ಚರಿತ್ರೆಯೇ ಸಾಕ್ಷಿಯಾಗಿದೆ. ಭಕ್ತಿಯು ಮಾನವನ ವೈಯಕ್ತಿಕ ಜೀವನ ಹಾಗೂ ಮೌಲ್ಯಗಳಿಗೆ ಸಂಬಂಧಿಸಿದ ವಿಚಾರವಾದರೂ ಸಮುದಾಯದ, ಸಮಾಜದ ಮಾತ್ರವಲ್ಲದೆ ಒಂದು ರಾಷ್ಟ್ರದ ಸಂಸ್ಕೃತಿ ಹಾಗೂ ಜನಜೀವನವನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಬಲ್ಲುದು. ರಾಜ ಮಹಾರಾಜರಿಂದ, ಮಹಾನ್ ರಾಜಕಾರಣಿಗಳಿಂದಲೂ ಅಧಿಕಾರದ ಬಲದಿಂದಲೂ ಸಾಧ್ಯವಾಗದ ಸಮಾಜವನ್ನು ಕಟ್ಟುವಂತಹ, ಉನ್ನತ ಧ್ಯೇಯಗಳನ್ನು ಸಾಕಾರಗೊಳಿಸುವಲ್ಲಿ ಜನಮಾನಸವನ್ನು ಜೋಡಿಸುವ ಕಾರ್ಯ ಈ ನಾಡಿನ ಸಂತ ಮಹಂತರು ಭಕ್ತಿಯ ಶಕ್ತಿಯಿಂದ ಸಾಧಿಸಿದ್ದಾರೆ.

ಆದರೆ ಭಕ್ತಿಯ ಹೆಸರಿನಲ್ಲಿ ಕಚ್ಚಾಟ, ವೈಷಮ್ಯ, ಸಮುದಾಯಗಳ ನಡುವೆ ಘರ್ಷಣೆ, ಮುಗ್ಧ ಜನರ ಶೋಷಣೆ, ಜನರ ಆತ್ಮ ವಿಶ್ವಾಸವನ್ನು ಕುಗ್ಗಿಸುವಂತಹ ಕೃತ್ಯಗಳನ್ನು ಇಂದು ನಾವು ಸಮಾಜದಲ್ಲಿ ಕಾಣುತ್ತಿದ್ದೇವೆ. ಇವಕ್ಕೆಲ್ಲಾ ಮುಖ್ಯ ಕಾರಣ ಭಕ್ತಿಸಿದ್ಧಾಂತದ ತಿರುಳು, ಆಳ, ವಿಸ್ತಾರ, ಆಶಯಗಳು ಜನ ಸಾಮಾನ್ಯರನ್ನು ತಲುಪದೇ ಇರುವಂಥಾದ್ದು. ಭಕ್ತಿ ಸಿದ್ಧಾಂತದ ತಿರುಳನ್ನು ಭಕ್ತಿಸೂತ್ರಗಳಲ್ಲಿ ಕಾಣಬಹುದು. ಸಂಸ್ಕೃತದಲ್ಲಿರುವಂತಹ ಈ ಭಕ್ತಿ ಸೂತ್ರಗಳು (ಮುಖ್ಯವಾಗಿ ದೇವರ್ಷಿ ನಾರದರ ಭಕ್ತಿ ಸೂತ್ರಗಳು ಹಾಗೂ ಶಾಂಡಿಲ್ಯ ಮಹರ್ಷಿಗಳ ಭಕ್ತಿ ಸೂತ್ರಗಳು) ಅಲ್ಪಾಕ್ಷರಗಳನ್ನೊಳಗೊಂಡ ಕಿರು ಸಾಲುಗಳಲ್ಲಿ ಭಕ್ತಿ ಸಿದ್ಧಾಂತವನ್ನು ಸರಳವಾಗಿ, ನಿಸ್ಸಂದಿಗ್ಧವಾಗಿ ನಿರೂಪಿಸುತ್ತವೆ. ಕರ್ನಾಟಕದ ಸಂತ ಪರಂಪರೆಯಲ್ಲಿ ಬಂದಂತಹ ಅನೇಕ ದಾಸರು, ಶರಣರು, ಯೋಗಿಗಳು ತಮ್ಮ ಸಾಹಿತ್ಯ ಕೃತಿಗಳ ಮೂಲಕ ಈ ಮೂಲಭೂತ ತತ್ತ್ವಗಳನ್ನು ತಮ್ಮದೇ ಆದ ರೀತಿಯಲ್ಲಿ ಜನತೆಗೆ ತಲುಪಿಸುವಂತಹ ಕಾರ್ಯವನ್ನು ಮಾಡಿದ್ದಾರೆ. ಆದರೆ ಈ ಸಂತರು ಉದಾರ ಹೃದಯದಿಂದ ಸಮಾಜಕ್ಕೆ ನೀಡಿದ ಸಂದೇಶವನ್ನು, ಕೊಡುಗೆಯನ್ನು ಮತೀಯ, ರಾಜಕೀಯ ಹಾಗೂ ಇನ್ನಿತರ ಕಾರಣಗಳಿಂದ ಕೆಲವೇ ವರ್ಗಕ್ಕೆ ಸೀಮಿತಗೊಳಿಸಿ ಸಂತ ಸಂತರ ನಡುವೆ, ವರ್ಗ, ಸಮುದಾಯಗಳ ನಡುವೆ ಗೋಡೆಯನ್ನು ಕಟ್ಟುವಂತಹ ಕೆಲಸ ನಡೆಯುತ್ತಿದೆ. ಅಂತಹ ಈ ಕಾಲಘಟ್ಟದಲ್ಲಿ ಭಕ್ತಿಸಿದ್ಧಾಂತದ ಮೂಲತತ್ವವನ್ನು ನೀಡಿರುವಂತಹ ಭಕ್ತಿಸೂತ್ರಗಳು ಹಾಗೂ ಆ ಸೂತ್ರಗಳು ಪ್ರತಿಪಾದಿಸುವಂತಹ ತತ್ತ್ವವನ್ನು ಸರಳವಾದ ಸಾರಗರ್ಭಿತವಾದ ಹಾಡುಗಳು, ಕೀರ್ತನೆಗಳು, ವಚನಗಳ ಮೂಲಕ ಸಮಾಜದಲ್ಲಿ ಭಕ್ತಿಯ ಕ್ರಾಂತಿಯನ್ನುಂಟು

ಮಾಡಿದಂತಹ ಕನ್ನಡದ ವಿವಿಧ ಸಂತರ ಕೃತಿಗಳನ್ನು ಮುಖಾಮುಖಿಯಾಗಿಸಿ, ಇವುಗಳ ನಡುವೆ ಇರುವ ಸಾದೃಶ್ಯ ಅಥವಾ ವೈರುಧ್ಯ ಮತ್ತು ಏಕಸೂತ್ರತೆ ಅಥವಾ ವಿಭಿನ್ನತೆಯನ್ನು ನಿರೂಪಿಸುವಂಥಾದ್ದು ಈ ಸಂಶೋಧನೆಯ ಮೂಲ ಉದ್ದೇಶವಾಗಿದೆ.

ಅನುಷ್ಠಾನಪರವಾದ ಭಕ್ತಿಯನ್ನು ನೆಲೆಯಾಗಿರಿಸಿಕೊಂಡ ಮಾರ್ಗ ಹಾಗೂ ದೇಸೀ ಅಭಿವ್ಯಕ್ತಿಗಳ ಅಧ್ಯಯನವು ಇದಾಗಿದೆ ಎಂದು ಪರಿಭಾವಿಸಿಕೊಳ್ಳಬಹುದು. ಕಾರಣ ಈ ಅಧ್ಯಯನಕ್ಕೆ ಆಯ್ದುಕೊಂಡಿರುವ ಆಧಾರ ಗ್ರಂಥ 'ದೇವರ್ಷಿನಾರದರ ಭಕ್ತಿ ಸೂತ್ರಗಳು' ಮೂಲತಃ ಸಂಸ್ಕೃತ ಭಾಷೆಯಲ್ಲಿದ್ದು, ಇದರ ಕುರಿತಾಗಿ ಈಗಾಗಲೆ ಕನ್ನಡದಲ್ಲಿ ಪ್ರಕಟಗೊಂಡಿರುವಂತಹ ವ್ಯಾಖ್ಯಾನಗಳನ್ನು ಆಧಾರವಾಗಿರಿಸಿಕೊಂಡು, ಕರ್ನಾಟಕದ ಮಧ್ಯಕಾಲೀನ ಭಕ್ತಿ ಪಂಥಗಳಾದ ವಚನ ಸಾಹಿತ್ಯ, ದಾಸ ಸಾಹಿತ್ಯ ಹಾಗೂ ಇನ್ನಿತರ ಕೆಲವು ಸಂತಕವಿಗಳ ಸಾಹಿತ್ಯವನ್ನು ಒಂದು ತೌಲನಿಕ ವಿವೇಚನೆಗೆ ಒಳಪಡಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ದಾಸ ಸಾಹಿತ್ಯ ಹಾಗೂ ವಚನ ಸಾಹಿತ್ಯವನ್ನ ಆಧಾರವಾಗಿರಿಸಿಕೊಂಡು ಈಗಾಗಲೇ ಅನೇಕ ತೌಲನಿಕ ಅಧ್ಯಯನಗಳು ನಡೆದಿವೆಯಾದರೂ ಹೆಚ್ಚಿನ ಅಧ್ಯಯನಗಳು ಮತಪರವಾದ ನಿಲುವುಗಳನ್ನು ಪೋಷಿಸುವ ಉದ್ದೇಶ ಹೊಂದಿದ್ದು ಅನುಭಾವ ಕೇಂದ್ರಿತವಾದ, ಅನುಷ್ಠಾನ ಪರವಾದ ಭಕ್ತಿಯನ್ನು ನೆಲೆಯಾಗಿರಿಸಿಕೊಂಡ, ಸಮನ್ವಯ ದೃಷ್ಟಿಕೋನವುಳ್ಳ ಅಧ್ಯಯನಗಳು ವಿರಳ. ಈ ನಿಟ್ಟಿನಲ್ಲಿ ನಾರದ ಭಕ್ತಿ ಸೂತ್ರಗಳು ಸಮರ್ಥವಾದ ನೆಲೆಗಟ್ಟನ್ನು ಒದಗಿಸಿಕೊಡಬಲ್ಲುದು.

ತಮ್ಮ ಮತಪರವಾದ ಶಾಸ್ತ್ರೀಯ ಮಂಡನೆಯ ಸೀಮಿತ ಚೌಕಟ್ಟಿನಿಂದ ಸಮುದಾಯದ ಕಡೆಗೆ ಸಮಾಜಮುಖಿಯಾದ ಚಿಂತನೆಯ ಕಡೆಗೆ ಮುಖಮಾಡಿದ್ದರಲ್ಲಿಯೇ ವಚನಕಾರರ ಹಾಗೂ ದಾಸರ ಸಾಹಿತ್ಯದ ಮೂಲಸೆಲೆಯಿರುವುದು. ಭಕ್ತಿ ಸೂತ್ರಗಳು ಮೇಲ್ನೋಟಕ್ಕೆ ವೈಯಕ್ತಿಕ ಸಾಧನೆ, ಚಿತ್ತಶುದ್ಧಿ, ಭಕ್ತಿಯ ಲಕ್ಷಣಗಳ ನಿರೂಪಣೆಗೆ ಮಹತ್ವ ನೀಡಿರುವಂತೆ ಕಂಡು ಬಂದರೂ, ನೈತಿಕತೆ, ಚಾರಿತ್ರ್ಯಶುದ್ಧಿ, ಸಮಾನತೆಯಂತಹ ಅನೇಕ ಸುಸಂಸ್ಕೃತ ಸಮಾಜ ನಿರ್ಮಾಣಕ್ಕೆ ಅಗತ್ಯವಾದ ಸೂಕ್ಷ್ಮವಾದ ಅಂಶಗಳ ಕಡೆಗೆ ಬೆಳಕು ಚೆಲ್ಲಿರುವುದನ್ನು ಗುರುತಿಸಬಹುದಾಗಿದೆ. ಈ ಸಮಾಜಮುಖೀ ಒಳತುಡಿತವನ್ನು ಕನ್ನಡದ ಬಹುತೇಕ ಸಂತ ಕವಿಗಳ ಕೃತಿಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಆ ನಿಟ್ಟಿನಲ್ಲಿ ಭಕ್ತಿ ಸೂತ್ರಗಳಲ್ಲಿ ನಿರೂಪಿತವಾದ ಚಿಂತನೆಗಳು ಕನ್ನಡದ ಸಂತ ಕವಿಗಳ ಕೃತಿಗಳಲ್ಲಿ ಹೇಗೆ ಅವರ ಕಾಲ, ನಂಬಿದ ಸಿದ್ಧಾಂತ, ಸಾಮಾಜಿಕ ಹಿನ್ನಲೆಗನುಗುಣವಾಗಿ ಅಭಿವ್ಯಕ್ತಿಯನ್ನು ಪಡೆದುಕೊಂಡಿವೆ ಹಾಗೂ ಈ ಅಭಿವ್ಯಕ್ತಿಯಲ್ಲಿರುವಂತಹ ವೈಸಾದೃಶ್ಯದ ಕಡೆಗೆ ಬೆಳಕು ಚೆಲ್ಲುವುದು ಈ ಅಧ್ಯಯನದ ಉದ್ದೇಶವಾಗಿದೆ.

ಭಕ್ತಿ ಸೂತ್ರಗಳಲ್ಲಿ ಅಡಕವಾಗಿರುವ ನೈತಿಕ, ಪಾರಮಾರ್ಥಿಕ ಮೌಲ್ಯಗಳನ್ನು

ಪ್ರಸ್ತುತ ಸಂದರ್ಭದಲ್ಲಿ ಅಳವಡಿಸಿಕೊಂಡು ಸುಸಂಸ್ಕೃತ ಸಮಾಜದ ನಿರ್ಮಾಣದಲ್ಲಿ ಮಹತ್ವದ ಪಾತ್ರವನ್ನು ವಹಿಸಲು ಸಾಧ್ಯ ಎಂದು ನಿರೂಪಿಸಿರುವಂತಹ ಕೆಲವು ಮಹನೀಯರ ಹಾಗೂ ಸಂಸ್ಥೆಗಳ ಅನುಭವ ಹಾಗೂ ಸಾಧನೆಗಳನ್ನು ದಾಖಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಮೇಲೆ ಹೇಳಿದ ವಿಶ್ಲೇಷಣೆಯ ಮೂಲಕ ದೊರಕಬಹುದಾದಂತಹ ಸಮಗ್ರವಾದ ಸಂದೇಶವನ್ನು ಕ್ರೋಢೀಕರಿಸಿ ಭಕ್ತಿ ಸೂತ್ರಗಳು ರಚನೆಗೊಂಡಂತಹ ಕಾಲದಲ್ಲಾಗಿರಲಿ (ಆ ಕಾಲವು ನಿರ್ದಿಷ್ಟವಾಗಿ ಅಂದಾಜು ಮಾಡಲಾಗಿಲ್ಲ) ವಚನಕಾರರ, ದಾಸರ ಅಥವಾ ಇನ್ನ್ಯಾವುದೇ ಸಂತ ಕವಿಗಳ ಕಾಲದಲ್ಲಾಗಿರಲಿ, ಭಕ್ತಿಯ ಮೂಲಭೂತವಾದ ಅನುಭಾವ ಪ್ರಧಾನವಾದ ಅಂಶಗಳು ಬದಲಾಗಲಾರದು, ಆಚರಣೆಯ ನೆಲೆಗಳಲ್ಲಿ, ಮತೀಯ ನಂಬಿಕೆಗಳ ನೆಲೆಗಳಲ್ಲಿ ವಿಭಿನ್ನತೆ ಕಂಡುಬಂದರೂ ಸಮನ್ವಯ, ಸಾಮರಸ್ಯ ಹಾಗೂ ಐಕ್ಯಮತ್ಯವನ್ನು ಸಾಧಿಸಲು ಭಕ್ತಿಸಿದ್ಧಾಂತ ಹಾಗೂ ಸಂತರ ಸಂದೇಶ ಸಹಕಾರಿಯಾಗಬಲ್ಲುದು ಎನ್ನುವುದನ್ನು ನಿರೂಪಿಸುವುದು ಸಂಶೋಧನೆಯ ಉದ್ದೇಶವಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ, ವಿಧಾನ ಹಾಗೂ ಈ ವರೆಗಿನ ಅಧ್ಯಯನಗಳ ಸಮೀಕ್ಷೆ:

ವಿಶಾಲ ವ್ಯಾಪ್ತಿಯನ್ನು ಹೊಂದಿರುವ ಈ ಪ್ರಬಂಧಕ್ಕೆ ಸಂಬಂಧಿಸಿದ ಅಧ್ಯಯನವನ್ನು ಮುಖ್ಯವಾಗಿ ಈ ಕೆಳಗಿನ ನೆಲೆಗಟ್ಟುಗಳಲ್ಲಿ ವಿಂಗಡಿಸಿಕೊಳ್ಳಬಹುದು:

೧. ಭಕ್ತಿಸೂತ್ರಗಳಲ್ಲಿ ಮುಖ್ಯವಾಗಿ ನಾರದ ಭಕ್ತಿ ಸೂತ್ರವನ್ನು ಮಾತ್ರ ಅಧ್ಯಯನದ ನೆಲೆಗಟ್ಟಾಗಿ ಆಯ್ದುಕೊಂಡಿರುತ್ತೇನೆ. ಅವಶ್ಯವೆನಿಸಿದಲ್ಲೆಲ್ಲಾ ಕೆಲವು ಕಡೆಗಳಲ್ಲಿ ತತ್ತ್ವದ ವಿಶದೀಕರಣಕ್ಕಾಗಿ ಶಾಂಡಿಲ್ಯ ಭಕ್ತಿ ಸೂತ್ರವನ್ನು ಆನುಷಂಗಿಕವಾಗಿ ಬಳಸಿಕೊಂಡಿರುತ್ತೇನೆ.

೨. ಸೂತ್ರಗಳ ಸಮಗ್ರ ಅಧ್ಯಯನಕ್ಕಾಗಿ ಸ್ವಾಮಿ ಹರ್ಷಾನಂದರು ಅನುವಾದ ಹಾಗೂ ವ್ಯಾಖ್ಯಾನ ಸಹಿತ ರಚಿಸಿರುವ ಉದ್ಗ್ರಂಥ 'ದೇವರ್ಷಿ ನಾರದರ ಭಕ್ತಿಸೂತ್ರಗಳು' (ಪ್ರಕಟಣೆ: ರಾಮಕೃಷ್ಣ ಮಠ, ಬೆಂಗಳೂರು, 1992) ಇದನ್ನು ಆಧರಿಸಿರುತ್ತೇನೆ. ಹಾಗೆಯೇ ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1992 (ಮೊದಲನೆಯ ಮುದ್ರಣ 1972), ಇವರು ಪ್ರಕಟಪಡಿಸಿದ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರ ನಾರದೀಯ ಭಕ್ತಿಸೂತ್ರಗಳ ಅನುವಾದ ಹಾಗೂ ವ್ಯಾಖ್ಯಾನವನ್ನೊಳಗೊಂಡ 'ಭಕ್ತಿಚಂದ್ರಿಕೆ' ಎನ್ನುವ ಗ್ರಂಥವನ್ನು ಕೂಡ ಸಾಂದರ್ಭಿಕವಾಗಿ ಬಳಸಿಕೊಂಡಿರುತ್ತೇನೆ.

ಈ ಎರಡೂ ಗ್ರಂಥಗಳಲ್ಲಿ ಸೂತ್ರಗಳ ವ್ಯಾಖ್ಯಾನಕ್ಕೆ ಉಪನಿಷತ್ತು, ಭಗವದ್ಗೀತೆ, ಶ್ರೀಮದ್ಭಾಗವತ, ಧರ್ಮಶಾಸ್ತ್ರ, ಇತಿಹಾಸ ಹಾಗೂ ಪುರಾಣಗಳನ್ನು ವ್ಯಾಪಕವಾಗಿ ಬಳಸಿಕೊಂಡಿರುತ್ತಾರೆ. (ಸ್ವಾಮಿ ಹರ್ಷಾನಂದರ ಗ್ರಂಥದಲ್ಲಿ ಇವೆಲ್ಲವುಗಳ ಜೊತೆಯಲ್ಲಿ ಸ್ವಾಮಿ ವೇದಾಂತಾನಂದಜೀಯವರ 'ಭಕ್ತಿಪ್ರಸಂಗ' ಎನ್ನುವ ಬಂಗಾಳೀ ಗ್ರಂಥದಿಂದ ಸಂಗ್ರಹಿಸಲಾದ ಶ್ರೀ ರಾಮಕೃಷ್ಣ ಪರಮಹಂಸರು ಭಕ್ತಿಯೋಗದ ಭಕ್ತಿಸಾಧನೆಯ ಬಗ್ಗೆ ನೀಡಿರುವ ಉಪದೇಶಗಳ ಭಾವಾನುವಾದವನ್ನೂ ನೀಡಲಾಗಿದೆ). ಹಾಗಾಗಿ ಸೂತ್ರಗಳ ಅನುವಾದ ಹಾಗೂ ವ್ಯಾಖ್ಯಾನವನ್ನು ಹೆಚ್ಚಿನ ಕಡೆಗಳಲ್ಲಿ ಈ ಗ್ರಂಥಗಳಿಂದ ಆಯ್ದು ಯಥಾವತ್ತಾಗಿ ದಾಖಲಿಸಿರುತ್ತೇನೆ.

೩. ಮೂರನೇ ಅಧ್ಯಾಯದಲ್ಲಿ ಸಂತ ಕವಿಗಳು ಹಾಗೂ ಅವರ ಕೃತಿಗಳ ಹಿನ್ನೆಲೆಯನ್ನು ಒದಗಿಸುವ ಉದ್ದೇಶದಿಂದ ಶ್ರೀ ಮದ್ಭಾಗವತ, ಭಗವದ್ಗೀತೆ ಇತ್ಯಾದಿ ಗ್ರಂಥಗಳ ಆಧಾರದಿಂದ ಸಂತರ ಜೀವನಕ್ಕೆ ಒಂದು ಚೌಕಟ್ಟನ್ನು ಒದಗಿಸಿರುವಂತಹ ಭಾಗವತ ಧರ್ಮ, ಅವರ ಸಮಾಜಮುಖೀ ಚಿಂತನೆಗಳ ಬಳುವಳಿಯಾದ ಭಕ್ತಿ ಚಳವಳಿ, ಅವರ ಕೃತಿಗಳ ಅಧ್ಯಯನದ ಮಹತ್ವ ಹಾಗೂ ವೈಶಿಷ್ಟ್ಯ, ಕರ್ನಾಟಕದಲ್ಲಿ ಭಕ್ತಿ ಪಂಥದ ಬೆಳವಣಿಗೆ ಈ ಉಪ ಅಧ್ಯಾಯಗಳನ್ನು ಅಳವಡಿಸಿಕೊಂಡಿರುತ್ತೇನೆ.

೪. ನಾಲ್ಕನೆಯ ಅಧ್ಯಾಯದಲ್ಲಿ ನೇರವಾಗಿ ಅಧ್ಯಯನದ ಮುಖ್ಯ ವಿಷಯವನ್ನು ವಿಶ್ಲೇಷಣೆಗೆ ಆಯ್ದುಕೊಂಡಿರುತ್ತೇನೆ. ಇದು ಸಮಗ್ರ ಅಧ್ಯಯನದ ಬಹುಮುಖ್ಯ ಅಧ್ಯಾಯವಾಗಿದೆ. ಈ ಅಧ್ಯಾಯದಲ್ಲಿ ನಾರದೀಯ ಭಕ್ತಿ ಸೂತ್ರಗಳಲ್ಲಿ ನಿರೂಪಿತವಾದ ವಿಷಯಗಳ ಆಧಾರದ ಮೇಲೆ(ಸ್ವಾಮಿ ಹರ್ಷಾನಂದರ 'ದೇವರ್ಷಿ ನಾರದರ ಭಕ್ತಿಸೂತ್ರಗಳು' ಈ ಗ್ರಂಥದ ಆಧಾರದಲ್ಲಿ) ಈ ಕೆಳಗೆ ಪಟ್ಟಿ ಮಾಡಿರುವ ಉಪ ಅಧ್ಯಾಯಗಳನ್ನು ಮಾಡಿಕೊಂಡಿರುತ್ತೇನೆ:

೪.೧ ಪ್ರತಿಪಾದನೆಯ ಒಳನೋಟ

೪.೨ ಭಕ್ತಿಯ ರೂಪ – ಸ್ವರೂಪ

೪.೩ ಭಕ್ತಿ ಸಾಧನೆಯ ಫಲ ನಿರ್ದೇಶನ

೪.೪ ಕಾಮಕ್ಕೂ ಭಕ್ತಿಗೂ ಇರುವ ವೈಲಕ್ಷಣ್ಯ

೪.೫ ಜ್ಞಾನ ಹಾಗೂ ಭಕ್ತಿಯ ವಿಶ್ಲೇಷಣೆ

೪.೬ ಶಾಸ್ತ್ರಾಧ್ಯಯನ, ಕರ್ಮಾನುಷ್ಠಾನ ಹಾಗೂ ಭಕ್ತಿಯ ವಿಶ್ಲೇಷಣೆ

೪.೭ ಭಕ್ತಿಯ ಆಂತರಿಕ ದೃಢತೆಯ ಲಕ್ಷಣಗಳು

೪.೮ ಭಕ್ತಿಸಾಧನೆ

೪.೯ ಭಕ್ತಿಯ ಪ್ರಭೇದಗಳು – ಗೌಣೀಭಕ್ತಿ ಹಾಗೂ ಪರಾಭಕ್ತಿ

೪.೧೦ ಮಾಯೆ ಹಾಗೂ ಅದನ್ನು ದಾಟುವ ಉಪಾಯ

೪.೧೧ ಮುಕ್ತರಾದ ಭಕ್ತರ ಲಕ್ಷಣಗಳು

೪.೧೨ ಅವತಾರ– ಲಕ್ಷಣ ಹಾಗೂ ಮಹಿಮೆ

ಭಕ್ತಿಸೂತ್ರಗಳ ಆಧಾರದಲ್ಲಿ ಮೇಲೆ ಪಟ್ಟಿ ಮಾಡಿರುವ ವಿಷಯಗಳ ವಿಶ್ಲೇಷಣೆಗೆ ಕನ್ನಡದ ಸಂತಕವಿಗಳ ಸಾಹಿತ್ಯವನ್ನು ಬಳಸಿಕೊಂಡಿರುತ್ತೇನೆ. ನಾರದೀಯ ಭಕ್ತಿಸೂತ್ರಗಳ ಒಟ್ಟು ಸಂಖ್ಯೆ 84. ಸಂತ ವಾಙ್ಮಯದ ಅಗಾಧವ್ಯಾಪ್ತಿ ಹಾಗೂ ಮಹಾಪ್ರಬಂಧ ರಚನೆಗೆ ಇರುವಂತಹ ಇತಿಮಿತಿ ಇವೆರಡನ್ನೂ ಪರಿಗಣಿಸಿ, ಎಲ್ಲಾ ಸೂತ್ರಗಳನ್ನೂ ಅಧ್ಯಯನಕ್ಕೆ ಅಳವಡಿಸಿಕೊಳ್ಳದೆ ಮೇಲೆ ಪಟ್ಟಿ ಮಾಡಿರುವ ವಿಷಯಗಳ ವಿಶ್ಲೇಷಣೆಗೆ ಸಂಬಂಧಿಸಿರುವಂತಹ 60 ಸೂತ್ರಗಳನ್ನು ಮಾತ್ರ ಬಳಸಿಕೊಂಡಿರುತ್ತೇನೆ.

ವಚನ ಸಾಹಿತ್ಯ ಹಾಗೂ ದಾಸ ಸಾಹಿತ್ಯದಲ್ಲಿ ಬರುವಂತಹ ವಿವಿಧ ಶರಣರ ಹಾಗೂ ದಾಸರ ಭಕ್ತಿ ಪ್ರಧಾನವಾದ ಕೃತಿಗಳ ಅಧ್ಯಯನ ಮತ್ತು ನಾರದ ಭಕ್ತಿ ಸೂತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟ ಸಿದ್ಧಾಂತಕ್ಕೂ, ಸಂತರ ಕೃತಿಗಳಿಗೂ ಇರುವ ಸಾಮ್ಯತೆ ಹಾಗೂ ವೈಲಕ್ಷಣ್ಯಗಳ ವಿವೇಚನೆ ಇದು ಮೇಲೆ ಹೇಳಿರುವ ಅಧ್ಯಾಯಗಳಲ್ಲಿ ದಾಖಲಿಸಿರುವ ಅಧ್ಯಯನದ ಫಲಿತಗಳ ಪ್ರಮುಖ ಅಂಶವಾಗಿದೆ. ಸಂತ ವಾಙ್ಮಯವು ಒಂದು ಸಾಗರವಾಗಿರುವ ಕಾರಣ (ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಸಮಗ್ರ ದಾಸ ಸಾಹಿತ್ಯ ಯೋಜನೆಯಡಿ ಸುಮಾರು ನೂರ ಮೂವತ್ತೊಂಬತ್ತು ದಾಸರ ಹದಿನಾರುಸಾವಿರಕ್ಕೂ ಅಧಿಕ ಕೀರ್ತನೆಗಳನ್ನು ಸಂಗ್ರಹಿಸಲಾಗಿದೆ ಎಂದು 'ಸಮಗ್ರ ದಾಸ ಸಾಹಿತ್ಯ ಸಂಪುಟ'ಗಳ 'ಪ್ರಕಾಶಕರ ಮಾತಿ'ನಲ್ಲಿ, ಶ್ರೀ ವೈ.ಕೆ. ಮುದ್ದುಕೃಷ್ಣರವರು ಉಲ್ಲೇಖಿಸಿದ್ದಾರೆ. ಹಾಗೆಯೇ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸುವರ್ಣ ಸಾಹಿತ್ಯ ಗ್ರಂಥಮಾಲೆ ಯೋಜನೆಯಡಿಯಲ್ಲಿ ಪ್ರಕಟಿಸಿದ ಆಯ್ದ ವಚನಗಳ ಸಂಗ್ರಹ, 'ವಚನ ಸಾಹಿತ್ಯ ಸಂಗ್ರಹ' ಈ ಗ್ರಂಥದಲ್ಲಿ ಅರ್ವತ್ತೈದು ವಚನಕಾರರ 2139 ವಚನಗಳನ್ನು ಪ್ರಕಟಿಸಲಾಗಿದೆ) ನಿರ್ದಿಷ್ಟವಾದ ಅವಧಿ ಹಾಗೂ ಪರಿಮಿತಿಯೊಳಗೆ ಎಲ್ಲಾ ಸಂತರ ಎಲ್ಲಾ ಕೃತಿಗಳ ಪರಿಶೀಲನೆ ಹಾಗೂ ವಿವೇಚನೆ ಮಾಡುವುದು ಅಸಾಧ್ಯ. ಹಾಗಾಗಿ ಆಯ್ದ ಕೆಲವು ದಾಸರ ಹಾಗೂ ಶರಣರ ಕೃತಿಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಂಡಿದ್ದೇನೆ. ಅಧ್ಯಯನಕ್ಕೆ ಆಯ್ದುಕೊಂಡಿರುವ ದಾಸರ ಹಾಗೂ ಶರಣರ ಪಟ್ಟಿ ಇಂತಿದೆ:

**ದಾಸರು:** ಶ್ರೀಪಾದರಾಯರು, ಶ್ರೀ ವ್ಯಾಸರಾಯರು, ಶ್ರೀ ಪುರಂದರದಾಸರು, ಶ್ರೀ ಕನಕದಾಸರು, ಶ್ರೀಮದ್ವಾದಿರಾಜಯತಿಗಳು, ಶ್ರೀ ವಿಜಯದಾಸರು, ಶ್ರೀ ಗೋಪಾಲದಾಸರು, ಶ್ರೀ ಜಗನ್ನಾಥದಾಸರು, ಶ್ರೀ ಮಹೀಪತಿರಾಯರು, ಹೆಳವನಕಟ್ಟೆ ಗಿರಿಯಮ್ಮ,ಪಾವಂಜೆ ಶ್ರೀಲಕ್ಷ್ಮೀನಾರ್ಣಪ್ಪಯ್ಯನವರು, ಶ್ರೀ ಭದ್ರಗಿರಿ ಅಚ್ಯುತದಾಸರು.

**ಶರಣರು:** ಶ್ರೀ ಅಲ್ಲಮಪ್ರಭು, ಶ್ರೀ ಬಸವೇಶ್ವರರು, ಶ್ರೀ ಅಕ್ಕಮಹಾದೇವಿ, ಶ್ರೀ ಅಂಬಿಗರ ಚೌಡಯ್ಯ,

ಶ್ರೀ ಆದಯ್ಯ, ಶ್ರೀ ದೇವರ ದಾಸಿಮಯ್ಯ, ಶ್ರೀ ಚೆನ್ನಬಸವಣ್ಣ, ಶ್ರೀ ಷಣ್ಮುಖಸ್ವಾಮಿ(ಅಖಂಡೇಶ್ವರ), ಶ್ರೀ ಮಡಿವಾಳ ಮಾಚಿದೇವ, ಶ್ರೀ ಸಕಳೇಶ ಮಾದರಸ, ಶ್ರೀ ಸಿದ್ಧರಾಮ, ಶ್ರೀ ಹಡಪದಪ್ಪಣ್ಣ.

ದಾಸರು, ಶರಣರು ಮಾತ್ರವಲ್ಲದೆ ಶ್ರೀಮನ್ನಿಜಗುಣರ ಗ್ರಂಥಗಳೇ ಮೊದಲಾದ ಇತರ ಸಂತರ ಭಕ್ತಿ ಪ್ರಧಾನವಲ್ಲದ ಕೃತಿಗಳಲ್ಲಿ ಉಲ್ಲೇಖವಾಗಿರುವ ಭಕ್ತಿ ಸಂಬಂಧಿ ಆಖ್ಯಾನಗಳಿಗೂ, ಅಂಶಗಳಿಗೂ, ಭಕ್ತಿ ಸೂತ್ರಗಳಿಗೂ ಇರುವ ಸಂಬಂಧ, ವ್ಯತ್ಯಾಸಗಳ ವಿವೇಚನೆಯನ್ನೂ ಅಧ್ಯಯನಕ್ಕೆ ಅಳವಡಿಸಿಕೊಂಡಿರುತ್ತೇನೆ

**ಅಧ್ಯಯನಕ್ಕೆ ಆಯ್ದುಕೊಂಡಿರುವ ಇತರ ಸಂತರ ಪಟ್ಟಿ :**

ಶ್ರೀಮನ್ನಿಜಗುಣಶಿವಯೋಗಿಗಳು, ಸಂತ ಶಿಶುನಾಳ ಶರೀಫರು, ಶ್ರೀ ಚಿದಾನಂದ ಅವಧೂತರು, ಸರ್ವಜ್ಞ, ಶ್ರೀ ಮೌನೇಶ್ವರರು.

ಇವಲ್ಲದೆ ವಿವಿಧ ಮತ ಪಂಥಗಳ ಸಂತರ ಮಧ್ಯೆ ಅನುಭಾವದ ನೆಲೆಯಲ್ಲಿ ಇರುವ ಏಕಸೂತ್ರತೆಯನ್ನು ನಿರೂಪಿಸುವುದಕ್ಕಾಗಿ ಅದ್ವೈತ ಪರಂಪರೆಯ ಕೆಲವು ಹರಿದಾಸರುಗಳಾದ ಕವಿ ಪರಮದೇವ, ಶ್ರೀ ಶಂಕರ ಭಟ್ಟ ಅಗ್ನಿಹೋತ್ರಿ, ಶ್ರೀ ಕರ್ಕಿ ಕೇಶವದಾಸ ಇವರ ಕೃತಿಗಳನ್ನೂ ಪ್ರಾತಿನಿಧಿಕವಾಗಿ ಬಳಸಿಕೊಂಡಿರುತ್ತೇನೆ.

ಮೇಲಿನ ಆಯ್ಕೆಗೆ ನಿರ್ದಿಷ್ಟವಾದ ಮಾನದಂಡವನ್ನು ಬಳಸಿಕೊಂಡಿಲ್ಲವಾದರೂ, ಅನುಭಾವದ ಹೊಳಹುಗಳು, ಸತ್ಯ ದರ್ಶನದ ತೀವ್ರತೆ, ಸಮಾಜಮುಖಿಯಾದ ಚಿಂತನೆ ಇವನ್ನೇ ಮುಖ್ಯ ಮಾನದಂಡವಾಗಿ ಬಳಸಿಕೊಂಡಿರುತ್ತೇನೆ. ಮೇಲೆ ಹೆಸರಿಸಿರುವ ಬಹುತೇಕ ಸಂತ ಕವಿಗಳು ಹನ್ನೆರಡನೇ ಶತಮಾನದಿಂದ ಹದಿನಾರನೇ ಶತಮಾನದ ವರೆಗಿನ ಕಾಲಾವಧಿಗೆ ಒಳಪಟ್ಟವರಾಗಿದ್ದಾರೆ. ಆಧುನಿಕ ಸಂದರ್ಭದಲ್ಲಿ ದಾಸಪರಂಪರೆಯ ಕೊಂಡಿಯಂತಿರುವ ಸಂತ ಭದ್ರಗಿರಿ ಅಚ್ಯುತದಾಸರ ಕೃತಿಯನ್ನು ಹಾಗೂ ಕರಾವಳಿ ಕರ್ನಾಟಕದ ಅರ್ವಾಚೀನ ದಾಸ ಪರಂಪರೆಗೆ ಸೇರಿದ ಪಾವಂಜೆ ಹರಿದಾಸ ಲಕ್ಷ್ಮೀನಾರ್ಣಪ್ಪಯ್ಯ(1854–1924)ನವರ ಕೃತಿಗಳನ್ನು ಪ್ರಾತಿನಿಧಿಕವಾಗಿ ಬಳಸಿಕೊಂಡಿರುತ್ತೇನೆ. ಅನುಭಾವದ ನೆಲೆಗಳು ಢಾಳಾಗಿ ಗೋಚರಿಸುವಂತಹ ಬಸವಣ್ಣ, ಪುರಂದರದಾಸರು, ಕನಕದಾಸರು, ಅಕ್ಕಮಹಾದೇವಿ, ವಾದಿರಾಜ ಯತಿಗಳು, ವಿಜಯದಾಸರು, ಶ್ರೀಪಾದರಾಜರು, ಜಗನ್ನಾಥದಾಸರು, ಪ್ರಭುದೇವರು, ನಿಜಗುಣ

ಶಿವಯೋಗಿಗಳು, ಚಿದಾನಂದ ಅವಧೂತರು, ಶಿಶುನಾಳ ಷರೀಫರು ಇವರ ಕೃತಿಗಳನ್ನು ಮುಖ್ಯವಾಗಿ ಈ ಅಧ್ಯಯನದಲ್ಲಿ ಬಳಸಿಕೊಂಡಿರುತ್ತೇನೆ.

ಅಧ್ಯಾತ್ಮವನ್ನೇ ಜೀವನದ ಉಸಿರಾಗಿಸಿಕೊಂಡು ಬಾಳಿದ, ಬಾಳುತ್ತಿರುವ ಆಧುನಿಕ ಸಾಹಿತ್ಯ ಪರಂಪರೆಗೆ ಸೇರಿದ ಅನೇಕ ಮಹಾ ಚೇತನಗಳು ಕನ್ನಡದ ಸಾರಸ್ವತ ಲೋಕದಲ್ಲಿದ್ದರೂ ಈ ಅಧ್ಯಯನದಲ್ಲಿ ಎಲ್ಲಾ ಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಅಸಾಧ್ಯವೆನಿಸಿದೆ.

ಮೇಲೆ ತಿಳಿಸಿದ ಎಲ್ಲಾ ಮಾಹಿತಿಗಳ ಕ್ರೋಢೀಕರಣ ಹಾಗೂ ಲಭ್ಯವಾದ ಈ ಸಂತ ವಾಙ್ಮಯದಿಂದ ದೊರಕಬಹುದಾದ ಸಂದೇಶವನ್ನು ಭಕ್ತಿಸೂತ್ರಗಳು ಸಾರುವ ತತ್ತ್ವಗಳೊಂದಿಗೆ ಮುಖಾಮುಖಿಯಾಗಿಸಿ, ಕನ್ನಡದ ವಿವಿಧ ಸಂತರ ಕೃತಿಗಳಲ್ಲಿ ಆಧಾರ ಶ್ರುತಿಯಾಗಿರುವಂತಹ ಭಕ್ತಿತತ್ತ್ವದ ವಿವೇಚನೆ ಅದರೊಂದಿಗೆ ಸಮಾಜದ ಕಲ್ಯಾಣಕ್ಕೆ ಕಾರಣವಾಗಬಲ್ಲಂತಹ ಅಂಶಗಳ ಬಗ್ಗೆ ವಿವೇಚನೆಯನ್ನು ಈ ಅಧ್ಯಾಯದಲ್ಲಿ ಅಳವಡಿಸಲಾಗಿದೆ.

೫. **ಭಕ್ತಿ ಸೂತ್ರಗಳ ಸಿದ್ಧಾಂತದ ಅನುಷ್ಠಾನ ಹಾಗೂ ಪ್ರಸಾರದಲ್ಲಿ ಕಲೆಯ ಪಾತ್ರ –** ಈ ಅಧ್ಯಾಯವೂ ಅಗಾಧ ವ್ಯಾಪ್ತಿಯುಳ್ಳದ್ದಾದ್ದರಿಂದ ಅಧ್ಯಯನವನ್ನು ಮುಖ್ಯವಾಗಿ ಸಾಧಾರಣೀಕೃತ ನೆಲೆಯಲ್ಲಿ ಪ್ರದರ್ಶನ ಕಲೆಗಳಾದ ಸಂಗೀತ, ಕಥಾಕೀರ್ತನ ಹಾಗೂ ಯಕ್ಷಗಾನಕ್ಕೆ ಸೀಮಿತಗೊಳಿಸಿದ್ದೇನೆ. ಈ ಪ್ರದರ್ಶನಕಲೆಗಳಿಗೂ ಭಕ್ತಿಸಿದ್ಧಾಂತದ ಪ್ರಸಾರ ಹಾಗೂ ಅನುಷ್ಠಾನಕ್ಕೂ ಇರುವ ಸಂಬಂದವನ್ನು ಸಂಕ್ಷಿಪ್ತವಾಗಿ ದಾಖಲಿಸಿರುತ್ತೇನೆ.

೬. **ಭಕ್ತಿಸೂತ್ರಗಳಲ್ಲಿ ಅಡಕವಾಗಿರುವ ಸಿದ್ಧಾಂತದ ಅನುಷ್ಠಾನ, ಪ್ರಚಾರ ಮತ್ತು ಸಮಾಜ –** ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಸೀಮಿತವಾದ ಕ್ಷೇತ್ರಾಧ್ಯಯನವನ್ನು ಗೈದಿರುತ್ತೇನೆ. ಈ ಅಧ್ಯಯನವನ್ನು ಎರಡು ವಿಭಾಗವಾಗಿ ವಿಂಗಡಿಸಿಕೊಂಡಿರುತ್ತೇನೆ:

೬.೧ ಭಕ್ತಿಸಿದ್ಧಾಂತದ ಪ್ರಚಾರ ಮತ್ತು ಅನುಷ್ಠಾನದ ಮೂಲಕ ಈಗಾಗಲೇ ಸಮಾಜದಲ್ಲಿ ಸತ್ ಪರಿವರ್ತನೆಯ ರೂವಾರಿಗಳಾದ ಕೆಲವು (ದಕ್ಷಿಣ ಕನ್ನಡ ಜಿಲ್ಲೆ ವ್ಯಾಪ್ತಿಯ) ಸಂಸ್ಥೆಗಳ/ಕ್ಷೇತ್ರಗಳ ಸಾಧನೆಯ ಅಧ್ಯಯನ.

ಈ ಅಧ್ಯಾಯವು ವಿಶಾಲ ವ್ಯಾಪ್ತಿಯುಳ್ಳದ್ದಾದ್ದರಿಂದ ಹಲವು ವರ್ಷಗಳಿಂದ ನಾನು ಬಲ್ಲಂಥ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಆಯ್ದ ಕೆಲವು ಕ್ಷೇತ್ರಗಳಿಗೆ ಮಾತ್ರ ಅಧ್ಯಯನವನ್ನು ಸೀಮಿತಗೊಳಿಸಿದ್ದೇನೆ. ಕ್ಷೇತ್ರದ ಆಯ್ಕೆಗೆ ನಾನು ವಿಧಿಸಿಕೊಂಡಂತಹ ಕೆಲವು ಮಾನದಂಡಗಳು ಇಂತಿವೆ:

(ಅ) ಕ್ಷೇತ್ರವು ಭಕ್ತಿ ಶ್ರದ್ಧೆಗಳ ಕೇಂದ್ರವಾಗಿದ್ದು, ಜನರಲ್ಲಿ ಸತ್ಸಂಸ್ಕಾರವನ್ನು ಮೂಡಿಸುವ ಚಟುವಟಿಕೆಗಳಲ್ಲಿ ನಿರತವಾಗಿರಬೇಕು.

(ಆ) ಯಾವುದೇ ಜಾತಿ ಮತಗಳಿಗೆ ಸೀಮಿತವಾಗಿರದೆ, ಏಕತೆ ಮತ್ತು ಸಮಾನತೆಯ ಆದರ್ಶವನ್ನು ರೂಢಿಸಿಕೊಂಡಿರಬೇಕು.

(ಇ) ರಾಜಕೀಯ ರಹಿತವಾದ, ಸುದೃಢವಾದ ನೈತಿಕ ನೆಲೆಗಟ್ಟಿನ,

ಪಾರಮಾರ್ಥಿಕ ಹಿನ್ನೆಲೆಯ ಮುಂದಾಳುತ್ವ(ಆಡಳಿತ ವರ್ಗವನ್ನು) ಹೊಂದಿರಬೇಕು.

(ಈ) ಕ್ಷೇತ್ರವು ಆಧ್ಯಾತ್ಮಿಕ ನೆಲೆಗಟ್ಟಿನಲ್ಲಿ ಸಮಾಜಕಲ್ಯಾಣದ ಸೇವಾಕಾರ್ಯಗಳಲ್ಲಿ ನಿರತವಾಗಿರಬೇಕು.

(ಉ) ಯುವಜನತೆಯುನ್ನೂ ಧರ್ಮಮಾರ್ಗದತ್ತ ಸೆಳೆಯುವಂತಹ, ನಮ್ಮ ಸಂಸ್ಕೃತಿಯುನ್ನು ಉಳಿಸಿ ಬೆಳೆಸಲು ಪ್ರೇರೇಪಿಸುವಂತಹ ಕಾರ್ಯಚಟುವಟಿಕೆಗಳನ್ನು ಹೊಂದಿರಬೇಕು.

ಈ ಹಿನ್ನೆಲೆಯಲ್ಲಿ ಪ್ರಾತಿನಿಧಿಕವಾಗಿ ಕೆಲವೇ ಕ್ಷೇತ್ರಗಳನ್ನು (ಶ್ರೀ ಕ್ಷೇತ್ರ ಧರ್ಮಸ್ಥಳ, ರಾಮಕೃಷ್ಣ ಮಿಷನ್- ರಾಮಕೃಷ್ಣ ಮಠ ಮಂಗಳೂರು, ರಮಾ ಶಕ್ತಿ ಮಿಷನ್ ಮಂಗಳೂರು ಇತ್ಯಾದಿ) ಮಾತ್ರ ಅಧ್ಯಯನಕ್ಕೆ ಆಯ್ದುಕೊಂಡಿರುತ್ತೇನೆ.

೬.೨ ಭಕ್ತಿಸಿದ್ಧಾಂತದ ಪ್ರಚಾರ ಮತ್ತು ಅನುಷ್ಠಾನದಲ್ಲಿ ತತ್ಪರರಾದ ಕೆಲವು ಮಹನೀಯರ ಅಭಿಪ್ರಾಯ ಹಾಗೂ ಅನುಭವದ ಅಧ್ಯಯನ.

ಭಕ್ತಿಸಿದ್ಧಾಂತದ ಪ್ರಚಾರ ಮತ್ತು ಅನುಷ್ಠಾನದ ಮೂಲಕ ಸಮಾಜಕಲ್ಯಾಣದ ಸೇವೆಯಲ್ಲಿ ತತ್ಪರರಾದ ಮತ್ತು ಅದಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟಂತಹ (ಮುಖ್ಯವಾಗಿ ದಕ್ಷಿಣಕನ್ನಡ ಜಿಲ್ಲೆ ಹಾಗೂ ಈ ಜಿಲ್ಲೆಗೆ ಸಂಬಂಧಿಸಿದ ಹಿನ್ನೆಲೆಯುಳ್ಳ, ಮತ್ತು ನಾನು ಹಲವಾರು ವರ್ಷಗಳಿಂದ ವ್ಯಕ್ತಿಗತವಾಗಿ ಬಹಳ ಹತ್ತಿರದಿಂದ ಬಲ್ಲಂತಹ) ಕೆಲವು ಮಹನೀಯರ (ಸ್ವಾಮಿ ಹರ್ಷಾನಂದ, ಅಧ್ಯಕ್ಷರು, ರಾಮಕೃಷ್ಣ ಮಿಷನ್(ರಾಮಕೃಷ್ಣ ಮಠ), ಬೆಂಗಳೂರು, ಕೀರ್ತನಕೇಸರಿ ಸಂತ ಭದ್ರಗಿರಿ ಅಚ್ಯುತದಾಸರು, ಕಥಾಕೀರ್ತನ ವಿದ್ವಾಂಸರುಗಳಾದ ಶ್ರೀ ಲಕ್ಷ್ಮಣದಾಸ ವೇಲಣಕರ್, ಶ್ರೀ ಮೊಳಲಿ ಜಗದೀಶದಾಸರು ಇತ್ಯಾದಿ) ಇವರ ಅಭಿಪ್ರಾಯ ಹಾಗೂ ಅನುಭವಗಳನ್ನು ದಾಖಲಿಸಿರುತ್ತೇನೆ.

ಕನ್ನಡದ ಸಂತ ವಾಙ್ಮಯದ ಕುರಿತಾಗಿ, ವಿಶೇಷವಾಗಿ ವಚನ ಸಾಹಿತ್ಯ ಹಾಗೂ ದಾಸ ಸಾಹಿತ್ಯದ ಕುರಿತಾಗಿ ತೌಲನಿಕ ಅಧ್ಯಯನವೂ ಸೇರಿದಂತೆ ಈಗಾಗಲೇ ಹಲವಾರು ಅಧ್ಯಯನಗಳು ದಾಖಲಿಸಲ್ಪಟ್ಟಿವೆ. ದಾಸ ಸಾಹಿತ್ಯ ಹಾಗೂ ವಚನ ಸಾಹಿತ್ಯವನ್ನು ಮತ ಸಂಪ್ರದಾಯಗಳ ಚೌಕಟ್ಟಿನಲ್ಲಿ, ರಾಜಕೀಯ ಹಾಗೂ ಸಾಮಾಜಿಕ ನೆಲೆಯಲ್ಲಿ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ, ಪ್ರಾದೇಶಿಕ ನೆಲೆಯಲ್ಲಿ ವಿಶ್ಲೇಷಿಸುವಂತಹ ಅನೇಕ ಅಧ್ಯಯನಗಳು ದಾಖಲಿಸಲ್ಪಟ್ಟಿವೆ. ನಾನು ಸಮೀಕ್ಷೆ ಮಾಡಿರುವಂತಹ ಪ್ರಕಟಿತ ಹಾಗೂ ಅಪ್ರಕಟಿತ ಸಂಶೋಧನಾ ಕೃತಿಗಳ, ಆಕರ ಗ್ರಂಥಗಳ ವಿವರ ಇಂತಿವೆ:

1. ದಾಸ ಸಾಹಿತ್ಯ ದರ್ಶನ, ಎಚ್ಚೆಸ್ಕೆ, ಮಂಗಳ ಭಾರತಿ ಪ್ರಕಾಶನ, ಮೈಸೂರು – 4, 1984.

2. ಹರಿದಾಸ ಸಾಹಿತ್ಯ ಸಾರ – ಡಾ.ಜಿ.ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1989

3. ಹರಿದಾಸ ಸಾಹಿತ್ಯದಲ್ಲಿ ತತ್ತ್ವಜ್ಞಾನ, ಹೆಚ್. ಆರ್. ಸುರೇಶ್ ಬಾಬು, ತತ್ತ್ವಶಾಸ್ತ್ರ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, 1998.

4. ಕರ್ನಾಟಕದ ಹರಿದಾಸ ಸಾಹಿತ್ಯ, ಆರ್. ಎನ್. ಪಂಚಮುಖಿ, ಕರ್ನಾಟಕ ಸಾಹಿತ್ಯ ಪರಿಷತ್ತು, 1952

5. ಹರಿದಾಸ ಹೃದಯ, ಡಾ.ಜಿ.ವರದರಾಜ ರಾವ್, ಶಾರದ ಮಂದಿರ, ರಾಮಯ್ಯರ್ ರಸ್ತೆ, ಮೈಸೂರು, 1967

6. ಹರಿದಾಸ ಬೋಧೆ, ಎಂ.ಎಂ. ಅಣ್ಣಿಗೇರಿ, ಚಾಲುಕ್ಯ ಪ್ರಕಾಶನ, ಧಾರವಾಡ, 1963

7. ಶ್ರೀ ಹರಿದಾಸ ಸಾಹಿತ್ಯ – ಒಂದು ಅಧ್ಯಯನ, ಬೇಲೂರು ಕೇಶವದಾಸರು, ಭಾರತೀ ಪ್ರಕಾಶನ, ಸರಸ್ವತಿಪುರಂ, ಮೈಸೂರು –570009, 2005

8. ಕನ್ನಡ ಸಂತರ ಪರಮಾರ್ಥ ಪಥ, ದೇಶಪಾಂಡೆ ಮನೋಹರರಾಯರು(ಅನು.), ಆರ್.ಡಿ. ರಾನಡೆ(ಮೂಲ), ಕ.ವಿ.ವಿ., ಧಾರವಾಡ, 1969

9. ಕೀರ್ತನಕಾರರು, ಎಚ್. ಎಸ್. ವೆಂಕಟೇಶಮೂರ್ತಿ, ಪ್ರಸಾರಾಂಗ, ಬೆಂಗಳೂರು ವಿ.ವಿ., 1975

10. ತಂಬೂರಿ ಮೀಟಿದವ –ಪುರಂದರದಾಸರ ಅಭಿವ್ಯಕ್ತಿಯ ಅಧ್ಯಯನ, ಡಾ. ಎಚ್. ಎನ್. ಮುರಳೀಧರ, ಅಂಕಿತ ಪುಸ್ತಕ, 53, ಶ್ಯಾಮ್ ಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್ ಮುಖ್ಯ ರಸ್ತೆ, ಬಸವನಗುಡಿ, ಬೆಂಗಳೂರು –560004, 2005

12. ಹರಿದಾಸ ಸಂದೇಶ, ಡಾ. ಜಿ. ಶ್ರೀನಿವಾಸನ್, ಸೊಂದಲಗೆರೆ ಪ್ರಕಟನಾಲಯ, ನಂದಿನಿ ಲೇ ಔಟ್, ಬೆಂಗಳೂರು –560096, 2001

13. ಹರಿದಾಸರ ಭಕ್ತಿ ಸ್ವರೂಪ, ಡಾ. ಟಿ.ಎನ್. ನಾಗರತ್ನ, ಪ್ರಸಾರಾಂಗ, ಮೈ.ವಿ.ವಿ, 1986

14. ಕನಕ ಸಾಹಿತ್ಯದಲ್ಲಿ ಭಕ್ತಿ ಸ್ವರೂಪ, ವಸಂತ ಕುಷ್ಟಗಿ, ಕನಕ ಸಾಹಿತ್ಯ ದರ್ಶನ, ದೇ.ಜವರೇ ಗೌಡ (ಸಂ.), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು, 1990

15. ಅಕ್ಕನ ವಚನಗಳು, ಎಲ್. ಬಸವರಾಜು(ಸಂ.), ಗೀತಾ ಬುಕ್ ಹೌಸ್, ಮೈಸೂರು, 2008

16. ಬಸವಣ್ಣನವರ ವಚನಗಳು, ಎಲ್. ಬಸವರಾಜು(ಸಂ.), ಗೀತಾ ಬುಕ್ ಹೌಸ್, ಮೈಸೂರು, 2008

17. ಹರಿದಾಸರ ಕೃತಿಗಳಲ್ಲಿ ಕಂಡು ಬರುವ ಆಧ್ಯಾತ್ಮಿಕ ಸಾಧನೆ, ಬಿ.ಎನ್. ವಿಜಯಲಕ್ಷ್ಮಿ, ಮೈಸೂರು, 1972

18. ಹರಿದಾಸ ಆಂದೋಲನ – ಒಂದು ಅಧ್ಯಯನ, ಇದರ ಮುನ್ನುಡಿಯಲ್ಲಿ, ಲೇ: ಡಾ। ಎಸ್.ಕೆ. ರಾಮಶೇಷನ್,1474, ಕೃಷ್ಣಮೂರ್ತಿಪುರಂ, ಮೈಸೂರು – 570004, ಪ್ರ.ಮು: 1991

19. ವಚನ ಸಾಹಿತ್ಯ ಸಂಗ್ರಹ, ಭೂಸನೂರಮಠ ಸಂ.ಶಿ. (ಸಂ), ಸುವರ್ಣ ಸಾಹಿತ್ಯ ಗ್ರಂಥ ಮಾಲೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು – 560002, 2006

20. ಶ್ರೀ ಕರ್ನಾಟಕ ಭಕ್ತವಿಜಯ, ಬೇಲೂರು ಕೇಶವದಾಸರು, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4, 2000,

21. ದಾಸಸಾಹಿತ್ಯ ಮತ್ತು ಸಂಸ್ಕೃತಿ, ಸಾ.ಕೃ. ರಾಮಚಂದ್ರರಾವ್ ., ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, 2003,

22. 'ಉಪನಿಷತ್ತುಗಳು ಹಾಗೂ ವಚನ ಸಾಹಿತ್ಯ: ಒಂದು ತೌಲನಿಕ ಸಮೀಕ್ಷೆ' , ಮುರಳೀಧರ ಹೆಚ್.ಎನ್., 1984, (ಬೆಂಗಳೂರು ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ಸಂಶೋಧನಾ ಪ್ರಬಂಧ)

ಈ ಕೃತಿಗಳಲ್ಲಿ ಅನುಭಾವದ ಹಿನ್ನೆಲೆಯಲ್ಲಿ, ಭಕ್ತಿ ಸಿದ್ಧಾಂತದ ಹಿನ್ನೆಲೆಯಲ್ಲಿ ಕನ್ನಡ ಸಂತರ ಕೃತಿಗಳನ್ನು ವಿಶ್ಲೇಷಿಸುವಂತಹ ಹಲವು ಅಧ್ಯಯನಗಳನ್ನು ಗುರುತಿಸಿರುತ್ತೇನೆ.ಅವುಗಳಲ್ಲಿ ಪ್ರಮುಖವಾದುದು:

ಕನ್ನಡ ಸಂತರ ಪರಮಾರ್ಥ ಪಥ ( ದೇಶಪಾಂಡೆ ಮನೋಹರರಾಯರು(ಅನು.), ಆರ್.ಡಿ. ರಾನಡೆ(ಮೂಲ), ದಾಸಸಾಹಿತ್ಯ ಮತ್ತು ಸಂಸ್ಕೃತಿ (ಸಾ.ಕೃ.ರಾಮಚಂದ್ರರಾವ್ ), ಹರಿದಾಸರ ಭಕ್ತಿ ಸ್ವರೂಪ ( ಟಿ.ಎನ್. ನಾಗರತ್ನ.), ಕನಕ ಸಾಹಿತ್ಯದಲ್ಲಿ ಭಕ್ತಿ ಸ್ವರೂಪ (ವಸಂತ ಕುಷ್ಟಗಿ), ಹರಿದಾಸರ ಕೃತಿಗಳಲ್ಲಿ ಕಂಡು ಬರುವ ಆಧ್ಯಾತ್ಮಿಕ ಸಾಧನೆ (ಬಿ.ಎನ್. ವಿಜಯಲಕ್ಷ್ಮಿ), ಶ್ರೀ ಕರ್ಣಾಟಕ ಭಕ್ತವಿಜಯ, (ಬೇಲೂರು ಕೇಶವದಾಸರು), ಉಪನಿಷತ್ತುಗಳು ಹಾಗೂ ವಚನ ಸಾಹಿತ್ಯ: ಒಂದು ತೌಲನಿಕ ಸಮೀಕ್ಷೆ (ಮುರಳೀಧರ ಹೆಚ್.ಎನ್.), ಶ್ರೀ ಹರಿದಾಸ ಸಾಹಿತ್ಯ – ಒಂದು ಅಧ್ಯಯನ (ಬೇಲೂರು ಕೇಶವದಾಸರು), ದಾಸ ಸಾಹಿತ್ಯ ದರ್ಶನ (ಎಚ್ಚೆಸ್ಕೆ), ಹರಿದಾಸ ಸಾಹಿತ್ಯ ಸಾರ (ಜಿ.ವರದರಾಜರಾವ್), ಹರಿದಾಸ ಸಾಹಿತ್ಯದಲ್ಲಿ ತತ್ತ್ವಜ್ಞಾನ(ಹೆಚ್. ಆರ್. ಸುರೇಶ್ ಬಾಬು)

ಈ ಕೃತಿಗಳಲ್ಲಿ ಭಕ್ತಿ ಸೂತ್ರಗಳ ಉಲ್ಲೇಖವನ್ನು ಕಾಣಬಹುದಾಗಿದೆಯಾದರೂ ಭಕ್ತಿಯ ರೂಪ, ಸ್ವರೂಪಗಳನ್ನು ವಿಶ್ಲೇಷಿಸುವುದಕ್ಕಷ್ಟೆ ಭಕ್ತಿ ಸೂತ್ರಗಳ ಬಳಕೆ ಸೀಮಿತ ವಾಗಿರುವುದನ್ನು ಗಮನಿಸಬಹುದು. ಭಕ್ತಿ ಸೂತ್ರಗಳನ್ನೇ ಆಧಾರವಾಗಿರಿಸಿಕೊಂಡ ಸಂತ ಕೃತಿಗಳ ವಿಶ್ಲೇಷಣೆಯನ್ನು ನಾನು ಗಮನಿಸಿಲ್ಲ. ಇನ್ನು ದಾಸರ ಹಾಗೂ ಶರಣರ ಅನುಭಾವದ ನೆಲೆಗಳನ್ನು ಅವರ ಕೃತಿಗಳ ಬೆಳಕಿನಲ್ಲೇ ವಿಶ್ಲೇಷಿಸುವಂತಹ 'ಕನ್ನಡ ಸಂತರ ಪರಮಾರ್ಥ ಪಥ'( ದೇಶಪಾಂಡೆ ಮನೋಹರರಾಯರು(ಅನು.), ಆರ್.ಡಿ. ರಾನಡೆ(ಮೂಲ)) ಹಾಗೂ ದಾಸರ ಕೃತಿಗಳ ಅನುಭಾವಿಕ ಒಳನೋಟವನ್ನು ನಿರೂಪಿಸುವಂತಹ 'ದಾಸಸಾಹಿತ್ಯ ಮತ್ತು ಸಂಸ್ಕೃತಿ' (ಸಾ.ಕೃ.ರಾಮಚಂದ್ರರಾವ್ ), ಹಾಗೂ ಶರಣರ ಅನುಭಾವಿಕ ನೆಲೆಗಳನ್ನು ವಿಶ್ಲೇಷಿಸುವಂತಹ 'ಉಪನಿಷತ್ತುಗಳು ಹಾಗೂ ವಚನ ಸಾಹಿತ್ಯ: ಒಂದು ತೌಲನಿಕ ಸಮೀಕ್ಷೆ' (ಮುರಳೀಧರ ಹೆಚ್.ಎನ್.) ಮತ್ತು ವಚನ ಸಾಹಿತ್ಯ ಸಂಗ್ರಹ, (ಭೂಸನೂರಮಠ ಸಂ.ಶಿ. (ಸಂ)) ಈ ಕೃತಿಗಳು ನನ್ನ ಈ ಅಧ್ಯಯನಕ್ಕೆ ದಾರಿದೀಪದಂತಿವೆ.

ಇವಲ್ಲದೆ ಭಕ್ತಿ ಶಾಸ್ತ್ರದ ಅಧ್ಯಯನಕ್ಕೆ ತಳಹದಿಯನ್ನು ಒದಗಿಸುವಂತಹ ಭಗವದ್ಗೀತೆ, ಶ್ರೀ ಮದ್ಭಾಗವತ, ಶ್ರೀ ರಾಮಕೃಷ್ಣ ವಚನ ವೇದ, ಸ್ವಾಮಿ ವಿವೇಕಾನಂದರ ಕೃತಿ ಶ್ರೇಣಿ, ದಿವ್ಯ ಮಾತೆ ಶ್ರೀ ರಮಾ ದೇವಿಯವರ Bhakti- means and the end, Path to Beatific Peace, volume I, volume II , ಸಂತ ಭದ್ರಗಿರಿ ಅಚ್ಯುತ ದಾಸರ ಹರಿಕಥಾಮೃತ ಸಿಂಧು, ಸಂಪುಟ 1 – 3 ಇವು ಅಧ್ಯಯನಕ್ಕೆ ಅಗತ್ಯವಾದ ನೆಲೆಯನ್ನು ಒದಗಿಸಿವೆ. ಅಲ್ಲದೆ ಕಥಾಕೀರ್ತನ ಕಲಾಭ್ಯಾಸಿಯಾದ ನಾನು ಸುಮಾರು ಇಪ್ಪತ್ತು ವರ್ಷಗಳಲ್ಲಿ ಬಳಸಿಕೊಂಡಿರುವಂತಹ

ಇವಲ್ಲದೆ ಮೂಲ ಸೂತ್ರಗಳ ಅಧ್ಯಯನಕ್ಕೆ ಸ್ವಾಮಿ ಹರ್ಷಾನಂದರ 'ದೇವರ್ಷಿ ನಾರದರ ಭಕ್ತಿ ಸೂತ್ರಗಳು' ಹಾಗೂ 'ಶಾಂಡಿಲ್ಯ ಭಕ್ತಿ ಸೂತ್ರಗಳು' ಈ ಗ್ರಂಥಗಳನ್ನು ಆಸ್ರಯಿಸಿದ್ದರೂ, ಈ ಕೆಳಗೆ ಸೂಚಿಸಿರುವಂತಹ ಆಂಗ್ಲ ಗ್ರಂಥಗಳೂ ಅಧ್ಯಯನಕ್ಕೆ

ಸಹಕಾರಿಯಾಗಿವೆ.

1. Narada Bhakti Sutras, Swami Tyagisananda, Sri Ramakrishna Math, Mylapore, Chennai - 600004, 2001
2. Narada's way of Divine Love, Swami Prabhavananda, Sri Ramakrishna Math, Mylapore, Chennai - 600004, 1986
3. Love Divine- Narada Bhakti Sutra, Swami Chinmayananda, Chinmaya Publications Trust, Madras, 1970
4. Bhakti Schools of Vedanta- Swami Tapasyananda, Sri Ramakrishna Math, Madras, 1990

ಹಲವಾರು ಅಂತರ್ಜಾಲ ತಾಣಗಳಲ್ಲಿ ನಾರದ ಭಕ್ತಿ ಸೂತ್ರಗಳ ಕುರಿತಾದ ಮಾಹಿತಿ ಲಭ್ಯವಿದೆ. ಕೆಲವು ತಾಣಗಳು ಇಂತಿವೆ:

1. www.sankaracharya.org
2. www.gitapress.org
3. www.naradabhaktisutra.com
4. www.astrojyoti.com
5. www.yogasudha.com

ಆದರೆ ಈ ತಾಣಗಳಿಂದ ಪ್ರಸ್ತುತ ಅಧ್ಯಯನಕ್ಕೆ ನಾನು ಯಾವುದೇ ಮಾಹಿತಿಯನ್ನು ಬಳಸಿಕೊಂಡಿರುವುದಿಲ್ಲ.

ಕಥಾಕೀರ್ತನ ಕಲಾಭ್ಯಾಸದ ಹಿನ್ನೆಲೆಯಿಂದ ಈ ಅಧ್ಯಯನಕ್ಕೆ ಸಾಂಸ್ಕೃತಿಕ ಸ್ವರೂಪವನ್ನು ನೀಡುವ ಪ್ರಯತ್ನವನ್ನೂ ಮಾಡಿರುತ್ತೇನೆ(ಅಧ್ಯಾಯ ೫). ಅಧ್ಯಯನದ ಪ್ರಸ್ತುತತೆಯನ್ನು ನಿರೂಪಿಸಲು ಅಧ್ಯಾಯ ೬ನ್ನು ಬಳಸಿಕೊಂಡಿರುತ್ತೇನೆ.

ಸಮನ್ವಯತೆಯ ದೃಷ್ಟಿಕೋನವನ್ನೊಳಗೊಂಡಂತಹ ಈ ಸಮಗ್ರ ಅಧ್ಯಯನವು ಭಕ್ತಿ ಕ್ಷೇತ್ರಕ್ಕೆ ಒಂದು ಮೌಲಿಕ ಕೊಡುಗೆಯಾಗ ಬಲ್ಲುದು ಎಂಬ ನಂಬಿಕೆ ನನ್ನದು.

*****

# ಅಧ್ಯಾಯ ೨

# ಭಕ್ತಿ ಸೂತ್ರಗಳು – ನೆಲೆ, ಹಿನ್ನೆಲೆ

## ೨.೧ ಭಕ್ತಿ – ಅದರ ಕಲ್ಪನೆ, ಪ್ರಾಚೀನತೆ

ಭಕ್ತಿಯ ವ್ಯಾಖ್ಯೆ ವ್ಯಾಪಕವಾದುದು, ವಿಭಿನ್ನವಾದುದು, ದಾರ್ಶನಿಕರ, ಅನುಭಾವಿಗಳ ಹಾಗೂ ತತ್ತ್ವಜ್ಞಾನಿಗಳ ಸಂದೇಶದ ಸಾರವು ಇಂತಿದೆ : 'ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿ ಸಕಲ ವ್ಯಾಪಾರಗಳನ್ನು ನಿಯಮಿಸುವಂತಹ ಅಗೋಚರವಾದ ಸರ್ವ ವ್ಯಾಪಕವಾದ ಶಕ್ತಿಯೊಂದು ಇದೆ, ಅದರ ಬಳಿ ಸಾರುವ, ಸೇರುವ, ಅದರಲ್ಲೇ ಒಂದಾಗುವ ಪ್ರಯತ್ನದಲ್ಲೇ ಬಾಳಿನ ಸಾರ್ಥಕತೆ ಅಡಕವಾಗಿದೆ ಹಾಗೂ ಪರಿಶುದ್ಧ ಪ್ರೇಮದ ಮೂಲಕ ಮಾತ್ರ ಅದನ್ನು ಸಾಧಿಸಬಹುದು.'(ಉದಾ: ಸ್ವಾಮಿ ವಿವೇಕಾನಂದರು ಹೇಳುತ್ತಾರೆ – "ವಿಭಿನ್ನ ಧರ್ಮಗಳ ತುಲನಾತ್ಮಕ ಸಮಾಲೋಚನೆಯಿಂದ ದೊರೆತ ಎರಡು ವೈಜ್ಞಾನಿಕ ನಿಯಮಗಳನ್ನು ನಾನು ನಿಮ್ಮ ಮುಂದೆ ಇಡುವೆನು, ಒಂದು ಎಲ್ಲಾ ಧರ್ಮಗಳೂ ಸತ್ಯವೆನ್ನುವುದು, ಮತ್ತೊಂದು ಪ್ರಪಂಚದಲ್ಲಿರುವುದೊಂದೇ ವಸ್ತು ಎಂಬುದು"[1]; "ಈ ಪ್ರಪಂಚದ ಕ್ರಿಯೋತ್ತೇಜಕ ಶಕ್ತಿ ಪ್ರೇಮವೊಂದೇ. ಇದು ಸರ್ವ ವ್ಯಾಪಿಯಾದುದು. ಇದು ಸ್ವಯಂ ಭಗವಂತನೇ ಆಗಿರುವುದು"[2]). ಈ ಅಂಶಗಳು ಪ್ರಪಂಚದ ಸರ್ವ ಧರ್ಮಗಳ ಸಾರವಾಗಿವೆ. ಉದಾ:–

1. '**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್** – ಈ ಜಗತ್ತು ಈಶ್ವರನಿಂದ ವ್ಯಾಪಕವಾಗಿದೆ'[3] – ಈಶೋಪನಿಷತ್ (1)

2. "**ಭಗವಂತನು ಪ್ರೇಮ ಸ್ವರೂಪಿಯು. ಆತನ ಆ ಪ್ರೇಮವು ಸಕಲ ಸ್ಥಿರ–ಚರ ಸೃಷ್ಟಿಗೆ ಕಾರಣವಾಯಿತು. ಪ್ರೇಮಕ್ಕೆ ಪ್ರತಿಯಾಗಿ ಪ್ರೇಮವನ್ನು ನೀಡುವುದು ಸಹಜ ಗುಣವು. ಹಾಗಾದರೆ ಭಗವಂತನ ಪ್ರೇಮಕ್ಕೆ ಪ್ರತಿಯಾಗಿ ಆತನನ್ನು ಪ್ರೀತಿಸುವುದು ಆಗತ್ಯ. ಆದರೆ ಆತನ ಪರಿಚಯವಿಲ್ಲದೆ ಪ್ರೀತಿಸುವುದು ಸಾಧ್ಯವಿಲ್ಲ. ಆದುದರಿಂದ ಆತನ ಪರಿಚಯವನ್ನು ಮಾಡಿ, ಆತನ ಸೇವೆ ಮಾಡುವ ರೂಪದಲ್ಲಿ ನಮ್ಮ ಪ್ರೇಮವು ವೃದ್ಧಿಯಾಗಬೇಕು, ಹೃದಯದಿಂದ ಹೊರ ಹೊಮ್ಮಬೇಕು**"[4]– ಬೈಬಲ್ (1 ಯೋಹಾನ 4–8)

"**ನಿಮ್ಮ ನೆರೆಯವರನ್ನು ಪ್ರೀತಿಸಿರಿ, ವೈರಿಯನ್ನು ದ್ವೇಷಿಸಿರಿ, ಎಂದು ಹೇಳಿರುವುದನ್ನು ನೀವು ಕೇಳಿರುವಿರಿ. ಆದರೆ ನಿಮ್ಮ ವೈರಿಗಳನ್ನು ಪ್ರೀತಿಸಬೇಕೆಂದೂ, ನಿಮ್ಮನ್ನು ದ್ವೇಷಿಸುವವರಿಗೆ ಹಿತವನ್ನು ಮಾಡಬೇಕೆಂದೂ ನಿಮ್ಮನ್ನು ಹಿಂಸಿಸುವ ಮತ್ತು ಅಪಚಾರ ಮಾಡುವವರಿಗಾಗಿ ಪ್ರಾರ್ಥಿಸಬೇಕೆಂದೂ ನಾನು ಹೇಳುತ್ತೇನೆ**"[5]. – ಬೈಬಲ್ (ಮತ್ತೇಯ 5, 43–44)

3. "**ಅವನು ಅಲ್ಲಾಹನು ಏಕೈಕನು, ಅಲ್ಲಾಹನು ಸಕಲದಿಂದಲೂ ನಿರಪೇಕ್ಷನು ಮತ್ತು ಸರ್ವರೂ ಅವನ ಅವಲಂಬಿತರು**"[6]– ಕುರ್ ಆನ್ ವ್ಯಾಖ್ಯಾನ (ಕಾಂಡ–30 ಅಧ್ಯಾಯ ಅಲ್ ಇಖ್ ಲಾಸ್, ಕ್ರಮ ಸಂಖ್ಯೆ 112)

4. ಪರಮಾತ್ಮ ಕಲ್ಪನೆಯನ್ನು ಜೈನಧರ್ಮ ಒಪ್ಪಿಕೊಳ್ಳದೇ ಇದ್ದರೂ, ಆತ್ಮಕಲ್ಪನೆಯನ್ನು ನಿರಾಕರಿಸುವುದಿಲ್ಲ. 'ಜಿನ'ರಾಗುವುದು ಎಲ್ಲರಿಗೂ ಸಾಧ್ಯ ಎನ್ನುವುದು ಜೈನಧರ್ಮದ ಸಂದೇಶ.

**"ಜೈನ ದರ್ಶನದಲ್ಲಿ ಆಧ್ಯಾತ್ಮಿಕ ಸೇವೆಗೆ ಮುಖ್ಯವಾಗಿ ಭಕ್ತಿಯೆಂದು ಹೇಳುವರು. ಇವರು ದಶವಿಧ ಭಕ್ತಿಗಳನ್ನು ಉಲ್ಲೇಖಿಸಿರುವರು. ಇವುಗಳನ್ನು ಮಾನತುಂಗಾಚಾರ್ಯರೂ ಕುಂದಕುಂದಾಚಾರ್ಯರೂ 'ದಶಭಕ್ತಿ' ಎಂದು ಗ್ರಂಥ ರೂಪದಲ್ಲಿ ಬರೆದಿಟ್ಟಿರುವರು. ಅವುಗಳಲ್ಲೆಲ್ಲ ಸಿದ್ಧರ ಆಚಾರ್ಯರ ಸ್ವರೂಪ ವಿವರಣೆಯಿದೆ. ಅದನ್ನು ತಿಳಿದುಕೊಂಡು ಅವರಂತೆ ಪ್ರತಿಯೊಬ್ಬ ಮಾನವನೂ ಪರಿಶುದ್ಧನಾಗಲಿಕ್ಕೆ ಸಾಧನೆ ಮಾಡುವುದೇ ಭಕ್ತಿಯೆನಿಸುವುದು"**[7]– ಜೈನ ಧರ್ಮ – ಮಿರ್ಜಿ ಅಣ್ಣಾರಾಯ

5. **'ಏಕೋ ಜಪಿ ಏಕೋ ಸಾಲಾಹಿ ಏಕ್ ಸಿಮರಿ ಏಕೋ ಮನ್ ಅಹಿ**
**ಏಕಸ್ ಕೇ ಗುನಂ ಗಾವು ಅನಂತ್ ಮನಿ ಶನಿ ಜಾಪಿ ಏಕ್ ಭಗವಂತ್**
**ಏಕೋ ಏಕ್ ಹರಿ ಆಪಿ ಪೂರನ್ ಪೂರಿ ರಹಿಓ ಪ್ರಭು ಬಿ ಆಪಿ**
**ಅನಿಕ್ ಬಿಸ್‌ಥಾರ್ ಏಕ್ ಸೇ ಭವ ಏಕ್ ಆರಾಧಿ ಪರಾಛತ್ ಗವಿ**
**ಮನ್ ತನ್ ಅಂತರಿ ಏಕ್ ಪ್ರಭು ರಾತಾ ಗುರ್‌ಪ್ರಸಾದಿ ನಾನಕ್ ಇಕ್ ಜಾತಾ'**
– ಸುಖಮನಿ ಸಾಹಿಬ್ 19–8

(ಒಬ್ಬನನೆ ಧ್ಯಾನಿಸು, ಒಬ್ಬನನೆ ಪ್ರಶಂಸಿಸು, ಒಬ್ಬನನೆ ಸ್ಮರಿಸು, ನೀ ಒಬ್ಬನನೆ ಮನದಲಿರಿಸು, ಒಬ್ಬನೇ ಅನಂತನ ಮಾಡು ನೀ ಗುಣಗಾನ, ತನುಮನದಲಿ ಜಪಿಸು ಒಬ್ಬನೇ ಭಗವಂತನ, ಒಬ್ಬನೇ ಒಬ್ಬನಾದ ಒಬ್ಬ ಹರಿ ನೀನೇ, ಪೂರ್ಣದಲಿ ಪೂರ್ಣ ಸಂಪೂರ್ಣನೂ ನೀನೇ, ಒಬ್ಬ ಹರಿಯಿಂದ ಅನೇಕ ವಿಶಾಲತೆಯಾಗಿದೆ. ಒಂದರ ಆರಾಧನೆಯಿಂದ ಪಾಪ ನಾಶವಾಗಿದೆ, ತನುಮನದಲಿ ಪ್ರಭು ಒಬ್ಬನೇ ರಚಿಸಿದನೆಲ್ಲವನು, ಹೇ ನಾನಕ! ಗುರುವಿನ ಕೃಪೆಯಿಂದ ಎಲ್ಲಾ ಒಂದೆನ್ನುವನು[8] – ಸಿಖ್ ಧರ್ಮ).

ಮೇಲೆ ಹೇಳಿದ ಮೂಲಭೂತವಾದ ಅಂಶಗಳು ಆಯಾ ಧರ್ಮದ ಭೌಗೋಳಿಕ, ಚಾರಿತ್ರಿಕ, ಸಾಂಸ್ಕೃತಿಕ, ರಾಜಕೀಯ ಮುಂತಾದ ನೆಲೆ ಹಿನ್ನೆಲೆಗಳನ್ನು ಅವಲಂಬಿಸಿ ವಿಭಿನ್ನ, ವಿಶಿಷ್ಟ ರೂಪಗಳನ್ನು ತಳೆಯುತ್ತವೆ. ವಿವಿಧ ಮತ ಪಂಥಗಳು

ಮನ ಬುದ್ಧಿಗಳಿಗೆ ಮಿಗಿಲಾಗಿರುವ ಅಲೌಕಿಕವಾದ, ಸರ್ವ ವ್ಯಾಪಕವಾದ, ಸರ್ವಶಕ್ತವಾದ ತತ್ತ್ವವನ್ನು ಒಪ್ಪಿಕೊಳ್ಳುವುದು ಮೇಲಿನ ಉಲ್ಲೇಖಗಳಿಂದ ಸ್ಪಷ್ಟವಾಗುವುದು. ಲೋಕವ್ಯವಹಾರದಲ್ಲಿ ಮಾನವನು ತನ್ನ ಇತಿ ಮಿತಿಗಳನ್ನು ಅರಿತುಕೊಂಡು, ಆ ಮಿತಿಗಳನ್ನು ಮೀರಿ ನಿಲ್ಲಲು ತನಗಿಂತಲೂ ಹಿರಿದಾದ, ತನಗೊಂದು ಆಂತರಿಕ ಆಧಾರವನ್ನು ನೀಡಬಲ್ಲಂತಹ ಚೈತನ್ಯವನ್ನು ಗುರುತಿಸಿಕೊಂಡು ಅದಕ್ಕೆ ಶರಣಾಗುವುದು ಎಲ್ಲಾ ಮತ ಧರ್ಮಗಳಿಗೂ ಸಾಮಾನ್ಯವಾದ ಮೂಲಭೂತ ಮೌಲ್ಯವಾಗಿ ಕಂಡು ಬರುತ್ತದೆ. ದೌರ್ಬಲ್ಯಗಳನ್ನು ಮೀರಿ ನಿಲ್ಲಲು ಲೋಕೋತ್ತರವಾದ ಸರ್ವ ಶಕ್ತಿ ಸಮನ್ವಿತವಾದ ತತ್ತ್ವವೊಂದನ್ನು ನಂಬಿ ಶರಣಾಗುವುದು ಬಹುತೇಕ ಎಲ್ಲಾ ಧರ್ಮಗಳಲ್ಲೂ ಭಕ್ತಿಯ ವಿಕಾಸಕ್ಕೆ ನಾಂದಿ ಹಾಡಿದ ಅಂಶವಾಗಿ ಗೋಚರಿಸುವುದು.

"ಭಾರತದಲ್ಲಿ ಭಕ್ತಿ ಪಂಥಕ್ಕೆ ಕಡೆಯ ಪಕ್ಷ ಐದು ಸಾವಿರ ವರ್ಷಗಳ ಇತಿಹಾಸವಿದೆ. ಮೊಹೆಂಜೋದಾರೋ – ಹರಪ್ಪ ಸಂಸ್ಕೃತಿಯಲ್ಲಿ ಭಕ್ತಿಯ ಕುರುಹುಗಳು ಸ್ಪಷ್ಟವಾಗಿ ಗೋಚರಿಸುತ್ತವೆ" ಎಂದು ಮಹಾಮಹೋಪಾಧ್ಯಾಯ ರಾ. ಸತ್ಯನಾರಾಯಣರವರು ಅಭಿಪ್ರಾಯಪಟ್ಟಿದ್ದಾರೆ[9].

ಭಕ್ತಿಯ ಪ್ರಾಚೀನತೆಯ ಕುರಿತು ಹಿರಿಯ ವಿದ್ವಾಂಸರಾದ ರಾಘವೇಂದ್ರಾಚಾರ್ಯ ಸ್ವಾಮಿರಾಯಾಚಾರ್ಯ ಪಂಚಮುಖಿಯವರು ಈ ರೀತಿ ಅಭಿಪ್ರಾಯ ಪಡುತ್ತಾರೆ: "ಮನುಷ್ಯನ ಜೀವನದಲ್ಲಿ ಪ್ರೇಮರಸವು ಸ್ವಾಭಾವಿಕವಾದುದು. ಇದರ ಪ್ರವಾಹವು ಯಾವ ಪಾತ್ರವನ್ನು ಆವರಿಸುತ್ತದೆಯೋ ಅದರ ಗುಣಧರ್ಮಗಳನ್ನು ಊಹಿಸಬಹುದು. ನದೀಪ್ರವಾಹವು ಸೌಳು–ಸೀ ಉಸುಕು ಭೂಮಿಗಳಲ್ಲಿ ಹಾದುಹೋದರೆ ಆ ನೀರಿನಲ್ಲಿ ಆಯಾಪ್ರದೇಶಗಳ ಸಂಸರ್ಗದಿಂದ ವ್ಯತ್ಯಾಸವು ಕಂಡು ಬರುತ್ತದೆ. ಅದರಂತೆ ಈ ಪ್ರೇಮವೆಂಬ ರಸವು ಮನುಷ್ಯನ ಮನಸ್ಸೆಂಬ ಕ್ಷೇತ್ರದಲ್ಲಿ ಹರಿದರೆ ಆ ಮನೋಧರ್ಮವು ಅಲ್ಲಿ ಸೇರಿದ ರಸದ ಸ್ವರೂಪವನ್ನು ನಿರ್ಧರಿಸುತ್ತದೆ. ಈ ಸಂದರ್ಭದಿಂದ ಈ ರಸಕ್ಕೆ

ವಿಷಯಾನುಗುಣ್ಯದಿಂದ ವಾತ್ಸಲ್ಯ, ಪ್ರೀತಿ ಅಥವಾ ಅಕ್ಕರೆ, ಪ್ರೇಮ ಅಥವಾ ಪ್ರಣಯ, ಸ್ನೇಹ, ಗೌರವ, ಆದರ, ಭಕ್ತಿ ಮೊದಲಾದ ಬೇರೆ ಬೇರೆ ಹೆಸರುಗಳು ಬಂದಿವೆ. ಇದರಂತೆ ದಯಾ, ಅನುಕಂಪ, ಕಾರುಣ್ಯ, ಅನುಗ್ರಹ ಮುಂತಾದ ಹೆಸರುಗಳೂ ಇದೇ ರಸದ ಪ್ರತಿರೂಪಗಳಾಗಿವೆ. ಈ ರಸಾವಿರ್ಭಾವಕ್ಕೆ ಅಧಿಕರಣ(ಪಾತ್ರ)ವು ಅತ್ಯವಶ್ಯವಾದುದರಿಂದ ಇದರ ಸ್ವರೂಪವನ್ನು ನಿರ್ಧರಿಸಲಿಕ್ಕೆ ಆ ಅಧಿಕರಣದ ಯೋಗ್ಯತೆ ಅಥವಾ ಸ್ವಾಭಾವಿಕ ಶಕ್ತಿಯು ಕಾರಣವಾಗುತ್ತದೆ. ಈ ಯೋಗ್ಯತೆಗೆ 'ಶ್ರದ್ಧೆ' ಎಂದು ಸಂಕೇತವುಂಟು. ಈ ಅಧಿಕರಣ ಅಥವಾ ಸ್ಥಾನವು ಮನುಷ್ಯ ಸೃಷ್ಟಿಯ ಆರಂಭದಿಂದಲೇ ಇದ್ದಿರಬೇಕೆಂಬುದು ಸ್ಪಷ್ಟವಿದೆ. ತನ್ನ ಚಿತ್ತದಲ್ಲಿ ಈ ರಸವು ನಿಲ್ಲುವಂತೆ ಮಾಡುವುದಕ್ಕೆ ಪ್ರತೀಕ ಅಥವಾ ಮೂರ್ತಿಗಳು ಅವಶ್ಯವೆನಿಸಿದವು. ಈ ಮೂರ್ತಿಗಳು ಪ್ರೇಮರಸದ ಯೋಗ್ಯ ಪಾತ್ರಗಳಾಗಬೇಕಾದರೆ ಅವು ಚಿನ್ಮಯವಾಗಬೇಕಾಗುತ್ತವೆ .......... ಭಾರತವರ್ಷದ ಪ್ರಾಚೀನ ಚರಿತ್ರೆಯಲ್ಲಿ ಈ ಮೂರ್ತಿಗಳು ಎಷ್ಟು ಕಾಲದಿಂದ ಇದ್ದುವೆಂಬುದನ್ನು ಕಂಡುಹಿಡಿದರೆ(ಐತಿಹಾಸಿಕ ಪ್ರಮಾಣಗಳಿಂದ) ಭಕ್ತಿಮಾರ್ಗದ ಪ್ರಚಾರವು ಆ ಕಾಲದಲ್ಲಿ ಇದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಇದರಿಂದ ಅದಕ್ಕೂ ಹಿಂದೆ ಇದ್ದಿಲ್ಲವೆಂದಲ್ಲ. ಆಗ ಇದ್ದುದನ್ನು ಕೇವಲ ಮನಃಶಾಸ್ತ್ರದ ಆಧಾರದಿಂದಾಗಲೀ, ಜ್ಞಾನಿಗಳ ಐತಿಹ್ಯದಿಂದಾಗಲೀ, ಆಗಮಗಳಿಂದಾಗಲಿ ತಿಳಿಯಬೇಕಾಗುತ್ತದೆ"[10].

ವಿದ್ವಾಂಸರ ಈ ಅಭಿಪ್ರಾಯಗಳಿಂದ ಕೇವಲ ಐತಿಹಾಸಿಕ ಹಾಗೂ ಭೌತಿಕವಾದ ಆಧಾರಗಳ ನೆಲೆಯಲ್ಲಿ ಭಕ್ತಿಯ ಪ್ರಾಚೀನತೆಯನ್ನು ನಿರ್ಣಯಿಸಲು ಸಾಧ್ಯವಿಲ್ಲ ಎನ್ನುವುದು ವಿದಿತವಾಗುತ್ತದೆ. ಮೂಲಭೂತವಾಗಿ ಭಕ್ತಿಯು ಮಾನವನ ಆಂತರಿಕ ಭಾವನೆಗಳಿಗೆ ಸಂವೇದನೆಗಳಿಗೆ ಸಂಬಂಧಿಸಿದ ವಿಚಾರವಾಗಿರುವುದರಿಂದ ಮಾನವನಲ್ಲಿ ಪ್ರೀತಿ, ಪ್ರೇಮ, ಸ್ನೇಹ, ವಿಶ್ವಾಸದಂತಹ ಸದ್ಭಾವನೆಗಳು ಎಂದು ಉದಯಿಸಿದವೊ ಭಕ್ತಿಯ ಮೂಲ ಧಾತುವು ಉದಯಿಸಿತು ಎನ್ನಬಹುದು. ಒಂದು ವೇಳೆ ಈ

ಸದ್ಭಾವನೆ ಮಾನವನಲ್ಲಿ ಉದಯಿಸಿದ್ದರೂ ಅದು ಶಾಸ್ತ್ರಗಳು ನೀಡುವ ಭಕ್ತಿಯ ವ್ಯಾಖ್ಯೆಯ ರೂಪದಲ್ಲಿ (ಉದಾಹರಣೆಗೆ 'ಭಕ್ತಿಯ ಪರಮ ಪ್ರೇಮ ರೂಪ' ಎಂದು ನಾರದ ಭಕ್ತಿ ಸೂತ್ರವು ಹೇಳುತ್ತದೆ, ಸೂತ್ರ ಸಂಖ್ಯೆ ೨) ಇತ್ತು ಎಂದು ಹೇಳಲಾಗುವುದಿಲ್ಲ. ಆದರೆ ಯಾವಾಗ ಮಾನವನು ತನಗಿಂತ ಮಿಗಿಲಾದ ಲೋಕ ನಿಯಂತ್ರಕವಾದ ಶಕ್ತಿಯನ್ನು ಪ್ರಕೃತಿಯಲ್ಲಿ ಗುರುತಿಸಿದನೋ, ಆಗ ತನ್ನ ಹೃದಯದಲ್ಲಿ ಮೂಡಿದ ಸದ್ಭಾವನೆಯನ್ನು ಆ ಶಕ್ತಿಯೆಡೆಗೆ ಹರಿಯಿಸುವ ಪ್ರಕ್ರಿಯೆಯಲ್ಲಿ ಆಂತರಿಕವಾದ ನೆಮ್ಮದಿ, ಶಾಂತಿ, ಆನಂದವನ್ನು ಕಂಡುಕೊಂಡದ್ದರಿಂದ ಭಕ್ತಿಯ ವಿಕಾಸವು ಸಾಧ್ಯವಾಯಿತು ಎನ್ನಬಹುದು. ಮಾನವನ ಆಂತರಿಕ ಹಾಗೂ ಸಾಮುದಾಯಿಕ ಬೆಳವಣಿಗೆಗೆ ಈ ಶೋಧನೆ ಬಹುದೊಡ್ಡ ಕೊಡುಗೆಯನ್ನಿತ್ತದೆ ಎನ್ನಬೇಕು.

ಹೃದಯದ ಸದ್ಭಾವನೆಯನ್ನು ಜಗನ್ನಿಯಾಮಕವಾದ ಅಗೋಚರವಾದ ಶಕ್ತಿಯೆಡೆಗೆ ಹರಿಸಲು ಆಧಾರವಾಗಿ ಪ್ರತೀಕವೊಂದನ್ನು ಆಶ್ರಯಿಸುವ ಅಗತ್ಯತೆ ಮಾನವನಲ್ಲಿ ಕಂಡುಬಂದುದು ಭಕ್ತಿಯ ವಿಕಾಸದ ಮುಂದಿನ ಹಂತ ಎನ್ನ ಬಹುದು. ಅದಕ್ಕಾಗಿ ಮೂರ್ತಿಪೂಜೆಯನ್ನು ರೂಢಿಸಿಕೊಳ್ಳಬೇಕಾಯಿತು.

"ಜಗತ್ತಿನ ಎಲ್ಲ ಜನಾಂಗಗಳಲ್ಲಿಯೂ ಮೂರ್ತಿಪೂಜೆಯು ಒಂದಿಲ್ಲೊಂದು ರೂಪದಿಂದ ರೂಢಿಯಲ್ಲಿತ್ತು. ಪರ್ಸಿಯಾ, ಏಜಿಯನ್, ಎಲಿಂ,ಮೆಸೊಪೊಟೆಮಿಯಾ, ಆಸಿಯಾಮಾಯಿನರ್, ಸಿರಿಯಾ, ಸಾಯಪ್ರಸ್, ಬಾಲ್ಕನ್ಸ ಮತ್ತು ಇಜಿಪ್ತ್ ಮೊದಲಾದ ಪ್ರಾಚೀನ ರಾಷ್ಟ್ರಗಳಲ್ಲಿ ದೊರೆತ ಪುರಾಣ ವಸ್ತುಗಳಿಂದ ವಿಶೇಷವಾಗಿ ಅಂಬಾ ವಿಗ್ರಹಗಳಿಂದ ಅಲ್ಲಿ ಮೂರ್ತಿಪೂಜೆಯು ಬಹುಕಾಲ ಹಿಂದೆ ರೂಢವಾಗಿತ್ತೆಂದು ಪುರಾಣವಸ್ತು ಸಂಶೋಧಕರು ಕಂಡು ಹಿಡಿದಿದ್ದಾರೆ".

ಡಾ। ಟಿ.ಎನ್.ನಾಗರತ್ನರವರು ತಮ್ಮ 'ಹರಿದಾಸರ ಭಕ್ತಿಸ್ವರೂಪ' ಎನ್ನುವ ಸಂಶೋಧನಾ ಗ್ರಂಥದಲ್ಲಿ (Mohenjo Daro and the Indus civilization, vol 1. Page 56, 22 ಇದರ ಆಧಾರದಲ್ಲಿ) ಮೊಹೆಂಜೊದಾರೊದಲ್ಲಿ ನಡೆದ ಸಂಶೋಧನೆಯ ಕುರಿತು ವಿದ್ವಾಂಸರ ಅಭಿಪ್ರಾಯವನ್ನು ಹೀಗೆ ದಾಖಲಿಸಿರುತ್ತಾರೆ:

"ಹಿಂದುಸ್ತಾನದಲ್ಲಿ ಮೊಹೆಂಜೊದಾರೊ, ಹರಪ್ಪ ಮೊದಲಾದ ಪ್ರಾಗ್ಯೆತಿಹಾಸಿಕ ಪ್ರದೇಶಗಳಲ್ಲಿ ಸುಮಾರು ಕ್ರಿಪೂ. 3250–2750 ರ ಸಮಯದ ನಾನಾತೆರದ ಆಕಾರಗಳುಳ್ಳ ಪೂಜೆಯ ವಿಗ್ರಹಗಳು ಸಿಕ್ಕಿವೆ. ಇವುಗಳ ಆಧಾರದಲ್ಲಿ 5000 ವರ್ಷಗಳ ಪೂರ್ವದಲ್ಲಿ ಭಾರತವರ್ಷದಲ್ಲಿ ದೇವಾಲಯಗಳಲ್ಲಿ ಮೂರ್ತಿಪೂಜೆಯು ನಡೆಯುತ್ತಿದ್ದಿರಬೇಕೆಂದು ಸ್ಪಷ್ಟವಾಗುತ್ತದೆ"[11].

"ಸರ್ ಜಾನ್ ಮಾರ್ಷಲ್‌ರವರು 'ನಮಗೆ ಮೊಹೆಂಜೊದಾರೊವಿನಲ್ಲಿ ಸಿಕ್ಕಿರುವ ಪ್ರತಿಯೊಂದು ವಸ್ತುವೂ ಅಲ್ಲಿ ಶಿವ, ಶಕ್ತಿಗಳ, ನಾಗಗಳ, ವನದೇವತೆಗಳ, ಪ್ರಾಣಿಗಳ, ಮರಗಳ, ಕಲ್ಲುಗಳ....... ಆರಾಧನೆ ಮತ್ತು ಯೋಗಾಭ್ಯಾಸಗಳು ಪ್ರಚಲಿತವಾಗಿತ್ತೆಂದು ತಿಳಿಸುತ್ತದೆ' ಎನ್ನುತ್ತಾರೆ. ಅಂತೆಯೇ ಅಲ್ಲಿ ಕಂಡುಬಂದ ದೊಡ್ಡ ದೊಡ್ಡ ಕಟ್ಟಡಗಳನ್ನು ಕುರಿತು, ಅವು ದೇವಸ್ಥಾನಗಳಾಗಿದ್ದಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ"[12]:.

"ಭಕ್ತಿಯ ಪ್ರಾಚೀನತೆಯ ಕುರಿತು ಮನಶ್ಶಾಸ್ತ್ರಜ್ಞರ ಪ್ರಕಾರ 'ಮಾನವನ ಹುಟ್ಟಿನೊಂದಿಗೇ ಭಕ್ತಿಯ ಹುಟ್ಟೂ ಆಯಿತು' ಎಂದು ಉಲ್ಲೇಖಿಸಿದ್ದಾರೆ"[13].

ಐತಿಹ್ಯಗಳು ಲಭಿಸಿದ್ದರೂ ಅಂದಿನ ಆ ಭಕ್ತಿಯ ಸ್ವರೂಪವು ಎಂಥದ್ದಿತ್ತೆಂಬುದನ್ನಾಗಲೀ ಇಷ್ಟದೇವತೆಯ ಹೆಸರನ್ನಾಗಲೀ ತಿಳಿದುಕೊಳ್ಳಲು ಆಧಾರಗಳಿಲ್ಲ. ಆದರೂ ಭಕ್ತಿ ಮಾರ್ಗವು ಒಂದು ರೂಪದಲ್ಲಿ ರೂಢವಾಗಿತ್ತೆಂದು ಊಹಿಸಬಹುದಾಗಿದೆ. ಇನ್ನು ಶ್ರುತಿ, ಆಗಮಗಳ ನೆಲೆಯಲ್ಲಿ ಭಕ್ತಿಯ ಪ್ರಾಚೀನತೆಯನ್ನು ವಿಶ್ಲೇಷಿಸುವುದಾದರೆ, ಅಲ್ಲಿ ಲಭಿಸುವ ಉಲ್ಲೇಖಗಳನ್ನೇ ಆಧಾರವಾಗಿ ಗ್ರಹಿಸಬೇಕಾಗುತ್ತದೆ.

ಭಕ್ತಿಯ ಮೂಲವನ್ನು ಋಗ್ವೇದದ ಮಂತ್ರಗಳಲ್ಲಿಯೇ ನೋಡಬಹುದು. ಉದಾಹರಣೆಗೆ: **'ಯಃ ಪೂರ್ವ್ಯಾಯ ವೇಧಸೇ ನವೀಯಸೇ, ಸುಮಜ್ಜಾನಯೇ ವಿಷ್ಣವೇ ದದಾಶತಿ । ಯೋ ಜಾತಮಸ್ಯ ಮಹತೋ ಮಹಿ ಬ್ರವತ್ಸೇದು ಶ್ರವೋಭಿರ್ಯುಜ್ಯಂ ಚಿದಭ್ಯಸತ್ ॥** ಯಾರು ಜಗತ್ಕಾರಣನೂ ಜಗತ್ಕರ್ತೃವೂ ನಿತ್ಯನೂತನನೂ ಶ್ರೀಪತಿಯೂ ಆದ ವಿಷ್ಣುವಿಗೆ ತನ್ನನ್ನು ಸಮರ್ಪಿಸಿಕೊಳ್ಳುತ್ತಾನೆಯೋ, ಅವನ ಶ್ರೇಷ್ಠವಾದ ಜನ್ಮ ಕರ್ಮಾದಿಗಳನ್ನು ಸ್ತುತಿಸುತ್ತಾನೆಯೋ, ಅವನು ಆ ಚಿತ್ಸ್ವರೂಪನಾದ ವಿಷ್ಣುವನ್ನು ಹೊಂದುತ್ತಾನೆ' [14](ಋಕ್ಸಂಹಿತಾ, 1. 156.2).

ವೇದಗಳಲ್ಲಿ ವಿವಿಧ ದೇವತೆಗಳ ಸ್ತುತಿಗಳಿದ್ದರೂ, ಉಪಾಸನೆಗೆ ಮಹತ್ವ ನೀಡಲಾಗಿದ್ದರೂ ಮೂರ್ತಿ ಪೂಜೆಯ ಉಲ್ಲೇಖವಿಲ್ಲ ಎಂಬುವುದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ [15]. ಆದರೆ ಪ್ರತೀಕವು ಭಕ್ತಿ ಸಾಧನೆಗೆ ಆಧಾರವಾಗಬಲ್ಲುದಾದರೂ ಅನಿವಾರ್ಯವಲ್ಲ ಎನ್ನುವುದು ಸಂತ ಕಬೀರ್, ಸಂತ ಶಿಶುನಾಳ ಷರೀಫ ಮುಂತಾದ ಸಂತರ ಜೀವನದಿಂದ ನಿರೂಪಿತವಾಗುತ್ತದೆ.

ಭಕ್ತಿ ಸಿದ್ಧಾಂತವು ತನ್ನ ಸಾರ ಸರ್ವಸ್ವವನ್ನು ಮೈದೋರಿ ಬೆಳೆದದ್ದು ಭಗವದ್ಗೀತೆಯಲ್ಲಿ. ಶ್ರೀಕೃಷ್ಣ ಭಕ್ತಿಗೆ ಬಹಳ ಉನ್ನತವಾದ ಸ್ಥಾನವನ್ನು ನೀಡಿದ್ದಾನೆ. ಉದಾ:– **"ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ । ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥"** (ಗೀತೆ – 11ನೇ ಅಧ್ಯಾಯ 54ನೇ ಶ್ಲೋಕ) – 'ಎಲೈ ಪರಂತಪ ಅರ್ಜುನ ! ಅನನ್ಯ ಭಕ್ತಿಯ ಮೂಲಕ ನನ್ನನ್ನು ಪ್ರತ್ಯಕ್ಷವಾಗಿ ನೋಡಲು ಯಥಾರ್ಥವಾಗಿ ತಿಳಿದು ಕೊಳ್ಳಲು ಹಾಗೂ ಪ್ರವೇಶಿಸಲು ಅರ್ಥಾತ್ ಒಂದೇ ಭಾವದಿಂದ ಸಾಕ್ಷಾತ್ಕಾರ ಪಡಿಸಿಕೊಳ್ಳಲು ಸಹ ಸಾಧ್ಯ'.

ಈ ಭಕ್ತಿ ಮಾರ್ಗದ ಬಿತ್ತರಕ್ಕಾಗಿಯೇ ರಾಮಾಯಣ, ಮಹಾಭಾರತ ಕಾವ್ಯಗಳೂ, ಭಾಗವತಾದಿ ಹದಿನೆಂಟು ಪುರಾಣಗಳೂ ರೂಪುಗೊಂಡವು ಎನ್ನುವುದು ವಿದ್ವಾಂಸರ ಅಭಿಪ್ರಾಯವಾಗಿದೆ. ಶ್ರೀಮದ್ಭಾಗವತ ಮಹಾಪುರಾಣವಂತೂ ಎಲ್ಲಾ ಭಕ್ತಿ ಪಂಥಗಳ ಉಗಮಸ್ಥಾನವೇ ಆಗಿದೆ. ಭಕ್ತಿ ಮಾರ್ಗದ ಬೆಳವಣಿಗೆಯ ಇತಿಹಾಸದ ಬಗೆಗೆ ಬೆಳಕು ಚೆಲ್ಲುವಂತಹ ಉಲ್ಲೇಖವನ್ನು ಶ್ರೀಮದ್ಭಾಗವತದಲ್ಲಿ ಕಾಣಬಹುದು: 'ಭಕ್ತಿ ದೇವಿಯು ತನ್ನ ಕಥೆಯನ್ನು ನಾರದರಿಗೆ ತಿಳಿ ಹೇಳುತ್ತಾಳೆ.

**'ಉತ್ಪನ್ನಾ ದ್ರವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ । ಕ್ವಚಿತ್ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥'** 'ನಾನು ಹುಟ್ಟಿದ್ದು ದ್ರಾವಿಡ ದೇಶದಲ್ಲಿ ಬೆಳವಣಿಗೆ ಹೊಂದಿದ್ದು ಕರ್ಣಾಟಕದಲ್ಲಿ, ಮಹಾರಾಷ್ಟ್ರದಲ್ಲಿ ಕೆಲವು ಕಡೆಗಳಲ್ಲಿ ಮಾತ್ರ ವೃದ್ಧಿಯನ್ನು ಹೊಂದಿ ಕೊನೆಗೆ ಗೂರ್ಜರ ದೇಶದಲ್ಲಿ ಮುಪ್ಪಿನಿಂದ ಜೀರ್ಣಳಾಗಿ ಬಿಟ್ಟೆನು.' (ಪದ್ಮಪುರಾಣಾಂತರ್ಗತ ಶ್ರೀಮದ್ಭಾಗವತ ಮಾಹಾತ್ಮ್ಯ, ಅಧ್ಯಾಯ 1, ಶ್ಲೋಕ 48)

ಆತ್ಮದರ್ಶನದಲ್ಲಿ ಭಕ್ತಿಯು ಎಷ್ಟು ಮುಖ್ಯವಾದ ಪಾತ್ರವನ್ನು ವಹಿಸುತ್ತದೆಂದು ಕಠೋಪನಿಷತ್ತು ಉಪದೇಶಿಸುತ್ತದೆ[16]. ಶ್ವೇತಾಶ್ವತರ ಉಪನಿಷತ್ತು 'ಯಸ್ಯ ದೇವೇ ಪರಾಭಕ್ತಿಃ' ಎಂದು ಭಕ್ತಿಯನ್ನು ನೇರವಾಗಿಯೇ ಬೋಧಿಸುತ್ತದೆ[17]. ತೈತ್ತಿರೀಯ ಉಪನಿಷತ್ತು ಆರನೆಯ ಅನುವಾಕದಲ್ಲಿ ಯಾವ ರೀತಿ ಉಪಾಸನೆಯನ್ನು ಮಾಡಬೇಕು ಎಂಬ ಬಗ್ಗೆ ಸಲಹೆಗಳನ್ನು ಕೊಡಲಾಗಿದೆ[18]. ಮಹಾಮಹೋಪಾಧ್ಯಾಯ ರಾ.ಸತ್ಯನಾರಾಯಣರವರು('ಭಕ್ತಿ ಭಾರತಿ' ಸಂಪಾದಿತ ಗ್ರಂಥ – ಇದರಲ್ಲಿ ಪ್ರಕಟಿತ ಲೇಖನ 'ಭಾರತದಲ್ಲಿ ಭಕ್ತಿಪಂಥ – ಅದರಲ್ಲಿ ಹರಿದಾಸ ಪಥ' ಇದರಲ್ಲಿ) ಹೇಳುವಂತೆ "ಛಾಂದೋಗ್ಯೋಪನಿಷತ್ತು, ಸಮಗ್ರವಾಗಿ ಉಪಾಸನಾ ಕಾಂಡವೇ ಆಗಿದ್ದು ಹದಿನಾಲ್ಕು ವಿವಿಧ ಉಪಾಸನಾ ಮಾರ್ಗವನ್ನು ಬ್ರಹ್ಮಾನುಸಂಧಾನನಿರತರಿಗೆ ಉಪದೇಶಿಸುತ್ತದೆ"[19].

ಭಕ್ತಿ ಮೀಮಾಂಸೆಗೆಂದೇ ಹೊರಟ, ಭಕ್ತಿಯನ್ನು ಒಂದು ಶಾಸ್ತ್ರವನ್ನಾಗಿಸಿದ ಶ್ರೇಷ್ಠ ಗ್ರಂಥಗಳೂ ಹೊರಬಂದವು. ಭಾಗವತ ಮಹಾಪುರಾಣವು ಇಂತಹ ಒಂದು ಶ್ರೇಷ್ಠ ಭಕ್ತಿ ಸಂಹಿತೆ. ದರ್ಶನ ಶಾಸ್ತ್ರಗಳನ್ನು ಸಂಗ್ರಹಗೊಳಿಸಿ ಸಾರಗೊಳಿಸಿದಂತೆ ಭಕ್ತಿವಿಷಯಕವಾದ ಸೂತ್ರ ಗ್ರಂಥಗಳು ಹುಟ್ಟಿಕೊಂಡವು. ಇವುಗಳಲ್ಲಿ ನಾರದ ಭಕ್ತಿ ಸೂತ್ರ ಮತ್ತು ಶಾಂಡಿಲ್ಯ ಭಕ್ತಿಸೂತ್ರಗಳು ಮುಖ್ಯವಾದವುಗಳು[20].

ಕಾಲಕ್ರಮೇಣ ಭಕ್ತಿಯು ಒಂದು ಸಿದ್ಧಾಂತವಾಗಿ, ದರ್ಶನವಾಗಿ, ಧರ್ಮವಾಗಿ ಬೆಳೆಯಿತು. ಇದನ್ನು ಭಾಗವತ ಧರ್ಮ ಎಂದು ಕರೆಯುತ್ತಾರೆ. ಶ್ರೀ ಕೃಷ್ಣಾದಿಗಳು ಹುಟ್ಟಿದ 'ಸತ್ವತ್' ಕಾಲದಲ್ಲಿ ಪ್ರಚಲಿತವಾಗಿದ್ದುದರಿಂದ ಸಾತ್ವತ ಮತವೆಂದೂ[21], ಏಕಾಂತ ಭಕ್ತಿಯನ್ನು ಉಪದೇಶಿಸಿರುವುದರಿಂದ ಐಕಾಂತಿಕಮತವೆಂದೂ, ಪಾಂಚರಾತ್ರ[22] ಆಗಮಗಳಲ್ಲಿ ವಿಸ್ತೃತವಾಗಿ ಚರ್ಚಿಸಲ್ಪಟ್ಟಿರುವುದಿಂದ ಪಾಂಚರಾತ್ರಮತವೆಂದೂ ಇದನ್ನು ಕರೆಯುತ್ತಾರೆ.

ಮಹಾಭಾರತ ಶಾಂತಿಪರ್ವದ ನಾರಾಯಣೀಯ, ವಿಷ್ಣು ಪುರಾಣ, ಭಗವದ್ಗೀತೆ, ಶ್ರೀಮದ್ಭಾಗವತ, ಪಾಂಚರಾತ್ರಾಗಮಗಳು, ಶಾಂಡಿಲ್ಯರ ಹಾಗೂ ನಾರದರ ಭಕ್ತಿ ಸೂತ್ರಗಳು ಇವು ಭಾಗವತ ಧರ್ಮದ ಆಕರ ಗ್ರಂಥಗಳು.

ಶ್ರುತಿ, ಸ್ಮೃತಿ, ಪುರಾಣಗಳಿಂದ ಆಯ್ದ ಈ ಎಲ್ಲಾ ಉಲ್ಲೇಖಗಳು ಭಕ್ತಿಯ ಪ್ರಾಚೀನತೆಯ ದರ್ಶನ ಮಾಡಿಸುತ್ತವೆ. ಇವುಗಳಲ್ಲೆಲ್ಲಾ ಪ್ರಾಚೀನತಮವಾದದ್ದು ಋಗ್ವೇದದ ಉಲ್ಲೇಖ. ಪಾಶ್ಚಾತ್ಯ ವಿದ್ವಾಂಸರ ಪ್ರಕಾರ ಕ್ರಿ.ಪೂ. ಎರಡು ಸಾವಿರದಿಂದ ಕ್ರಿ.ಪೂ.ಒಂದು ಸಾವಿರದ ವರೆಗೆ ವೇದಗಳ ರಚನೆಯ ಕಾಲ[24]. ಖಗೋಲಶಾಸ್ತ್ರದ ಆಧಾರದ ಮೇಲೆ ಬಾಲಗಂಗಾಧರ ತಿಲಕರು ಋಗ್ವೇದದ ಕಾಲ ಕ್ರಿ.ಪೂ. 6000 ದಷ್ಟು ಹಿಂದಿನದೆಂದು ತೀರ್ಮಾನಿಸಿದ್ದಾರೆ[25]. ಏನೇ ಆದರೂ ಜಗತ್ತಿನ ಸಾಹಿತ್ಯದಲ್ಲಿ ಅತ್ಯಂತ ಪ್ರಾಚೀನ ಗ್ರಂಥಗಳು ವೇದಗಳೇ ಆಗಿದ್ದು ಅವುಗಳ ಕಾಲವನ್ನು ಖಚಿತವಾಗಿ ನಿರ್ಣಯಿಸಲು ಸಾಧ್ಯವಾಗಿಲ್ಲವಾದ್ದರಿಂದ ಭಕ್ತಿಯ ಪ್ರಾಚೀನತೆಯನ್ನೂ ನಿಖರವಾಗಿ ಹೇಳಲು ಸಾಧ್ಯವಿಲ್ಲ ಎನ್ನಬಹುದು.

## ಟಿಪ್ಪಣಿಗಳು

1. ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ – ಸಂಪುಟ 5, ಶ್ರೀರಾಮಕೃಷ್ಣಾಶ್ರಮ, ಮೈಸೂರು–570020, ಪುಟ 76
2. ಅದೇ, ಪುಟ 289
3. ಉ.ಭಾ. – ಸ್ವಾಮಿ ಸೋಮನಾಥಾನಂದ, ಶ್ರೀರಾಮಕೃಷ್ಣಾಶ್ರಮ, ಮೈಸೂರು–570020, ನಾಲ್ಕನೆಯ ಮುದ್ರಣ:1989, ಪುಟ 192
4. ಕ್ರೈಸ್ತ ತತ್ತ್ವ ದರ್ಶನ – ಅಧ್ಯಾಯ–3, 'ಭಗವತ್ ಪ್ರೇಮದ ಕುರುಹು', ವಿದ್ವಾನ್ ಎಡ್ವಿನ್ ಡಿ'ಸೋಜ, ಪ್ರಧಾನ ಸಂ. : ಡಾ.ಕೆ.ವಿ.ಪುಟ್ಟಪ್ಪ, ಪ್ರಸಾರಂಗ, ಮೈಸೂರು ವಿಶ್ವವಿದ್ಯಾನಲಯ, 1975 ಪುಟ 44
5. ಅದೇ, ಪುಟ 74
6. ಕುರ್ ಆನ್ ವ್ಯಾಖ್ಯಾನ, ಉರ್ದು ಭಾವಾನುವಾದ ಮತ್ತು ವ್ಯಾಖ್ಯಾನ : ಮೌಲಾನಾ ಸಯ್ಯದ್ ಅಬುತಾ ಆಲಾ ಮೌದೂದೀರ, ಸಂಕ್ಷೇಪ: ಮೌಲಾನಾ ಸದ್ರುದ್ದೀನ್ ಇಸ್ಲಾಹೀ, ಕನ್ನಡಾನುವಾದ: ಎಸ್. ಅಬ್ದುಲ್ ಗಫ್ಫಾರ್, ಅಬ್ದುಸ್ಸಲಾಮ್ ಪುತ್ತಿಗೆ, ಪ್ರ : ಶಾಂತಿ ಪ್ರಕಾಶನ, ಹಿದಾಯತ್ ಸೆಂಟರ್, ಬೀಬಿ ಅಲಾಬಿ ರಸ್ತೆ, ಮಂಗಳೂರು–1, ಪ್ರ. ಮು : 1994, ಪುಟ 181
7. ಜೈನ ಧರ್ಮ – ಮಿರ್ಜಿ ಅಣ್ಣಾರಾಯ, ಪ್ರ : ಡಿ. ವಿ. ಕೆ ಮೂರ್ತಿ, ಕೃಷ್ಣಮೂರ್ತಿ ಪುರಂ, ಮೈಸೂರು–4, ಮೊದಲ ಮುದ್ರಣ : 1952, ಪುಟ 381
8. ಸಂಸ್ಕೃತಿ, ಪ್ರ: ಭಾರತೀಯ ವಿದ್ಯಾಭವನದ ಗಾಂಧೀ ವಿಜ್ಞಾನ ಹಾಗೂ ಮಾನವೀಯ ಮೌಲ್ಯಗಳ ಕೇಂದ್ರ, ಬೆಂಗಳೂರು–1, ಪುಟ 74–75
9. ಭಕ್ತಿ ಭಾರತಿ, ಇದರಲ್ಲಿ ಪ್ರಕಟಿತ ರಾ.ಸತ್ಯನಾರಾಯಣ ಇವರ 'ಭಾರತದಲ್ಲಿ ಭಕ್ತಿಪಂಥ – ಅದರಲ್ಲಿ ಹರಿದಾಸ ಪಥ' – ಎಂಬ ಲೇಖನದಿಂದ ಉದ್ಧೃತ, ಪ್ರ: ಸಂಗೀತ ಸಭಾ ಉಡುಪಿ, 1997, ಪುಟ 116
10. ಕರ್ನಾಟಕದ ಹರಿದಾಸ ಸಾಹಿತ್ಯ, ರಾಘವೇಂದ್ರಾಚಾರ್ಯ ಸ್ವಾಮಿರಾಯಾಚಾರ್ಯ ಪಂಚಮುಖಿ, ಪ್ರ: ಕನ್ನಡ ಸಾಹಿತ್ಯ ಪರಿಷತ್, ಚಾಮರಾಜಪೇಟೆ, ಬೆಂಗಳೂರು, 1952, ಪುಟ 4
11. ಹರಿದಾಸರ ಭಕ್ತಿಸ್ವರೂಪ, ಡಾ। ಟಿ.ಎನ್.ನಾಗರತ್ನ, ಪ್ರ: ಶ್ರೀಸುಶಮೀಂದ್ರ ಸೇವಾ ಪ್ರತಿಷ್ಠಾನ, ನಂಜನಗೂಡು,ದ್ವಿಮು.2010, ಪುಟ 8
12. ಅದೇ, ಪುಟ 1
13. ಅದೇ, ಪುಟ 1, ಆಧಾರ: Introduction:Karnataka Haridasa Sahitya, Part 1, page v
14. ಮೂಲ: ಶ್ರೀಜಯಚಾಮರಾಜೇಂದ್ರ ವೇದರತ್ನಮಾಲಾ, ಸಾಯಣಭಾಷ್ಯ ಸಮೇತಾ ಋಗ್ವೇದ ಸಂಹಿತಾ, ತಂತ್ರಾಂಶ ಆಕರ: ಶ್ರೀರಂಗ ಡಿಜಿಟಲ್‌ಟೆಕ್ನಾಲಜೀಸ್,rgveda%26%20puranas/Granthamala/Rigveda/Rig_Vol11/Rig_Vol11.djvu?djvuopts&page=663
15. "ಋಗ್ವೇದದಲ್ಲಿ ಹಲವಾರು ದೇವತೆಗಳನ್ನು ಸ್ತುತಿಸಲಾಗಿದೆ. ಅಗ್ನಿ, ಇಂದ್ರ, ಸೋಮ, ವಾಯು, ಸೂರ್ಯ, ಬೃಹಸ್ಪತಿ, ಚಂದ್ರ, ವಿಷ್ಣು, ಪರ್ಜನ್ಯ.........ಇತ್ಯಾದಿ ಅನೇಕ ದೇವತೆಗಳು ಋಗ್ವೇದದ ಋಷಿಗಳ ಸ್ತೋತ್ರಗಳಿಗೆ ಪಾತ್ರರಾಗಿದ್ದಾರೆ. ಅಮೂರ್ತವಾದ ಎಂದರೆ ನಿರ್ದಿಷ್ಟ ಆಕಾರವಿಲ್ಲದ ಸತ್ತ್ವಗಳನ್ನು, ಎಂದರೆ ಪ್ರಕೃತಿಯಲ್ಲಿ ಕಾಣಸಿಗುವ ಶಕ್ತಿಗಳನ್ನು ಋಷಿಗಳು ಸ್ತುತಿಸಿದ್ದಾರೆಂದು ಬೃಹದ್ದೇವತಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ."

**ಸತ್ತ್ವಾನ್ಯಮೂರ್ತಾನ್ಯಪಿ ಚ ದೇವತಾವನ್ಮಹರ್ಷಯಃ ।**

**ತುಷ್ಟುವೂ ಋಷಯಃ ಶಕ್ತ್ಯಾ ತಾಸು ತಾಸು ಸ್ತುತಿಷ್ವಿಹ ॥ (1.81)**" – (ವೇದ – ವೇದಾಂಗ, ವಿದ್ವಾನ್ ಎಚ್.ವಿ.ನಾಗರಾಜ ರಾವ್, ಭವನದ ಗಾಂಧೀ ಕೇಂದ್ರ, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ರೇಸ್ಕೋರ್ಸ್ ರಸ್ತೆ, ಬೆಂಗಳೂರು – 560001, ಪುಟ 8)

16. **ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ।**
**ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇತನೂಂ ಸ್ವಾವ್॥**
'ಈ ಆತ್ಮ ಪ್ರವಚನದಿಂದ ಲಭ್ಯನಲ್ಲ. ಮೇಧಾಶಕ್ತಿಯಿಂದಲೂ ಶ್ರವಣದಿಂದಲೂ ಲಭ್ಯನಲ್ಲ. ಯಾರನ್ನು ಈ ಸಾಧಕನು (ಭಕ್ತಿಯಿಂದ) ಬೇಡುತ್ತಾನೆಯೋ ಅವನಿಂದ ಲಭ್ಯನು. ಅವನಿಗೆ ಆತ್ಮನು ತನ್ನ ತನುವನ್ನೇ(ಸ್ವರೂಪವನ್ನೇ) ತೋರುತ್ತಾನೆ. (ಕಠೋಪನಿಷತ್, 2ನೆಯ ವಲ್ಲಿ, ಶ್ಲೋಕ 23) - ಉ. ಭಾ., ಪುಟ 104.

17. **ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ** – (ಶ್ವೇತಾಶ್ವತರ ಉಪನಿಷತ್ತು, ಆರನೆಯ ಅಧ್ಯಾಯ, ಶ್ಲೋಕ 23)– ಉ. ಭಾ., ಪುಟ 747.

18. **ಸ ಯ ಏಷೋಽಂತರ್ಹೃದಯ ಆಕಾಶಃ। ತಸ್ಮಿನ್ನಯಂ ಪುರುಷೋ ಮನೋಮಯಃ।**...... – ಉ. ಭಾ., ಪುಟ 502, 503

19. ಭಕ್ತಿ ಭಾರತೀ, ಇದರಲ್ಲಿ ಪ್ರಕಟಿತ 'ಭಾರತದಲ್ಲಿ ಭಕ್ತಿ ಪಂಥ–ಅದರಲ್ಲಿ ಹರಿದಾಸ ಪಥ' ಎನ್ನುವ ಲೇಖನ, ಸಂ: ಸಂತೋಷಕುಮಾರ ಗುಲ್ವಾಡಿ ನಿ.ಮುರಾರಿ ಬಲ್ಲಾಳ, ಸಂಗೀತಸಭಾ, ಉಡುಪಿ, 1997, ಪುಟ 117

20. 'ಇವುಗಳ ಉಪದೇಶವನ್ನು ವಿಸ್ತರಿಸುವ ವ್ಯಾಖ್ಯಾನಗಳೂ ಭಕ್ತಿಯ ಮಾರ್ಗ, ಮಾಹಾತ್ಮ್ಯ, ವೈವಿಧ್ಯ ಮತ್ತು ಆಚರಣೆಗಳನ್ನು ಬೇರೆ ಬೇರೆ ಅಧಿಕಾರ, ಅಭಿರುಚಿಗಳಿರುವ ವಿವಿಧ ಜನರಿಗೆ ತಿಳಿಯ ಹೇಳುವ ಸಂಸ್ಕೃತ ಗ್ರಂಥಗಳು ಪ್ರಕಟವಾಗಿ, ಪ್ರಕಟವಾಗದೆ ನೂರಾರಿವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ಹೆಸರಿಸಬಹುದು : ಭಕ್ತ ಗೀತಾ ಟೀಕಾ, ಭಕ್ತ ಜಯಂತೀ, ಭಕ್ತ ಪ್ರತಿಷ್ಠಾ, ಭಕ್ತ ಮಾಲಾ, ಭಕ್ತ ಮೋದತರಂಗಿಣೀ, ಭಕ್ತ ವತ್ಸಲ ಮಹಾತ್ಮ್ಯ, ಭಕ್ತ ವೈಭವ, ಭಕ್ತವ್ರಾತ ಸಂತೋಷಕ, ಭಕ್ತಾಮೃತ, ಭಕ್ತಾರಾಧನ, ಪ್ರಯೋಗಮಣಿಮಾಲಾ ಮುಂತಾದವು ಭಕ್ತನ ಮಹಾತ್ಮ್ಯವನ್ನು ವಿವರಿಸುತ್ತವೆ. ಭಕ್ತಿಯ ಮಹಾತ್ಮ್ಯವನ್ನು ತಿಳಿಸುವ ಕೆಲವು ಗ್ರಂಥಗಳೆಂದರೆ ಭಕ್ತಿಕಲ್ಪತರು, ಭಕ್ತಿ ಕಲ್ಪಸಿತ್, ಭಕ್ತಿ ಚಂದ್ರಿಕಾ, ಭಕ್ತಿ ಚಂದ್ರಿಕೋಲ್ಲಾಸ, ಭಕ್ತಿ ಚಂದ್ರೋದಯ, ಭಕ್ತಿ ತತ್ವ ರಸಾಯನ, ಭಕ್ತಿ ತರಂಗಿಣೀ, ಭಕ್ತಿ ದೀಪಿಕಾ, ಭಕ್ತಿದೂತಿ, ಭಕ್ತಿ ನಿರ್ಣಯ, ಭಕ್ತಿಪೂರ್ವಪಕ್ಷ..........'– ರಾ.ಸತ್ಯನಾರಾಯಣ(ನೋಡಿ ಭಕ್ತಿ ಭಾರತೀ, ಇದರಲ್ಲಿ ಪ್ರಕಟಿತ 'ಭಾರತದಲ್ಲಿ ಭಕ್ತಿ ಪಂಥ–ಅದರಲ್ಲಿ ಹರಿದಾಸ ಪಥ' ಎನ್ನುವ ಲೇಖನ, ಸಂ: ಸಂತೋಷಕುಮಾರ ಗುಲ್ವಾಡಿ ನಿ.ಮುರಾರಿ ಬಲ್ಲಾಳ, ಸಂಗೀತಸಭಾ, ಉಡುಪಿ, 1997, ಪುಟ 117, 118).

' ನಾರದಭಕ್ತಿ ಸೂತ್ರ ಮತ್ತು ಶಾಂಡಿಲ್ಯ ಭಕ್ತಿ ಸೂತ್ರಗಳೇ ಅಲ್ಲದೆ 'ಭಕ್ತಿ ಮೀಮಾಂಸ' ಎಂಬ ನೂರ ಎರಡು ಸೂತ್ರಗಳಿರುವ ಗ್ರಂಥವು ದೊರೆತಿದೆ. ಇದು ಹದಿಮೂರನೆಯ ಶತಮಾನಕ್ಕೆ ಸೇರಿದ್ದೆಂದು ಪಂಡಿತರ ಅಭಿಪ್ರಾಯ. ರಚಯಿತರಾರೆಂದು ತಿಳಿಯದು'– ಸ್ವಾಮಿ ಹರ್ಷಾನಂದ, ಶಾಂ.ಭ.ಸೂ., ಪುಟ iv.

ಹಾಗೆಯೇ 'ಪರಾಭಕ್ತಿ ಸೂತ್ರಾಣಿ' ಎಂಬ ಹರಿಹರಣ್ಯ ಸ್ವಾಮಿಯಿಂದ ರಚಿತವಾದ ಗ್ರಂಥದ ಕುರಿತು ರಾ.ಸತ್ಯನಾರಾಯಣರವರು ಉಲ್ಲೇಖಿಸಿದ್ದಾರೆ (ಭ.ಭಾ. ಪುಟ 126).

21. ಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು ರಚಿಸಿದ 'ಭಾಗವತ ಸಂಪ್ರದಾಯ' ಎಂಬ ಗ್ರಂಥದಲ್ಲಿ(ಪ್ರ: ಅಧ್ಯಾತ್ಮಪ್ರಕಾಶ ಗ್ರಂಥಾಲಯ, ಹೊಳೆನರಸೀಪುರ, 2000, ಪುಟ 38) ಡಾ. ಎಸ್.ಕೆ.ಅಯ್ಯಂಗಾರ್ಯರು

(Proceedings of the Second Oriental Conference) ಸಾತ್ವತರ ವಿಷಯವಾಗಿ ಬರೆದಿರುವ ಲೇಖನದ ಆಧಾರದಿಂದ ಬಲದೇವ ಉಪಾಧ್ಯಾಯ, ಹಿಂದೂ ವಿಶ್ವವಿದ್ಯಾಲಯ, ಕಾಶಿ– ಇವರು "ಭಾಗವತ ಸಂಪ್ರದಾಯ' ಎಂಬ ತಮ್ಮ ಹಿಂದೀ ಗ್ರಂಥದಲ್ಲಿ (ಪುಟ 103) ಮಾಡಿರುವ ಉಲ್ಲೇಖದ ಆಧಾರದಲ್ಲಿ ಹೀಗೆ ಹೇಳುತ್ತಾರೆ: ' ಶೂರಸೇನ ದೇಶದಲ್ಲಿ ವಾಸಮಾಡಿಕೊಂಡಿದ್ದ ಕ್ಷತ್ರಿಯರ ಪ್ರಭೇದದವರೇ 'ಸಾತ್ವತ'ರೆನಿಸಿಕೊಂಡಿದ್ದರು. ಇವರಲ್ಲಿ ವೈಷ್ಣವಮತವು ವಿಶೇಷ ಪ್ರಚಾರದಲ್ಲಿದ್ದಿತು; ಆದ್ದರಿಂದಲೇ ಇದಕ್ಕೆ 'ಸಾತ್ವತಮತ'ವೆಂಬ ಹೆಸರು ಬಂದಿತು. ಶ್ರೀಕೃಷ್ಣನು ಹುಟ್ಟಿದ ಯಾದವವಂಶದವರೂ ಸಾತ್ವತರೇ; ಜರಾಸಂಧನ ಆಕ್ರಮಣದ ನಿಮಿತ್ತದಿಂದ ಈ ಜನರು ಶೂರಸೇನದೇಶವನ್ನು ಬಿಟ್ಟು, ಪಶ್ಚಿಮಸಮುದ್ರದ ತೀರದ ಬಳಿಗೆ ಬಂದಿದ್ದರು".

ಮಹಾಭಾರತಕೋಶದಲ್ಲಿ (ಸಂ: ಸಿ. ಗೋಪಾಲಕೃಷ್ಣ ಶಾಸ್ತ್ರಿ, ಮೂಡಂಬೈಲು, ಪ್ರ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪುಟ 562) 'ಸಾತ್ವತ' ಅಂದರೆ ಯದುಕುಲದಲ್ಲಿ ಹುಟ್ಟಿದ ಒಬ್ಬ ಮಹಾಪುರುಷ, ಇವನ ವಂಶದಲ್ಲಿ ಹುಟ್ಟಿದವರು 'ಸಾತ್ವತರು' ಎನ್ನಲಾಗಿದೆ.

22. ಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು ರಚಿಸಿದ 'ಭಾಗವತ ಸಂಪ್ರದಾಯ' ಎಂಬ ಗ್ರಂಥದಲ್ಲಿ(ಪ್ರ: ಅಧ್ಯಾತ್ಮಪ್ರಕಾಶ ಗ್ರಂಥಾಲಯ, ಹೊಳೆನರಸೀಪುರ, 2000, ಪುಟ 35) ಮಹಾಭಾರತದ ಮೋಕ್ಷಧರ್ಮಪರ್ವದಲ್ಲಿರುವ ಉಲ್ಲೇಖದ(339. 111, 112) ಆಧಾರದಲ್ಲಿ ಹೀಗೆ ಹೇಳಲಾಗಿದೆ: 'ಈ ಮಹಾವಿದ್ಯೆಯು ನಾಲ್ಕು ವೇದಗಳಿಂದೊಡಗೂಡಿ ಸಾಂಖ್ಯಯೋಗದಿಮದಲೂ ಕೂಡಿರುವುದರಿಂದ ಇದಕ್ಕೆ ಪಂಚರಾತ್ರವೆಂಬ ಹೆಸರು ಬಂದಿದೆ. ನಾರಾಯಣನ ಮುಖದಿಂದಲೇ ಹೊರಟುಬಂದ ಇದನ್ನು ನಾರದನು ಬ್ರಹ್ಮನ ಬಳಿಯಲ್ಲಿ ಮತ್ತೆ ಹೇಳಿದನು. ಅಂತೂ ನಾಲ್ಕು ವೇದಗಳು, ಸಾಂಖ್ಯಯೋಗಗಳ ಸಂಯೋಗದಿಂದಾದ ದರ್ಶನ– ಇವುಗಳಷ್ಟೂ ಇರುವದೇ ಪಂಚರಾತ್ರ, ಇದನ್ನು ಅನುಸರಿಸುವವರೇ ಪಾಂಚರಾತ್ರರು ಎಂದಂತಾಯಿತು. ನಾರಾಯಣನ ಬಾಯಿಂದ ಬಂದಂತೆ ನಾರದರು ಇದನ್ನು ತಿಳಿದುಕೊಂಡರು; ಆದ್ದರಿಂದ ಇದನ್ನು ಸಂಗ್ರಹಿಸಿದ ಗ್ರಂಥಕ್ಕೆ ನಾರದಪಾಂಚರಾತ್ರ ಎಂಬ ಹೆಸರು ಬಂದಿರುತ್ತದೆ.

23. ಭ.ಭಾ. ಪುಟ 119

24. ವೇದ – ವೇದಾಂಗ, ವಿದ್ವಾನ್ ಎಚ್.ವಿ.ನಾಗರಾಜ ರಾವ್, ಭವನದ ಗಾಂಧೀ ಕೇಂದ್ರ, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ರೇಸ್ಕೋರ್ಸ್ ರಸ್ತೆ, ಬೆಂಗಳೂರು –560001, ಪುಟ 1

25. ಅದೇ, ಪುಟ 2

## ೨.೨. ಸೂತ್ರಗಳು – ಅವುಗಳ ಕಾಲ, ವ್ಯಾಪ್ತಿ ಮತ್ತು ಪ್ರಯೋಜನ

ಹಿಂದಿನ ಕಾಲದಲ್ಲಿ ಶಾಸ್ತ್ರಗ್ರಂಥಗಳನ್ನು 'ಸೂತ್ರ' ರೂಪದಲ್ಲಿ ರಚಿಸುತ್ತಿದ್ದುದು ರೂಢಿಯಾಗಿತ್ತು. ಸಂದೇಹ ಬರದ ರೀತಿಯಲ್ಲಿ, ಅಲ್ಪಾಕ್ಷರಗಳಲ್ಲಿ ಸಂಯೋಜಿಸಲ್ಪಟ್ಟ, ಆದರೆ ವಿಶ್ವತೋಮುಖ ಸಾರವನ್ನೊಳಗೊಂಡಂತೆ ಇರುವ ವಾಕ್ಯವೇ 'ಸೂತ್ರ'[1] (**ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್। ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ॥**). ಬರವಣಿಗೆ ಇಲ್ಲದಿದ್ದ ಕಾಲದಲ್ಲಿ, ಇದ್ದಿದ್ದರೂ ನೆನಪಿನ ಸೌಕರ್ಯಕ್ಕಾಗಿ, ರಚಿಸುತ್ತಿದ್ದ ಈ ಸೂತ್ರಗಳ ಆಧಾರದಿಂದ ಹಲವು ಶಾಸ್ತ್ರಗ್ರಂಥಗಳು, ಅವುಗಳಲ್ಲಿರುವ ಅಪಾರ ಜ್ಞಾನರಾಶಿ ಸಾವಿರಾರು ವರ್ಷಗಳಿಂದ ಅಚ್ಚಳಿಯದೆ ಉಳಿದು ಬಂದಿದೆ. ಆಯಾ ಸಂಪ್ರದಾಯದ ಮೇಧಾವೀ ಶಿಷ್ಯರು ಈ ಸೂತ್ರಗಳ ಮೇಲೆ ಭಾಷ್ಯ, ವೃತ್ತಿ, ವಾರ್ತಿಕ, ಟೀಕೆ ಮೊದಲಾದ ರೂಪದಲ್ಲಿ ವ್ಯಾಖ್ಯಾನಗಳನ್ನು ರಚಿಸಿದ್ದರಿಂದ ಈ ಶಾಸ್ತ್ರಗಳು ವಿಸ್ತಾರವಾಗಿ ಬೆಳೆದುಬಂದಿದೆ. 'ಯಾವ ಶಾಸ್ತ್ರಕ್ಕೇ ಆಗಲಿ, ಸಾಮಾನ್ಯವಾಗಿ ಅತ್ಯಂತ ಪ್ರಾಚೀನವಾದ ಸೂತ್ರಗ್ರಂಥ, ಅದರ ಕುರಿತಾದ ಪ್ರಧಾನ ಭಾಷ್ಯ ಒಂದಿರುತ್ತದೆ. ಇದೇ ಆ ಶಾಸ್ತ್ರದ ಮೂಲಗ್ರಂಥ. ವಿವಿಧ ಹೂಗಳನ್ನು, ಮಣಿಗಳನ್ನು ತನ್ನಲ್ಲಿ ಪೋಣಿಸಿಕೊಂಡು ಸುಂದರವಾದ ಕುಸುಮ ಮಾಲೆಯಂತೆ, ಮಣಿಮಾಲೆಯಂತೆ ಶೋಭಿಸುವಂತೆ ಸೂತ್ರಗ್ರಂಥವೂ ಒಂದೇ ವಿಷಯಕ್ಕೆ ಸಂಬಂಧಿಸಿದ ಹಲವು ವಿಧದ ಚಿಂತನೆ, ಭಾವನೆ, ತತ್ವ, ನಿಲುವುಗಳನ್ನೂ ಪೋಣಿಸಿ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ'[2].

ಭಕ್ತಿ ಶಾಸ್ತ್ರಕ್ಕೆ ಸೂತ್ರ ರೂಪದಲ್ಲಿ ಇರುವ ಗ್ರಂಥಗಳು ಎರಡು[3] : ಶಾಂಡಿಲ್ಯ ಶತಸೂತ್ರೀಯ ಮತ್ತು ನಾರದ ಭಕ್ತಿ ಸೂತ್ರ. ಇವುಗಳಲ್ಲಿ ಶಾಂಡಿಲ್ಯ ಸೂತ್ರಗಳು ಹೆಚ್ಚು ಪ್ರಾಚೀನ ಮತ್ತು ಸ್ವಪ್ನೇಶ್ವರರಿಂದ ರಚಿತವಾದ ಭಾಷ್ಯವೂ ಅದಕ್ಕಿದೆ. ಅದರ ಕುರಿತಾದ ಮತ್ತೊಂದು ವ್ಯಾಖ್ಯಾನವೆಂದರೆ ನಾರಾಯಣ ತೀರ್ಥರ 'ಭಕ್ತಿ ಚಂದ್ರಿಕೆ'. ನಾರದ ಭಕ್ತಿ ಸೂತ್ರಗಳು ಅರ್ವಾಚೀನವೆಂದು ಕೆಲವು ಪಂಡಿತರ ಮತ. ತುಂಬ ಸರಳವಾದ ಮತ್ತು ನೇರವಾದ ಮಾತುಗಳಲ್ಲಿ ರಚಿತವಾದುದರಿಂದ ಅದಕ್ಕೆ ವ್ಯಾಖ್ಯಾನದ ಅವಶ್ಯಕತೆಯೂ ಇರುವುದಿಲ್ಲ.

**ಟಿಪ್ಪಣಿಗಳು**

1. ಶಬ್ದಾರ್ಥ ಕೌಸ್ತುಭ, ಭಾಗ 6, ಚಕ್ರವರ್ತಿ ಶ್ರೀನಿವಾಸ ಗೋಪಾಲ ಆಚಾರ್ಯ, ಪುಟ 2803
2. ದೇ.ನಾ.ಭ. ಪುಟ xiii
3. 'ನಾರದಭಕ್ತಿ ಸೂತ್ರ ಮತ್ತು ಶಾಂಡಿಲ್ಯ ಭಕ್ತಿ ಸೂತ್ರಗಳೇ ಅಲ್ಲದೆ 'ಭಕ್ತಿ ಮೀಮಾಂಸ' ಎಂಬ ನೂರ ಎರಡು ಸೂತ್ರಗಳಿರುವ ಗ್ರಂಥವು ದೊರೆತಿದೆ. ಇದು ಹದಿಮೂರನೆಯ ಶತಮಾನಕ್ಕೆ ಸೇರಿದ್ದೆಂದು ಪಂಡಿತರ ಅಭಿಪ್ರಾಯ. ರಚಯಿತರಾರೆಂದು ತಿಳಿಯದು'– ಸ್ವಾಮಿ ಹರ್ಷಾನಂದ, ಶಾಂ.ಭ.ಸೂ., ಪುಟ iv. ಹಾಗೆಯೇ 'ಪರಾಭಕ್ತಿ ಸೂತ್ರಾಣಿ' ಎಂಬ ಹರಿಹರಣ್ಯ ಸ್ವಾಮಿಯಿಂದ ರಚಿತವಾದ ಗ್ರಂಥದ ಕುರಿತು ರಾ.ಸತ್ಯನಾರಾಯಣರವರು ಉಲ್ಲೇಖಿಸಿದ್ದಾರೆ(ಭ.ಭಾ. ಪುಟ 126).

## ೨.೩ ನಾರದ ಭಕ್ತಿ ಸೂತ್ರ – ಸಾರ ವಿವೇಚನೆ

(ಸ್ವಾಮಿ ಹರ್ಷಾನಂದರು ಅನುವಾದ ಹಾಗೂ ವ್ಯಾಖ್ಯಾನ ಸಹಿತ ರಚಿಸಿರುವ ಉದ್ಗ್ರಂಥ 'ದೇವರ್ಷಿ ನಾರದರ ಭಕ್ತಿಸೂತ್ರಗಳು', ಪ್ರಕಟಣೆ: ರಾಮಕೃಷ್ಣ ಮಠ, ಬೆಂಗಳೂರು, 1992 ಇದರಿಂದ ಈ ಕೆಳಗಿನ ಭಾಗವನ್ನು ಆಯ್ದುಕೊಳ್ಳಲಾಗಿದೆ[1])

**ದೇವರ್ಷಿ ನಾರದರು :**

ಶ್ರೀ ಮದ್ಭಾಗವತದಲ್ಲಿ (1.5.23–31; 1.6.5–26) ನಾರದರ ಕಥೆ ವಿಸ್ತಾರವಾಗಿ ಬಂದಿದೆ. ಹಿಂದಿನ ಜನ್ಮದಲ್ಲಿ ಶೂದ್ರ ದಾಸಿಯೊಬ್ಬಳ ಮಗನಾಗಿ, ಹುಟ್ಟಿ, ಐದು ವರ್ಷದ ಬಾಲಕನಾಗಿರುವಾಗ ಅವರ ಊರಿಗೆ ಕೆಲವು ಸಾಧು ಸಂತರು ಆಗಮಿಸುತ್ತಾರೆ. ಚಾತುರ್ಮಾಸ ವ್ರತಾನುಷ್ಠಾನಕ್ಕಾಗಿ ಆಗಮಿಸಿದ ಸಾಧು ಸಂತರಲ್ಲಿ ಕೆಲವರನ್ನು ಶ್ರದ್ಧೆಯಿಂದ ಸೇರಿಸಿ ಭಗವನ್ನಾಮದ ಉಪದೇಶವನ್ನು ಪಡೆಯುತ್ತಾರೆ. ಜನ್ಮವಿತ್ತ ತಾಯಿಯು ಹಾವು ಕಚ್ಚಿ ಸಾಯಲು, ದುಃಖಭರಿತನಾಗಿ ಹೊರಟು ಅರಣ್ಯವನ್ನು ಸೇರುತ್ತಾನೆ. ಮರದ ಕೆಳಗೆ ಕುಳಿತಿರುವಾಗ ಹೃದಯದಲ್ಲಿ ಶ್ರೀ ಹರಿಯ ದರ್ಶನವಾಯಿತು. ದರ್ಶನದಿಂದ ಪುಳಕಿತನಾದ ಅವನು ಹರಿನಾಮ ಸಂಕೀರ್ತನೆ, ಸ್ಮರಣೆಗಳಲ್ಲಿ ಜೀವನ ಯಾಪನೆ ಮಾಡಬೇಕು ಎನ್ನುವ ನಿಶ್ಚಯ ಮಾಡುತ್ತಾನೆ. ಅದರಂತೆ ಜೀವನ ನಡೆಸಿ, ದೇಹಪಾತವಾದ ಮೇಲೆ ಬ್ರಹ್ಮನ ಮಾನಸ ಪುತ್ರನಾಗಿ ಜನಿಸುತ್ತಾನೆ. ದೇವರ್ಷಿ ಪದವಿಯನ್ನು ಪಡೆಯುತ್ತಾನೆ.

ಮೇಲಿನ ಎರಡು ಸೂಕ್ತಗಳ ದ್ರಷ್ಟಾರರು ನಾರದರು.

ಅಥರ್ವಣವೇದ (5.19.9; 12.4.16)ಲ್ಲಿಯೂ ಮಂತ್ರ ದ್ರಷ್ಟಾರರಾದ ನಾರದರನ್ನು ಕಾಣುತ್ತೇವೆ. ಛಾಂದೋಗ್ಯ ಉಪನಿಷತ್ತಿನ ಭೂಮಿ ವಿದ್ಯೆ (ಅ.7) ಯಲ್ಲಿ ನಾರದರನ್ನು ಸನತ್ಕುಮಾರರ ಶಿಷ್ಯರನ್ನಾಗಿ ತೋರಿಸಿದೆ ಮಹಾಭಾರತದ ಶಾಂತಿ ಪರ್ವ (ಅ.230) ದಲ್ಲಿ ಸ್ವಯಂ ಶ್ರೀ ಕೃಷ್ಣನೇ ಹೃತ್ಪೂರ್ವಕವಾಗಿ ಹೊಗಳಿರುತ್ತಾನೆ. ವಾಲ್ಮೀಕಿಗಳಿಗೆ ರಾಮಾಯಣವನ್ನು ರಚಿಸಲು ಮತ್ತು ವ್ಯಾಸರಿಗೆ ಭಾಗವತವನ್ನು ರಚಿಸಲು ಸ್ಫೂರ್ತಿ ನೀಡಿದವರು ನಾರದರೇ. ಪ್ರಹ್ಲಾದನಿಗೆ ಅವನು ತಾಯಿಯ ಗರ್ಭದಲ್ಲಿರುವಾಗಲೇ ಭಾಗವತ ಧರ್ಮವನ್ನು ಉಪದೇಶಿಸಿದವರೂ, ಧ್ರುವನಿಗೆ ಮಂತ್ರೋಪದೇಶವನ್ನು ನೀಡಿದವರೂ ನಾರದರೇ ಆಗಿದ್ದಾರೆ.

**ನಾರದರ ಹೆಸರಿನಲ್ಲಿ ಪ್ರಸಿದ್ಧವಾಗಿರುವ ಗ್ರಂಥಗಳು :**

1. ನಾರದ ಭಕ್ತಿ ಸೂತ್ರ, 2. ನಾರದ ಸ್ಮೃತಿ, 3. ನಾರದೀಯ ಶಿಕ್ಷಾ, 4. ನಾರದ ಪರಿವ್ರಾಜಕೋಪನಿಷತ್, 5. ನಾರದೀಯ ಪುರಾಣ, 6. ನಾರದ ಪಾಂಚ ರಾತ್ರ

ದೇವರ್ಷಿನಾರದರಿಗೂ ಸಾಮವೇದ–ಸಂಗೀತಗಳಿಗೂ ನಿಕಟ ಸಂಬಂಧವನ್ನು ಗುರುತಿಸಲಾಗಿದೆ. ಸಂಗೀತ ಮಕರಂದ ಎಂಬ ಸಂಗೀತ ಶಾಸ್ತ್ರ ಗ್ರಂಥವನ್ನು ರಚಿಸಿದವರು ಅವರೇ ಎನ್ನಲಾಗಿದೆ.

ನಾರದ ಭಕ್ತಿ ಸೂತ್ರವು ಕೇವಲ 84 ಸೂತ್ರಗಳನ್ನೊಳಗೊಂಡ ಚಿಕ್ಕ ಗ್ರಂಥ, ಮಹರ್ಷಿ ನಾರದರ ಉಪದೇಶಗಳನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿ ಅವುಗಳಿಗೆ ಸೂತ್ರ ರೂಪವನ್ನಿತ್ತು ರಚಿಸಿರುವ ಗ್ರಂಥವೇ ಪ್ರಕೃತ ಗ್ರಂಥ. ಇದರ ಕರ್ತೃ ಯಾರೆಂದು ತಿಳಿಯದು. ಬಹುಶಃ ಇದನ್ನು 12ನೇ ಶತಮಾನದಲ್ಲಿ ರಚಿಸಿದ್ದಿರಬಹುದು ಎಂಬುದು ಕೆಲವು ಪಂಡಿತರ ಮತ. ಆದರೆ ಈ ಕುರಿತಾಗಿ ನಿರ್ದಿಷ್ಟವಾದ ಮಾಹಿತಿ ಇರುವುದಿಲ್ಲ. ಇದರ ಭಾಷೆ ಸರಳವೂ, ಸುಂದರವೂ, ನೇರವಾಗಿಯೂ ಇರುವುದರಿಂದ ಯಾರೂ ಇದಕ್ಕೆ ಸಂಸ್ಕೃತದಲ್ಲಿ ವಾಖ್ಯಾನವನ್ನು ಬರೆದಿರುವಂತೆ ಕಾಣುವುದಿಲ್ಲ, ಅಥವಾ ಇದ್ದರೂ ಪತ್ತೆಯಾಗಿಲ್ಲ.ವಿದ್ವಾಂಸರ ಅಭಿಪ್ರಾಯದಂತೆ ಶಾಂಡಿಲ್ಯ ಭಕ್ತಿ ಸೂತ್ರಕ್ಕಿಂತ ಇದು ಸರಳ, ಸುಲಭ. ಶಾಂಡಿಲ್ಯರ ಶಾಂಡಿಲ್ಯರ ಗ್ರಂಥವು ಬ್ರಹ್ಮಸೂತ್ರಗಳೇ ಮೊದಲಾದ ಇತರ ದಾರ್ಶನಿಕ ಗ್ರಂಥಗಳಂತೆ ಕಠಿಣ ಭಾಷೆಯಲ್ಲಿ ರಚಿಸಲ್ಪಟ್ಟಿರುವ ಗ್ರಂಥವಾಗಿದೆ. ಇದರಲ್ಲಿ ಭಕ್ತಿ ಸಾಧನೆಗೆ ಬೇಕಾದ, ಸಾಧಕರಿಗೆ ಉಪಯುಕ್ತವಾದ ಅಂಶ ಕಡಿಮೆ. ಬದಲಾಗಿ ಜಗತ್ತಿನ ಸ್ವರೂಪ, ಜೀವ ಸ್ವರೂಪ ಇತ್ಯಾದಿ ತತ್ತ್ವ ವಿವೇಚನೆ ಪ್ರಧಾನವಾಗಿ ಇದೆ. ಆದರೆ ನಾರದ ಭಕ್ತಿಸೂತ್ರದಲ್ಲಿ ಪ್ರಾರಂಭದಿಂದ ಕೊನೆಯವರೆಗೂ ಭಕ್ತಿ ಸಾಧನೆಯೇ ಪ್ರಧಾನ ವಿಷಯ. ಅಷ್ಟೇ ಅಲ್ಲ ವಾದ ವಿವಾದಗಳಿಗೆ ಕೈ ಹಾಕಬೇಡಿ ಎಂಬ ಎಚ್ಚರಿಕೆಯನ್ನೂ ಸಹ (**ವಾದೋ ನಾವಲಮ್ಬ್ಯಃ ॥೭೪॥, ಬಾಹುಲ್ಯಾವಕಾಶತ್ವಾದ್ ಅನಿಯತತ್ವಾಚ್ಚ ॥೭೫॥**) ಕೊಟ್ಟಿರುತ್ತಾರೆ.

ನಾರದ ಭಕ್ತಿ ಸೂತ್ರವೂ ಕೂಡಾ ಪ್ರತ್ಯಕ್ಷ, ಅನುಮಾನ ಹಾಗೂ ಆಗಮ ಇವುಗಳನ್ನು ಪ್ರಮಾಣವಾಗಿ ಒಪ್ಪಿಕೊಂಡಿರುತ್ತದೆ. ಪ್ರಮೇಯದಲ್ಲಿ ಪ್ರತಿಪಾದಿಸಲ್ಪಡುವ ವಿಷಯಗಳೆಂದರೆ: ಈಶ್ವರ, ಜೀವ, ಜಗತ್ತು, ಜೀವನದ ಗುರಿ, ಸಾಧನೆ, ಮುಕ್ತಿಯ ಸ್ವರೂಪ ಮತ್ತು ಮುಕ್ತ ಪುರುಷನ ಲಕ್ಷಣಗಳು.

ನಾರದ ಭಕ್ತಿ ಸೂತ್ರದ ಪ್ರಕಾರ ಈಶ್ವರ ಸಾಕ್ಷಾತ್ಕಾರವೇ ಮಾನವ ಜೀವನದ ಗುರಿ. ಈಶ್ವರನು ನಮ್ಮೆಲ್ಲರ ಹೃದಯದಲ್ಲಿ, ನಮಗೆ ಅತ್ಯಂತ ಸಮೀಪನಾಗಿ, ನಮ್ಮ ಅಂತರ್ಯಾಮಿ ಆತ್ಮನೇ ಆಗಿರುತ್ತಾನೆ (ಸೂ.೨). ಭಕ್ತರು ಅವನ ಗುಣಗಳ ಶ್ರವಣವನ್ನೂ, ಕೀರ್ತನೆಯನ್ನೂ, ಭಜನೆಯನ್ನೂ ಮಾಡಿದರೆ ಅವನದನ್ನು ಸ್ವೀಕರಿಸಿ ಅವರೆದುರಿಗೆ ಪ್ರತ್ಯಕ್ಷನಾಗಿ ಅನುಗ್ರಹಿಸುತ್ತಾನೆ. ಏಕೆಂದರೆ ಅವನು ಕೃಪಾಮಯಿ (ಸೂ ೩೭, ೩೮, ೪೦, ೮೦). ಈಶ್ವರ ಸಾಕ್ಷಾತ್ಕಾರಕ್ಕೆ ಭಕ್ತಿಯೇ ಅತಿ ಸುಲಭವಾದ (ಸೂ. ೫೮) ಮತ್ತು ಅತಿ ಉತ್ತಮವಾದ (ಸೂ. ೨೫, ೨೬, ೩೦, ೫೯, ೬೦) ಸಾಧನ.

ಈ ಭಕ್ತಿಯನ್ನು ಪರಾಭಕ್ತಿ ಮತ್ತು ಅಪರಾಭಕ್ತಿ ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಅಪರಾಭಕ್ತಿಯನ್ನು ಮತ್ತೆ ಗೌಣೀ ಭಕ್ತಿ ಮತ್ತು ಮುಖ್ಯ ಭಕ್ತಿ ಎಂದೂ ವಿಂಗಡಿಸಬಹುದು. ಪರಾಭಕ್ತಿಯು ಗುರಿ, ಅಪರಾಭಕ್ತಿಯು ಅದನ್ನು ಪಡೆಯುವ ಸಾಧನ.

ಭಕ್ತಿ ಸಾಧನೆಯ ಬಗ್ಗೆ ಈ ಸೂತ್ರ ಗ್ರಂಥದಲ್ಲಿ ಹೇರಳವಾದ ಉಪದೇಶ, ಮಾರ್ಗದರ್ಶನ ಸಿಗುತ್ತದೆ. ಭಕ್ತಿ ಸಾಧಕನು ತನ್ನ ಕರ್ಮಗಳಲ್ಲಿ – ಅದು ಲೌಕಿಕವೇ ಆಗಿರಲಿ, ಶಾಸ್ತ್ರೋಕ್ತ ಕರ್ಮಗಳೇ ಆಗಿರಲಿ – ತನ್ನ ಸಾಧನೆಗೆ ಅಡ್ಡಿಯಾಗುವಂತಹ ಕರ್ಮಗಳನ್ನು ತ್ಯಜಿಸಿ, ಉಳಿದವನ್ನು ಭಗವದರ್ಪಣ ಬುದ್ಧಿಯಿಂದ ಮಾಡಬೇಕು ವಿಷಯವಸ್ತುಗಳ ಆಕರ್ಷಣೆ ಆಧ್ಯಾತ್ಮಿಕ ಜೀವನದಲ್ಲಿ ಬಲು ದೊಡ್ಡ ವಿಘ್ನ. ಆದುದರಿಂದ ಭಕ್ತನು ಬಾಹ್ಯದಲ್ಲಿ ವಿಷಯ ಭೋಗಗಳನ್ನೂ ಮನದಲ್ಲಿ ಅವುಗಳ ಬಗೆಗೆ ಇರುವ ಆಸಕ್ತಿಯನ್ನೂ ತ್ಯಜಿಸಲು ವಿಶೇಷವಾದ ಪ್ರಯತ್ನವನ್ನು ಮಾಡಬೇಕು. ಇದನ್ನು ಸಾಧಿಸಲು ಇರುವ ಸುಲಭೋಪಾಯವೆಂದರೆ ಎಡೆಬಿಡದೆ ಭಗವಂತನ ಭಜನೆ ಸ್ಮರಣೆಗಳು ಮತ್ತು ಮಹಾಪುರುಷರ ಸಂಗ, ತನ್ಮೂಲಕ ಅವರ ಕೃಪೆ(ಸೂ. ೩೫–೪೨).

ಮಾಯೆಯೆಂಬುದು ಭಗವಂತನ ಸಮ್ಮೋಹನ ಶಕ್ತಿ. ಅದನ್ನು ದಾಟುವುದು ಬಲುಕಷ್ಟ. ಆದರೆ ಅದನ್ನು ದಾಟದ ಹೊರತು ಮುಕ್ತಿಯಿಲ್ಲ. ಇದಕ್ಕಾಗಿ ಭಕ್ತನು ದುಸ್ಸಂಗತ್ಯಾಗ ಸತ್ಸಂಗಪ್ರಾಪ್ತಿ ಇವುಗಳನ್ನಲ್ಲದೆ ಏಕಾಂತಸ್ಥಾನಗಳಿಗೆ ಹೋಗಿ ಭಗವಂತನನ್ನು ಸೇವಿಸುವುದು, ತನ್ನ ಯೋಗಕ್ಷೇಮದ ಚಿಂತೆಯನ್ನು ಭಗವಂತನಿಗೆ ಅರ್ಪಿಸುವುದು, ಕಾಮ್ಯಕರ್ಮಗಳನ್ನು ತ್ಯಜಿಸಿ ಇತರ ಕರ್ಮಗಳನ್ನು ಈಶ್ವರಾರ್ಪಣ ಮಾಡುವುದು, ಲೋಕದ ಬಂಧನದಿಂದ ಬಿಡಿಸಿಕೊಳ್ಳುವುದು ಇತ್ಯಾದಿ ಸಾಧನೆಗಳನ್ನು ಮಾಡಬೇಕು (ಸೂ. ೪೬–೫೦).

ಕಾಮಕ್ರೋಧಾದಿ ಅರಿಷಡ್ವರ್ಗಗಳು ಸಾಧನಾ ಪಥದಲ್ಲಿ ದೊಡ್ಡ ವಿಘ್ನಗಳು. ಅವುಗಳನ್ನು ನೇರವಾಗಿ ಎದುರಿಸಿ ಗೆಲ್ಲುವುದು ಕಷ್ಟ. ಆದುದರಿಂದ ಅವುಗಳ ನಾಶಕ್ಕೆ ಸುಲಭೋಪಾಯವೆಂದರೆ ಅವನ್ನೆಲ್ಲಾ ಪರಮಾತ್ಮನ ಕಡೆಗೇ ತಿರುಗಿಸಿಬಿಡುವುದು, (ಸೂ.೬೫). ಈ ಆಂತರಿಕ ಕಾಳಗದಲ್ಲಿ ನಿರತನಾದ ಭಕ್ತನು ತನ್ನ ಸಮಯವನ್ನು ಕ್ಷಣಾರ್ಧವೂ ವ್ಯರ್ಥ ಮಾಡದೆ ಭಗವಂತನನ್ನೇ ಸದಾ ಭಜಿಸುತ್ತಿರಬೇಕು. ಅದಕ್ಕೆ ಸಹಾಯಕವಾಗಿ ಮತ್ತು ಪೂರಕವಾಗಿ ಅಹಿಂಸೆ, ಸತ್ಯ, ದಯೆ ಮೊದಲಾದ ಸದ್ಗುಣಗಳನ್ನು ಜೀವನದಲ್ಲಿ ಅನುಸರಿಸುತ್ತಿರಬೇಕು (ಸೂ. ೭೭ – ೭೯). ಹೀಗೆ ಪರಮಾತ್ಮನನ್ನು ಭಜಿಸುತ್ತಿದ್ದರೆ ಶೀಘ್ರವಾಗಿ ಅವನು ಪ್ರತ್ಯಕ್ಷನಾಗಿ ತನ್ನ ಅನುಭವವನ್ನೂ, ಪರಮಾನಂದವನ್ನೂ, ಮುಕ್ತಿಯನ್ನೂ ಅನುಗ್ರಹಿಸುತ್ತಾನೆ.

ಈ ರೀತಿಯಲ್ಲಿ ಮುಕ್ತಿಯನ್ನು ಪಡೆದ ಮಹಾಪುರುಷನ ಲಕ್ಷಣಗಳೇನು ಎಂಬುದನ್ನು ದೇವರ್ಷಿನಾರದರು ವಿಸ್ತಾರವಾಗಿಯೇ ವರ್ಣಿಸಿರುತ್ತಾರೆ. ಮುಕ್ತಿಯನ್ನು ಪಡೆದ ಸಿದ್ಧ ಪುರುಷನು, ನಿತ್ಯ ತೃಪ್ತನಾದುದರಿಂದ ಏನನ್ನೂ ಬಯಸನು. ಪರಮಾನಂದವನ್ನೂ ಹೊಂದಿರುವುದರಿಂದ ದುಃಖದ ಲವಲೇಶವೂ ಅವನಲ್ಲಿರುವುದಿಲ್ಲ. ಇಂತಹ ಭಕ್ತರು ತಮ್ಮಲ್ಲಿಯೂ, ಇತರರಲ್ಲಿಯೂ ಯಾವುದೇ ಭೇದ ಭಾವವನ್ನು ಎಣಿಸಲಾರರು (ಸೂ. ೭೨) ಇಂತಹ ಭಕ್ತ ಶಿರೋಮಣಿಗಳು ತಮ್ಮ ಕುಲವನ್ನೇ ಏಕೆ, ಇಡೀ ಪೃಥ್ವಿಯನ್ನೇ ಪಾವನಗೊಳಿಸುತ್ತಾರೆ(ಸೂ. ೮–೧೧).

## ೨.೪. ಶಾಂಡಿಲ್ಯ ಭಕ್ತಿ ಸೂತ್ರ

(ಸ್ವಾಮಿ ಹರ್ಷಾನಂದರು ಅನುವಾದ ಹಾಗೂ ವ್ಯಾಖ್ಯಾನ ಸಹಿತ ರಚಿಸಿರುವ ಉದ್ಗ್ರಂಥ 'ಶಾಂಡಿಲ್ಯ ಭಕ್ತಿಸೂತ್ರಗಳು', ಪ್ರಕಟಣೆ: ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು-570020, 2000, ಇದರಿಂದ ಈ ಕೆಳಗಿನ ಭಾಗವನ್ನು ಆಯ್ದುಕೊಳ್ಳಲಾಗಿದೆ. ಶಾಂಡಿಲ್ಯ ಭಕ್ತಿಸೂತ್ರಗಳನ್ನು ಕೇವಲ ಆನುಷಂಗಿಕವಾಗಿ ಈ ಅಧ್ಯಯನದಲ್ಲಿ ಬಳಸಿಕೊಂಡಿರುವ ಕಾರಣ ಸ್ಥೂಲ ಪರಿಚಯವನ್ನು ಮಾತ್ರ ಇಲ್ಲಿ ನೀಡಲಾಗಿದೆ.)

ಶಾಂಡಿಲ್ಯ ಎಂಬ ಹೆಸರು ಉಪನಿಷತ್ತುಗಳಲ್ಲಿಯೂ ಪುರಾಣಗಳಲ್ಲಿಯೂ ವಿವಿಧೆಡೆಗಳಲ್ಲಿ ಉಲ್ಲೇಖಿತಗೊಂಡಿದೆ. ಒಂದೇ ಹೆಸರಿನ ಬೇರೆ ಬೇರೆ ವ್ಯಕ್ತಿಗಳಿವರು ಎನ್ನುವುದು ಹೆಚ್ಚು ಸಂಭವನೀಯ. ಈ ಸೂತ್ರಗಳಲ್ಲಿ ಬಾದರಾಯಣರನ್ನು ಹೆಸರಿಸಿರುವುದರಿಂದಲೂ (ಸೂ. ೩೦) ಪಾತಂಜಲ ಯೋಗವನ್ನು (ಸೂ.೧೬, ೨೦, ೩೩) ಉಲ್ಲೇಖಿಸಿರುವುದರಿಂದಲೂ ಶ್ರೀಮದ್ಭಾಗವತವನ್ನು ಎಲ್ಲಿಂಯೂ ಉದ್ಧರಿಸಿಲ್ಲವಾದುದರಿಂದಲೂ ಈ ಶಾಂಡಿಲ್ಯರು ಬ್ರಹ್ಮಸೂತ್ರ – ಯೋಗಸೂತ್ರಗಳ ಕಾಲದನಂತರ ಒಂಬತ್ತನೆಯ ಶತಮಾನದೊಳಗೆ ಇದ್ದಿರಬಹುದೆಂದು ಊಹಿಸಲಾಗಿದೆ.

ಈ ಸೂತ್ರಗ್ರಂಥಕ್ಕೆ ಭಾಷ್ಯವನ್ನು ಬರೆದಿರುವ ಸ್ವಪ್ನೇಶ್ವರರ ಬಗೆಗೂ ಹೆಚ್ಚು ತಿಳಿದುಬಂದಿಲ್ಲ. ಅವರು ಬಹುಷಃ ಹದಿನಾಲ್ಕನೆಯ ಶತಮಾನದಲ್ಲಿದ್ದಿರಬಹುದು ಎಂದು ಊಹಿಸಲಾಗಿದೆ.

ಈ ಗ್ರಂಥದಿಂದ ಅಧ್ಯಯನಕ್ಕೆ ಆಯ್ದುಕೊಂಡ ಅಂಶಗಳು ಇಂತಿವೆ:

ಈಶ್ವರನಲ್ಲಿ ಮಾಡುವ ಅತ್ಯಂತ ಅನುರಕ್ತಿಯೇ ಭಕ್ತಿ (ಸೂ.೨). ಮೋಕ್ಷಕ್ಕೆ ಈ ಭಕ್ತಿಯೊಂದೇ ಸಾಧನ.

ಭಕ್ತಿಯು ಗೌಣೀ ಮತ್ತು ಪರಾ ಎಂದು ಎರಡು ವಿಧ. ಗೌಣೀ ಭಕ್ತಿಯು ಪ್ರಾಥಮಿಕ ಹಂತ. ಪರಾಭಕ್ತಿಯೇ ನಿಜವಾದ ಭಕ್ತಿ. ಗೌಣೀ ಭಕ್ತಿಯು ಮನಸ್ಸನ್ನು ಶುದ್ಧಗೊಳಿಸಿ ಪರಾಭಕ್ತಿಯ ಆವಿರ್ಭಾವಕ್ಕೆ ಸಹಾಯಕವಾಗುತ್ತದೆ. ಪರಾಭಕ್ತಿಯ ಮುಖ್ಯ ಲಕ್ಷಣವೆಂದರೆ ಏಕಾಂತ ಭಾವ, ಎಂದರೆ ಪರಮಾತ್ಮನಲ್ಲಿ ಪೂರ್ಣ ಏಕಾಗ್ರತೆ. ಮೇಲು ಕೀಳೆಂಬ ಭಾವವಿಲ್ಲದೆ ಎಲ್ಲರೂ ಈ ಭಕ್ತಿ ಸಾಧನೆಗಳನ್ನು ಅನುಸರಿಸಬಹುದು.

ಪರಾಭಕ್ತಿಯು ಭಗವದವತಾರಗಳ ವಿಷಯದಲ್ಲಿಯೂ ಉಂಟಾಗಬಹುದು (ಸೂ.೪೬). ಪರಮಾತ್ಮನು ಅವತಾರಗೈಯಲು ಜೀವಕಾರುಣ್ಯವೇ ಮುಖ್ಯ ಕಾರಣ(ಸೂ.೪೯). ಅವತಾರ-ರೂಪದಲ್ಲಾಗುವ ಪರಮಾತ್ಮನ ಜನ್ಮವು ದಿವ್ಯವಾದುದು (ಸೂ.೪೮).

ನಾರದ ಹಾಗೂ ಶಾಂಡಿಲ್ಯ ಭಕ್ತಿಸೂತ್ರಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸಿದ ವಿದ್ವಾಂಸರು ಶಾಂಡಿಲ್ಯರ ಗ್ರಂಥ ಬ್ರಹ್ಮಸೂತ್ರಗಳಂತೆ ತರ್ಕ ಪ್ರಧಾನವೆಂದೂ, ನಾರದರದ್ದು ಗೀತೆಯಂತೆ ಅನುಷ್ಠಾನಪ್ರಧಾನವಾದದ್ದೆಂದೂ ಗುರುತಿಸಿದ್ದಾರೆ (ಶಾಂ.ಭ.ಸೂ. ಪುಟ iii).

*****

# ಅಧ್ಯಾಯ ೩

# ಸಂತ ಕವಿಗಳು – ಅವರ ಕೃತಿಗಳು

## ೩.೧ ಸಂತ ಕವಿಗಳು – ಲಕ್ಷಣ ಹಾಗೂ ವೈಶಿಷ್ಟ್ಯ

ಸಂತ ಎನ್ನುವ ಪದವು ಸಂಸ್ಕೃತದ 'ಸಾಧು', 'ಮುನಿ' ಎಂಬ ಪದಗಳಿಗೆ ಪರ್ಯಾಯವಾದುದು ಎಂದು ಪರಿಭಾವಿಸಿಕೊಳ್ಳಬಹುದು. ಸತ್ಯದ ಸಾಕ್ಷಾತ್ಕಾರವನ್ನು ಪಡೆದವರು ಹಾಗೂ ಸತ್ಯದ ಸಾಕ್ಷಾತ್ಕಾರದ ತೀವ್ರ ತುಡಿತವನ್ನು ಹೊಂದಿದ್ದು ಅದಕ್ಕಾಗಿ ತಮ್ಮನ್ನು ತಾವು ಸಮರ್ಪಿಸಿಕೊಂಡವರನ್ನು ಸಂತರೆನ್ನಬಹುದು. ಸತ್ಯದ ಸಾಕ್ಷಾತ್ಕಾರವನ್ನು ಹೊಂದಲು ವ್ಯಕ್ತಿಯು ನೈತಿಕ ಪರಿಶುದ್ಧಿ, ತ್ಯಾಗ, ಪ್ರೇಮ, ನಿಸ್ವಾರ್ಥತೆಯಂತಹ ಹಲವಾರು ಮೌಲ್ಯಗಳನ್ನು ರೂಢಿಸಿಕೊಳ್ಳುವ ಅಗತ್ಯತೆಯಿರುವುದರಿಂದ ಈ ಗುಣಗಳು ಯಾರಲ್ಲಿ ಓತಪ್ರೋತವಾಗಿ ಗೋಚರಿಸುತ್ತವೆಯೋ ಅವರನ್ನು ಸಂತರೆನ್ನಬಹುದು.

**'ಅನುಭಾವವೇ ಭಕ್ತಿಗೆ ಆಧಾರ'** ಎಂದರು ದೇವರದಾಸಿಮಯ್ಯ. **ಅನುಭಾವವಿಲ್ಲದವರ ಭಕ್ತಿ ತಲೆಕೆಳಗಪ್ಪುದಯ್ಯಾ! ಅನುಭಾವವೇ ಭಕ್ತಿಗಾಧಾರ. ಅನುಭಾವವೇ ಭಕ್ತಿಗೆ ನೆಲೆವನೆ. ಅನುಭಾವವುಳ್ಳವರ ಕಂಡರೆ ತೂರ್ಯಾತೂರ್ಯ ಸಂಭಾಷಣೆಯ ಮಾಡದಿರ್ದರೆ ನರಕದಲಿಕ್ಕಯ್ಯಾ ರಾಮನಾಥ'.**[1]

ಭಾರತೀಯ ಸನಾತನ ಪರಂಪರೆಯಲ್ಲಿ ಯಾರು ಅನುಭಾವಿಗಳೋ ಅವರನ್ನು ಸಂತರೆಂದು ಪರಿಗಣಿಸುತ್ತೇವೆ. ಸಂತರೆಂದರೆ ಯಾರು? ಅವರ ಲಕ್ಷಣಗಳೇನು ಹಾಗೂ ಆಯ್ದ ಕೆಲವು ಸಂತರ ಜೀವನ ಚರಿತ್ರೆಯನ್ನೊಳಗೊಂಡ, ಸ್ವಾಮಿ ವಿವೇಕಾನಂದರಾದಿಯಾಗಿ ಸಂತ ಮಹಾತ್ಮರ ಲೇಖನಗಳನ್ನೊಳಗೊಂಡ Saints and mystics ಎನ್ನುವ ಗ್ರಂಥದಲ್ಲಿ ಸಂತರ ಕುರಿತಾದ ನಮ್ಮ ಭಾರತೀಯರ ಪರಿಕಲ್ಪನೆ ಹಾಗೂ ಪಾಶ್ಚಾತ್ಯರ ಪರಿಕಲ್ಪನೆಯನ್ನು ಹೀಗೆ ವಿಶ್ಲೇಷಿಸಲಾಗಿದೆ[2]:

"A mystic is one who is supposed to have had a direct experience of the transcendental truths of the spiritual world. When he experiences the Highest truth – his identity with the Supreme Self and unity of existence, according to the Advaita philosophy – he becomes what in India we call a 'realized' soul or an 'illumined' soul. Even before this climatic experience, the revelations of lower spiritual truths, which are also transcendental and supersensuous, are also forms of 'realizations'. One who has had even these spiritual experiences is called a mystic. In India such persons who have had a direct experience of the higher dimensions of Reality are recognized as saints. In the West, however, moral perfection is sufficient for saint-

hood. The saint need not have had any mystical experience. Moreover, such experience is not considered necessary for salvation."

ಪಾಶ್ಚಾತ್ಯರಲ್ಲಿ ಸಂತನೆಂದು ಪರಿಗಣಿಸಲ್ಪಡಲು ಯಾವುದೇ ಅನುಭಾವಿಕ ಅರ್ಹತೆ ಅಗತ್ಯವಿಲ್ಲ, ನೈತಿಕ ಪರಿಪೂರ್ಣತೆಯೊಂದೇ ಮಾನದಂಡವಾಗಿದೆ. ಅವರಲ್ಲಿ ಮುಕ್ತರಾಗಲೂ ಅಂತಹ ಅನುಭವದ ಅಗತ್ಯ ಕಂಡುಬರುವುದಿಲ್ಲ. ಆದರೆ ಅನುಭಾವವೇ ಅತ್ಯಾವಶ್ಯಕ ಅರ್ಹತೆಯಾಗಿದೆ. ಆಧ್ಯಾತ್ಮಿಕ ಲೋಕದ ಅತೀಂದ್ರಿಯವಾದ, ಅಲೌಕಿಕವಾದ ಸತ್ಯವನ್ನು ಯಾರು ನೇರವಾಗಿ ಅನುಭವ ಮಾಡಿಕೊಂಡಿದ್ದಾನೋ, ತನ್ನ ಪ್ರತ್ಯೇಕತೆಯನ್ನು ಕಳಚಿಕೊಂಡು ವಿಶ್ವಪ್ರಜ್ಞೆಯ ನೆಲೆಯಲ್ಲಿ ತನ್ನ ಅಸ್ತಿತ್ವವನ್ನು ಅನುಭವ ಅಂತಹವರನ್ನು 'ಸತ್ಯವನ್ನು ಸಾಕ್ಷಾತ್ಕರಿಸಿಕೊಂಡ, 'realized' ಅಥವಾ 'illumined' ಜೀವಿಗಳೆಂದು

ಮಾಡಿಕೊಂಡಿದ್ದಾನೋ ಕರೆಯಲಾಗುತ್ತದೆ. ಅವರೇ ಅನುಭಾವಿಗಳು. ಸತ್ಯಸಾಕ್ಷಾತ್ಕಾರದ ಅಂತಿಮ ಹಂತಕ್ಕೇರದಿರುವ ಅಂತಿಮ ಅನುಭವದ ಪೂರ್ವಭಾವಿಯಾದ ಮಜಲುಗಳ ಅನುಭವವನ್ನು ಹೊಂದಿದವರನ್ನೂ ಅನುಭಾವಿಗಳೆಂದು ಪರಿಗಣಿಸಲಾಗುತ್ತದೆ. ಹೀಗೆ ಸತ್ಯದ ಉನ್ನತ ಮಜಲುಗಳ ನೇರ ಅನುಭವವನ್ನು ಹೊಂದಿರುವಂತಹ ಮಹಾತ್ಮರನ್ನು 'ಸಂತ'ರೆಂದು ಕರೆಯಲಾಗುತ್ತದೆ.

ಅನುಭಾವವು ಇಂದ್ರಿಯಾತೀತ ಅನುಭವಗಳಿಗೆ ಸಂಬಂಧಿಸಿರುವ ಕಾರಣ ಶಬ್ದಗಳಿಂದ ಅದನ್ನು ಕಟ್ಟಿಕೊಡುವುದು ಕಷ್ಟ. ವಾದ, ತರ್ಕಗಳಿಂದ ನಿರೂಪಿಸುವುದೂ ಕಷ್ಟ ಸಾಧ್ಯವೇ ಸರಿ. ಆದರೂ ಸಂತ ಕವಿಗಳು ತಮ್ಮ ಅಸಾಧಾರಣ ಪ್ರತಿಭೆ, ವ್ಯುತ್ಪತ್ತಿ, ಜನಸಾಮಾನ್ಯರ ಬಗ್ಗೆ ಇರುವಂತಹ ಕಾಳಜಿ ಇವುಗಳಿಂದಾಗಿ ತಮ್ಮ ಕೃತಿಗಳ ಮೂಲಕ ಇದನ್ನು ಸಾಧಿಸಿದ್ದಾರೆ. ಅವರ ಬದುಕು ಮತ್ತು ಬರಹಗಳ ಮಧ್ಯೆ ಬಿರುಕು ಇಲ್ಲದಿದ್ದ ಕಾರಣ ಇದನ್ನು ಸಾಧಿಸಲು ಅವರಿಗೆ ಸಾಧ್ಯವಾಯಿತು. ಅನುಭಾವದ ಕುರಿತಾಗಿ ಮಹಾಮಹೋಪಾಧ್ಯಾಯರಾದ ರಾ.ಸತ್ಯನಾರಾಯಣರವರು ಹೀಗೆ ಹೇಳಿದ್ದಾರೆ[3]:

"ಮಾನವ ಪ್ರಜ್ಞೆಯು ವ್ಯಾವಹಾರಿಕ[4], ಪ್ರಾತಿಭಾಸಿಕ[5] ಮತ್ತು ಪಾರಮಾರ್ಥಿಕ[6] ಎಂಬ ಮೂರು ಸತ್ತಾಗಳಲ್ಲಿ ಕ್ರಿಯಾಶೀಲವಾಗಿರುವಂತೆಯೇ ಈ ಮೊದಲನೆಯ ಎರಡರಲ್ಲಿ ದೇಹ, ಇಂದ್ರಿಯ, ಪ್ರಾಣ, ಬುದ್ಧಿ ಎಂಬ ಸ್ತರಗಳಲ್ಲಿ ತೊಡಗಿ ನಾನು, ನನ್ನದು ಎಂಬ ಬಗೆಗೆ ಅಧ್ಯಾಸಗಳನ್ನು(ಅವಿದ್ಯೆಗಳನ್ನು)[7] ತಳೆಯುತ್ತದೆ. ಭಾರತದ

ಎಲ್ಲಾ ಧಾರ್ಮಿಕ ಮತ್ತು ಮತೀಯ ಅನ್ವೇಷಣೆಗಳಿಗೂ ಗುರಿಯು ಪಾರಮಾರ್ಥಿಕ ಸತ್ತೆಯ ಅನುಭವವೇ ಆಗಿದೆ. ಆಯಾ ಆಧ್ಯಾತ್ಮಿಕ ಪದ್ಧತಿಯ ಸಾಂಸ್ಕೃತಿಕ-ಸಾಮಾಜಿಕ ಹಿನ್ನೆಲೆಗೆ ಅನುಸಾರವಾಗಿ ಈ ಅನುಭವವನ್ನು ಪಡೆದುಕೊಳ್ಳುವ ಉಪಾಯಗಳನ್ನು ರೂಪಿಸಿಕೊಳ್ಳಲಾಗುತ್ತದೆ. ಹೀಗೆ ಅನುಭವವು ಬಹುಶಃ ಒಂದೇ ಆಗಿದ್ದರೂ ಅದರ ಸಾಧನಗಳು ಬೇರೆ ಬೇರೆಯಾಗಿದ್ದು ಅವು ಸಾಧಕನ ಉಪಾಧಿಗಳನ್ನು[8] ಅವಲಂಬಿಸುತ್ತದೆ. ಅನುಭವವು ಉಂಟಾದಾಗ ಅದು ಅನಿರ್ವಚನೀಯವೇ ಆಗಿರುತ್ತದೆ[9]. ಪಾರಮಾರ್ಥಿಕ ಸತ್ತಾದ ಅನುಭವವು ನೇರವಾಗಿ, ಸಹಜವಾಗಿ ಆದಾಗ ಅದಕ್ಕೆ ಅನುಭಾವವೆಂದು ಹೆಸರು. ಇದನ್ನು

ಬೇರೆಯವರೊಡನೆ ಹೇಳಿಕೊಳ್ಳಬೇಕಾದಾಗ ಮಾತು ಅನಿವಾರ್ಯ ಸಾಧನವೂ ಹೌದು, ಪ್ರಬಲವಾದ ಅಡಚಣೆಯೂ ಹೌದು."

ಭಾರತೀಯ ಅಧ್ಯಾತ್ಮಿಕ ಪರಂಪರೆಯ ಮಹಾನ್ ಭಾಗ್ಯವೆಂದರೆ ಅನೇಕ ಸಂತರು ಮಾತಿನಲ್ಲಿ ತಿಳಿಸಲಾಗದ, ತಿಳಿಸದೆ ತಿಳಿಯಲಾಗದ ಅನಿರ್ವಚನೀಯವಾದ ತಮ್ಮ ಅನುಭವವನ್ನು ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ. ಅವುಗಳಲ್ಲಿ ದಕ್ಕದೇ ಹೋಗಿರುವಂಥಾದ್ದು ಲೆಕ್ಕವಿಲ್ಲದಷ್ಟಿದ್ದರೂ ಈಗ ಲಭ್ಯವಿರುವಂಥಾದ್ದು ಅನರ್ಘ್ಯ ರತ್ನಭಂಡಾರ ಎನ್ನಬಹುದು. ಸಂತಕವಿಗಳಿಗೆ ತಮ್ಮ ವೈಯಕ್ತಿಕ ಸ್ವಾರ್ಥ, ಹಿತಾಸಕ್ತಿಗಳು ಇಲ್ಲದೇ ಇದ್ದ ಕಾರಣ ಅನುಭಾವದ ನೆಲೆಗಳನ್ನು ಬರಹದ ರೂಪದಲ್ಲಿ ದಾಖಲಿಸುವಂತಹ ಪ್ರಯತ್ನದ ಕಡೆಗೂ ಅವರಿಗೆ ಲಕ್ಷ್ಯವಿರಲಿಲ್ಲ. ಆದರೆ ಅವರ ಕೃತಿಗಳು ಜನಮಾನಸದಲ್ಲಿ ಉಳಿದುಕೊಂಡಿರುವುದು, ಅವರ ಕೃತಿಗಳಿಂದ ಆದ ಅನನ್ಯ ಪ್ರಭಾವ ಹಾಗೂ ಸತ್‌ಪರಿಣಾಮಗಳ ದ್ಯೋತಕವಾಗಿದೆ. ರಾ. ಸತ್ಯನಾರಾಯಣರವರು ಹೇಳಿದಂತೆ ಅನುಭವವು ಒಂದೇ ಆಗಿದ್ದರೂ ಸಾಧಕನ ಉಪಾಧಿಗಳಿಗೆ ಅನುಗುಣವಾಗಿ, ಸಾಂಸ್ಕೃತಿಕ–ಸಾಮಾಜಿಕ ಹಿನ್ನೆಲೆಗೆ ಅನುಸಾರವಾಗಿ ಆ ಅನುಭವವನ್ನು ಪಡೆದುಕೊಳ್ಳುವ ರೂಪಿತಗೊಂಡು, ಅದರ ಪರಿಣಾಮವಾಗಿ ನಾವು ಅನೇಕ ರೀತಿಯ ಭಕ್ತಿ ಪಂಥಗಳನ್ನು ಕಾಣಬಹುದಾಗಿದೆ. ಯಾವುದೇ ಒಂದು ಸಾಧನಾ ಪದ್ಧತಿಯನ್ನು ರೂಪಿಸಿದಂತಹ ಸಂತರು ಅವರಿರುವಷ್ಟು ಕಾಲ ಅನ್ಯಪಂಥೀಯರೊಂದಿಗೆ ಸಹಕಾರ ಸಮನ್ವಯದ ದೃಷ್ಟಿಕೋನದಿಂದ ತಮ್ಮ ಪದ್ಧತಿಯ ಬೆಳವಣಿಗೆಗೆ ಅವರು ಪ್ರಯತ್ನಿಸುತ್ತಿದ್ದರೂ ಅವರು ಕಾಲವಾದ ಬಳಿಕ ಆ ಪದ್ಧತಿಯ

ಅನುಯಾಯಿಗಳು ತಮ್ಮ ಪಂಥದ ಬೆಳವಣಿಗೆಗೆ ಸಂಘರ್ಷದ ಹಾದಿಯನ್ನು ಹಿಡಿದಿರುವುದನ್ನೂ ಗಮನಿಸಬಹುದಾಗಿದೆ. ಈ ನಿಟ್ಟಿನಲ್ಲಿ ಅನುಭಾವದ ನೆಲೆಗಳನ್ನು ಸಮಗ್ರವಾಗಿ ಜನಮಾನಸಕ್ಕೆ ತಲುಪಿಸುವ ಜವಾಬ್ದಾರಿ ಸಾಹಿತ್ಯ ಲೋಕಕ್ಕೆ ಯಾವತ್ತೂ ಇರುತ್ತದೆ. ಆ ನಿಟ್ಟಿನಲ್ಲಿ ಭಕ್ತಿ ಸೂತ್ರಗಳ ಬೆಳಕಿನಲ್ಲಿ ವಿವಿಧ ಸಂತ ಕವಿಗಳ ಕೃತಿಗಳ ಅಧ್ಯಯನ ಉಪಾದೇಯವಾಗಬಲ್ಲುದು.

ಭಕ್ತನು ತನ್ನ ತನು ಮನ ಭಾವಗಳನ್ನು ಕಳೆದುಕೊಂಡು ಭಗವಂತನಲ್ಲಿ ಏಕಾರ್ಥವಾಗುವ ಐಕ್ಯಸ್ಥಿತಿಯೇ ಅನುಭಾವ. ಅನುಭಾವವು ತತ್ತ್ವಶಾಸ್ತ್ರಕ್ಕೂ, ಧರ್ಮಕ್ಕೂ ಮೂಲ. ಬ್ರಿಟಾನಿಕ ಆಂಗ್ಲ ವಿಶ್ವಕೋಶದಲ್ಲಿನ mysticism ಪದದ ವ್ಯಾಖ್ಯೆ ಹೀಗಿದೆ: "ಮಾನವನ ಮನಸ್ಸು ದಿವ್ಯಸತ್ವವನ್ನು ಅಥವಾ ಆತ್ಯಂತಿಕ ಸತ್ಯವನ್ನು ತಿಳಿದುಕೊಳ್ಳುವ ಮತ್ತು ಅತ್ಯಂತ ಶ್ರೇಷ್ಠವಾದುದರ ಜೊತೆಗೆ ತನ್ಮಯತೆಯನ್ನು ಹೊಂದಿ ಆನಂದಿಸುವ ಸಂದರ್ಭಗಳಲ್ಲಿ ಈ ಪದವನ್ನು ಉಪಯೋಗಿಸಲಾಗುತ್ತದೆ. ಮೊದಲನೆಯದು ಸೈದ್ಧಾಂತಿಕ ಮತ್ತು ಊಹೆ, ಎರಡನೆಯದು ಅನುಷ್ಠಾನಪ್ರದವಾದುದು"[10].

ಇದರರ್ಥ ತತ್ವಶಾಸ್ತ್ರದ ಧ್ಯೇಯವಾದ ಜ್ಞಾನದ ಪ್ರಕಾಶವನ್ನೂ, ಧರ್ಮ ಅಥವಾ ಆಧ್ಯಾತ್ಮಿಕತೆಯ ಧ್ಯೇಯವಾದ ಭಗವಂತನೊಡನೆ ಪರಿಪೂರ್ಣ ಐಕ್ಯಭಾವವನ್ನೂ ತಂದುಕೊಡುವ ಮಹಾನ್ ಅನುಭವವೇ ಅನುಭಾವ. ಇವೆರಡು ಬೇರೆ ಬೇರೆ ಅನ್ನಿಸಿದರೂ ಏಕ ಕಾಲದಲ್ಲಿ ಘಟಿಸುವ ಪ್ರಕ್ರಿಯೆ ಎನ್ನುವುದು ಜ್ಞಾನಿಗಳ ಅಭಿಮತ. ಯಾವುದೇ ಸಂತರ ಪಂಥಗಳಿರಬಹುದು ಅಂತಿಮವಾಗಿ ಈ ಅನುಭವವನ್ನು ತಮ್ಮದಾಗಿಸುವುದು ಸಾಧನೆಯ ಉದ್ದೇಶವಾಗಿರುತ್ತದೆ.

ಅನುಭಾವದ ಉನ್ನತ ಸ್ಥಿತಿ ಸಮಾಧಿ. ಧ್ಯಾನದ ಪರಿಪಕ್ವಾವಸ್ಥೆಯೇ ಸಮಾಧಿ. ದ್ವೈತ ಅನುಭವವು ವಿಕಲ್ಪಸ್ಥಿತಿ. ಅಲ್ಲಿ ಭೇದಗಳನ್ನು ಅನುಭವಿಸುತ್ತೇವೆ. ನಿರ್ವಿಕಲ್ಪ ಅನುಭವವು ಅಭೇದ ಸ್ಥಿತಿ. ಅಲ್ಲಿ ವಸ್ತುಗಳನ್ನು ನಾನು ಅನುಭವಿಸುತ್ತಿದ್ದೇನೆ ಎನ್ನುವ ಭಾವನೆಯೂ ನಾಶವಾಗಿ, ಕೇವಲ ಆ ವಸ್ತುವಿನ ಭಾವನೆ ಮಾತ್ರವೇ ಉಳಿಯುತ್ತದೆ. ಅದನ್ನೇ ಪತಂಜಲಿಯ ಯೋಗಸೂತ್ರದ ವಿಭೂತಿ ಪಾದದಲ್ಲಿ

**"ತದೇವಾರ್ಥಮಾತ್ರ ನಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ॥೩॥"**

"ಆ ಧ್ಯಾನವೇ, ಕೇವಲ ಧ್ಯೇಯವಸ್ತುವು ತೋರುತ್ತಿರುವಾಗ (ಮತ್ತು) ತನ್ನ ಸ್ವರೂಪವನ್ನು ಕಳೆದುಕೊಂಡಂತೆ ಇರುವಾಗ, 'ಸಮಾಧಿ'(ಯೆನಿಸುವುದು)"[11] ಎಂದು ಹೇಳಲಾಗಿದೆ. ಧ್ಯಾನಿಸುತ್ತಿರುವ ವಸ್ತುವಿನ ಭಾವನೆ ಮಾತ್ರವೇ ಮನಸ್ಸನ್ನು ಬೆಳಗುತ್ತಿರುವ ಸ್ಥಿತಿಯಿದು ಎಂದು ಹೇಳಲಾಗಿದೆ. ಮೈಸೂರಿನ ರಾಮಕೃಷ್ಣ ಆಶ್ರಮದಿಂದ ಪ್ರಕಟವಾಗುವ ಮಾಸಪತ್ರಿಕೆ 'ವಿವೇಕಪ್ರಭ' ಇದರ ವಿಶೇಷ ಸಂಚಿಕೆ 'ಭಾವಸಾಗರ ಶ್ರೀರಾಮಕೃಷ್ಣ' ಇದರ ಸಂಪಾದಕೀಯ ಲೇಖನದಲ್ಲಿ ಸ್ವಾಮಿ ವೀರೇಶಾನಂದಜೀಯವರು ಅನುಭಾವ ಮತ್ತು ಅದರ ಪರಿಣಾಮದ ಕುರಿತಾಗಿ ಹೀಗೆ ಹೇಳುತ್ತಾರೆ[12]:

"ಅನುಭಾವವು ಐಕ್ಯಸ್ಥಿತಿ. ಅನುಭವದಲ್ಲಿ ಹಲವನ್ನು ಕಂಡರೆ, ಅನುಭಾವದಲ್ಲಿ ಒಂದೇ ಆಗಿರುವುದನ್ನು ಅನುಭಾವಿಗಳು ಕಂಡುಕೊಳ್ಳುತ್ತಾರೆ. .......... ಈ ಬಗೆಯ ಅನುಭಾವವು ಅಪಾರವಾದ ಆನಂದವನ್ನೀಯುತ್ತದೆ.ಅದು ಬಾಹ್ಯ ಸುಖದಂತಲ್ಲ. ಬಾಹ್ಯದ ಬಂಧನವನ್ನು ಬಿಡಿಸಿಕೊಂಡು, ಸ್ವಾತಂತ್ರ್ಯವನ್ನು ಗಳಿಸಿದಾಗಿನ ಆನಂದ. ಬಂಧನವು ದುಃಖ; ಬಿಡುಗಡೆ ಆನಂದ. ಅನುಭಾವ ಅಂತಹ ಬಿಡುಗಡೆಯ ಸ್ಥಿತಿ........... ಅನುಭಾವಿಯ ಅಂತರಾಳದ ಆನಂದ-ಪ್ರೇಮಗಳು ವಿಶ್ವವ್ಯಾಪಿಯಾಗಿರುತ್ತವೆ, ಪ್ರಪಂಚವನ್ನೇ ಆಲಂಗಿಸುತ್ತವೆ."

ಪ್ರತಿಯೊಂದು ಜೀವಿಯು ಆನಂದಾನುಭವಕ್ಕೆ, ಬಾಹ್ಯದ ಎಲ್ಲಾ ಬಂಧನಗಳಿಂದ ಬಿಡುಗಡೆ ಹಂಬಲಿಸುತ್ತಿರುವುದು ಸಹಜವೇ ಆಗಿದೆ. ಆನಂದದ ಹಂಬಲ ಸುಪ್ತವಾಗಿದ್ದರೂ ಅಜ್ಞಾನದ ಕಾರಣದಿಂದಾಗಿ ಅದನ್ನು ಕಂಡುಕೊಳ್ಳುವ ವಿಧಾನವನ್ನರಿಯದೇ ಸತ್ಯದ ಮಾರ್ಗವನ್ನು ಬಿಟ್ಟು ವಿಷಯ ಭೋಗಗಳಲ್ಲಿ ವ್ಯಸ್ತನಾಗಿರುತ್ತಾನೆ. ಇಂತಹ ಸಾಮಾನ್ಯ ಜೀವಿಗಳನ್ನು ಅನುಭಾವಿಯು ಪ್ರೇಮ ಕಾರುಣ್ಯಗಳಿಂದ ಮೇಲೆತ್ತುವ ಕಾರ್ಯದಲ್ಲಿ ಪ್ರವೃತ್ತನಾಗುತ್ತಾನೆ.

ಸಮಾಧಿಯ ಕುರಿತಾಗಿ ಪರಮ ಅನುಭಾವಿಗಳಾದ ದಿವ್ಯ ಮಾತೆ ಶ್ರೀ ರಮಾ ದೇವಿಯವರು ಹೀಗೆ ಹೇಳಿದ್ದಾರೆ:[13]

"Samadhi signifies the highest state of Purity, where the mind comes to possess the face-to-face vision of the marvellous Perfection of God. Intense concentration of mind and the highest ecstasy and self sacrificing love of the Soul for union with the Supreme are pressed into sevice for plunging into the state of Samadhi. Samadhi thus, is the limit of profound concentration and profound love. Love and concentration, when perfected, bestow upon you the experience of union with Brahman."

ಪರಿಶುದ್ಧತೆಯ ಅತ್ಯುನ್ನತ ಸ್ಥಿತಿಯಲ್ಲಿ ಮನಸ್ಸು ಪರಮಾತ್ಮನ ಅಸದೃಶ ಪರಿಪೂರ್ಣತೆಯೊಂದಿಗೆ ಮುಖಾಮುಖಿಯನ್ನು ಹೊಂದುವ ಸ್ಥಿತಿಯೇ ಸಮಾಧಿ ಎನ್ನುತ್ತಾರೆ ದಿವ್ಯ ಮಾತೆ ಶ್ರೀ ರಮಾ ದೇವಿಯವರು. ಮನಸ್ಸಿನ ತೀಕ್ಷ್ಣ ಏಕಾಗ್ರತೆ, ಉನ್ನತವಾದ ಆನಂದ ಮತ್ತು ಪರಮಾತ್ಮನಲ್ಲಿ ಒಂದಾಗಲು ಆತ್ಮಸಮರ್ಪಣೆಯ ಪ್ರೇಮದಿಂದೊಡಗೂಡಿದ ತುಡಿತ ಸಮಾಧಿ ಸ್ಥಿತಿಯನ್ನೈದಲು ಮುಪ್ಪುರಿಗೊಳ್ಳಬೇಕು. ಸಮಾಧಿಯು ಘನೀಭೂತ ಏಕಾಗ್ರತೆ ಹಾಗೂ ಅಪ್ರತಿಮ ಪ್ರೇಮದ ಪರಿಧಿಯಾಗಿದೆ.

ಪ್ರೇಮ ಹಾಗೂ ಏಕಾಗ್ರತೆ ಪರಿಪೂರ್ಣಗೊಂಡಾಗ ಪರಬ್ರಹ್ಮನೊಂದಿಗಿನ ಏಕತ್ವವು ಸಿದ್ಧಿಸುತ್ತದೆ.

ಈ ಮಾತುಗಳಿಂದ ಅನುಭಾವದ ಉನ್ನತ ಮಜಲುಗಳನ್ನೇರಬೇಕಾದರೆ ಮನಸ್ಸನ್ನು ಅದಕ್ಕೆ ಅಣಿಗೊಳಿಸುವುದು ಬಹಳ ಮುಖ್ಯ ಎನ್ನುವುದು ಸ್ಪಷ್ಟವಾಗುವುದು. ನಾರದ ಭಕ್ತಿ ಸೂತ್ರವು ಹೇಳುವಂತಹ ಭಕ್ತಿ ಸಾಧನೆಯೂ ಮನಸ್ಸನ್ನು ಪರಮ ಪ್ರೇಮದ ಸ್ಥಿತಿಗೇರಲು ಸಿದ್ಧಮಾಡುವ ಸೂತ್ರಗಳೇ ಆಗಿವೆ. ಹಾಗಾಗಿ ಯಾವುದೇ ಮತ ಪಂಥಗಳು ವಿಧಿಸುವಂತಹ ಸಾಧನಾ ವಿಧಾನಗಳನ್ನು ಪರಾಮರ್ಶಿಸಲು ನಾರದ ಭಕ್ತಿ ಸೂತ್ರವು ಸಹಕಾರಿಯಾಗಬಲ್ಲುದು.

ಸಮಾಧಿಯನ್ನು ವರ್ಣಿಸುವ ಸ್ವಾಮಿ ವಿವೇಕಾನಂದರ **'ನಾಹೀ ಸೂರ್ಯ ನಾಹೀ ಜ್ಯೋತಿ'** ಎಂಬ ಬಂಗಾಲಿ ಕವನದ ಕನ್ನಡ ಭಾವಾನುವಾದ ಇಂತಿದೆ[14]:

**ಸೂರ್ಯ ತಾನಲ್ಲಿಲ್ಲ, ಚಾರು ಚಂದ್ರಮನಿಲ್ಲ, ಜ್ಯೋತಿಯಿಲ್ಲ; ಆ ಮಹಾಶೂನ್ಯದೊಳು ನೆರಳಿನೊಲು ತೇಲುತಿದೆ ವಿಶ್ವಾಕೃತಿ! ಅಸ್ಫುಟದ ಚಿತ್ತದಾಕಾಶದಲಿ ನಾನೆಂಬ ಸ್ರೋತದಲಿ ಜಗವೆಲ್ಲ ಎದ್ದು ಬೀಳುತಿದೆ!**

**ಮೆಲ್ಲಮೆಲ್ಲನೆ ನೆರಳದಳವೆಲ್ಲ ಹೋಗುತಿಹುದು ಮಹಾಲಯವನು;'ನಾನಿರುವೆ', 'ನಾನಿರುವೆ' ಎಂಬ ಧಾರೆಯದೊಂದೆ ಇದ್ದಿತಲ್ಲಿ! ನಿಂತಿತದುವೂ ಈಗ ಶೂನ್ಯ ಶೂನ್ಯವ ಸೇರಿ ಒಂದಾಯಿತು;ಮಾತು ಮನಗಳ ಮೀರ್ದ ಆ ಇರವಿನಾಳವನು ಬಲ್ಲವನೆ ಬಲ್ಲ!**

ಮಾತು ಮನಗಳನ್ನು ಮೀರಿದ ಇರವಿನ ಆಳವನ್ನು ಸೇರಲು ದಾರಿದೀಪ ಸಂತರ ಕೃತಿಗಳು. ಅನುಭಾವಿಗಳಾದ ಸಂತರು ನಮ್ಮ ಮಧ್ಯೆಯೇ ಇದ್ದರೂ ಅವರನ್ನು

ಗುರುತಿಸುವುದು ಸುಲಭವಲ್ಲ. ಏಕೆಂದರೆ ಪ್ರಚಾರ, ಪ್ರತಿಷ್ಠೆಗಳಿಂದ ಸದಾ ದೂರ ಇರುವಂಥವರು ಸಂತರು. ಅಂತಹ ಸಂತರನ್ನು ಭಕ್ತರೆಂದೂ, ಭಾಗವತೋತ್ತಮರೆಂದೂ ಹೆಸರಿಸಿ ಪ್ರಾಚೀನ ಗ್ರಂಥಗಳಲ್ಲಿ ಅವರ ಲಕ್ಷಣಗಳನ್ನು ನಿರೂಪಿಸಲಾಗಿದೆ.

ಬ್ರಹ್ಮನಿಷ್ಠ ಪಂಡಿತ ಪೀತಾಂಬರ್ ಜೀಯವರು ರಚಿಸಿರುವ ಮೂಲ ಹಿಂದಿ ಭಾಷೆಯಲ್ಲಿರುವ 'ಶ್ರೀ ವಿಚಾರಚಂದ್ರೋದಯ' ಎನ್ನುವ ಗ್ರಂಥದಲ್ಲಿಯೂ[4] ಭಾಗವತಧರ್ಮ(ಅಧ್ಯಾಯ 4ರಲ್ಲಿ)ವನ್ನು ವ್ಯಾಖ್ಯಾನಿಸಲಾಗಿದೆ. ಈ ಗ್ರಂಥದಲ್ಲಿ ನಿರೂಪಿಸಲಾಗಿರುವ 13 ಲಕ್ಷಣಗಳು ಇಂತಿವೆ[15]:

1. **ಸಕಾಮ ಕರ್ಮದ ಫಲದ ವಿಪರೀತ ದರ್ಶನ.**
2. **ಧನ, ಗೃಹ, ಪುತ್ರಾದಿಗಳ ವಿಷಯದಲ್ಲಿ ದುಃಖಬುದ್ಧಿ ಮತ್ತು ಚಲಬುದ್ಧಿ.**
3. **ಪರಲೋಕ ವಿಷಯದಲ್ಲಿ ನಶ್ವರಬುದ್ಧಿ.**
4. **ಶಬ್ದಬ್ರಹ್ಮ ಮತ್ತು ಪರಬ್ರಹ್ಮ ವಿಷಯವನ್ನು ಅರಿತುಕೊಳ್ಳುವದಕ್ಕೋಸ್ಕರ ಕುಶಲನಾದ ಗುರುವಿನ ಸನ್ನಿಧಿಗೆ ಗಮನ.**
5. **ಗುರುವೇ ಸಾಕ್ಷಾತ್ ಈಶ್ವರನೆಂದು ತಿಳಿಯುವುದು ಮತ್ತು ನಿಷ್ಕಪಟ ಸೇವೆಯನ್ನು ಮಾಡುವದು.**
6. **ಪರಮೇಶ್ವರನಲ್ಲಿ ಸರ್ವಕರ್ಮ ಸಮರ್ಪಣ ಮಾಡುವದು.**
7. **ಭಕ್ತಿ ವೈರಾಗ್ಯಸಹಿತ ಸ್ವರೂಪಾನುಭವವು ಮತ್ತು ಸಾಧು ಸಂಗ ಮಾಡುವದು.**
8. **ಶೌಚ, ತಪ, ತಿತಿಕ್ಷಾ, ಮೌನ.**
9. **ಸ್ವಾಧ್ಯಾಯ, ಆರ್ಜವ(ಸರಳ ಸ್ವಭಾವ), ಬ್ರಹ್ಮಚರ್ಯ, ಅಹಿಂಸಾ ಮತ್ತು ದ್ವಂದ್ವಸಮತ್ವ (ಶೀತೋಷ್ಣ ಮೊದಲಾದ ದಂದ್ವ ಧರ್ಮಗಳನ್ನು ಸಹಿಸತಕ್ಕ ಸ್ವಭಾವ).**
10. **ಸರ್ವತ್ರ ಆತ್ಮರೂಪ ಈಶ್ವರನ ದರ್ಶನ.**
11. **ಕೈವಲ್ಯ (ಒಂಟಿಯಾಗಿ ಇರುವಿಕೆ), ಅನಿಕೇತತಾ (ಗೃಹವನ್ನು ಕಟ್ಟಿಕೊಳ್ಳದೆ), ಏಕಾಂತ (ವಿವಿಕ್ತ) ಚೀರವಸ್ತ್ರ, ಸಂತೋಷ.**
12. **ಸರ್ವಭೂತಗಳಲ್ಲಿ ಆತ್ಮವನ್ನು ಭಗದ್ಭಾವದಿಂದ ದರ್ಶನ ಮಾಡುವದು ಮತ್ತು ಭಗವದ್ರೂಪ ಆತ್ಮನಲ್ಲಿ ಸರ್ವಭೂತಗಳ ದರ್ಶನ.**
13. **ಜನ್ಮಕರ್ಮ ವರ್ಣಾಶ್ರಮಾದಿಗಳಿಂದ ದೇಹದ ವಿಷಯದಲ್ಲಿ ನಿರಭಿಮಾನ ಮತ್ತು ಸ್ವಪರಬುದ್ಧಿಯ ಅಭಾವವು.**

ಅಲ್ಲದೆ ಭಾಗವತರ ಲಕ್ಷಣಗಳನ್ನು ಶ್ರೀ ಮದ್ಭಾಗವತದಲ್ಲಿ ಹೀಗೆ ವರ್ಣಿಸಿದ್ದಾರೆ[16]:

**"ಸರ್ವಭೂತೇಷು ಯ: ಪಶ್ಯೇದ್ ಭಗವದ್ಭಾವಮಾತ್ಮನ: ।**

**ಭೂತಾನಿ ಭಗವತ್ಯಾತ್ಮನ್ಯೇಷ ಭಾಗವತೋತ್ತಮ:" ॥** – (ಭಾಗ-11-2-45)

ಭಗವಂತನು ಸಮಸ್ತ ಪ್ರಾಣಿಗಳಲ್ಲಿ ಆತ್ಮರೂಪದಿಂದ ಸ್ಥಿತನಾಗಿದ್ದಾನೆಂದು ತಿಳಿಯುತ್ತಾನೋ, ಎಲ್ಲೂ ನ್ಯೂನಾಧಿಕ್ಯವಿಲ್ಲದೆ ಸರ್ವತ್ರ ಪರಿಪೂರ್ಣ ಭಗವಂತನ ಸತ್ತೆಯನ್ನು ಕಾಣುತ್ತಾನೋ, ಸಮಸ್ತ ಪ್ರಾಣಿ–ಪದಾರ್ಥಗಳು ಭಗವಂತನಲ್ಲೇ ಆಧೇಯ

ರೂಪದಿಂದ ಅಥವಾ ಅಧ್ಯಸ್ಥ ರೂಪದಿಂದ ಸ್ಥಿತವಾಗಿವೆ ಎಂದು ತಿಳಿಯುತ್ತಾನೋ ಅಂಥವನು ಭಗವಂತನ ಪರಮ ಪ್ರೇಮಿ ಉತ್ತಮ ಭಾಗವತನೆಂದು ತಿಳಿಯಬೇಕು.

**"ನ ಕಾಮ ಕರ್ಮ ಬೀಜಾನಾಂ ಯಸ್ಯ ಚೇತಸಿ ಸಂಭವ: ।**

**ವಾಸುದೇವೈಕನಿಲಯ: ಸ ವೈ ಭಾಗವತೋತ್ತಮ: ॥"**– (ಭಾಗ–11–2–50)

ಯಾರ ಮನದಲ್ಲಿ ವಿಷಯಭೋಗದ ಇಚ್ಛೆ, ಕರ್ಮ ಪ್ರವೃತ್ತಿ ಮತ್ತು ಅವುಗಳ ವಾಸನಾ ಬೀಜದ ಉದಯವಾಗುವುದಿಲ್ಲವೋ, ಏಕಮಾತ್ರ ಭಗವಾನ್ ವಾಸುದೇವನಲ್ಲೇ ಸದಾ ಚಿತ್ತವನ್ನು ಯಾರು ಇರಿಸಿದ್ದಾನೋ ಅವನೇ ಭಾಗವತೋತ್ತಮನಾಗಿದ್ದಾನೆ.

**"ನ ಯಸ್ಯ ಜನ್ಮಕರ್ಮಾಭ್ಯಾಂ ನ ವರ್ಣಾಶ್ರಮಜಾತಿಭಿ: ।**

**ಸಜ್ಜತೇಸ್ಮಿನ್ನಹಂಭಾವೋ ದೇಹೇ ವೈ ಸ ಹರೇ: ಪ್ರಿಯ: ॥"** – (ಭಾಗ 11–2–51)

ಯಾರಿಗೆ ತನ್ನ ಶರೀರದ ಬಗ್ಗೆಯಾಗಲೀ, ಉತ್ತಮ ಕುಲದಲ್ಲಿ ಹುಟ್ಟಿದ ಬಗ್ಗೆಯಾಗಲೀ ತಪಸ್ಸು ಆದಿ ಕರ್ಮಗಳಲ್ಲಿಯಾಗಲೀ, ವರ್ಣಾಶ್ರಮ– ಜಾತಿಯ ಬಗ್ಗೆಯಾಗಲೀ ಅಹಂಭಾವ ಇರುವುದಿಲ್ಲವೋ ಅವನು ನಿಶ್ಚಯವಾಗಿ ಭಗವಂತನಿಗೆ ಪ್ರಿಯನಾಗುತ್ತಾನೆ.

**"ನ ಯಸ್ಯ ಸ್ವ ಪರ ಇತಿ ವಿತ್ತೇಷ್ವಾತ್ಮನಿ ವಾ ಭಿದಾ ।**

**ಸರ್ವಭೂತಸಮ: ಶಾಂತ: ಸ ವೈ ಭಾಗವತೋತ್ತಮ: ॥** – (ಭಾಗ –11–2–52)

ಯಾರು ಧನ ಸಂಪತ್ತುಗಳಲ್ಲಿ ಇದು ನನ್ನದು– ಇದು ಪರರದ್ದು ಎಂಬ ಭೇದವಿರಿಸುವುದಿಲ್ಲವೋ, ಸಮಸ್ತ ಪದಾರ್ಥಗಳಲ್ಲಿ ಸಮಸ್ವರೂಪನಾದ ಪರಮಾತ್ಮನನ್ನು ನೋಡುತ್ತಾನೋ, ಯಾವುದೇ ಘಟನೆಯಿಂದಾಗಲೀ, ಸಂಕಲ್ಪಗಳಿಂದಾಗಲೀ ವಿಕ್ಷಿಪ್ತನಾಗದೆ ಶಾಂತನಾಗಿರುವನೋ ಅವನೇ ಭಾಗವತೋತ್ತಮನಾಗಿದ್ದಾನೆ.

ಶ್ರೀಮದ್ಭಾಗವತದ ಹನ್ನೊಂದನೇ ಸ್ಕಂಧದಲ್ಲಿ, ಮೂರನೇ ಅಧ್ಯಾಯದ ಶ್ಲೋಕ 22 ರಿಂದ 32 ರವರೆಗೆ ಪ್ರಬುದ್ಧ ಯೋಗಿಗಳು ಭಾಗವತ ಧರ್ಮದ ಲಕ್ಷಣಗಳನ್ನೂ ಹೇಳುವಾಗ ಭಾಗವತರ ಲಕ್ಷಣಗಳನ್ನೂ ವಿವರವಾಗಿ ಹೇಳಿದ್ದಾರೆ:

"ಉದ್ಧವಾ! ನನ್ನ ಭಕ್ತನಾದವನು ಕೃಪಾಮೂರ್ತಿಯಾಗಿರುತ್ತಾನೆ. ಯಾರಲ್ಲೂ ವೈರತ್ವವಿರಿಸಿಕೊಳ್ಳದೆ, ಘೋರ ದು:ಖಗಳನ್ನು ಸಹ ಪ್ರಸನ್ನ ಚಿತ್ತದಿಂದ ಸಹನ ಮಾಡುತ್ತಾನೆ. ಸತ್ಯವೇ ಜೀವನಾಧಾರವಾಗಿರುವವನೂ, ಮನದಲ್ಲಿ ಎಂದೂ ಪಾಪ ವಾಸನಾರಹಿತನಾಗಿರುವವನೂ, ಸಂಯಮಿಯೂ, ಮಧುರ ಸ್ವಭಾವದವನೂ, ಸದಾ ಅಂತರ್ಬಾಹ್ಯದಲ್ಲಿ ಪವಿತ್ರನೂ, ಸಂಗ್ರಹ– ಪರಿಗ್ರಹಗಳಿಂದ ದೂರವಾಗಿ ಇರುವವನೂ ಭಾಗವತೋತ್ತಮನೆಂದು ತಿಳಿ. ಪರಿಮಿತ ಭೋಜನ ಮಾಡುವವನೂ, ಶಾಂತನಾಗಿದ್ದು ಬುದ್ಧಿ ಸ್ಥಿರಉಳ್ಳವನೂ, ಪ್ರಮಾದರಹಿತನೂ ಗಂಭೀರ ಸ್ವಭಾವದವನೂ, ಧೈರ್ಯವಂತನೂ ಆದವನೆ ನನ್ನ ಪ್ರಿಯ ಭಕ್ತನಾದ ಭಾಗವತೋತ್ತಮನಾಗಿರುತ್ತಾನೆ."

ಭಾಗವತರಂತೆ ಭಕ್ತರ ಲಕ್ಷಣಗಳನ್ನು ಶ್ರೀಮದ್ ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಹೀಗೆ ಹೇಳಿದ್ದಾನೆ.

"ಅದ್ವೇಷ್ಟಾ ಸರ್ವಭೂತಾನಾಂ ಮೈತ್ರ: ಕರುಣ ಏವ ಚ ।
ನಿರ್ಮಮೋ ನಿರಹಂಕಾರ: ಸಮದು:ಖ ಸುಖ: ಕ್ಷಮೀ ॥
ಸಂತುಷ್ಟ: ಸತತಂ ಯೋಗೀ ಯತಾತ್ಮಾ ದೃಢನಿಶ್ಚಯ: ।
ಮಯ್ಯರ್ಪಿತ ಮನೋಬುದ್ಧಿರ್ಯೋ ಮದ್ಭಕ್ತ: ಸ ಮೇ ಪ್ರಿಯ: ॥" – (ಗೀತಾ –12– 13, 14)

"ಯಾವ ಪುರುಷನು, ಸರ್ವಭೂತಗಳಲ್ಲಿ ದ್ವೇಷಭಾವ ರಹಿತನಾಗಿರುವನೋ, ಎಲ್ಲರ ಪ್ರೇಮಿ ಮತ್ತು ಹೇತು ರಹಿತ ದಯಾಪರನಾಗಿದ್ದಾನೋ, ಮಮತ್ವ–ಅಹಂಕಾರ ಇಲ್ಲದವನೋ, ಸುಖ–ದು:ಖ ಪ್ರಾಪ್ತಿಯಲ್ಲಿ ಸಮನಾಗಿರುವನೋ, ಕ್ಷಮಾಶೀಲನಾಗಿರುತ್ತಾನೋ, (ಬೇರೆಯವರು ಅಪರಾಧ ಮಾಡಿದರೂ ಅಭಯ ಕೊಡುವವನು) ಯಾರು ಯೋಗಿಯಾಗಿದ್ದು ಸಂತುಷ್ಟನಾಗಿರುತ್ತಾನೋ, ಮನ–ಇಂದ್ರಿಯ ಸಹಿತ ಶರೀರವನ್ನು ವಶದಲ್ಲಿ ಇಟ್ಟುಕೊಂಡಿರುವನೋ, ಮನ ಬುದ್ಧಿಗಳನ್ನು ನನಗೆ ಅರ್ಪಿಸಿ ನನ್ನಲ್ಲೇ ದೃಢ ನಿಶ್ಚಯ ಉಳ್ಳವನಾಗಿರುತ್ತಾನೋ, ಅವನು ಭಕ್ತನೆನಿಸಿ ನನಗೆ ಪ್ರಿಯನಾಗಿದ್ದಾನೆ."

"ಯಾವಾತನಿಂದ ಯಾವ ಜೀವಿಯೂ ಉದ್ವೇಗ ಪಡುವುದಿಲ್ಲವೋ, ಹಾಗೆಯೇ ತಾನು ಯಾವ ಜೀವಿಯಿಂದಲೂ ಉದ್ವಿಗ್ನನಾಗುವುದಿಲ್ಲವೋ, ಹರ್ಷ, ಅಮರ್ಷ, ಭಯ, ಉದ್ವೇಗಾದಿಗಳಿಂದ ರಹಿತನಾಗುತ್ತಾನೋ ಅಂತಹ ಭಕ್ತನು ನನಗೆ ಪ್ರಿಯನು.

ಸರ್ವ ಆಕಾಂಕ್ಷೆಗಳಿಂದ ರಹಿತನಾದ, ಅಂತರ ಬಾಹ್ಯದಲ್ಲಿ ಶುದ್ಧನಾದ, ಚತುರ ಹಾಗೂ ಪಕ್ಷಪಾತ ರಹಿತನಾದ, ಎಲ್ಲಾ ದು:ಖಗಳಿಂದ ಬಿಡುಗಡೆ ಹೊಂದಿದವನಾದ, ಸರ್ವ ಆರಂಭಗಳ ತ್ಯಾಗಿಯಾದ ಮನುಷ್ಯನು ನನ್ನ ಭಕ್ತನಾಗಿದ್ದು ನನಗೆ ಪ್ರಿಯನಾಗಿದ್ದಾನೆ.

ಯಾರು ಎಂದೂ ಹರ್ಷಿತನಾಗುವುದಿಲ್ಲವೋ, ಯಾರನ್ನು ದ್ವೇಷಿಸುವುದಿಲ್ಲವೋ, ಎಂದೂ ಶೋಕಿಸುವುದಿಲ್ಲವೋ, ಯಾವ ಕಾಮನೆಯನ್ನೂ ಮಾಡದೆ ಶುಭ –ಅಶುಭ ಸಂಪೂರ್ಣ ಕರ್ಮಗಳ ತ್ಯಾಗಿಯಾಗಿದ್ದನೋ ಅಂಥ ಭಕ್ತಿಯುಕ್ತನಾದ ಪುರುಷನು ನನಗೆ ಪ್ರಿಯನು.

ಯಾರು ಶತ್ರು–ಮಿತ್ರ, ಮಾನ–ಅಪಮಾನಗಳಲ್ಲಿ ಸಮನಾಗಿರುವನೋ, ಶೀತ–ಉಷ್ಣ ಮತ್ತು ಸುಖ ದು:ಖಾದಿ ದ್ವಂದ್ವಗಳಲ್ಲಿ ಸಮನಾಗಿದ್ದು ಅನಾಸಕ್ತನಾಗಿರುತ್ತಾನೋ, ನಿಂದಾ ಸ್ತುತಿಗಳನ್ನು ಸಮಾನವಾಗಿ ತಿಳಿಯುತ್ತಾನೋ, ಮನನಶೀಲನಾಗಿದ್ದು, ಯಾವ ಪ್ರಕಾರದಲ್ಲೂ ಶರೀರ ನಿರ್ವಾಹವನ್ನು ನಡೆಸುವಲ್ಲಿ ಸದಾ ಸಂತುಷ್ಟನಾಗಿರುವನೋ, ವಾಸಿಸುವ ಸ್ಥಾನದ ಕುರಿತು ಮಮತೆ ಮತ್ತು ಆಸಕ್ತಿ ಇಲ್ಲದವನೋ ಅಂಥ ಸ್ಥಿರ ಬುದ್ಧಿಯ ಭಕ್ತನಾದ ಪುರುಷನು ನನಗೆ ಅತ್ಯಂತ ಪ್ರಿಯನಾಗಿದ್ದಾನೆ" ಎಂದು ಭಗವದ್ಗೀತೆಯ ಹನ್ನೆರಡನೇ ಅಧ್ಯಾಯದ ಹದಿಮೂರನೆ ಶ್ಲೋಕದಿಂದ ಹತ್ತೊಂಬತ್ತನೆ ಶ್ಲೋಕದವರೆಗೆ ಭಗವಾನ್ ಶ್ರೀ ಕೃಷ್ಣನು ಭಕ್ತರ ಲಕ್ಷಣಗಳನ್ನು ವಿವರಿಸಿದ್ದಾನೆ[17].

ಸಾಧನ ನವನೀತ ಈ ಗ್ರಂಥದಲ್ಲಿ [18] ಸಂತ ಮಹಾತ್ಮರ 84 ಲಕ್ಷಣಗಳನ್ನು ಹಾಗೆಯೇ ಭಕ್ತರ ಲಕ್ಷಣ ಮತ್ತು ಮಹಿಮೆಯ ಕುರಿತಾಗಿ 50 ಅಂಶಗಳನ್ನು ಪಟ್ಟಿಮಾಡಲಾಗಿದೆ. ಅವುಗಳಲ್ಲಿ ಕೆಲವು ಇಂತಿವೆ.

(ಅ) ಭಗವತ್ಪ್ರಾಪ್ತ ಪುರುಷನಿಗೆ ಸಂತನೆಂದು ಹೇಳಲಾಗುತ್ತದೆ.

(ಆ) 'ಸತ್' ಪದಾರ್ಥವು ಕೇವಲ ಪರಮಾತ್ಮನೇ ಆಗಿದ್ದಾನೆ. ಪರಮಾತ್ಮನ ಯಥಾರ್ಥವಾದ ತತ್ತ್ವವನ್ನು ತಿಳಿದವರು ಮತ್ತು ಅದನ್ನು ಪಡೆದವರೇ ಸಂತರಾಗಿದ್ದಾರೆ. ಗೌಣೀವೃತ್ತಿಯಿಂದ ಯಾರು ಭಗವತ್ಪ್ರಾಪ್ತಿಗೆ ಪಾತ್ರನಾಗಿದ್ದಾನೋ ಅವನಿಗೂ ಸಂತನೆಂದು ಹೇಳಬಹುದು. ಏಕೆಂದರೆ ಅವರು ಲಕ್ಷ್ಯದ ಸಮೀಪ ತಲುಪಿದ್ದಾರೆ.

(ಇ) ವಸ್ತುತಃ ಯಾರ ವ್ಯವಹಾರಗಳು 'ಸತ್' ಆಗಿವೆಯೋ ಅವರೇ ಸಂತರಾಗಿದ್ದಾರೆ.

(ಈ) ಭಗವದ್ಗೀತೆಯ ಎರಡನೇ ಅಧ್ಯಾಯದ ಶ್ಲೋಕ 55 ರಿಂದ 71 ರವರೆಗೆ ಸ್ಥಿತಪ್ರಜ್ಞನ ಹೆಸರಿನಿಂದ, ಆರನೇ ಅಧ್ಯಾಯದ ಶ್ಲೋಕ 7ರಿಂದ 9ರ ತನಕ ಯೋಗಿಯ ಹೆಸರಿನಿಂದ, ಹನ್ನೆರಡನೇ ಅಧ್ಯಾಯದ ಶ್ಲೋಕ 13ರಿಂದ 19ರ ತನಕ ಭಕ್ತನ ಹೆಸರಿನಿಂದ, ಹದಿನಾಲ್ಕನೇ ಅಧ್ಯಾಯದ ಶ್ಲೋಕ 22ರಿಂದ 25ರ ತನಕ ಗುಣಾತೀತನ ಹೆಸರಿನಿಂದ ತಿಳಿಸಿದ ಲಕ್ಷಣಗಳು ಯಾವ (ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಅಥವಾ ಸಂನ್ಯಾಸಿ ಯಾರೇ) ಪುರುಷನಲ್ಲಿರುತ್ತವೆಯೋ ಅವನೇ ಮಹಾಪುರುಷನು(ಸಂತ ಮಹಾತ್ಮನು).

(ಉ) ಸಂತರು ಜಗತ್ತಿನ ಎಲ್ಲ ಜೀವಿಗಳಲ್ಲಿ ಸಮತೆ, ಶಾಂತಿ, ಪ್ರೇಮ, ಜ್ಞಾನ ಮತ್ತು ಆನಂದದ ವಿಸ್ತಾರಗೈದು ಎಲ್ಲರನ್ನೂ ಭಗವಂತನ ಸದೃಶ ಮಾಡಬಯಸುತ್ತಾರೆ.

(ಋ) ಮಹಾತ್ಮರಾದ ಸಂತ ಪುರುಷರು ಸರ್ವಸದ್ಗುಣದಾಗರನಾದ ಪರಮಾತ್ಮನಿಂದ ಸಮತೆ, ಶಾಂತಿ, ಪ್ರೇಮ, ಜ್ಞಾನ ಮತ್ತು ಆನಂದಾದಿ ಸದ್ಗುಣಗಳನ್ನು ಪಡೆದು ಮೋಡಗಳಂತೆ ಜಗತ್ತಿನಲ್ಲಿ ಅವನ್ನು ಮಳೆಗರೆಯುತ್ತಾರೆ.

(ೠ) ಸಂತರು ನೀತಿ, ಧರ್ಮ, ನ್ಯಾಯ, ಈಶ್ವರ ಮತ್ತು ವಿಶ್ವಕ್ಕಾಗಿ ಕೇವಲ ಸ್ತ್ರೀ, ಪುತ್ರ, ಧನ ಮಾತ್ರವಲ್ಲ ತನ್ನ ಶರೀರವನ್ನು ಕೂಡ ತ್ಯಾಗ ಮಾಡುತ್ತಾರೆ.(ಎ) ಸಂತರ ಪ್ರೇಮವು ವಿಶುದ್ಧ ಮತ್ತು ಜ್ಞಾನಪೂರ್ಣವಾಗಿರುತ್ತದೆ.

(ಏ) ಸಂತರ ಜೀವನವು ಜನರ ಉಪಕಾರದ ನಿಮಿತ್ತವಾಗಿಯೇ ಇರುತ್ತದೆ.

(ಐ) ಮಹಾಪುರುಷರ(ಸಂತರ) ಆಚರಣೆಯಲ್ಲಿ ಪಾಪ ಮತ್ತು ಸ್ವಾರ್ಥದ ಗಂಧವೂ ಇರುವುದಿಲ್ಲ. ಅವರ ಪ್ರತಿಯೊಂದು ಕ್ರಿಯೆಯಲ್ಲಿ ಪರಮ ಉಪದೇಶವು ತುಂಬಿರುತ್ತದೆ. "ಭಕ್ತನಾದವನಿಗೆ ಅಹಂಕಾರದ ಗಾಳಿ ಕೂಡಾ ಸೋಂಕುವುದಿಲ್ಲ. ಅವನು ತಾನು ಹುಲ್ಲುಕಡ್ಡಿಗಿಂತ ಕನಿಷ್ಠನು, ಮರಕ್ಕಿಂತ ಹೆಚ್ಚಿನ ಸಹನೆ ಉಳ್ಳವನು, ಇತರರನ್ನು ಮನ್ನಿಸಲು ತಾನು ಮಾನಗೆಡುವನು, ಸದಾ ಶ್ರೀಹರಿಯನ್ನು ಕೀರ್ತಿಸುವನು" ಎಂದು ಶ್ರೀ ಚೈತನ್ಯ ಮಹಾಪ್ರಭುಗಳು ಹೇಳಿಕೊಂಡಿದ್ದಾರೆ [19].

**"ತೃಣಾದಪಿ ಸುನೀಚೇನ ತರೋರಪಿ ಸಹಿಷ್ಣುನಾ ।**

**ಅಮಾನಿನಾ ಮಾನದೇನ ಕೀರ್ತನೀಯ: ಸದಾಹರಿ: ॥"**

ನಾರದೀಯ ಮಹಾಪುರಾಣದಲ್ಲಿ(ಅಧ್ಯಾಯ 5, ಶ್ಲೋಕ ಸಂಖ್ಯೆ 49–75ರ ವರೆಗೆ) ಭಾಗವತರ ಲಕ್ಷಣವನ್ನು ಈ ರೀತಿ ವಿವರಿಸಲಾಗಿದೆ [20]:

ಕರ್ಮಣಾ ಮನಸಾ ವಾಚಾ ಪರಪೀಡಾಂ ನ ಕುರ್ವತೇ ।
ಅಪರಿಗ್ರಹಶೀಲಾಶ್ಚ ತೇ ವೈ ಭಾಗವತೋತ್ತಮಾಃ ॥ ೩೦ ॥

ಸತ್ಕಥಾಶ್ರವಣೇ ಯೇಷಾಂ ವರ್ತತೇ ಸಾತ್ವಿಕೀ ಮತಿಃ ।
ತದ್ಭಕ್ತವಿಷ್ಣುಭಕ್ತಾಶ್ಚ ತೇ ವೈ ಭಾಗವತೋತ್ತಮಾಃ ॥ ೩೧ ॥

ಮಾತಾಪಿತ್ರೋಶ್ಚ ಶುಶ್ರೂಷಾಂ ಕುರ್ವಂತಿ ಯೇ ನರೋತ್ತಮಾಃ ।
ಗಂಗಾವಿಶ್ವೇಶ್ವರಧಿಯಾ ತೇ ವೈ ಭಾಗವತೋತ್ತಮಾಃ ॥ ೩೨ ॥

ಯೇ ತು ದೇವಾರ್ಚನರತಾ ಯೇ ತು ತತ್ಸಾಧಕಾಃ ಸ್ಮೃತಾಃ ।
ಪೂಜಾಂ ದೃಷ್ಟ್ವಾನುಮೋದಂತೇ ತೇ ವೈ ಭಾಗವತೋತ್ತಮಾಃ ॥ ೩೩ ॥

ವ್ರತಿನಾಂ ಚ ಯತೀನಾಂ ಚ ಪರಿಚರ್ಯಾಪರಾಶ್ಚ ಯೇ ।
ವಿಯುಕ್ತಪರನಿಂದಾಶ್ಚ ತೇ ವೈ ಭಾಗವತೋತ್ತಮಾಃ ॥ ೩೪ ॥

೩೦. ತಾವು ಮಾಡುವ ಕೆಲಸದಿಂದ, ಆಡುವಮಾತಿನಿಂದ, ಮನಸ್ಸಿನ ಸಂಕಲ್ಪದಿಂದಲಾದರೂ ಇತರರಿಗೆ ಬಾಧಕವನ್ನು ಮಾಡದಿರುವವರು ಮತ್ತು ಅಯೋಗ್ಯರಿಂದ ದಾನವನ್ನು ತೆಗೆದುಕೊಳ್ಳದಿರುವವರು ಭಾಗವತಶ್ರೇಷ್ಠರು.

೩೧. ಯಾರಿಗೆ ಸಜ್ಜನರ ಕಥೆಯನ್ನು ಶ್ರವಣಮಾಡುವುದರಲ್ಲಿ ಸಾತ್ವಿಕವಾದ ಬುದ್ಧಿಯಿರುತ್ತದೆಯೋ, ಯಾರು ವಿಷ್ಣುಭಕ್ತಜನಗಳ ಭಕ್ತರೋ ಅಂತಹವರು ಭಾಗವತಶ್ರೇಷ್ಠರು.

೩೨. ಯಾವ ಉತ್ತಮಪುರುಷರು ತಾಯಿಯನ್ನು ಗಂಗೆಗೆ ಸಮಾನಳೆಂದೂ, ತಂದೆಯನ್ನು ವಿಶ್ವೇಶ್ವರನಿಗೆ ಸಮನೆಂದೂ, ತಿಳಿದು, ಅವರ ಸೇವೆಯನ್ನು ಮಾಡುತ್ತಾರೆಯೋ ಅವರು ಭಾಗವತಶ್ರೇಷ್ಠರು.

೩೩. ಯಾರು ದೇವರಪೂಜೆಯಲ್ಲಿನಿರತರೋ, ಯಾರುದೇವರಪೂಜೆಗೆ ಅನುಕೂಲವನ್ನು ಮಾಡುತ್ತಾರೆಯೋ, ಮತ್ತು ಪೂಜೆಯನ್ನು ನೋಡಿ ಸಂತೋಷಿಸುತ್ತಾರೆಯೋ ಅವರು ಭಾಗವತಶ್ರೇಷ್ಠರು.

೩೪. ಯಾರು ಇತರರನ್ನು ದೂಷಿಸದೇ ವ್ರತಾನುಷ್ಠಾನಪರರು ಮತ್ತು ಸಂನ್ಯಾಸಿಗಳು ಇವರುಗಳ ಸೇವೆಯಲ್ಲಿ ನಿರತರಾಗಿರುತ್ತಾರೆಯೋ ಅವರು ಭಾಗವತಶ್ರೇಷ್ಠರು.

ಸರ್ವೇಷಾಂ ಹಿತವಾಕ್ಯಾನಿ ಯೇ ವದಂತಿ ನರೋತ್ತಮಾಃ ।
ಯೇ ಗುಣಗ್ರಾಹಿಣೋ ಲೋಕೇ ತೇ ವೈ ಭಾಗವತೋತ್ತಮಾಃ ॥ ೫೫ ॥

ಆತ್ಮವತ್ಸರ್ವಭೂತಾನಿ ಯೇ ಪಶ್ಯಂತಿ ನರೋತ್ತಮಾಃ ।
ತುಲ್ಯಾಃ ಶತ್ರುಷು ಮಿತ್ರೇಷು ತೇ ವೈ ಭಾಗವತೋತ್ತಮಾಃ ॥ ೫೬ ॥

ಧರ್ಮಶಾಸ್ತ್ರಪ್ರವಕ್ತಾರಃ ಸತ್ಯವಾಕ್ಯರತಾಶ್ಚ ಯೇ ।
ಸತಾಂ ಶುಶ್ರೂಷವೋ ಯೇ ಚ ತೇ ವೈ ಭಾಗವತೋತ್ತಮಾಃ ॥ ೫೭ ॥

ವ್ಯಾಕುರ್ವತೇ ಪುರಾಣಾನಿ ತಾನಿ ಶೃಣ್ವಂತಿ ಯೇ ತಥಾ ।
ತದ್ವಕ್ತರಿ ಚ ಭಕ್ತಾ ಯೇ ತೇ ವೈ ಭಾಗವತೋತ್ತಮಾಃ ॥ ೫೮ ॥

ಯೇ ಗೋಬ್ರಾಹ್ಮಣಶುಶ್ರೂಷಾಂ ಕುರ್ವತೇ ಸತತಂ ನರಾಃ ।
ತೀರ್ಥಯಾತ್ರಾಪರಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೫೯ ॥

೫೫. ಯಾವ ಉತ್ತಮಪುರುಷರು ಎಲ್ಲರಿಗೂ ಹಿತವಚನವನ್ನೇ ನುಡಿಯುತ್ತಾರೆಯೋ, ಯಾರು ಪರಕೀಯರಲ್ಲಿ ಗುಣಾಂಶವನ್ನೇ ಗ್ರಹಿಸುತ್ತಾರೆಯೋ ಅಂತಹವರು ಭಾಗವತಶ್ರೇಷ್ಠರು.

೫೬. ಯಾವ ಉತ್ತಮಪುರುಷರು ಸಕಲಪ್ರಾಣಿಗಳನ್ನೂ ತನ್ನಂತೆಯೇ ನೋಡುತ್ತಾರೆಯೋ, ಶತ್ರುಮಿತ್ರರೆಂಬ ಭೇದವಿಲ್ಲದೆ ಎಲ್ಲರನ್ನೂ ಸಮವಾಗಿ ಭಾವಿಸುತ್ತಾರೆಯೋ ಅಂತಹವರು ಭಾಗವತಶ್ರೇಷ್ಠರು.

೫೭. ಯಾರು ಧರ್ಮಶಾಸ್ತ್ರವನ್ನು ಪಾಠಹೇಳುವವರೋ ನಿಜವನ್ನು ಹೇಳುವುದರಲ್ಲಿ ಆಸಕ್ತರೋ, ಮತ್ತು ಸಾಧುಗಳ ಸೇವೆಯನ್ನು ಮಾಡುವರೋ ಅಂತಹವರು ಭಾಗವತಶ್ರೇಷ್ಠರು.

೫೮. ಪುರಾಣಗಳನ್ನು ಹೇಳುವವರು, ಕೇಳುವವರು ಮತ್ತು ಪುರಾಣ ಹೇಳುವವರಲ್ಲಿ ಭಕ್ತರೂ ಸಹ ಭಾಗವತಶ್ರೇಷ್ಠರು.

೫೯. ಯಾವ ಮನುಷ್ಯರು ಗೋವು ಮತ್ತು ಬ್ರಾಹ್ಮಣರ ಸೇವೆಯನ್ನು ಮಾಡುತ್ತಾರೆಯೋ, ಯಾವಾಗಲೂ ತೀರ್ಥಯಾತ್ರೆಗಳಲ್ಲಿ ಆಸಕ್ತಿಯನ್ನು ಹೊಂದಿರುತ್ತಾರೆಯೋ ಅಂತಹವರು ಭಾಗವತಶ್ರೇಷ್ಠರು.

ಸಂತರು ಸತ್ಯದಲ್ಲೇ ಸೌಂದರ್ಯವನ್ನು ಅರಸುವವರು. ಬದಲಾಗದೇ ಇರುವಂಥಾದ್ದು ಸತ್ಯ. ಕ್ಷಣ ಕ್ಷಣಕ್ಕೂ ಬದಲಾಗುತ್ತಿರುವಂತಹ ಈ ಪ್ರಪಂಚದಲ್ಲಿ ಬದಲಾಗದಿರುವ ಸತ್ಯವನ್ನು ಕಾಣಬೇಕಾದರೆ ಸ್ವಾರ್ಥ, ಮಮಕಾರಗಳಿಂದ, ರಾಗ-ದ್ವೇಷಗಳಿಂದ ಅತೀತರಾಗಿರಬೇಕು. ಸಂತ ಕವಿಗಳ ಕೃತಿಗಳು ವಿಶಿಷ್ಟವೆನಿಸುವುದು ಈ ನೆಲೆಯಲ್ಲಿ. ಕವಿಯನ್ನು "ಕ್ರಾಂತದರ್ಶಿ" ಅನ್ನುವುದು ಕಾಣುವುದಕ್ಕಿಂತಲೂ ಆಚೆಗಿರುವುದನ್ನು ಕಾಣುವ ಸಾಮರ್ಥ್ಯ ಅವನಲ್ಲಿರುವ ಕಾರಣ. ಆದ್ದರಿಂದ 'ನಾನೃಷೀ ಕುರುತೇ ಕಾವ್ಯಂ, ಋಷಿಯಲ್ಲದವನು ಕಾವ್ಯವನ್ನು ರಚಿಸಲಾರ' ಎನ್ನುವ ಮಾತು ರೂಢಿಯಲ್ಲಿದೆ. ಪ್ರಜ್ಞೆಯು ವಿಸ್ತಾರಗೊಂಡಿದ್ದು ವಿಶ್ವಪ್ರಜ್ಞೆಯಲ್ಲಿ ಒಂದಾಗಿದ್ದಲ್ಲಿ ಮಾತ್ರ ಕಾಣುವುದಕ್ಕಿಂತಲೂ ಆಚೆಗಿರುವುದನ್ನು ಕಂಡುಕೊಳ್ಳಲು ಸಾಧ್ಯ. ಸಂತ ಕವಿಗಳಲ್ಲಿ ಸಹಜವಾಗಿ ಈ ಲಕ್ಷಣವನ್ನು ಗುರುತಿಸಬಹುದಾಗಿದೆ.

ಡಿ.ವಿ.ಜಿ.ಯವರು ಹೇಳುವಂತೆ, "ಕಾವ್ಯವು ನಮ್ಮ ಅಂತರಂಗ ವ್ಯಾಪಾರದ- ವಿಶೇಷವಾಗಿ ನಮ್ಮ ಹೃದಯವಿಕಸನದ ಪ್ರತಿಚ್ಛಾಯೆ........ ಈ ಪ್ರಪಂಚದಲ್ಲಿ ನಮ್ಮ ಕಣ್ಣಿಗೆ ಕಾಣ ಬೀಳದ ಆಕಾರವಿಕಾರಗಳು ಕವಿಯ ಅಂತಃಕರಣದ ಕನ್ನಡಿಯಲ್ಲಿ ಪ್ರತಿಬಿಂಬಿಸುತ್ತವೆ; ನಮ್ಮ ಕಿವಿಗೆ ಕೇಳಲಾರದ ನಗುವು ಅಳುವುಗಳು ಅವನ ಮನಸ್ಸಿನ ಗುಹೆಯಲ್ಲಿ ಪ್ರತಿಧ್ವನಿತವಾಗುತ್ತವೆ. ಹೀಗೆ ಸೂಕ್ಷ್ಮಾನುಭವಶಕ್ತಿಯನ್ನು ಪಡೆದಿರುವುದು ಮಾತ್ರವೇ ಅಲ್ಲ; ಈ ಅನುಭವಗಳಿಂದ ಕೆರಳಿ, ಆ ಆವೇಗದಲ್ಲಿ ತನ್ನೊಳಗೆ ಬೇರೊಂದು ಪ್ರಪಂಚವನ್ನು ಕಟ್ಟುವ ಶಕ್ತಿಯೂ ಅವನಿಗಿರುತ್ತದೆ. ಇದೇ ಪ್ರತಿಭೆ."[21]

ಹೊಸ ಹೊಸ ಭಾವಗಳನ್ನು ಕಾಣುವ, ಕಟ್ಟುವ ಪ್ರತಿಭಾ ಶಕ್ತಿಯ ವಿಲಾಸವು ಸಂತ ಕವಿಗಳ ಕೃತಿಗಳಲ್ಲಿ ಹೊಸ ಆಯಾಮವನ್ನು ಪಡೆದಿರುವುದನ್ನು ಗುರುತಿಸಬಹುದಾಗಿದೆ. ತಾತ್ವಿಕತೆ, ಪುರಾಣ ಪ್ರಜ್ಞೆ, ಸಾಮಾನ್ಯರನ್ನು ತಲುಪಬೇಕೆಂಬ ದೇಸೀ ಪ್ರಜ್ಞೆ ಈ ಎಲ್ಲಾ ಆಯಾಮಗಳನ್ನು ದುಡಿಸಿಕೊಂಡಂತಹ ಅನ್ಯಾದೃಶ ಪ್ರತಿಭಾ ವಿಲಾಸವನ್ನು

ಸಂತ ಕವಿಗಳ ಕೃತಿಗಳಲ್ಲಿ ಕಾಣಬಹುದಾಗಿದೆ. ಅದು ದಾಸರ ಶ್ರೀ ಕೃಷ್ಣ ಬಾಲ ಲೀಲೆಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುವಂತಹ ಅಸಂಖ್ಯ ಕೀರ್ತನೆಗಳಿರಬಹುದು, ರಾಮಧಾನ್ಯ ಚರಿತ್ರೆ, ಲಕ್ಷ್ಮೀ ಶೋಭಾನೆಯಂತಹ ಕೃತಿಗಳಿರಬಹುದು, ಸಾಮಾನ್ಯ ಜೀವನದ ಲಘು ವಿದ್ಯಮಾನಗಳನ್ನು ತಂದು ಘನವಾದ ತತ್ತ್ವವನ್ನು ನಿರೂಪಿಸುವಂತಹ ಶರಣರ ವಚನಗಳಿರಬಹುದು, ಬುದ್ಧಿ-ಭಾವಗಳ ಹದದಿಂದ ವೇದಾಂತ ಸಿದ್ಧಾಂತಗಳನ್ನು ಸರಳವಾಗಿ ನಿರೂಪಿಸುವಂತಹ ನಿಜಗುಣರ, ಚಿದಾನಂದ ಅವಧೂತರ ಕೃತಿಗಳಿರಬಹುದು, ಔಚಿತ್ಯಪೂರ್ಣವಾದ ರೂಪಕ, ಸಂಕೇತಗಳ ಮೂಲಕ ಜಾನಪದ ಭಾಷೆಯ ಸೊಗಡಿನೊಂದಿಗೆ ಆಧ್ಯಾತ್ಮಿಕ ಹಾಗೂ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸುವ ಶಿಶುನಾಳ ಷರೀಫರ ಗೀತೆಗಳಿರಬಹುದು, ಇವೆಲ್ಲದರಲ್ಲೂ ಸಂತ ಕವಿಗಳ "ಕವಿ ಪ್ರತಿಭೆ"ಯನ್ನು ಗುರುತಿಸಬಹುದಾಗಿದೆ. ಡಿ.ವಿ.ಜಿ.ಯವರು ಹೇಳುವಂತಹ ನಾವು ಗ್ರಹಿಸಲಾರದ ಬೇರೊಂದು ಪ್ರಪಂಚಕ್ಕೆ ನಮ್ಮನ್ನು ಎತ್ತರಿಸುವ ಸಾಮರ್ಥ್ಯ ಸಂತ ಕವಿಗಳ ಕೃತಿಗಳಿಗೆ ಖಂಡಿತವಾಗಿಯೂ ಇದೆ ಎನ್ನಬಹುದು.

ಇನ್ನು ಭಗವದ್ ಭಕ್ತಿಯನ್ನು ಒಂದು ರಸವಾಗಿ ಪರಿಗಣಿಸಿದರೆ ಸಂತ ಕವಿಗಳ ಕೃತಿಗಳಿಂದ ಅಂತಹ ರಸಾನುಭವ ಸಾಧ್ಯವೇ ಎನ್ನುವ ಪ್ರಶ್ನೆ ಭಕ್ತಿ ಸಿದ್ಧಾಂತದ ಪ್ರಸಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇಲ್ಲಿ ವಿದ್ವಾನ್ ಎನ್.ರಂಗನಾಥ ಶರ್ಮಾ ಇವರ ಅಭಿಪ್ರಾಯ ಉಲ್ಲೇನೀಯ:

"ಭಕ್ತನು ಭಕ್ತಿ ಪರವಶನಾಗಿ ಭಗವಂತನ ಧ್ಯಾನದಲ್ಲಿಯೋ ಭಜನೆಯಲ್ಲಿಯೋ ಮಗ್ನನಾದಾಗ ಅವನಿಗಾಗುವ ಆನಂದವು ಇತರ ಎಲ್ಲ ಆನಂದಗಳನ್ನು ಮೀರಿಸಿರುತ್ತದೆ ಎನ್ನುವುದು ಯುಕ್ತವೇ ಹೌದು. ಆಗ ಭಕ್ತನ ಹೃದಯದರ್ಪಣದಲ್ಲಿ ಆನಂದ ಸ್ವರೂಪನಾದ ಭಗವಂತನೇ ಪ್ರತಿಬಿಂಬಿಸಿರುತ್ತಾನೆ. ಅದು ಭಕ್ತಿರಸವಲ್ಲ. ಅದು ಭಕ್ತಿರಸಾಯನ!"[15]

ಇಂತಹ ಭಕ್ತಿರಸಾಯನವನ್ನು ಸಂತಕವಿಗಳ ಕೃತಿಗಳ ಶ್ರವಣ, ಕೀರ್ತನ, ವಾಚನಗಳಿಂದ ಅದೆಷ್ಟೋ ಸಹೃದಯರು ಇಂದಿಗೂ ಅನುಭವಿಸುತ್ತಾರೆ. ತಮ್ಮ ಮನಸ್ಸನ್ನು ಪರಿಪಾಕಗೊಳಿಸುತ್ತಿದ್ದಾರೆ. ಇಂದಿಗೂ ಅದೆಷ್ಟೋ ಮನೆಗಳಲ್ಲಿ ಮಕ್ಕಳನ್ನು ಮಲಗಿಸುವಾಗ ದಾಸರ ಹಾಡುಗಳನ್ನು ಹಾಡುತ್ತಾ ಹೃದಯವು ಮಾರ್ದವಗೊಂಡು ಕಣ್ಣಾಲಿಗಳನ್ನು ತುಂಬಿಕೊಳ್ಳುವಂತಹ ಅದೆಷ್ಟೋ ತಾಯಂದಿರಿದ್ದಾರೆ. ಕಷ್ಟಗಳೆದುರಾದಾಗ 'ತಲ್ಲಣಿಸದಿರು ಕಂಡ್ಯ ತಾಳು ಮನವೆ', 'ಈಸಬೇಕು ಇದ್ದು ಜೈಸಬೇಕು', 'ಬೆಟ್ಟದಾ ತುದಿಯಲ್ಲಿ

ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯಾ' ಇತ್ಯಾದಿ ಸಂತರ ಜೀವನಾನುಭವದ ವಚನಗಳನ್ನು ನೆನಪಿಸಿಕೊಂಡು ಜೀವನದಲ್ಲಿ ಭರವಸೆಯನ್ನು ಕಂಡುಕೊಳ್ಳುವವರು ಅನೇಕ ಮಂದಿ ಇದ್ದಾರೆ.

ಸಂತರ ಕೃತಿಗಳ ವಿಷಯದ ದೃಷ್ಟಿಯಿಂದ ಅವಲೋಕಿಸಿದರೆ ೧. ಸ್ವಾಧ್ಯಾಯ ಪ್ರೇರಿತವಾದ ಕೃತಿಗಳು, ೨. ಸ್ವಾನುಭೂತಿ ಪ್ರೇರಿತ ಕೃತಿಗಳು ಹಾಗೂ ೩. ಲೋಕ ಸಹಾನುಭೂತಿ ಪ್ರೇರಿತ ಕೃತಿಗಳಾಗಿ ವಿಂಗಡಿಸಿಕೊಳ್ಳಬಹುದು.

ತಾವು ಒಪ್ಪಿಕೊಂಡಂತಹ ಮತ ಪಂಥಗಳ ಸಿದ್ಧಾಂತ ಪ್ರಮೇಯಗಳನ್ನು ನಿರೂಪಿಸುವಂತಹ ಕೃತಿಗಳನ್ನು ಮೊದಲನೇ ವಿಭಾಗದಲ್ಲಿ ಪರಿಗಣಿಸಬಹುದು. ಉದಾಹರಣೆಗೆ ಹರಿದಾಸರ ಕೃತಿಗಳನ್ನು ಗಮನಿಸಿದರೆ ಶ್ರೀಮದ್ವಾದಿರಾಜರ ಅವತಾರತ್ರಯ ಮಧ್ವ ಸುವ್ವಾಲಿ, ವೈಕುಂಠ ವರ್ಣನೆ, ಜಗನ್ನಾಥ ದಾಸರ ಹರಿಕಥಾಮೃತ ಸಾರ ಇವು ಶ್ರೀಮಧ್ವ ಸಿದ್ಧಾಂತದ ಬೋಧನೆಯನ್ನೇ ಪ್ರಧಾನವಾಗಿರಿಸಿಕೊಂಡ ಕೃತಿಗಳೆನ್ನಬಹುದು. ಇನ್ನು ಬಾಹ್ಯ ಪ್ರಪಂಚವನ್ನು ಗಣನೆಗೆ ತೆಗೆದುಕೊಳ್ಳದೆ ತಮ್ಮೊಳಗಿನ ಭಕ್ತಿಯನ್ನು, ವೈರಾಗ್ಯವನ್ನು, ಆನಂದವನ್ನು ಅಥವಾ ಜೀವಿತದ ಯಾವುದೋ ಒಂದು ಸಮಸ್ಯೆಯನ್ನು ತಮ್ಮ ಆತ್ಮ ಸಂತುಷ್ಟಿಗಾಗಿ ಅಥವಾ ತಮ್ಮ ಇಷ್ಟದೇವರನ್ನು ಒಲಿಸಿಕೊಳ್ಳುವುದಕ್ಕಾಗಿ ರಚಿಸಿದಂತಹ ಕೃತಿಗಳು ಸ್ವಾನುಭೂತಿ ಪ್ರೇರಿತ ಕೃತಿಗಳೆನ್ನಬಹುದು. ತಮ್ಮ ಸುತ್ತಲಿನ ಸಮಾಜವನ್ನು ಕಂಡು ಅಲ್ಲಿ ನಡೆಯುವ ಅನ್ಯಾಯ, ಶೋಷಣೆ, ದಬ್ಬಾಳಿಕೆಗಳನ್ನು ಕಂಡು ಮನನೊಂದು(ಕೆಲವೊಮ್ಮೆ ಆಕ್ರೋಶದಿಂದಲೂ) ಸ್ವಭಾವ ಸಹಜವಾದ ದಯೆ,

ಕಾರುಣ್ಯ ಹಾಗೂ ಕಾಳಜಿಯಿಂದ ರಚಿಸಿದ ಕೃತಿಗಳನ್ನು ಲೋಕ ಸಹಾನುಭೂತಿ ಪ್ರೇರಿತವೆನ್ನಬಹುದು. ಸಂತರ ಮಾತು ಮತ್ತು ಕೃತಿಗಳ ಮಧ್ಯೆ, ನಡೆ ಹಾಗೂ ನುಡಿಗಳ ನಡುವೆ ಅಂತರವಿಲ್ಲದಿರುವ ಕಾರಣ ಅವರ ಆದರ್ಶವನ್ನು ಮೈಗೂಡಿಸಿಕೊಳ್ಳಲು ಇಚ್ಛಿಸುವವರಿಗೆಲ್ಲಾ ಅವರ ಕೃತಿಗಳ ಅಧ್ಯಯನ ಮತ್ತು ಅನುಸರಣೆ ಅತೀ ಮಹತ್ವದ್ದಾಗಿದೆ.

---

**ಟಿಪ್ಪಣಿಗಳು**

1. ವ.ಸಾ.ಸಂ., ಸಂ : ಸಂ.ಶಿ.ಭೂಸನೂರಮಠ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-2, ಪುಟ 258, ವ.ಸಂ 33
2. Saints and mystics, Published by: The President, Sri Ramakrishna Math, Mylapore, Chennai-600004, (Page 16)
3. ಭ. ಭಾ., ರಾ.ಸತ್ಯನಾರಾಯಣ ಇವರ ಲೇಖನ 'ಭಾರತದಲ್ಲಿ ಭಕ್ತಿಪಂಥ-ಅದರಲ್ಲಿ ಹರಿದಾಸ ಪಥ', ಪುಟ 138
4. **'ಕಾಲ ಕಾಲಕ್ಕೆ ಬದಲಾಯಿಸುತ್ತ ಎಲ್ಲರ ವ್ಯವಹಾರಕ್ಕೆ ಸಿಗುವ ಜಗತ್ತನ್ನು ಶಾಸ್ತ್ರವು ವ್ಯಾವಹಾರಿಕ ಸತ್ಯವೆನ್ನುವುದು'**- ವೇದಾಂತ ಪ್ರಬೋಧ, ಸ್ವಾಮಿ ಪರಮಾನಂದ ಭಾರತೀ, ಪ್ರ: ಜ್ಞಾನಸಂವರ್ಧಿನೀ ಪ್ರತಿಷ್ಠಾನಮ್, 2004, ಪುಟ 81
5. **'ದೇಶಕಾಲಗಳನ್ನು ಅನುಸರಿಸಿ ಕಾಣುವ (ಇರುವಂತೆ ಭಾಸವಾಗುವ) ಸತ್ಯವನ್ನು ಪ್ರಾತಿಭಾಸಿಕ ಸತ್ಯವೆನ್ನುತ್ತಾರೆ. ಉದಾಹರಣೆ: ಬಿಸಿಲ್ಗುದುರೆ'** - ಅದೇ, ಪುಟ 81
6. **'ಪಾರಮಾರ್ಥಿಕ ಸತ್ಯವೆಂದರೆ ಯಾವಾಗಲೂ ಒಂದೇ ರೀತಿ ಇರತಕ್ಕದ್ದು....... ಅದು ಇಂದ್ರಿಯವೇದ್ಯವಲ್ಲದಿದ್ದರೂ ಇಂದ್ರಿಯವೇದ್ಯವಾದವುಗಳಲ್ಲಿ ಅದು ಇದ್ದೇಇರತಕ್ಕದ್ದು...'** - ಅದೇ, ಪುಟ 81
7. **'ವೇದಾಂತಶಾಸ್ತ್ರದಲ್ಲಿ ತನ್ನನ್ನು ತಾನು ಬ್ರಹ್ಮವೆಂದು ಅರಿಯದಿರುವುದನ್ನೇ ಜೀವನ ಅವಿದ್ಯೆ ಎನ್ನುತ್ತಾರೆ..... ಈ ಅವಿದ್ಯೆಯಿಂದಲೇ ತನ್ನ ಬಗ್ಗೆ ತಪ್ಪು ತಿಳುವಳಿಕೆಗೆ ದಾರಿಯಾಗುತ್ತದೆ. ಈ ತಪ್ಪುತಿಳುವಳಿಕೆಯೇ ಅಧ್ಯಾಸ....... ಅದಲ್ಲದ್ದರಲ್ಲಿ(ಅ-ತಸ್ಮಿನ್) ಅದೆಂಬ ಬುದ್ಧಿಗೆ(ತದ್ಬುದ್ಧಿಃ) ಅಧ್ಯಾಸವೆಂದು ಹೆಸರು'**- ಅದೇ, ಪುಟ 124
8. **"ಒಂದು ವಸ್ತುವಿನ ಭಾಗವಾಗಿರದೆ ಆ ವಸ್ತುವನ್ನು ವಿಂಗಡಿಸಿ ತೋರಿಸುವ ಮತ್ತೊಂದಕ್ಕೆ ಆ ವಸ್ತುವಿನ 'ಉಪಾಧಿ' ಎನ್ನುತ್ತಾರೆ.ಉದಾಹರಣೆಗೆ ಚಿನ್ನದ ಭಾಗವಾಗಿರದೆ ಚಿನ್ನವನ್ನು ವಿಂಗಡಿಸಿ ತೋರಿಸುವ ಉಂಗುರವನ್ನು 'ಚಿನ್ನದ ಉಪಾಧಿ' ಎನ್ನುತ್ತಾರೆ"** - ವೇದಾಂತ ಪ್ರಬೋಧ, ಪುಟ 56
9. **"ಸಪ್ತಮ ಭೂಮಿಕೆಯನ್ನು ಮುಟ್ಟಿದ ನಂತರ ಅಲ್ಲಿ ಏನಾಗುತ್ತದೆ ಎಂಬುದನ್ನು ಬಾಯಿಂದ ವರ್ಣನೆ ಮಾಡಲಾಗುವುದಿಲ್ಲ"**- ಶ್ರೀರಾಮಕೃಷ್ಣ ಪರಮಹಂಸರು, ಶ್ರೀರಾಮಕೃಷ್ಣ ವಚನವೇದ, ಪೂರ್ವಾರ್ಧ, ಶ್ರೀರಾಮಕೃಷ್ಣ ಆಶ್ರಮ, ಪುಟ 120

10. Mysticism- The theory and practice of religious ecstacies. Traditionally conceived as the spiritual quest for union with the Absolute, the infinite or God and the perception of its essential oneness….. – www.britannica.com/EBchecked/topic/400861/mysticism

11. ಮಹರ್ಷಿ ಪತಂಜಲಿಯ ಯೋಗಸೂತ್ರಗಳು, ಸ್ವಾಮಿ ಹರ್ಷಾನಂದ, ರಾಮಕೃಷ್ಣ ಮಠ, ಬೆಂಗಳೂರು–19, 1996, ಪುಟ 117.

12. 'ಭಾವಸಾಗರ ಶ್ರೀರಾಮಕೃಷ್ಣ' ಶ್ರೀರಾಮಕೃಷ್ಣ ಆಶ್ರಮ, ಮೈಸೂರು ಇದರಿಂದ ಪ್ರಕಟವಾಗುವ ಮಾಸಪತ್ರಿಕೆ ವಿವೇಕಪ್ರಭದ ವಿಶೇಷಸಂಚಿಕೆ, ಜನವರಿ 2009, ಸಂಪುಟ 10, ಸಂಚಿಕೆ 1, ಇದರ ಸಂಪಾದಕೀಯ ಲೇಖನ 'ಪರಮ ಅನುಭಾವಿಯಾಗಿ ಶ್ರೀರಾಮಕೃಷ್ಣರು', ಪುಟ 9, 10, 12.

13. Path to Beatific Peace, volume II, Divine Mother Sree Rama Devi, Rama Sakti Mission, Shakti nagar, Mangalore – 575016, 1972, Page 80, 81,

14. ವಿವೇಕಾನಂದ ಕವಿತಾವಳಿ, ಸ್ವಾಮಿ ವಿವೇಕಾನಂದರ ಕವಿತೆಗಳ ಕನ್ನಡ ಅನುವಾದ, ಅನುವಾದಕರು: ಡಾ.ಹೆಚ್.ಎನ್. ಮುರಳೀಧರ್, ವಿವೇಕಹಂಸ ಪ್ರಕಾಶನ, ಬೆಂಗಳೂರು – 50, 2001, ಪುಟ 44

15. ಸಟೀಕಾ ತಾತ್ಪರ್ಯ ಸಹಿತ ವಿಚಾರ ಚಂದ್ರೋದಯ, ಹಿಂದಿಮೂಲ ಲೇ : ಪಂ । ಪೀತಾಂಬರಜೀ, ಸಂ. ಮತ್ತು ಪ್ರ : ಶ್ರೀಮತಿ ವಿಶಾಲಾಕ್ಷಾಂಬಾತಾಯಿ, ಪಂ.ವೇ. ತೋಟಪ್ಪಯ್ಯ ಶಾಸ್ತ್ರೀಜಿ, ಗದಗ, ಪುಟ 164, 165

16 ಶ್ರೀ ಮದ್ಭಾಗವತ, ಭಾರತ ದರ್ಶನ ಪ್ರಕಾಶನ, ಸಂಪುಟ 8, ಪುಟ 3024–3027

17 ಶ್ರೀಮದ್ಭಗವದ್ಗೀತಾ, ಗೀತಾಪ್ರೆಸ್, ಗೋರಖ್ ಪುರ್, ಪುಟ 346–351.

18. ಸಾಧನ ನವನೀತ, ಲೇ: ಪಂ। ಜಯದಯಾಳ ಗೋಯಂದಕಾ, ಅನು:ಕೀರ್ತನಾಚಾರ್ಯ ಶ್ರೀ ಲಕ್ಷ್ಮಣ್‌ದಾಸ್ ವೇಲಣ್‌ಕರ್, ಪ್ರ ಗೀತಾ ಪ್ರೆಸ್, ಗೋರಖ್‌ಪುರ, ಐದನೇ ಮುದ್ರಣ 2007, ಪುಟ 30–41

19. ಶ್ರೀಚೈತನ್ಯ ಶಿಕ್ಷಾಷ್ಟಕ–3, ಶ್ರೀಚೈತನ್ಯ ಚರಿತಾವಳಿ, ಪ್ರಭುದತ್ತ ಬ್ರಹ್ಮಚಾರಿ, ಪ್ರ: ಗೋವಿಂದಭವನ ಕಾರ್ಯಾಲಯ, ಗೀತಾ ಪ್ರೆಸ್, ಗೋರಖಪುರ, ಪುಟ 659

20. ನಾರದೀಯಮಹಾಪುರಾಣ, ಮೂಲ : ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ, ತಂತ್ರಾಂಶ ಆಕರ: ಶ್ರೀ ರಂಗ ಡಿಜಿಟಲ್ ಸಾಫ್ಟ್‌ವೇರ್ ಟೆಕ್ನಾಲಜೀಸ್, ಭಾಗ 1, ಅಧ್ಯಾಯ 5, ಪುಟ 93–97, rgveda%26%20puranas/Granthamala/Puranagalu/html/djvu/naradiya/Volume1/vol1.djvu?djvuopts&zoom=fitpage

21. ಜೀವನ ಸೌಂದರ್ಯ ಮತ್ತು ಸಾಹಿತ್ಯ, ಡಿ.ವಿ.ಜಿ., ಕಾವ್ಯಾಲಯ ಪ್ರಕಾಶಕರು, ಜಯನಗರ, ಮೈಸೂರು – 570014, 1997, ಪುಟ 12

22. ಭಗವದ್ಭಕ್ತಿರಸಾಯನಂ, ಇದರ ಮುನ್ನುಡಿಯಲ್ಲಿ, ಮೂಲ: ಮಧುಸೂದನ ಸರಸ್ವತಿ, ಅನುವಾದ: ಪ್ರೊ. ಎಂ. ಎ. ಹೆಗಡೆ, ಉದಯ ಪ್ರಕಾಶನ, ನಂ. 984, 11ನೇ 'ಎ' ಮುಖ್ಯರಸ್ತೆ, 3ನೇ ವಿಭಾಗ, ರಾಜಾಜಿ ನಗರ, ಬೆಂಗಳೂರು–10, 2008, ಪುಟ viii

## ೩.೨ ಭಕ್ತಿ ಚಳವಳಿ ಹಾಗೂ ಕರ್ನಾಟಕದಲ್ಲಿ ಭಕ್ತಿ ಪಂಥದ ಬೆಳವಣಿಗೆ

**ಭಕ್ತಿ ಚಳವಳಿ:** ಭಾರತದ ಆಧುನಿಕ ಇತಿಹಾಸವನ್ನು ಅವಲೋಕಿಸಿದಾಗ, ಪರಕೀಯರ ಆಕ್ರಮಣವಾದಾಗಲೆಲ್ಲಾ ದೇಶದ ಸಂಸ್ಕೃತಿ, ಪರಂಪರೆ, ಭಾವೈಕ್ಯವನ್ನು ಕಾಪಾಡುವಲ್ಲಿ ಭಕ್ತಿ ಚಳವಳಿಯ ಹಾಗೂ ಭಾಗವತ ಧರ್ಮಾನುಯಾಯಿಗಳಾದ ಸಂತರ, ಭಕ್ತರ ಕೊಡುಗೆ ಅಪಾರವಾದದ್ದು ಎಂಬುದು ಮನವರಿಕೆಯಾಗುತ್ತದೆ. ಉತ್ತರ ಭಾರತದಲ್ಲಿ ಹದಿನೈದನೇ ಶತಮಾನದಲ್ಲಿ ಆಗಿಹೋದ ಸಂತ ತುಲಸೀದಾಸ್, ಮೀರಾಬಾಯಿ, ಸಂತ ಕಬೀರ, ಗುರು ನಾನಕ ಹಾಗೂ ಬಂಗಾಲದಲ್ಲಿ ಶ್ರೀ ಚೈತನ್ಯ ಮಹಾಪ್ರಭುಗಳು, ಗುಜರಾತಿನಲ್ಲಿ ಸಂತ ನರಸೀ ಮೆಹ್ತಾ, ಮಹಾರಾಷ್ಟ್ರದಲ್ಲಿ ಸಂತ ಜ್ಞಾನದೇವರು, ನಾಮದೇವರು, ಏಕನಾಥರು, ಸಮರ್ಥ ರಾಮದಾಸರು, ತುಕಾರಾಮರು, ಆಂಧ್ರದಲ್ಲಿ ಭದ್ರಾಚಲ ರಾಮದಾಸರೂ, ದಕ್ಷಿಣದಲ್ಲಿ ನಾಯನಾರ್, ಆಳ್ವಾರರು ಇವರೆಲ್ಲಾ ಭಕ್ತಿ ಚಳವಳಿಯ ಮೂಲಕ ಸಮಾಜದಲ್ಲಿ ಏಕತೆಯನ್ನೂ, ಸಮರಸತೆಯನ್ನೂ ಉಂಟುಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ.

"ಆಂದೋಲನವೆಂದರೆ ಒಂದು ಸಾಮೂಹಿಕ ಕ್ರಿಯೆ. ಒಂದು ಘನವಾದ ಧ್ಯೇಯದಿಂದ, ಮಹತ್ತರವಾದ ಉದ್ದೇಶದಿಂದ ಸಂಘಟಿತವಾದ ಚಳವಳಿ"[1] ಅನ್ನುತ್ತಾರೆ ಹಿರಿಯ ವಿದ್ವಾಂಸರಾದ ಡಾ। ಹಾ.ಮಾ.ನಾಯಕ.

"ಮತ ಎಂದರೆ ಅರಿವಿನ ಬೆಳಕು. ಆಯಾಯ ಮತ-ಧರ್ಮ ಜನತೆಯ ಸಮಾಜದ ಮುಂದಿಡಲು ಆರಂಭ ಆದ ಶ್ರಮ ಸಾಧ್ಯ ಪ್ರಯತ್ನವೇ ಆಂದೋಲನ, ಚಳವಳಿ, ಎಂದೆನ್ನಬಹುದಾಗಿದೆ. ಯಾವುದು ಚಲಿಸುತ್ತದೆಯೋ, ಸಮಾಜದ ಒಂದು ಬಣ, ವ್ಯಕ್ತಿ, ಎಲ್ಲರೂ ಯಾವುದೋ ಒಂದು ಧ್ಯೇಯ, ತತ್ವ-ಸಿದ್ಧಾಂತ-ಪದ್ಧತಿ, ತಮ್ಮ ಒಲವಿನ ಜತೆಗೆ ಜನರ ಒಲವು, (ಆಳುವ ರಾಜನ ಒಲವು, ಆಸರೆ), ಯಾವುದೋ ಒಂದು ಆದರ್ಶವಾದಕ್ಕಾಗಿ ಹೋರಾಡುತ್ತಾರೋ, ತಮ್ಮ ಧ್ಯೇಯ, ಇತ್ಯಾದಿಗಳನ್ನು ಪ್ರಚುರಪಡಿಸಲು, ಜನತೆಯನ್ನಾಕರ್ಷಿಸಿಕೊಳ್ಳಲು ಶ್ರಮಿಸುತ್ತಾರೆಯೋ, ಅದು ಆಂದೋಲನ, ಚಳುವಳಿ ಎಂದೆಲ್ಲ ಅನಿಸಿಕೊಳ್ಳುತ್ತದೆ"[2] ಎನ್ನುತ್ತಾರೆ ಡಾ. ಎಸ್.ಕೆ. ರಾಮಶೇಷನ್.

ಭಕ್ತಿ ಚಳವಳಿಯು ಸಾಮಾನ್ಯವಾದ ಇತರ ಚಳವಳಿಗಳಿಗಿಂತ ವಿಭಿನ್ನವಾದುದು. ಇದು ಸಾಮಾನ್ಯ ಚಳವಳಿಗಳಂತೆ ಯಾವುದೇ ಸ್ವಹಿತಾಸಕ್ತಿಯ ಸಾಧನೆಗಾಗಿ ಮಾಡುವ ಹೋರಾಟವಲ್ಲ. ಈ ಚಳವಳಿಯ ನೇತೃತ್ವ ವಹಿಸಿದ ಸಂತರಿಗೆ ಸಮಾಜದ ಕಲ್ಯಾಣ, ಸಮಾಜದ ಅಭ್ಯುದಯವನ್ನುಳಿದು ಇನ್ನ್ಯಾವುದೇ ಸ್ವಾರ್ಥ ಸಾಧನೆಯ ಉದ್ದೇಶವಿರಲಿಲ್ಲ. ಇಲ್ಲಿ ಹಿಂಸೆ ರಕ್ತಪಾತಕ್ಕೆ ಯಾವುದೇ ರೀತಿಯ ಅವಕಾಶವಿರಲಿಲ್ಲ. ಸಂತರ ಸರಳತೆ, ನೈತಿಕತೆ, ನಿರ್ವ್ಯಾಜ ಪ್ರೇಮ ಇವುಗಳಿಂದ ಆಕರ್ಷಿತರಾಗಿ ಜನರು ಸ್ವಇಚ್ಛೆಯಿಂದ ಚಳವಳಿಯಲ್ಲಿ ಪಾಲ್ಗೊಳ್ಳುತ್ತಿದ್ದರೇ ಹೊರತಾಗಿ ಅಲ್ಲಿ ಯಾವುದೇ ರೀತಿಯ ಒತ್ತಾಯ, ಆಗ್ರಹಗಳಿಗೆಡೆಯಿರಲಿಲ್ಲ. ಭಕ್ತಿ ಚಳವಳಿಯು ಯಾವತ್ತೂ ಮೌಲ್ಯಾಧಾರಿತವಾದದ್ದಾಗಿತ್ತು.

ಆಧುನಿಕ ಸಂದರ್ಭವನ್ನು ಅವಲೋಕಿಸುವಾಗಲೂ ಇಂದಿಗೂ ಸ್ವಾರ್ಥ ರಹಿತವಾದ ಸಮುದಾಯದ ಹಿತ ಸಾಧಿಸುವ ಉದ್ದೇಶ ಹೊಂದಿರುವಂತಹ ಚಳವಳಿಗೆ ವ್ಯಾಪಕವಾದ ಬೆಂಬಲ ದೊರಕುತ್ತಿರುವುದನ್ನು ಗಮನಿಸಬಹುದಾಗಿದೆ.

ಇನ್ನೊಂದು ಪ್ರಮುಖವಾದ ಅಂಶವೆಂದರೆ ಭಕ್ತಿಯು ಯಾವತ್ತೂ ಅಂತರ್ಮುಖಿಯಾದ ಸ್ವಭಾವವನ್ನು ಬಯಸುತ್ತದೆ (**ಭಕ್ತಾ ಏಕಾಂತಿನೋ ಮುಖ್ಯಾಃ ॥ ದೇ.ನಾ.ಭ. ಸೂ. ೬೭**) ಭಕ್ತಿ ಸಾಧಕನು ಸದಾ ತನ್ನ ನಡತೆಯನ್ನು, ತನ್ನ ವ್ಯಕ್ತಿತ್ವವನ್ನು ಒರೆಗೆ ಹಚ್ಚಿ ಅದು ಭಗವನ್ಮುಖಿಯಾಗಿಸುವುದರಲ್ಲಿ ತನ್ನೆಲ್ಲಾ ಪರಿಶ್ರಮ ಪ್ರಯತ್ನಗಳನ್ನು ಮುಡಿಪಾಗಿಡುತ್ತಾನೆಯೇ ಹೊರತು ಅನ್ಯರ ದೋಷ ದೌರ್ಬಲ್ಯಗಳನ್ನೆಣಿಸುವುದರೆಡೆ ಮನ ಮಾಡುವ ಪ್ರಮೇಯ ಬಹಳ ವಿರಳ. ಹೀಗಿರುವಾಗ ಸಮಾಜಮುಖಿಯಾದ ಆಂದೋಲನ ಚಳವಳಿಯ ನೇತೃತ್ವ ಸಂತರಿಂದ ಸಾಧ್ಯವಾಗಿದ್ದು ಹೇಗೆ?

ಈ ಬಗ್ಗೆ ಮಹಾಮಹೋಪಾಧ್ಯಾಯ ರಾ.ಸತ್ಯನಾರಾಯಣರವರು, 'ಭಾರತದಲ್ಲಿ ಭಕ್ತಿಪಂಥ– ಅದರಲ್ಲಿ ಹರಿದಾಸ ಪಥ' ಎನ್ನುವ ಪ್ರಬಂಧದಲ್ಲಿ ಹೀಗೆ ಹೇಳುತ್ತಾರೆ[3]:

"ಭಾರತದಲ್ಲಿ ಭಕ್ತಿಗೆ ಆಧ್ಯಾತ್ಮಿಕಾನ್ವೇಷಣೆಯದಷ್ಟೇ ಅಲ್ಲದೆ ಸಾಮಾಜಿಕ ಮತ್ತು ನೈತಿಕ ಮೌಲ್ಯಗಳೂ ಬಹಳ ಹಿಂದಿನಿಂದಲೇ ಅಂಟಿಕೊಂಡೇ ಬಂದಿವೆ. ಎಲ್ಲ ಮತಧರ್ಮಗಳಿಗೂ ಸಾಧಾರಣವಾದುದು ಭಕ್ತಿಯೇ. ಅದು ಸಾಧಕನಲ್ಲಿ ಮೊದಲು ವಿಧಿಸುವುದು ನಮ್ರತೆ, ಸಹಿಷ್ಣುತೆಗಳನ್ನು ಮತ್ತು ಎಲ್ಲರೂ ಸಮಾನವಾಗಿ ಭಗವಂತನ ಮಕ್ಕಳೇ. ಎಲ್ಲರೂ ಸಮಾನವಾಗಿ ಅವನ ಕೃಪೆಗೆ ಪಾತ್ರರೇ ಎಂಬ ಸಂದೇಶವನ್ನು. ಭಕ್ತಿಯನ್ನು ಭೋಧಿಸುವ ಎಲ್ಲ ಧರ್ಮಗಳೂ ವಿಗ್ರಹಾರಾಧನೆ, ದೇವಾಲಯ ನಿರ್ಮಾಣ, ತೀರ್ಥಯಾತ್ರೆ, ಉಪವಾಸ, ಧ್ಯಾನ, ಪ್ರಾರ್ಥನೆ, ಸರ್ವಸಮ ಭಾವ, ಸರ್ವಭೂತ ಹಿತ, ಶರಣಾಗತಿ, ಭಗವಂತನಲ್ಲಿಯೂ, ಸರ್ವಭೂತಗಳಲ್ಲಿಯೂ ಅವ್ಯಾಜವೂ ಅಪರಿಮಿತವೂ ಆದ ಪ್ರೇಮ–ಇವುಗಳನ್ನು ವಿಧಿಸುತ್ತದೆ; ದೇವರು ಒಬ್ಬನೇ, ನಾಮರೂಪಗಳು ಹಲವು ಎಂದು ಬೋಧಿಸುತ್ತವೆ. ಹಿಂದೂ ಧರ್ಮವು 'ಸ್ವಧರ್ಮೇ ಅರವತ್ತು ಮೂರು ಪುರಾತನರಲ್ಲಿಯೂ[5] ಇಂತಹ ಅದೆಷ್ಟೋ ನಿದರ್ಶನಗಳು ದೊರೆಯುತ್ತವೆ. ಶಿವಶರಣರು ಭಕ್ತ ಸಮಾನತೆಯನ್ನು ಎಣೆಯಿಲ್ಲದೆ ಆಚರಿಸಿದರು. ಇದೇ ಅವರ ಅನುಭವ ಮಂಟಪದ ವಿಶೇಷ ಸಾಧನೆ; ವೇದಪ್ರಿಯನಾಗಿರುವುದಕ್ಕಿಂತ, ನಾದಪ್ರಿಯನಾಗಿರುವುದಕ್ಕಿಂತ, ಶಿವನು ಭಕ್ತಿಪ್ರಿಯ ಎಂಬುದು ಅದರ ಮೂಲ ಧೋರಣೆ; ಮಡಿವಾಳನಾಗಲಿ, ಕಿನ್ನರಿಯವನಾಗಲಿ, ಮೋಳಿಗೆಯವನಾಗಲಿ, ದೊರೆಯಾಗಲಿ, ಕಡುಬಡವನಾಗಲಿ, ಶಿವಭಕ್ತನಾದರೆ ಒಂದೇ. ಹರಿದಾಸರು 'ಹೊಲೆಯ ಹೊರಗಿಹನೆ, ಊರೊಳಗಿಲ್ಲವೆ' ಎಂದು ಮತ್ತೆ ಮತ್ತೆ ಕೇಳಿದರು, ಮನುಷ್ಯನ ಮೌಲ್ಯದ ನಿರ್ಣಯವು ಆಚಾರವಿಚಾರಗಳಿಂದ, ಹುಟ್ಟಿನಿಂದಲ್ಲ, ಅಧಿಕಾರ ಐಶ್ವರ್ಯಗಳಿಂದಲ್ಲ ಎಂದು ಸಾರಿದರು. 'ತುರುಕರು ಕರೆದರೆ ಉಣಬಹುದು' ಎಂದು ಶ್ಲೇಷೆಯಿಟ್ಟು ಹೇಳಿದರು.

ಜಗತ್ತಿಗೆಲ್ಲ ದೇವರು ಒಬ್ಬನೇ; ಆಧ್ಯಾತ್ಮ ಸಾಧನೆಯ ಹಕ್ಕು ಜಾತಿ ಕುಲಭೇದಗಳಿಲ್ಲದೇ ಎಲ್ಲರಿಗೂ ಇದೆ, ಭಕ್ತಿಮಾರ್ಗವು ಹಿಂದುವಿಗಾಗಲಿ, ಮುಸ್ಲಿಮನಿಗಾಗಲಿ ಸಮಾನವಾದುದು, ರಾಮ–ರಹೀಮರು, ಕೃಷ್ಣಕರೀಮರು, ಅವರ ಉಪಾಸನೆಗಳು ಬೇರೆ ಬೇರೆಯಲ್ಲ, ಭಕ್ತಿಯು ಪಂಡಿತರದು ಮಾತ್ರ ಸ್ವತ್ತಲ್ಲ.

ದೇವರು ಸರ್ವೋತ್ತಮ, ಅವನು ಒಬ್ಬನೇ ಎಂದರೆ ಹೃದಯಗಳು ಬೆಸೆಯುತ್ತವೆ; ನನ್ನ ದೇವರು ಮಾತ್ರ ಸರ್ವೋತ್ತಮ ಎಂದಾಗ ಮನುಷ್ಯ ಮನುಷ್ಯರಲ್ಲಿ ಬಿರುಕು ಬಿಟ್ಟು ಕಂದರವಾಗುತ್ತದೆ. ಭಕ್ತಿ ಪಂಥದಲ್ಲಿ ದೇವರು ಎಂಬುದು ಮುಖ್ಯ, ಯಾವ ದೇವರು ಎಂಬುದು ಗೌಣ. ಆದುದರಿಂದಲೇ ಶ್ರೀಸಾಮಾನ್ಯನ ಅದು ಇಷ್ಟವಾಗುತ್ತದೆ."

ರಾ.ಸತ್ಯನಾರಾಯಣರವರ **"ಭಕ್ತಿಗೆ ಆಧ್ಯಾತ್ಮಿಕಾನ್ವೇಷಣೆಯದಷ್ಟೇ ಅಲ್ಲದೆ ಸಾಮಾಜಿಕ ಮತ್ತು ನೈತಿಕ ಮೌಲ್ಯಗಳೂ ಬಹಳ ಹಿಂದಿನಿಂದಲೇ ಅಂಟಿಕೊಂಡೇ ಬಂದಿವೆ"** ಎನ್ನುವ ವಿಚಾರವನ್ನು ಪುಷ್ಟೀಕರಿಸುವ ಅಭಿಪ್ರಾಯಗಳು ನಾರದ ಭಕ್ತಿ ಸೂತ್ರದಲ್ಲಿ ಲಭಿಸುತ್ತದೆ. ಭಕ್ತಿಯು ದೃಢವಾಗಿರುವ ಲಕ್ಷಣಗಳು ಹೇಳುವಂತಹ ಸಂದರ್ಭದಲ್ಲಿ ನಾರದರು ಅಂತಹ ಭಕ್ತರಲ್ಲಿ **ನಾಸ್ತಿ ತೇಷು ಜಾತಿ-ವಿದ್ಯಾ-ರೂಪ-ಕುಲ-ಧನ-ಕ್ರಿಯಾದಿ-ಭೇದಃ ॥** (ದೇ.ನಾ.ಭ. ಸೂ.೪೯) ಅಂದರೆ ಜಾತಿ, ವಿದ್ಯೆ, ರೂಪ, ಕುಲ, ಧನ, ಕ್ರಿಯೆಗಳ ವಿಷಯದಲ್ಲಿ ಭೇದ ಭಾವವಿರುವುದಿಲ್ಲ. **ಯೋ ವೇದಾನಪಿ ಸಂನ್ಯಸ್ಯತಿ, ಕೇವಲಮ್ ಅವಿಚ್ಛಿನ್ನ-ಅನುರಾಗಂ ಲಭತೇ ॥** (ದೇ.ನಾ.ಭ. ಸೂ.೫೦) ಅಂತಹವರಿಗೆ ಅವಿಚ್ಛಿನ್ನವಾದ ಪ್ರೇಮವು ಪ್ರಾಪ್ತವಾಗಿರುತ್ತದೆ. **ಸ ತರತಿ ಸ ತರತಿ ಸ ಲೋಕಾಂಸ್ತಾರಯತಿ ॥** (ದೇ.ನಾ.ಭ. ಸೂ.೫೦) ಅವರು ತಾವು ಸ್ವತಃ ಪ್ರಪಂಚದ ಬಂಧನಗಳಿಂದ ಪಾರಾಗುವುದಲ್ಲದೆ, ಇತರರನ್ನೂ ಪಾರು ಮಾಡುತ್ತಾರೆ. ಭಕ್ತಿ ಸಾಧನೆಯು ದೃಢವಾಗುತ್ತಿದ್ದಂತೆ ಅವರ ಹೃದಯವು ವಿಶಾಲವಾಗುತ್ತದೆ, ಎಲ್ಲರಲ್ಲೂ ಭಗವಂತನ ಸ್ವರೂಪವನ್ನೇ ಕಾಣುತ್ತಾರೆ. ಸ್ವಾಮಿ ವಿವೇಕಾನಂದರೂ ಕೂಡ ಭಕ್ತಿಯೋಗದ ಕುರಿತಾದ ತಮ್ಮ ಉಪನ್ಯಾಸದಲ್ಲಿ "ಪ್ರೇಮದಲ್ಲಿ ಭಯವಿಲ್ಲ, ವ್ಯಾಪಾರದೃಷ್ಟಿಯಿಲ್ಲ ಹಾಗೂ ಮಾತ್ಸರ್ಯವಿಲ್ಲ" ಎಂದು ಹೇಳಿದ್ದಾರೆ[6] ಹೀಗಾಗಿ ಅಂತಹ ಭಕ್ತರು ತಮ್ಮ ಹೃದಯ ವೈಶಾಲ್ಯತೆ, ಕರುಣೆ, ಪ್ರೇಮಗಳ, ಕಾಳಜಿಗಳಿಂದಾಗಿ ಸಮಾಜದಲ್ಲಿ ಆಗುವ ಅನ್ಯಾಯವನ್ನು ಪ್ರತಿರೋಧಿಸುವ ಸಲುವಾಗಿ ಚಳುವಳಿ, ಆಂದೋಲನಗಳ ನೇತೃತ್ವ ವಹಿಸಿಕೊಳ್ಳುತ್ತಾರೆ. ಒಂದು ವೇಳೆ ನೇತೃತ್ವ ವಹಿಸಲು ಅವರು ಅನಾಸಕ್ತರಾಗಿದ್ದರೂ ಸಮಾಜವು ಅವರ ತ್ಯಾಗ ಪ್ರೇಮಗಳಿಂದಾಗಿ ಪ್ರಭಾವಿತರಾಗಿ ಅವರ ಮೇಲಿನ ದೃಢ ವಿಶ್ವಾಸದಿಂದ ಅವರೇ ನೇತೃತ್ವ ವಹಿಸುವಂತೆ ಒತ್ತಾಯಿಸುತ್ತಾರೆ.

'ವಚನಕಾರರ ಆಂದೋಲನ ವಿಶ್ವ ಆಂದೋಲನದ ಹಿನ್ನೆಲೆಯಲ್ಲಿ' ಈ ಸಂಶೋಧನಾ ಪ್ರಬಂಧದಲ್ಲಿ ಸಂಶೋಧಕರಾದ ಹ.ನಂ.ವಿಜಯಕುಮಾರ್‌ರವರು ಚಳವಳಿ ಹಾಗೂ ಆಂದೋಲನ ಇವು ಹುಟ್ಟಿಕೊಳ್ಳಲು ಕಾರಣ ಹಾಗೂ ಇವುಗಳ ಪರಿಣಾಮವನ್ನು ಹೀಗೆ ವಿಶ್ಲೇಷಿಸಿದ್ದಾರೆ[7]:

"* ಸುಧಾರಣೆ ವ್ಯವಸ್ಥೆಯೊಂದನ್ನು ಪರಿಷ್ಕರಣೆಗೊಳಿಸುತ್ತದೆ. ಈ ಪರಿಷ್ಕರಣ ಕ್ರಿಯೆ ಯಾವ ಕ್ಷೇತ್ರದಲ್ಲಿ ಬೇಕಾದರೂ ಆಗಬಹುದು.ಸುಧಾರಣೆಯನ್ನು ಆಂದೋಲನವೂ ತರಬಹುದು. ಚಳುವಳಿಯೂ ತರಬಹುದು. ಚಳುವಳಿ ಸುಧಾರಣೆ ತಂದಾಗ ಅದು ಒಂದು ಕ್ಷೇತ್ರಕ್ಕೆ ಮಾತ್ರ ಸೀಮಿತವಾಗುತ್ತದೆ. ಆಂದೋಲನ ಸುಧಾರಣೆ ತಂದಾಗ ಅದು ಒಂದು ಕ್ಷೇತ್ರದಲ್ಲಿ ಮಾತ್ರವಲ್ಲದೆ ಇನ್ನೊಂದು ಕ್ಷೇತ್ರದಲ್ಲೂ

ಸುಧಾರಣೆ ತರುತ್ತದೆ(ಪುಟ 5). ಉದಾ: ಜೆ.ಪಿ.ಚಳುವಳಿ ತಂದ ಸುಧಾರಣೆ ರಾಜಕೀಯ ರಂಗಕ್ಕೆ ಮಾತ್ರ ಸೀಮಿತವಾದದ್ದು. ಆದರೆ ಬಸವಣ್ಣ ಆಗಲಿ, ಶ್ರೀರಾಮಕೃಷ್ಣರಾಗಲಿ ತಂದ ಸುಧಾರಣೆ ಕೇವಲ ಧಾರ್ಮಿಕ ಕ್ಷೇತ್ರದಲ್ಲಿ ಮಾತ್ರ ಪರಿಮಿತಿಗೊಳ್ಳಲಿಲ್ಲ, ಸಾಹಿತ್ಯ, ಸಾಂಸ್ಕೃತಿಕ ರಂಗದಲ್ಲೂ ಪ್ರಭಾವ ಬೀರಿತು(ಪುಟ 6).

* ಎಲ್ಲ ಆಂದೋಲನಗಳೂ ಚಳುವಳಿಯ ಮುಂದುವರಿದ ಹೆಜ್ಜೆಗಳು. ಚಳುವಳಿ ಹೆಚ್ಚೆಚ್ಚು ವ್ಯಾಪಕವಾದಂತೆ ಆಂದೋಲನದ ಸ್ವರೂಪ ಪಡೆಯುತ್ತದೆ. ಇರುವ

* ಆಂದೋಲನಗಳ ಅಧ್ಯಯನದಿಂದ ಇಂಥದ್ದೇ ಕಾರಣಕ್ಕಾಗಿ ಆಂದೋಲನ ಸಂಭವಿಸಿತೆಂದು ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ಯಾವುದೇ ನಿರ್ದಿಷ್ಟ ಕಾರಣಗಳು ಕೂಡ ಆಂದೋಲನಕ್ಕೆ ಪ್ರೇರಣೆಯಾಗಿರುವುದಿಲ್ಲ. ಕಾರಣಗಳು ಒಂದಕ್ಕೊಂದು ತಳಕು ಹಾಕಿಕೊಂಡು ಆಂದೋಲನಕ್ಕೆ ಸಿದ್ಧತೆ ನಡೆಸುತ್ತಿರುತ್ತವೆ. ಎಲ್ಲ ಆಂದೋಲನಗಳಿಗೂ ಇಂಥದೇ ಕಾರಣ ಎಂದು ಹೇಳಲು ಬರುವುದಿಲ್ಲ. ಯಾಕೆಂದರೆ ಪ್ರತಿಯೊಂದು ಆಂದೋಲನವೂ ಬೇರೆ ಬೇರೆ ಕಾರಣಗಳಿಂದಾಗಿ ಸಂಭವಿಸಿರುತ್ತವೆ. ಸಾಧಾರಣೀಕರಿಸಿ ಹೇಳುವುದಾದರೆ ಸಮಾನತೆ, ಸ್ವಾತಂತ್ರ್ಯ, ಭದ್ರತೆ ಅಥವಾ ರಕ್ಷಣೆ, ನ್ಯಾಯ ಇವು ಕಾರಣವಾಗಿ ಆಂದೋಲನಗಳು ಸಂಭವಿಸುತ್ತವೆ (ಪುಟ 9).

* ಧಾರ್ಮಿಕ ಆಂದೋಲನ ಕ್ರಾಂತಿಯಂತೆ ಎದ್ದು ಕಾಣುವುದಿಲ್ಲ. ಅದು ಆಳವಾಗಿರುವ ಹೊಳೆ ಮೇಲುನೋಟಕ್ಕೆ ನಿಧಾನಗತಿಯಲ್ಲಿ ಸಾಗುವಂತೆ, ಧಾರ್ಮಿಕ ಆಂದೋಲನ ನಡೆಯುತ್ತದೆ. ಧಾರ್ಮಿಕ ಆಂದೋಲನದ ಸೆಳವಿನಲ್ಲಿ ಸಿಕ್ಕ ಸಮಾಜ ಅದಕ್ಕೆ ಮೊದಲು ಬಳಕೆಯಲ್ಲಿದ್ದ ಕ್ಷುದ್ರ ಆಚರಣೆಗಳನ್ನು ಈ ಸೆಳವಿನಲ್ಲಿ ಕಳಚಿಕೊಳ್ಳುತ್ತದೆ. ಉದಾ: ವಚನಕಾರರ ಕಾಲದಲ್ಲಿ ಆಂದೋಲನದ ಸೂಚನೆ ಕಂಡು ಬಂದಾಗ ಆ ಹಿಂದೆ ಪ್ರಚಲಿತವಿದ್ದ ಅನೇಕದೇವೋಪಾಸನೆ, ಜಾತಿ ವಿಭಾಗ ಇತ್ಯಾದಿ ಕೆಟ್ಟ ಸಂಪ್ರದಾಯಗಳು ಕೊಚ್ಚಿಹೋದವು. ಹೀಗೆ ಕೊಚ್ಚಿಹೋಗಲು ಕಾರಣ ಜನತೆಗೂ ಅಂತಹ ಆಚರಣೆಗಳಲ್ಲಿ ನಂಬಿಕೆ ಕುಸಿದುದೇ ಆಗಿದೆ. ದೇವ ಮತ್ತು ಭಕ್ತರ ನಡುವೆ ಪೂಜಾರಿಯ ಆಟಾಟೋಪಗಳು ಹೇಳಲಸದಳವಾಗಿ ಬೆಳೆದಿದ್ದವು. ಭಕ್ತನಿಗೆ ತಾನೂ ದೇವರನ್ನು ನೇರವಾಗಿ ಪೂಜಿಸಬೇಕೆಂಬ ಅಭಿಲಾಷೆ, ಮನದಲ್ಲಿಸ್ಥಿರವಾಗಿತ್ತು. ಮನಸ್ಸು ಅತೃಪ್ತಿಯ ಕಣಜವಾಗಿತ್ತು. ಇರುವ ವ್ಯವಸ್ಥೆಯ ಬಗ್ಗೆ ತೆಗೆದಷ್ಟು ಅತೃಪ್ತಿಯ ಧಾನ್ಯವನ್ನು ಪಡೆಯಬಹುದಿತ್ತು."

ಮೇಲಿನ ವಿಚಾರಗಳಲ್ಲಿ "ಆಂದೋಲನ ಸುಧಾರಣೆ ತಂದಾಗ ಅದು ಒಂದು ಕ್ಷೇತ್ರದಲ್ಲಿ ಮಾತ್ರವಲ್ಲದೆ ಇನ್ನೊಂದು ಕ್ಷೇತ್ರದಲ್ಲೂ ಸುಧಾರಣೆ ತರುತ್ತದೆ" ಎನ್ನುವುದು ಭಕ್ತಿಯ ಕ್ಷೇತ್ರಕ್ಕೆ ಹೆಚ್ಚು ಅನ್ವಯವಾಗುವುದು. ವಚನಕಾರರು ಹಾಗೂ ಹರಿದಾಸರು ಕರ್ನಾಟಕದಲ್ಲಿ ನಡೆಸಿದಂತಹ ಆಂದೋಲನದ ಪರಿಣಾಮ ಕೇವಲ ಭಕ್ತಿ ಅಥವಾ ಧಾರ್ಮಿಕ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರದೆ ಸಾಮಾಜಿಕ, ಆರ್ಥಿಕ, ರಾಜಕೀಯ, ಕಲೆ ಮತ್ತು ಸಂಸ್ಕೃತಿ ಕ್ಷೇತ್ರಕ್ಕೂ ವ್ಯಾಪಕಗೊಂಡಿದೆ ಎನ್ನುವುದು ಅಧ್ಯಯನಗಳಿಂದ ತಿಳಿದುಬರುತ್ತದೆ. ವಿಶೇಷವಾಗಿ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳು ಈ ಕನ್ನಡದ ನೆಲದಲ್ಲಿ ಸಾಮಾಜಿಕ ನೆಲೆಯಲ್ಲಿ ಭಕ್ತಿ ಚಳವಳಿಯ ಮಹತ್ಸಾಧನೆಯೆಂದರೆ, ಸಮಾಜದ ಕೆಳವರ್ಗದ ಜನರಲ್ಲಿ ಸಂಸ್ಕಾರದ ಜೊತೆಗೆ ಆತ್ಮವಿಶ್ವಾಸ, ಸ್ವಾಭಿಮಾನ ಹಾಗೂ

ಸ್ವಾವಲಂಬನೆಯನ್ನು ತುಂಬುವಂತೆ ಮಾಡಿದ್ದು. ಈ ಕುರಿತು ಹಿರಿಯ ಸಂಶೋಧಕರಾದ ಡಾ.ಎಂ.ಚಿದಾನಂದಮೂರ್ತಿಯವರು ಹೀಗೆ ಹೇಳುತ್ತಾರೆ[8]: 'ವಚನಕಾರರ ಯುಗದಲ್ಲಿ(ಹನ್ನೆರಡನೆಯ ಶತಮಾನದಲ್ಲಿ) ಸ್ವಾಭಿಮಾನವು ಒಂದು ಸಾಮಾಜಿಕ ಚಳವಳಿಯ ರೂಪದಲ್ಲಿಯೂ ವ್ಯಕ್ತವಾಗಿದೆ. ಸಾಮಾಜಿಕ, ಧಾರ್ಮಿಕ, ಆರ್ಥಿಕ ಅಸಮಾನತೆಗಳ ವಿರುದ್ಧವಾಗಿ ಬಂಡೆದ್ದ ಅವರು ರಾಜತ್ವವನ್ನು ಧಿಕ್ಕರಿಸಿ ನಿಂತು ವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿದರು. ಯಾವುದೇ ಜಾತಿಯಲ್ಲಿ ಹುಟ್ಟಿದರೂ ಅವನು

ಬೆಳೆದು ವ್ಯಕ್ತಿತ್ವವನ್ನು ಸಾಧಿಸಿಕೊಳ್ಳಲು ಅವನ ಜಾತಿ ಅಡ್ಡಿಯಾಗದು ಎಂಬ ತತ್ತ್ವವನ್ನು ಪ್ರತಿಪಾದಿಸಿದರು. ಅದರಲ್ಲೂ ಸಮಾಜದ ಕೆಳವರ್ಗದ ಜನರಿಗೆ ಆತ್ಮಾಭಿಮಾನವನ್ನೂ, ಸ್ವಾವಲಂಬನೆಯನ್ನೂ ತಂದುಕೊಟ್ಟುದು ಆ ಚಳವಳಿಯ ದೊಡ್ಡ ಸಿದ್ಧಿಗಳಲ್ಲಿ ಒಂದು.' ಇದಕ್ಕೆ ಅವರು ಐತಿಹಾಸಿಕ ನಿದರ್ಶನವನ್ನೂ ನೀಡುತ್ತಾರೆ[9].

"ಧಾರ್ಮಿಕ ಆಂದೋಲನ ಕ್ರಾಂತಿಯಂತೆ ಎದ್ದು ಕಾಣುವುದಿಲ್ಲ. ಅದು ಆಳವಾಗಿರುವ ಹೊಳೆ ಮೇಲುನೋಟಕ್ಕೆ ನಿಧಾನಗತಿಯಲ್ಲಿ ಸಾಗುವಂತೆ, ಧಾರ್ಮಿಕ ಆಂದೋಲನ ನಡೆಯುತ್ತದೆ "– ಎನ್ನುವ ಮೇಲೆ ನಿರೂಪಿಸಿರುವ ಅಭಿಪ್ರಾಯವು ಇಂದಿಗೂ ಪ್ರಸ್ತುತ. ಇಂದೂ ಕೂಡ ಅನೇಕ ಅಧ್ಯಾತ್ಮಿಕ ಕ್ಷೇತ್ರಗಳು/ಸಂಸ್ಥೆಗಳು ಭಕ್ತಿಯನ್ನೇ ಮೂಲನೆಲೆಯಾಗಿಸಿಕೊಂಡು ಸಮಾಜ ಸುಧಾರಣೆಯ ವಿವಿಧ ರೀತಿಯ ಆಂದೋಲನಗಳನ್ನು ನಡೆಸುತ್ತಿರುವುದು, ಆ ನಿಟ್ಟಿನಲ್ಲಿ ಗಮನಾರ್ಹ ಯಶಸ್ಸನ್ನು ಸಾಧಿಸಿರುವುದನ್ನು ಗಮನಿಸಬಹುದು. ಉದಾಹರಣೆಗೆ ಶ್ರೀ ಕ್ಷೇತ್ರ ಧರ್ಮಸ್ಥಳದ ನೇತೃತ್ವದಲ್ಲಿ ನಡೆಯುತ್ತಿರುವ ಗ್ರಾಮಾಭಿವೃದ್ಧಿ ಯೋಜನೆಯ ಆಂದೋಲನಗಳು, ಮದ್ಯವರ್ಜನ ಚಳವಳಿಗಳು ಸಾಕಷ್ಟು ಯಶಸ್ಸನ್ನು ದಾಖಲಿಸಿವೆ (ಈ ಬಗ್ಗೆ **ಭಕ್ತಿಸೂತ್ರಗಳಲ್ಲಿ ಅಡಕವಾಗಿರುವ ಸಿದ್ಧಾಂತದ ಅನುಷ್ಠಾನ, ಪ್ರಚಾರ ಮತ್ತು ಸಮಾಜ** ಎಂಬ ವಿಶೇಷವಾದ ಅಧ್ಯಾಯವನ್ನು ಮುಂದೆ ನೀಡಲಾಗಿದೆ).

ಇನ್ನು ಹರಿದಾಸ ಆಂದೋಲನದ ಮೇಲೆ ಅದಕ್ಕೆ ಪೂರ್ವಭಾವಿಯಾಗಿ ನಡೆದ ಆಂದೋಲನಗಳ ಪ್ರಭಾವದ ಕುರಿತಾಗಿ ಹಿರಿಯ ವಿದ್ವಾಂಸರಾದ ರಂ.ಶ್ರೀ.ಮುಗಳಿಯವರು ಹೀಗೆ ಹೇಳುತ್ತಾರೆ[10]:

"ಎಲ್ಲ ಕಾಲದ ಭಕ್ತರಲ್ಲಿ ಕೆಲವು ಭಾವಗಳು ಸಮಾನವೆನ್ನಬಹುದಾದರೂ ದಾಸಸಾಹಿತ್ಯದ ಮೇಲೆ ಶರಣವಚನಗಳ ವರ್ಚಸ್ಸು ಆಗಿದೆ ಎಂಬುದು ದಿಟ. ಈ ಅನ್ಯೋನ್ಯಭಾವ ಕನ್ನಡಿಗರಿಗೆ ಹೆಮ್ಮೆಯ ಮಾತು. ಅಂಕಿತವನ್ನು ಬದಲಿಸಿದರೆ ಅಂತಃಕರಣ ಒಂದೇ, ಅಭಿವ್ಯಕ್ತಿ ಒಂದೇ ಎಂದು ಕಾಣುತ್ತದೆ."

ಎರಡು ಸರ್ವೋದಯ ಚಳುವಳಿಗಳು ನಡೆದವು. ಮೊದಲಿನದು 12ನೇ ಶತಮಾನದ ವಚನಕಾರರಾಗಿದ್ದಾರೆ, ಎರಡನೆಯದು ಕ್ರಿ.ಶ 15ನೇ ಶತಮಾನದ ಹರಿದಾಸರದ್ದು. ಆದರೆ ಇವೆರಡರ ಆಧಾರ ಶ್ರುತಿ ಒಂದೇ, ಅದೇ ಭಕ್ತಿ. ಭಕ್ತಿ ಈ ಎರಡು ಆಂದೋಲನಕ್ಕೂ ಸಮಾನವಾದ ತೀವ್ರ ಮನೋಭಾವವಾಗಿದೆ.

## ಕರ್ನಾಟಕದಲ್ಲಿ ಭಕ್ತಿಪಂಥದ ಬೆಳವಣಿಗೆ:

ಕನ್ನಡದಲ್ಲಿ ಈ ರೀತಿಯ ಭಕ್ತಿ ಚಳವಳಿಯ ಬೆಳವಣಿಗೆಯ ಕುರಿತಾಗಿ ಡಾ.ಎಸ್.ಕೆ. ರಾಮಶೇಷನ್‌ರವರು ಹೀಗೆ ಹೇಳುತ್ತಾರೆ[11]:

"ಬೌದ್ಧರು ಪಾಲೀ, ಮಾಗದಿ, ಭಾಷೆಗಳನ್ನು ಹಾಗೆಯೇ ಜೈನರು ಪ್ರಾಕೃತ, ಕನ್ನಡ ಭಾಷೆಗಳನ್ನು ಬಳಸಿ ತಮ್ಮ ಮತ – ತತ್ವ ಪ್ರಸಾರ ಮಾಡಲು ಕಾರಣ, ತಮ್ಮ ಆಂದೋಲನದ ಧ್ಯೇಯ ಎಲ್ಲರಿಗೂ ಅರ್ಥವಾಗಲೆಂದು, ಕನ್ನಡ ಭಾಷೆಯಲ್ಲಿ ಧರ್ಮ ಗ್ರಂಥಗಳನ್ನು ವಿರಚಿಸಿದ ಜೈನರಿಂದ ಆರಂಭಗೊಂಡ ಈ ಭಾಷೆ ಬಳಕೆಯ ಯುಕ್ತಿ ಕ್ರಿ. ಶ. ಹನ್ನೆರಡನೇ ಶತಮಾನದ ವಚನಕಾರರಲ್ಲಿ ಸಮರ್ಥವಾಗಿ ಪ್ರಯೋಗವಾಗಿದ್ದು ಕಂಡು ಬರುತ್ತದೆ. ಈ ಹಂತದಲ್ಲಿ ಕನ್ನಡ ಸಾಹಿತ್ಯ ತನ್ನ ಬಿಗಿಯಾದ ಮಾರ್ಗದ ಹಾದಿಯಿಂದ ಕವಲೊಡೆದು ನಡುಗನ್ನಡದ ದೇಸೀ ರೂಪವನ್ನು ತಾಳಿತು. ಇದು ಸಾಹಿತ್ಯ ಭಾಷೆಗಳ ದೃಷ್ಟಿಯಿಂದ ಸಂಕ್ರಮಣ ಕಾಲವಾದಂತೆಯೇ ಮತ – ಧರ್ಮಗಳು ಸಮಾಜದ ಎಲ್ಲ ಸ್ತರಗಳವರಿಗೆ ತಲುಪಲು ಹೋರಾಟ ನಡೆದ ಸಂಧಿ ಸಮಯವೂ ಆಗಿವೆ. ವರ್ಣಾಶ್ರಮ ವ್ಯವಸ್ಥೆ, ಸಡಿಲವಾಗಿ, ಜಾತಿಗಳೊಡೆದು. ಅವುಗಳ ಮಧ್ಯೆ ಗೋಡೆ ನಿರ್ಮಾಣವೇರ್ಪಟ್ಟಿತು. ಸಾಮಾಜಿಕ ಕ್ರಾಂತಿಯ ಜತೆ ಸಾಹಿತ್ಯ ಕ್ರಾಂತಿ ವೈಚಾರಿಕ ಕ್ರಾಂತಿಯೂ, ಮತೀಯ ಕ್ರಾಂತಿಯೂ ನಡೆಯಿತು.

ವಚನಕಾರರ ಚಳುವಳಿ, ವಿಶ್ವದಲ್ಲಿ ನಡೆದ ಒಂದು ಸುವ್ಯವಸ್ಥಿತ ಜನತಾ ಆಂದೋಲನ. ವಚನಕಾರರ ಈ ಕ್ರಾಂತಿಯ ಬಳಿಕ ವಿಷ್ಣು ಭಕ್ತಿ, ಹರಿಪಾರಮ್ಯ ಮತ್ತು ವೇದೋಪನಿಷತ್ತುಗಳ ಪ್ರಮಾಣದ ಪ್ರತಿಪಾದನೆ ಹಾಗೂ ಸಮರ್ಥನೆಗಾಗಿ ಉದಯಿಸಿದ ಮತ್ತೊಂದು ಜನತಾ ಚಳುವಳಿಯೇ ಹದಿನಾಲ್ಕನೇ ಶತಮಾನದ ಹರಿದಾಸ ಆಂದೋಲನ. ವಿಷ್ಣು ಭಕ್ತಿಯ ಪ್ರತಿಪಾದನೆ, ಪ್ರಚಾರ ಶ್ರೀಮದ್ ರಾಮಾನುಜಾಚಾರ್ಯರಿಂದ (1017–1137) ಈ ಮೊದಲೇ ನಡೆದು ತಮಿಳುನಾಡು, ಹಾಗೂ ಕರ್ನಾಟಕದಲ್ಲಿ ಭಕ್ತಿ ಪಂಥ, ಭಕ್ತಿ ಮಾರ್ಗ ನೆಲೆಗೊಂಡಿತ್ತು. ಹಾಗಾಗಿ ಕರ್ನಾಟಕದಲ್ಲಿ ಹರಿದಾಸರು ನಡೆಸಿದ ಧಾರ್ಮಿಕ ಆಂದೋಲನ ಹರಿಭಕ್ತಿ ಪ್ರಸರಣ ಕಾರ್ಯದ ಮೇಲೆ ತಮಿಳುನಾಡಿನ ವೈಷ್ಣವ ಸಂತರ, ಹಾಗೂ ಕನ್ನಡದ ವಚನಕಾರರ ಪ್ರಭಾವವೂ ಇತ್ತೆಂಬುವುದರಲ್ಲಿ ಸಂದೇಹವಿಲ್ಲ."

ಡಾ.ಎಸ್.ಕೆ. ರಾಮಶೇಷನ್‌ರವರು ಹೇಳಿದಂತೆ ಕರ್ನಾಟದಲ್ಲಿ ಧಾರ್ಮಿಕ ಆಂದೋಲನ ಹರಿಭಕ್ತಿ ಪ್ರಸರಣ ಕಾರ್ಯದ ಮೇಲೆ ತಮಿಳುನಾಡಿನ ವೈಷ್ಣವ ಸಂತರ, ಹಾಗೂ ಕನ್ನಡದ ವಚನಕಾರರ ಪ್ರಭಾವವೂ ಇತ್ತೆನ್ನಬಹುದಾದರೂ ಆಚಾರ್ಯತ್ರಯರ ಪ್ರಭಾವವೂ ಬಹಳ ಮಹತ್ವದ್ದಾಗಿದೆ.



ಶ್ರೀಮದ್ ಶಂಕರಾಚಾರ್ಯರು ಅದ್ವೈತ ಸಿದ್ಧಾಂತವನ್ನು ಪ್ರಚುರಪಡಿಸಿದರು ಆಚಾರ್ಯ ಶಂಕರರ ಉಪಾಸನೆ ಹಾಗೂ ಭಕ್ತಿಪರವಾದಂತಹ ಕೆಲವು ಸೂಕ್ತಿಗಳು ಇಂತಿವೆ:

**ಏಕಮಪಿಹಿ ಬ್ರಹ್ಮ ವಿಭೂತಿಭೇದೈರನೇಕಧೋಪಾಸ್ಯತ ಇತಿ ಸ್ಥಿತಿಃ।** –ಸೂ.ಭಾ.3.3–23

ಬ್ರಹ್ಮವು ಒಂದೇ ಆಗಿದ್ದರೂ ತನ್ನ ವಿಭೂತಿಭೇದದಿಂದ ಅನೇಕ ಪ್ರಕಾರವಾಗಿ (ಬೇರೆ ಬೇರೆ ದೇವತಾ ಸ್ವರೂಪವಾಗಿ) ಉಪಾಸ್ಯವಾಗಿರುತ್ತದೆ– ಎನ್ನುವುದೇ ವಸ್ತು ಸ್ಥಿತಿ.

**ಉಪಾಸನಂ ಚ ಯಥಾ ಶಾಸ್ತ್ರಂ ತುಲ್ಯ ಪ್ರತ್ಯಯ ಸಂತತಿಃ** । – ತೈತ್ತಿರೀಯ ಭಾ. 1–3
ಶಾಸ್ತ್ರೋಕ್ತವಾದ ವಿಧಾನವನ್ನನುಸರಿಸಿದ ಏಕಾಕಾರವಾದ ಜ್ಞಾನಧಾರೆಯು ಉಪಾಸನೆ ಎನಿಸುತ್ತದೆ. (ಧ್ಯಾನವೆಂದರೂ ಇದೇ.)

**ಏವಂ ಭಗವತಃ ಸತ್ಯ ಪ್ರತಿಜ್ಞಾತ್ವಂ ಬುದ್ಧ್ವಾ ಭಗವದ್ಭಕ್ತೇರ ವಶ್ಯಂಭಾವಿ ಮೋಕ್ಷ ಫಲಮವಧಾರ್ಯ ಭಗವಚ್ಛರಣೈಕ ಪರಾಯಣೋ ಭವೇದಿತಿ ವಾಕ್ಯಾರ್ಥಃ** । ಭಗವದ್ಗೀತಾಭಾಷ್ಯ 18–65

ಈ ರೀತಿಯಾಗಿ ಭಗವಂತನು ಸತ್ಯಪ್ರತಿಜ್ಞನೆಂದು ನಿಶ್ಚಯಿಸಿಕೊಂಡು, ಭಗವದ್ಭಕ್ತಿಗೆ ಮೋಕ್ಷವು ಫಲವಾಗಿ ಅವಶ್ಯ ದೊರೆಯುತ್ತದೆಯೆಂದು ತಿಳಿದು, ಭಗವಂತನಿಗೇ ಪೂರ್ತಿಯಾಗಿ ಶರಣು ಹೋಗಬೇಕೆಂದು ಈ ಶ್ಲೋಕದ ತಾತ್ಪರ್ಯ. ಇವಲ್ಲದೆ ಶ್ರೀ ಶಂಕರಾಚಾರ್ಯರೇ ರಚಿಸಿದ ಭಕ್ತಿಭಾವೋದ್ದೀಪಿತ ಸ್ತೋತ್ರಗಳು:

1. **ಕನಕಧಾರಾ ಸ್ತೋತ್ರಮ್**[12]
2. **ಶ್ರೀ ಲಕ್ಷ್ಮೀನರಸಿಂಹ ಕರಾವಲಂಬ ಸ್ತೋತ್ರಮ್**[13]
3. **ಗಣೇಶಪಂಚರತ್ನಮ್**[14]
4. **ಮೋಹ ಮುದ್ಗರಃ**[15]

ಇವು ಶ್ರೀ ಶಂಕರಾಚಾರ್ಯರು ಭಕ್ತಿಗೆ, ಉಪಾಸನೆಗೆ ನೀಡಿದ ಮಹತ್ವಕ್ಕೆ ದ್ಯೋತಕವಾಗಿದೆ.

ಇನ್ನು ಶ್ರೀ ಶಂಕರಾಚಾರ್ಯರು ರಚಿಸಿದ 'ವಿವೇಕ ಚೂಡಾಮಣಿ' ಗ್ರಂಥದಲ್ಲಿ[16] ಬಂದಿರುವ ಭಕ್ತಿಯ ಕುರಿತಾದ ನಿರೂಪಣೆ ಇಂತಿವೆ :

**ಮೋಕ್ಷಕಾರಣ ಸಾಮಾಗ್ರ್ಯಾಂ ಭಕ್ತಿರೇವ ಗರೀಯಸೀ** ।
**ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೇ ॥೩೧॥**

ಮೋಕ್ಷಕ್ಕೆ ಸಹಾಯಕವಾಗಿರುವ ಸಲಕರಣೆಗಳಲ್ಲಿ ಭಕ್ತಿಯೇ ಶ್ರೇಷ್ಠವಾದುದು. ತನ್ನ ನಿಜವಾದ ಆತ್ಮಸ್ವರೂಪದ ಅನುಸಂಧಾನವೇ ಭಕ್ತಿಯೆನಿಸುವುದು.

**ಸ್ವಾತ್ಮ ತತ್ತ್ವಾನುಸಂಧಾನಂ ಭಕ್ತಿರಿತ್ಯಪರೇ ಜಗುಃ** ।

ಕೆಲವರು ತಮ್ಮ ಆತ್ಮನ ನಿಜ ಸ್ವರೂಪದ ಅನುಸಂಧಾನವೇ ಭಕ್ತಿಯೆಂದು ಹೇಳುತ್ತಾರೆ[17].

"ಶ್ರೀಮದ್ ಶಂಕರಾಚಾರ್ಯರು ಅದ್ವೈತ ಸಿದ್ಧಾಂತವನ್ನು ಪ್ರಚುರ ಪಡಿಸಿದರು. ಆದರೆ 'ಭಾವಾದ್ವೈತಂ ಸದಾ ಕುರ್ಯಾತ್ ಕ್ರಿಯಾದ್ವೈತಂ ಕದಾಪಿ ನ'ಎಂಬುವುದೇ ಆಚಾರ್ಯರ ಉಪದೇಶ.

ಅದ್ವೈತವು ಸತ್ಯವೆಂದು ಮಾನಸವಾದ ವಿಶ್ವಾಸವಿರಬೇಕೇ ಹೊರತು ವ್ಯವಹಾರದಲ್ಲಿ ಅದನ್ನೆಂದಿಗೂ ತರಕೂಡದು. ಬೋಧಿಸಲೂಕೂಡದು.

**"ನ ಚ ಉಪದೇಶಾರ್ಹಂ ದ್ವೈತಂ, ಜಾತಮಾತ್ರ ಪ್ರಾಣಿ ಬುದ್ಧಿಗಮ್ಯತ್ವಾತ್"**

(ಬ್ರಹದಾರಣ್ಯಕ ಉಪನಿಷತ್ ಭಾಷ್ಯ, 5-1. ಪೀಠಿಕೆ)ಎಂದು ಆಚಾರ್ಯರು ಹೇಳಿದ್ದಾರೆ. ಸಕಲ ಪ್ರಾಣಿಜಾತವೂ ದ್ವೈತವನ್ನೇ ನಂಬಿ ವ್ಯವಹಾರವನ್ನು ಸಾಗಿಸುತ್ತಿದೆ. ಅದ್ವೈತ ಸ್ಥಿತಿಯಲ್ಲಿ ವ್ಯವಹಾರವೇ ಇರುವುದಿಲ್ಲ. ಬ್ರಹ್ಮಜ್ಞಾನಿಗೆ ಮಾತ್ರ ಅನುಭವಕ್ಕೆ ಬರುವ ಪಾರಮಾರ್ಥಿಕ ಸ್ಥಿತಿ ಅದು. ಆದ್ದರಿಂದಲೇ ಸಾಧಕನಿಗೆ ಕರ್ಮಾನುಷ್ಠಾನ, ಭಕ್ತಿ, ಗುರುಶುಶ್ರೂಷೆ ಮೊದಲಾದವು ವಿಹಿತವಾಗಿವೆ."[18] – ಎನ್ನುತ್ತಾರೆ ವಿದ್ವಾನ್ ಎನ್.ರಂಗನಾಥ ಶರ್ಮಾರವರು.

ಶ್ರೀಶಂಕರಾಚಾರ್ಯರು ಜ್ಞಾನ ಮಾರ್ಗಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದರೂ ಕೂಡ ಅವರು ರಚಿಸಿದಂಥ ದೇವತಾ ಸ್ತುತಿಗಳು, ಅವರು ಅನುಷ್ಠಾನಕ್ಕೆ ತಂದ ಪಂಚಾಯತನ ಉಪಾಸನಾ ಪದ್ಧತಿ, ಅವರು ಸ್ಥಾಪಿಸಿದ ದಕ್ಷಿಣಾಮ್ನಾಯ ಶ್ರೀಶಾರದಾ ಪೀಠ, ಶೃಂಗೇರಿ, ಅವರ ಪ್ರಭಾವಲಯದಲ್ಲಿ ಅರಳಿದ ಪುಣ್ಯಕ್ಷೇತ್ರಗಳು(ಶ್ರೀ ಕ್ಷೇತ್ರಗಳಾದ ಕೊಲ್ಲೂರು, ಹೊರನಾಡು, ಗೋಕರ್ಣ ಇತ್ಯಾದಿ) ಕನ್ನಡನಾಡಿನಲ್ಲಿ ಭಕ್ತಿಪಂಥದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ.

ರಾಮಾನುಜಮತವನ್ನು ವಿಶಿಷ್ಟಾದ್ವೈತವೆನ್ನುವುದು ಪ್ರಸಿದ್ಧವೇ ಆಗಿದೆ. ಇಲ್ಲಿ ಜೀವೇಶ್ವರರಿಗಿರುವ ಅದ್ವೈತವು ವೇದಾಂತದ ನಿರ್ವಿಶೇಷತೆಗಿಂತಲೂ ಕಿಂಚಿದ್ಭಿನ್ನವಾದ ಕಾರಣ ಇದು ವಿಶಿಷ್ಟವೆನಿಸಿದೆ. ಭಕ್ತಿ ಸಿದ್ಧಾಂತದ ಕುರಿತಾದ ಅವರ ನಿಲುವು ಇಂತಿದೆ:

"ಯಾವುದೇ ಕರ್ಮವನ್ನು ಭಗವತ್ಸೇವೆ (ಕೈಂಕರ್ಯ)ಯೆಂಬುದಾಗಿಯೇ ನಡೆಸಬೇಕು. ಜ್ಞಾನವು ಭಕ್ತಿಯಲ್ಲಿಯೇ ಪರ್ಯವಸಿಸುತ್ತದೆ. ಈಶ್ವರನಲ್ಲಿ ಅನನ್ಯವಾದ ಭಕ್ತಿ-ಶ್ರದ್ಧೆಗಳಿಡಬೇಕು. ಇದನ್ನೇ ಅವ್ಯಭಿಚಾರಿಣೀಭಕ್ತಿಯೆನ್ನುವರು. ಈ ನಿಲುವಿನಲ್ಲಿದ್ದು ಸರ್ವಸ್ವವನ್ನೂ ಈಶ್ವರನಲ್ಲಿ ಸಮರ್ಪಣೆ ಮಾಡಿ ಆತನನ್ನೇ ಪರಿಪೂರ್ಣವಾಗಿ ಆಶ್ರಯಿಸುವುದನ್ನು ಪ್ರಪತ್ತಿ ಅಥವಾ ಶರಣಾಗತಿಯೆನ್ನುವರು. ಇದೇ ಮುಕ್ತಿಗೆ ಮಹಾಸಾಧನ."[19]

ಶ್ರೀಮದ್ರಾಮಾನುಜಾಚಾರ್ಯರು ರಚಿಸಿದ 'ವೇದಾರ್ಥ ಸಂಗ್ರಹ'ದಲ್ಲಿ ಪರಮಾತ್ಮಪ್ರಾಪ್ತಿಯ ಉಪಾಯವನ್ನು ಹೇಳುತ್ತಾ '................. **ಪ್ರತ್ಯಕ್ಷತಾಪನ್ನಾನುಧ್ಯಾನರೂಪಭಕ್ತ್ಯೈಕಲಭ್ಯಃ।**' 'ಶಾಸ್ತ್ರಾಚಾರ್ಯರ ಉಪದೇಶದಿಂದುಂಟಾದ ತತ್ವಜ್ಞಾನ, ಶಮದಮಾದಿಗಳು, ವರ್ಣಾಶ್ರಮೋಚಿತಕರ್ಮದಿಂದ ಮಾಡಿದ ಪರಮ ಪುರುಷಾರಾಧನೆ, ತಾನು ತನ್ನದೆಂಬುದನ್ನೂ ಆತ್ಮನಲ್ಲಿಟ್ಟು ಸ್ತುತಿನಮಸ್ಕಾರಾದಿಗಳಿಂದ ಪ್ರೀತನಾದ ಭಗವಂತನ ಪ್ರಸಾದದಿಂದ ಅಜ್ಞಾನವನ್ನೂ ಕಳೆದುಕೊಂಡು ನಿರಂತರವಾಗಿ ಮಾಡುವ ಪ್ರತ್ಯಕ್ಷಾಕಾರತ್ವವನ್ನು ಹೊಂದಿರುವ ಧ್ಯಾನರೂಪ ಭಕ್ತಿಯೇ ಪರಮಾತ್ಮ ಪ್ರಾಪ್ತಿಗೆ ಸಾಧನ'[20]ಎಂಬುದಾಗಿ ಸಪ್ರಮಾಣವಾಗಿ ನಿರೂಪಿಸುತ್ತಾರೆ.

ಆಚಾರ್ಯ ರಾಮಾನುಜರು 'ಪ್ರತಿಮೆ ಎಂದರೆ ಬರಿಯ ಪ್ರತೀಕವಲ್ಲ: ಅದು ಭಗವಂತನದೆ ಒಂದು ಅವತಾರ-ಅರ್ಚಾವತಾರ' ಎಂದು ಸಾರಿದರು.

"ಅರ್ಚನೆ ಭಕ್ತಿಯ ಒಂದು ಮುಖ. ಭಗವಂತನ ನೇರ ಅರ್ಚನೆ ಭಕ್ತನಿಗೆ ಸಾಧ್ಯವಾಗಬೇಕು. ಅದಕ್ಕಾಗಿ 'ಪ್ರತಿಮೆಯಲ್ಲಿ ಅರ್ಚನೆ ಎಂದರೆ ಭಗವಂತನ ಅಚಲವಾದ ಅವತಾರ ರೂಪದ ನೇರ ಅರ್ಚನೆಯೆ ಆಗಿದೆ' ಎಂದು ಅವರು ಸಾಧಕರಲ್ಲಿ ಭರವಸೆ ತುಂಬಿದರು."[21]

ಶ್ರೀಮನ್ಮಧ್ವಾಚಾರ್ಯರು ದ್ವೈತ ಮತವನ್ನು ಪ್ರತಿಪಾದಿಸಿದರು. ಅವರ ಪ್ರಕಾರ ಮುಕ್ತಿಗೆ ಭಕ್ತಿಯೊಂದೇ ಪರಮಸಾಧನ. ಶ್ರವಣ, ಮನನ, ನಿಧಿಧ್ಯಾಸನಗಳ ಜೊತೆಗೆ ತಾರತಮ್ಯ ಪರಿಜ್ಞಾನ, ಪಂಚಭೇದ ಜ್ಞಾನ ಮತ್ತು ಹರಿಸರ್ವೋತ್ತಮ – ವಾಯುಜೀವೋತ್ತಮ ತತ್ತ್ವಗಳ ಅನುಸಂಧಾನ ಅವಶ್ಯ. ಮಧ್ವಪ್ರಣೀತ ವಿಧಾನದಲ್ಲಿ ಶ್ರೀಹರಿಯ ಭಜನೆ, ಸೇವೆ, ಆರಾಧನಾದಿಗಳನ್ನು ನಡೆಸಿದಾಗ ಹರಿ–ಗುರು–ವಾಯುಗಳ ಅನುಗ್ರಹದಿಂದ ಮುಕ್ತಿಗೆ ಅವಕಾಶವಾಗುವುದು.

"ಶ್ರೀ ಮನ್ಮಧ್ವಾಚಾರ್ಯರು ಭಕ್ತಿಯ ಸ್ವರೂಪದ ನಿಷ್ಕರ್ಷೆಯನ್ನು ಹೀಗೆ ವಿವರಿಸಿದರು[22]: **'ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಃ .....'** – ಭಾರತ ತಾತ್ಪರ್ಯ ನಿರ್ಣಯ
(ವಸ್ತುವಿನ ಹಿರಿಮೆಯ ಅರಿವಿನಿಂದ ಪುಟಗೊಂಡು ಎಲ್ಲವನ್ನೂ ಮೀರಿನಿಂತ ಅಚಲವಾದ ಪ್ರೀತಿಯೆ ಭಕ್ತಿ)

ಆಚಾರ್ಯ ಶಂಕರರು ಪ್ರತಿಪಾದಿಸಿದಂತಹ ಅದ್ವೈತ ಸಿದ್ಧಾಂತವು ಶರಣರ ವಚನಗಳಲ್ಲಿ ನೇರವಾಗಿ ಪ್ರತಿಬಿಂಬಿತವಾಗದೇ ಇದ್ದರು ತಾತ್ತ್ವಿಕವಾದ ಪ್ರಭಾವವನ್ನು ಅಲ್ಲಮ ಪ್ರಭುಗಳೇ ಮೊದಲಾದ ವಚನಕಾರರ ಕೃತಿಗಳಲ್ಲಿ ಕಾಣಬಹುದಾಗಿದೆ. ಇನ್ನು ಕನಕದಾಸರು ಪ್ರಾರಂಭದಲ್ಲಿ ರಾಮಾನುಜ ಮತಾನುಯಾಯಿಗಳಾಗಿದ್ದರು ಎನ್ನುವುದಕ್ಕೆ 'ರಾಮಾನುಜರೇ ನಮೋ ನಮೋ' ಮೊದಲಾದ ಅವರ ಕೃತಿಗಳು ಸಾಕ್ಷಿಯಾಗಿವೆ[23]. ಇನ್ನು ನರಹರಿ ತೀರ್ಥರು, ಶ್ರೀ ಪಾದರಾಜರು, ವ್ಯಾಸತೀರ್ಥರು, ಆ ಬಳಿಕ ಅವರ ಶಿಷ್ಯರೆನಿಸಿ ದಾಸಕೂಟದ ಪ್ರಮುಖರೆನಿಸಿದ ಶ್ರೀ ಪುರಂದರದಾಸರು ಹಾಗೂ ಕನಕದಾಸರು, ಸೋದೆ ಮಠದ ವಾದಿರಾಜ ಯತಿಗಳು, ವಿಜಯದಾಸರು, ಜಗನ್ನಾಥದಾಸರು ಈ ಪರಂಪರೆಯಲ್ಲಿ ಬಂದ ಇತರ ದಾಸರೆಲ್ಲಾ ಮಧ್ವಮತಾನುಯಾಯಿಗಳಾಗಿದ್ದರು. ಶ್ರೀಮನ್ನಿಜಗುಣ ಶಿವಯೋಗಿಗಳು, ಚಿದಾನಂದ ಅವಧೂತರು, ಶಿಶುನಾಳ ಷರೀಫರು ಹಾಗೂ ಅದ್ವೈತ ಪರಂಪರೆಯ ಕೆಲವು ಹರಿದಾಸರುಗಳಾದ ಕವಿ ಪರಮದೇವ, ಶ್ರೀ ಶಂಕರ ಭಟ್ಟ ಅಗ್ನಿಹೋತ್ರಿ, ಶ್ರೀ ಕರ್ಕಿ ಕೇಶವದಾಸ ಇವರ ಕೃತಿಗಳಲ್ಲಿ ಅದ್ವೈತ ಸಿದ್ಧಾಂತವೇ ಮೂಲ ಸ್ರೋತವಾಗಿದೆ.

ಕರ್ನಾಟಕದಲ್ಲಿ ಭಕ್ತಿಪಂಥದ ಬೆಳವಣಿಗೆಯ ಕುರಿತು ರಾ.ಸತ್ಯನಾರಾಯಣರವರು ಹೀಗೆ ಹೇಳುತ್ತಾರೆ[17]:

" ಕರ್ನಾಟಕದಲ್ಲಿ ಹನ್ನೆರಡನೇ ಶತಮಾನದಲ್ಲಿ ಅಲ್ಲಮಪ್ರಭು, ಬಸವೇಶ್ವರರು, ಅಕ್ಕಮಹಾದೇವಿ ಹೀಗೆ ಶರಣ ಸಮುದಾಯದ ಸಂತವರೇಣ್ಯರು ತಮ್ಮ ವಚನ ಸಾಹಿತ್ಯದ ಮೂಲಕ, ಸಾಮಾಜಿಕ

ಕ್ರಾಂತಿಯನ್ನೇ ಉಂಟುಮಾಡಿದರು. ಕ್ರಿ. ಶ. ಒಂಭತ್ತನೇ ಶತಮಾನದಲ್ಲಿ ಕರ್ನಾಟಕದಲ್ಲಿ ಅಚಲಾನಂದದಾಸರಿಂದ ಭಾಗವತಧರ್ಮವು[18] ತನ್ನ ಸಹಜ ಸ್ವರೂಪವನ್ನು ತಾಳಿತು. ಹದಿಮೂರನೇ ಶತಮಾನದಲ್ಲಿ ದ್ವೈತಮತ ಸ್ಥಾಪಕರಾದ ಶ್ರೀ ಮನ್ಮಧ್ವಾಚಾರ್ಯರಿಂದ ಭಕ್ತಿ ಪ್ರಚಾರ, ಪ್ರಸಾರ ಹೆಚ್ಚಿನ ವ್ಯಾಪಕತೆಯನ್ನು ಪಡೆದುಕೊಂಡಿತು. ನರಹರಿ ತೀರ್ಥರು, ಶ್ರೀ ಪಾದರಾಜರು, ವ್ಯಾಸತೀರ್ಥರು, ಆ ಬಳಿಕ ಅವರ ಶಿಷ್ಯರೆನಿಸಿ ದಾಸಕೂಟದ ಪ್ರಮುಖರೆನಿಸಿದ ಶ್ರೀ ಪುರಂದರದಾಸರು, ಕನಕದಾಸರು, ಸೋದೆ ಮಠದ ವಾದಿರಾಜ ಯತಿಗಳು, ಇವರಿಂದ ದಾಸಸಾಹಿತ್ಯವು ಬೆಳೆದು, ಭಕ್ತಿ ಸಿದ್ಧಾಂತದ ಬೆಳವಣಿಗೆಗೆ ಉತ್ತಮ ಅಡಿಪಾಯವನ್ನು ಒದಗಿಸಿತು. ಪುರಂದರದಾಸರ ಬಳಿಕ ಅದೇ ಪರಂಪರೆಯಲ್ಲಿ ಬಂದಂತಹ ವಿಜಯದಾಸರು, ಪ್ರಸನ್ನ ವೆಂಕಟದಾಸರು, ಜಗನ್ನಾಥದಾಸರು, ಮೋಹನದಾಸರು, ಗೋಪಾಲದಾಸರು ಹೀಗೆ ಹರಿದಾಸ ಪರಂಪರೆಯು ಮುಂದುವರಿಯುತ್ತಾ ಕರ್ನಾಟಕದಲ್ಲಿ ಭಕ್ತಿಪಂಥದ ಏಳಿಗೆಗೆ ಉತ್ತಮ ದೇಣಿಗೆಯನ್ನು ನೀಡಿರುತ್ತಾರೆ."

ಆಚಾರ್ಯ ರಾಮಾನುಜರ ಅನಂತರ, ಆಚಾರ್ಯಮಧ್ವರಿಗಿಂತ ಮುನ್ನ ಕರ್ನಾಟಕದಲ್ಲಿ ಇನ್ನೊಂದು ಮಹತ್ವದ ಕ್ರಾಂತಿ ನಡೆಯಿತು.

ಅದು ವೈಷ್ಣವ ಪಂಥದ ಭಕ್ತಿಮಾರ್ಗಕ್ಕೆ ಪ್ರತಿಯಾಗಿ ಬೆಳೆದು ಬಂದ ಶೈವ ಪಂಥದ ಭಕ್ತಿಮಾರ್ಗ.

ಈ ಹೊಸ ಚಳುವಳಿಗೆ ಬಸವಣ್ಣನವರೆ ಅಧ್ವರ್ಯುವಾಗಿ ನಿಂತರು. ಅಲ್ಲಮಪ್ರಭು, ಮಹಾದೇವಿಯಕ್ಕ. ದೇವರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಚೆನ್ನಬಸವಣ್ಣ, ಷಣ್ಮುಖಸ್ವಾಮಿ(ಅಖಂಡೇಶ್ವರ), ಮಡಿವಾಳ ಮಾಚಿದೇವ, ಸಕಳೇಶ ಮಾದರಸ, ಸಿದ್ಧರಾಮ ಮುಂತಾದವರು ಮುಂಚೂಣಿಯಲ್ಲಿ ನಿಂತು ಅದನ್ನು ವ್ಯಾಪಕವಾಗಿ ಬೆಳೆಸಿದರು. ವಾಸ್ತವವಾಗಿ ಆಚಾರ್ಯ ರಾಮಾನುಜರೂ ಜಾತ್ಯತೀತವಾದ ಭಕ್ತಿಮಾರ್ಗವನ್ನು ಕಟ್ಟಿದವರೆ. ಆದರೂ ಅವರು ಬ್ರಾಹ್ಮಣರಾಗಿಯೇ ನಿಂತು ಸಮಾನತೆಯ ಸಂದೇಶವನ್ನು ಸಾರಿದರು. ಬದಲಾಗಿ ಬಸವಣ್ಣನವರು ಬ್ರಾಹ್ಮಣನಾಗಿ ಹುಟ್ಟಿಯೂ ಆ ಕಾಲದ ಜಾತಿಪದ್ಧತಿಯನ್ನು ತಿರಸ್ಕರಿಸಿ ಹೊರಬಂದು ಎಲ್ಲರ ಮುಂದೆಯೂ ಶಿವಭಕ್ತಿಯ ಬಾಗಿಲು ತೆರೆದವರು. ಪ್ರಾಯ: ಅದರಿಂದಲೆ ಅವರಿಗೆ ಎಲ್ಲ ವರ್ಗದ ಜನರನ್ನೂ ಹೆಚ್ಚು ವ್ಯಾಪಕವಾಗಿ ಮುಟ್ಟುವುದು ಸಾಧ್ಯವಾಯಿತು.

'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಬ್ರಹ್ಮಾನುಭವದೊಡನೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಅನುಭವವನ್ನೂ ಕಂಡರು ಉಪನಿಷತ್ಕಾರರು. ಅದರಂತೆ '........ಸಾಕಾರ ನಿರಾಕಾರ ಏಕೋದೇವ ನಮ್ಮ ಕೂಡಲಸಂಗಮದೇವ' ಎಂದು ಸಕಲವಾದ ಜಗತ್ತನ್ನು ನಿಷ್ಕಲವಾದ ಲಿಂಗವನ್ನು 'ಏಕೋದೇವ' ಎಂದು ಕಂಡವರು ಶರಣರು. ಶರಣರು ಹೇಳುವ 'ಶಿವ ಜಗನ್ಮಯಸ್ಥಲ', 'ಸರ್ವಂ ಲಿಂಗಮಯಂ ಜಗತ್', 'ದೇವನೊಬ್ಬ, ನಾಮ ಹಲವು', ಮುಂತಾದ ಅನುಭವಗಳೆಲ್ಲ ದೇವನ ಏಕಮೇವ ಸತ್ಯವನ್ನು , ಅದೇ ರೀತಿ ಜಗತ್ತಿನ ದೇವಮಯ ಸತ್ಯವನ್ನು ಸಾರುತ್ತವೆ.

ಏಕಮೇವ ಬ್ರಹ್ಮ ಮತ್ತು ಸರ್ವಂ ಬ್ರಹ್ಮಮಯಂ ಎಂಬ ಸಮನ್ವಯವನ್ನು ಕಂಡುಕೊಂಡರು ಭಕ್ತಿಯ ಮಾರ್ಗದಲ್ಲಿ ನಡೆದ ಶರಣರು.

'ಉಪನಿಷತ್ತುಗಳು ಹಾಗೂ ವಚನ ಸಾಹಿತ್ಯ: ಒಂದು ತೌಲನಿಕ ಸಮೀಕ್ಷೆ' ಎಂಬ ಸಂಶೋಧನಾ ಪ್ರಬಂಧದಲ್ಲಿ ವಿದ್ವಾಂಸರಾದ ಡಾ.ಹೆಚ್.ಎನ್.ಮುರಳೀಧರ್‌ರವರು ವಚನಸಾಹಿತ್ಯದ ಕೆಲವು ಪ್ರಮುಖ ಅಂಶಗಳನ್ನು ಹೀಗೆ ನಿರೂಪಿಸಿದ್ದಾರೆ[24]:

* "ಭಕ್ತಿಯಿಂದ ಐಕ್ಯದೆಡೆಗೆ ಅಥವಾ ದ್ವೈತದಿಂದ ಅದ್ವೈತದೆಡೆಗೆ ಸಾಗುವ ವೀರಶೈವವನ್ನು 'ಭೇದಾಭೇದ' ಅಥವಾ 'ದ್ವೈತಾದ್ವೈತ' ಎಂದು ಕರೆಯಲಾಗಿದೆ.

* ತಾತ್ತ್ವಿಕ ನೆಲೆಯಲ್ಲಿ ವಚನಕಾರರದು ಪ್ರಧಾನವಾಗಿ ಸಮನ್ವಯ ದೃಷ್ಟಿ.

* ಸಂಸಾರದ ನಿಸ್ಸಾರತೆಯುನ್ನು ಬೋಧಿಸುವ ವಚನಕಾರರಿಗೆ ತಮ್ಮ ಸಮಾಜದ ಸಾಮುದಾಯಿಕಸುಧಾರಣೆಯೂ ಮುಖ್ಯವಾಗಿತ್ತೆಂಬುದನ್ನು ಗಮನಿಸಿದರೆ, ಅವರ ವೈರಾಗ್ಯದ ಧೋರಣೆ ಮತ್ತು ಸಮಾಜ ಸುಧಾರಣಾಕಾಂಕ್ಷೆಗಳೆರಡೂ ಸಮಗ್ರವಾದ ಜೀವನಾಸಕ್ತಿಯೊಂದರ ಹಿನ್ನೆಲೆಯಲ್ಲಿ ಪರಸ್ಪರ ಪೂರಕವಾಗಿಯೇ ಕಾರ್ಯನಿರ್ವಹಿಸಿವೆಯೆನ್ನಬೇಕಾಗುತ್ತದೆ.

* ವೈಯಕ್ತಿಕ ಸುಧಾರಣೆಯ ಹಂತದಲ್ಲಿ ವಚನಕಾರರಿಗೆ ವೈರಾಗ್ಯಸಾಧನೆ ಅತ್ಯಂತ ಪ್ರಧಾನವಾದರೆ, ಸಾಮುದಾಯಿಕ ಹಂತದಲ್ಲಿ ಸಮಾಜ ಸುಧಾರಣೆ ಪ್ರಧಾನವಾಗುತ್ತದೆ.

* ತಮ್ಮ ಪರಮಗುರಿಗೆ ಪೂರಕವಾಗಿಯೇ ಲೋಕಜೀವನವನ್ನು ರೂಪಿಸಿಕೊಳ್ಳುವುದು ಅವರಿಗೆ ಆಧ್ಯಾತ್ಮಿಕ ಅನಿವಾರ್ಯತೆಯಾಯಿತು.

* ವೇದಗಳ ಅನಂತರದ ಕಾಲದಲ್ಲಿ ಉಪನಿಷತ್ಕಾರರು, 12ನೆಯ ಶತಮಾನದಲ್ಲಿ ವಚನಕಾರರು ನಿಂತಿದ್ದ ಸ್ಥಾನದಲ್ಲಿಯೇ ನಿಲ್ಲುತ್ತಾರೆ. ಉಪನಿಷತ್ಕಾರರು ವೇದಗಳ ಕರ್ಮಕಾಂಡದ ಮೇಲೆ ಜ್ಞಾನದ ಆಧಿಕ್ಯವನ್ನು ಸ್ಥಾಪಿಸಿ ಸಮಸ್ತ ಭಾರತೀಯ ದಾರ್ಶನಿಕ ಇತಿಹಾಸಕ್ಕೇ ಹೊಸದೊಂದು ರೂಪ ತಂದುಕೊಟ್ಟಿದ್ದು ವಿದಿತ. ಈ ಹಿನ್ನೆಲೆಯಲ್ಲಿ ನೋಡಿದಾಗ ವಚನಕಾರರೂ ಕೂಡ ಐತಿಹಾಸಿಕವಾಗಿ ಉಪನಿಷತ್ಕಾರರ ಮುಂದುವರಿಕೆಯೇ ಆಗುತ್ತಾರೆ."

ಈ ಅಂಶಗಳಿಂದ ಉಪನಿಷತ್ತುಗಳಿಗೂ ವಚನಸಾಹಿತ್ಯಕ್ಕೂ ಬಹಳ ಹತ್ತಿರದ ಸಂಬಂಧವನ್ನು ಗುರುತಿಸಬಹುದಾಗಿದೆ. ವೇದಾಂತ ಪ್ರತಿಪಾದ್ಯವಾದ ತತ್ತ್ವಗಳನ್ನು ಭಕ್ತಿಯ ಸೊಗಡಿನೊಂದಿಗೆ ಸರಳ ಸುಂದರ ಗ್ರಾಮೀಣ ನಿದರ್ಶನಗಳೊಂದಿಗೆ ವಚನಕಾರರು ಸಾಮಾನ್ಯಜನತೆಗೆ ಮುಟ್ಟಿಸುವ ಘನಕಾರ್ಯವನ್ನು ಮಾಡಿದ್ದಾರೆ ಎನ್ನಬಹುದು.

ವಚನಸಾಹಿತ್ಯದಲ್ಲಿ ಅಡಕವಾಗಿರುವ ಸಿದ್ಧಾಂತದ ಕುರಿತಾಗಿ ಚಿಂತಕರಾದ ಡಿ.ಆರ್.ನಾಗರಾಜ್‌ರವರು ಹೀಗೆ ಹೇಳುತ್ತಾರೆ:

" ಸಂಸ್ಕೃತದರ್ಶನ ಪರಂಪರೆಯ ಹಿನ್ನೆಲೆಯಿಂದ ವಿಶ್ಲೇಷಣೆ ಮಾಡಿದರೆ ವೀರಶೈವ ಚಳುವಳಿ ಶಕ್ತಿವಿಶಿಷ್ಟಾದ್ವೈತದ ಅಭಿವ್ಯಕ್ತಿಯಂತೆ ಕಾಣುತ್ತದೆ. ಆದರೆ, ಎಲ್ಲ ವಚನಕಾರರಲ್ಲೂ ಈ ದಾರ್ಶನಿಕ ಪ್ರಸ್ಥಾನದ ಒಪ್ಪಿಗೆ ಇದೆ ಎಂದೇನೂ ಕಾಣುವುದಿಲ್ಲ".[25]

ವಚನಕಾರರ ಭಕ್ತಿಮಾರ್ಗದ ಕುರಿತಾಗಿ ವಿದ್ವಾಂಸರಾದ ಸಂ.ಶಿ.ಭೂಸನೂರಮಠ ಹೀಗೆ ಹೇಳುತ್ತಾರೆ:

"ಶಿವಮಾರ್ಗ ಒಂದು ಮಹಾಮಾರ್ಗ, ಒಂದು ಭಕ್ತಿಯ ಶಿವಾದ್ವೈತ ಮಾರ್ಗ. ಈ ಒಂದು ಭಕ್ತಿಯಲ್ಲಿ ಅಡಕವಾಗಿವೆ ಜ್ಞಾನ ಯೋಗ ಕರ್ಮಗಳು_ತಮ್ಮ ಪೂರ್ವಾಶ್ರಯವನ್ನು ಬಿಟ್ಟು, ಇಲ್ಲಿಯ ಜ್ಞಾನ ನಿರ್ಮಾಯವಾದ ಶಿವಾದ್ವೈತಜ್ಞಾನ, ಯೋಗ ಶಿವಯೋಗ, ಕರ್ಮ ಶಿವಾದ್ವೈತ ಪೂಜಾ ಕ್ರಿಯೆ. ತನ್ನ ತಾ ನೋಡುವುದು ಜ್ಞಾನ, ತನ್ನ ತಾ ಕೂಡುವುದು ಯೋಗ, ತನ್ನ ತಾ ಮಾಡುವುದು ಕ್ರಿಯೆ. ಈ ನೋಟ ಕೂಟ ಮಾಟಕ್ಕೆ ಪ್ರಾಣ ಜೀವಾಳ ಪ್ರೇಮ ಆನಂದ ಭಕ್ತಿ, ಶಿವಾದ್ವೈತ ಭಕ್ತಿ....."[26]

ಕರ್ನಾಟಕದ ಹರಿದಾಸ ಪಂಥವನ್ನು ಹುಟ್ಟು ಹಾಕಿ ಬೆಳೆಸಿದವರು ವ್ಯಾಸತೀರ್ಥರು. ಪಂಡಿತರ ಉಡದ ಹಿಡಿಯಲ್ಲಿದ್ದ ಆಧ್ಯಾತ್ಮಕ್ಕೆ ಕನ್ನಡದ ಕಸ್ತೂರಿಯ ಕಂಪು ಬಳಿದವರು ವ್ಯಾಸತೀರ್ಥರು. ತಾನು ಕನ್ನಡದಲ್ಲಿ ಹಾಡುಗಳನ್ನು ಕಟ್ಟಿ ಹಾಡಿದವರು, ಇತರರಿಂದ ಕಟ್ಟಿಸಿ ಹಾಡಿಸಿದವರು ವ್ಯಾಸತೀರ್ಥರು, ಪುರಂದರದಾಸರ ಹಾಡುಗಳನ್ನು 'ಪುರಂದರೋಪನಿಷತ್ತು' ಎಂದು ಕರೆದು ಗೌರವಿಸಿ ಕನ್ನಡವನ್ನು ದೇವ ಭಾಷೆಯ ಹಸೆಯಲ್ಲಿ ಕೂಡಿಸಿದವರು, ಕೂಡಿಸಿ ಎತ್ತರಕ್ಕೇರಿಸಿದವರು ವ್ಯಾಸತೀರ್ಥರು.

ಹದಿನೈದರಿಂದ ಹದಿನೇಳನೆಯ ಶತಮಾನದ ತನಕ ಮೂರು ಶತಮಾನಗಳು ಭಕ್ತಿ ಪಂಥದ ಶುಭೋದಯದ ಪರ್ವಕಾಲ. ಕರ್ನಾಟಕದಲ್ಲಷ್ಟೇ ಅಲ್ಲ; ಸುಮಾರಾಗಿ ಇದೇ ಅವಧಿಯಲ್ಲಿ ದೇಶದ ಉದ್ದಗಲಕ್ಕೆ ಹತ್ತಾರು ಸಂತರು ಹುಟ್ಟಿ ಬಂದರು. ವಿಷ್ಣು ಭಕ್ತಿಯ ತುತ್ತೂರಿ ದಿಗ್ ದಿಗಂತಗಳಲ್ಲಿ ಅನುರಣಿಸಿತು.

ಆಚಾರ್ಯ ಮಧ್ವರು ಹುಟ್ಟು ಹಾಕಿದ ದಾಸ ಪರಂಪರೆಯಲ್ಲಿ ಮೊದಲ ಹೆಸರು ನರಹರಿ ತೀರ್ಥರದ್ದೇ. ಇವರು ಮೂಲತಃ ಆಂಧ್ರದವರು ಎಂದು ಒಂದು ಮಾತುಂಟು. ಆದರೆ ಅವರು ಕಳಿಂಗದ ಮಂತ್ರಿಯಾಗಿದ್ದವರು. ಹನ್ನೆರಡು ವರ್ಷಗಳ ಕಾಲ ಕಳಿಂಗ ದೇಶವನ್ನಾಳಿದವರು.

ಅಚಾರ್ಯ ಮಧ್ವರಿಂದ ಪ್ರಭಾವಿತರಾಗಿ ಅವರಿಂದ ಸನ್ಯಾಸ ದೀಕ್ಷೆ ಪಡೆದವರು. ಹದಿಮೂರನೆಯ ಶತಕದ ಅಂತ್ಯದಲ್ಲಿದ್ದ ಇವರು ಮೊದಲು ಉಡುಪಿಯ ಅಷ್ಟಮಠಗಳಲ್ಲೊಂದಾದ ಈಗಿನ ಅದಮಾರು ಮಠದ ಮೊದಲ ಯತಿಗಳಾಗಿದ್ದು ಅನಂತರ ಪದ್ಮನಾಭ ತೀರ್ಥರ ಸಂಸ್ಥಾನದ ಉತ್ತರಾಧಿಕಾರಿಗಳಾದವರು. ನರಹರಿತೀರ್ಥರೇ ಅದಮಾರು ಮಠದ ಮೂಲಯತಿಗಳು ಹೊರತು ಈಗ ತಿಳಿದಿರುವಂತೆ ನರಸಿಂಹತೀರ್ಥರಲ್ಲ. ಕನ್ನಡದ ಕೀರ್ತನೆಗಳನ್ನು ರಚಿಸಿದವರಲ್ಲಿ ಇವರೆ ಮೊದಲಿಗರು.

ಕೆಲವರ ಪ್ರಕಾರ ಅಚಲಾನಂದ ದಾಸರು ಇವರಿಗೂ ಮೊದಲಿನವರು[27]

ಅಲ್ಲಿಂದ ಮುಂದಿನ ಮಜಲು ಒಂದು ಶತಮಾನದ ಅಂತರದ ಬಳಿಕ, ಹದಿನೈದನೆಯ ಶತಕದಲ್ಲಿದ್ದ ಶ್ರೀ ಪಾದರಾಜರಿಂದ ಪ್ರಾರಂಭವಾಗುತ್ತದೆ. ಮುಳುಬಾಗಿಲಿನ ಈ ಯತಿ ವ್ಯಾಸತೀರ್ಥರ ವಿದ್ಯಾಗುರುಗಳು. ಇವರು ತನ್ನ ಹಾಡುಗಳಲ್ಲಿ 'ರಂಗವಿಟ್ಠಲ' ಎಂಬ ಅಂಕಿತವನ್ನು ಬಳಸಿದ್ದಾರೆ. ಅಂಕಿತದಲ್ಲಿ 'ವಿಟ್ಠಲ' ಪದವನ್ನು ಮೊದಲು ಬಳಸಿದವರು

ಇವರೆ. ಅನಂತರ ಹೆಚ್ಚಿನ ದಾಸರು ಈ ಪದ್ಧತಿಯನ್ನು ಮುಂದುವರಿಸಿದರು: ಪುರಂದರ ವಿಟ್ಠಲ, ವಿಜಯವಿಟ್ಠಲ, ಗೋಪಾಲ ವಿಟ್ಠಲ, ಜಗನಾಥ ವಿಟ್ಠಲ – ಇತ್ಯಾದಿ. ಮಠಗಳಲ್ಲಿ ಪೂಜಾಕಾಲದಲ್ಲಿ ವೇದಮಂತ್ರಗಳ ಜತೆಗೆ ಕನ್ನಡದ ಹಾಡುಗಳನ್ನು ಹಾಡುವ ಸಂಪ್ರದಾಯವನ್ನು ತೊಡಗಿದವರೂ ಇವರೆ ಎನ್ನುತ್ತಾರೆ.

ದಾಸ ಪಂಥದ ಸ್ವರ್ಣಯುಗ ಪ್ರಾರಂಭವಾದದ್ದು ವ್ಯಾಸತೀರ್ಥರಿಂದ. ಹದಿನಾರನೆಯ ಶತಕದಲ್ಲಿ ವಿಜಯನಗರದ ಕೃಷ್ಣದೇವರಾಯಯ ಆಡಳಿತದ ವೈಭವದ ದಿನಗಳಲ್ಲಿ ಇವರು ರಾಜಗುರುಗಳಾಗಿದ್ದವರು. ಅದಕೆಂದೆ ಇವರು ಜನರ ಬಾಯಲ್ಲಿ ವ್ಯಾಸರಾಜರಾದರು; ವ್ಯಾಸರಾಯರಾದರು. ಇವರಿಗೆ ಶಾಸ್ತ್ರ, ಸಾಹಿತ್ಯ ಮತ್ತು ಸಂಗೀತದಲ್ಲಿ ಅನನ್ಯವಾದ ಪ್ರಭುತ್ವವಿತ್ತು. ಇವರು ಅನೇಕ ಹಾಡುಗಬ್ಬಗಳನ್ನು ರಚಿಸಿದರು. ತಾನೆ ಮುಂಚೂಣಿಯಲ್ಲಿ ನಿಂತು ದಾಸಕೂಟವನ್ನೆ ಹುಟ್ಟು ಹಾಕಿದರು. ಇದರಿಂದ

ಪ್ರಭಾವಿತರಾದ ಪುರಂದರದಾಸರು ಮತ್ತು ಕನಕದಾಸರು ಈ ಪರಂಪರೆಯನ್ನು ಉತ್ತುಂಗ ಶಿಖರಕ್ಕೇರಿಸಿದರು. ಅಲ್ಲಿಯ ತನಕ ಪಂಡಿತ ಮಂಡಲಿಯಲ್ಲಿ ಸಂಸ್ಕೃತ ಮಾತ್ರವೆ ಮಡಿಯ ಭಾಷೆಯಾಗಿತ್ತು. ದೇವರ ಜತೆಗೆ ಸಂವಹನ ಸಂಸ್ಕೃತದಿಂದ ಮಾತ್ರವೆ ಸಾಧ್ಯ ಎಂದು ಅವರು ನಂಬಿದ್ದರು. ಮಡಿವಂತರ ಈ ಮಡಿಯ ಗೀಳು ಬಿಡಿಸಿದವರು ದಾಸಕೂಟದವರು. ಅದರಲ್ಲು ವಿಶೆಷತ: ವ್ಯಾಸಕೂಟದ ಪ್ರವರ್ತಕರಾದ ಮೂವರು ಯತಿ ಪುಂಗವರು– ನರಹರಿ ತೀರ್ಥರು, ಶ್ರೀಪಾದರಾಜರು, ವ್ಯಾಸತೀರ್ಥರು– ಎನ್ನುವುದು ತುಂಬ ರೋಚಕವಾದ ಸಂಗತಿ!

ಈ ಮುನಿತ್ರಯರೆ ಮೊದಲ ಬಾರಿ ಕನ್ನಡಕ್ಕೆ ಪೂಜೆಯ ಕೋಣೆಯಲ್ಲಿ ಮಣೆ ಹಾಕಿದವರು. ಇದನ್ನೆ ಮುಂದೆ ವಾದಿರಾಜರು ಉಡುಪಿಯ ಪರಿಸರದಲ್ಲಿ ವ್ಯಾಪಕವಾಗಿ ಬಳಕೆಗೆ ತಂದರು. ಅವರು ದೇವರ ಮುಂದೆ ಕನ್ನಡದಲ್ಲಿ ಪದ ಕಟ್ಟಿ ಹಾಡಿದರು; ಹಾಡಿಸಿದರು. ಕುಣಿದರು; ಕುಣಿಸಿದರು. ಇದನ್ನು ಪುರಂದರದಾಸರು ಜನ ಸಾಮಾನ್ಯರ ಮನೆಯಂಗಳದಲ್ಲಿ ತಂದು ಬಿತ್ತಿದರು. ಕನ್ನಡ ನಾಡಿನ ದಿಸೆ ದಿಸೆಯಲ್ಲಿ ಹರಿನಾಮದ ಕಂಪು ಬೀರಿದರು. ವ್ಯಾಸತೀರ್ಥರು ಬೆಳೆಸಿದ ಈ ಅನುಭಾವ ಕ್ಷೇತ್ರವನ್ನು ಕರ್ನಾಟಕದ ಕರಾವಳಿಯ ಗುಂಟ ಪಸರಿಸಿದವರು ವಾದಿರಾಜರು.

ನೂರ ಇಪ್ಪತ್ತು ವರ್ಷಗಳ ಕಾಲ (ಕ್ರಿ. ಶ. 1480–1600) ಬದುಕಿದ್ದ ಇವರು ಕರ್ನಾಟಕದ ರಾಜಕೀಯ ಸಾಮಾಜಿಕ ರಂಗಗಳಲ್ಲಿ ಹತ್ತು ಹಲವು ಏರು ಪೇರುಗಳನ್ನು ಕಂಡವರು. ಅವರ ಅನುಭವ ಅಪಾರ. ಅವರ ವ್ಯಕ್ತಿತ್ವ ವಿಶ್ವತೋಮುಖ.

ಕರ್ನಾಟಕ ದಾಸಕೂಟದ ಶಿಖರಾವಸ್ಥೆಯ ಕೆಲವು ಮುಖಗಳನ್ನು ಕಂಡದ್ದಾಯಿತು. ಮುಂದೆ ಹದಿನೇಳು– ಹದಿನಂಟನೆಯ ಶತಮಾನಗಳಲ್ಲು ಇದು ಸಾಕಷ್ಟು ಶಕ್ತಿಶಾಲಿಯಾಗಿಯೆ ಮುಂದುವರಿಯಿತು.

ಅ ಕಾಲ ಘಟ್ಟದಲ್ಲಿ ಬಂದ ಕೆಲವು ಪ್ರಮುಖ ವ್ಯಕ್ತಿಗಳನ್ನು ಹೀಗೆ ಸಂಗ್ರಹಿಸಬಹುದು.

ಚೀಕಲಪರವಿಯ ವಿಜಯದಾಸರು ಮತ್ತು ಅವರ ಸಮಕಾಲೀನರಾಗಿದ್ದ, ಬಾಗಲಕೋಟೆಯ ಸಮೀಪದ ಪ್ರಸನ್ನ ವೆಂಕಟದಾಸರು ಹದಿನೇಳನೆಯ ಶತಕದ

ಪ್ರಮುಖ ದಾಸರು. ಇದೇ ಸಮಯದಲ್ಲಿದ್ದ ರಾಣೇಬೆನ್ನೂರಿನ ಹೆಳವನಕಟ್ಟೆ ಗಿರಿಯಮ್ಮ ದಾಸಕೂಟದಲ್ಲಿ ಕೇಳಿಬರುವ ಮೊದಲ ಮಹಿಳೆ. ವಿಜಯದಾಸರ ಶಿಷ್ಯ ಗೋಪಾಲದಾಸರು; ಗೋಪಾಲದಾಸರ ಶಿಷ್ಯ ಜಗನ್ನಾಥದಾಸರು; ಜಗನ್ನಾಥದಾಸರ ಶಿಷ್ಯ ಪ್ರಾಣೇಶ ದಾಸರು ಹೀಗೆ ಈ ಪರಂಪರೆ ಮುಂದುವರಿಯುತ್ತದೆ. ಮಾನ್ವಿಯ ಜಗನ್ನಾಥ ದಾಸರದ್ದು ಈ ಪರಪಂರೆಯಲ್ಲಿ ವಿಲಕ್ಷಣವಾದ ವ್ಯಕ್ತಿತ್ವ ಇವರ ಹರಿಕಥಾಮೃತಸಾರ ದಾಸಕೂಟದ ಸಾಟಿ ಇಲ್ಲದ ಕೊಡುಗೆ. ಆಚಾರ್ಯ ಮಧ್ವರ ಆಧ್ಯಾತ್ಮ ತತ್ವಗಳ ವಿಶ್ವಕೋಶ.

ಇದು ಕರ್ನಾಟಕದಲ್ಲಿ ಆಚಾರ್ಯ ತ್ರಯರು, ಶಿವಶರಣರು ಮತ್ತು ಹರಿದಾಸರ ಮೂಲಕ ಬೆಳೆದು ಬಂದ ಭಕ್ತಿಮಾರ್ಗದ ಪಕ್ಷಿನೋಟ.

ದಾಸಕೂಟದ ಪ್ರವರ್ತಕರಾದ ವ್ಯಾಸರಾಯಸ್ವಾಮಿಗಳು ದಾಸಸಾಹಿತ್ಯದ ಮಧ್ವಸಿದ್ಧಾಂತದ ಪ್ರಮೇಯಗಳನ್ನು ಸಂಗ್ರಹಿಸಿ 'ಪ್ರಮೇಯ ರತ್ನಾವಳಿ'ಯಲ್ಲಿ ಪ್ರಸಿದ್ಧವಾದ ಒಂದು ಶ್ಲೋಕದಲ್ಲಿ ಹೀಗೆ ನಿರೂಪಿಸಿದ್ದಾರೆ[28]:

**ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ**
**ಭೇದಾ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ।**
**ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ**
**ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ॥**

'ಮಧ್ವಾಚಾರ್ಯರು ಪ್ರತಿಪಾದಿಸಿದ ತತ್ತ್ವವಾದದಲ್ಲಿ ಹರಿಯು(ಪರಮಾತ್ಮ, ಪರಬ್ರಹ್ಮ, ನಾರಾಯಣ) ಸ್ವತಂತ್ರ, ಸರ್ವೋತ್ತಮ, ಸರ್ವನಿಯಾಮಕ, ಸರ್ವಾತ್ಮಕ; ಏಕಮೇವ, ಅದ್ವಿತೀಯ. ಜೀವರು ಅಸಂಖ್ಯಾತರು, ಅವರು ಹರಿಗೆ ಪರಾಧೀನರೇ; ಅವರಲ್ಲಿ ಅವರವರ ಸ್ವರೂಪ, ಯೋಗ್ಯತೆಗಳನ್ನನುಸರಿಸಿ, ತರತಮಭಾವವಿದೆ. ಎಲ್ಲ ಜೀವರೂ ಉತ್ತಮ, ಮಧ್ಯಮ, ಅಧಮ ಎಂಬ ಮೂರು ವರ್ಗಕ್ಕೆ ಸೇರಿದವರು; ಈ ವಿಭಾಗ ಸಾತ್ತ್ವಿಕ, ರಾಜಸ, ತಾಮಸ ಗುಣಗಳನ್ನು ಅವಲಂಬಿಸಿದ್ದು; ಜಾತಿ, ಕುಲ, ಮತ, ಧನ ಮೊದಲಾದುವನ್ನಲ್ಲ. ಜಡ–ಜೀವರುಗಳಿಂದ ಕೂಡಿರುವ ಜಗತ್ತು ಪ್ರವಾಹಸತ್ಯವಾದುದು; ಆದರೆ ಪರಮಾತ್ಮನಂತೆ ಸ್ವತಂತ್ರವಾದ ಸತ್ಯವಲ್ಲ. ಪರಮಾತ್ಮನಿಂದಲೆ ಅದರ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ. ಜೀವನಂತೆ ಜಗತ್ತೂ ಅಸ್ವತಂತ್ರ ತತ್ತ್ವ. ಜೀವನು ತನ್ನ ಮೂಲರೂಪವನ್ನು(ಸತ್, ಚಿತ್, ಆನಂದ) ಮುಚ್ಚುವ ಅಜ್ಞಾನವನ್ನು ಕಳೆದುಕೊಂಡು, ತನ್ನ ದಿಟವಾದ ರೂಪವನ್ನು ಮರಳಿ ಪಡೆದುಕೊಳ್ಳುವುದು ಮುಕ್ತಿ. ಇದಕ್ಕೆ ಸಾಧನ 'ಅಮಲಭಕ್ತಿ', ಪ್ರತ್ಯಕ್ಷ ಅನುಮಾನ ಮತ್ತು ಆಗಮ ಎಂಬ ಮೂರು ಪ್ರಮಾಣಗಳು. ಪರಮಾತ್ಮನನ್ನು ಪ್ರತ್ಯಕ್ಷದಿಂದ ಅಥವಾ ಅನುಮಾನದಿಂದ ಸಿದ್ಧಪಡಿಸಲಾಗದು; ಈ ವಿಚಾರದಲ್ಲಿ ಆಗಮ (ಎಂದರೆ ವೇದ, ಶ್ರುತಿ) ಒಂದೇ ಪ್ರಮಾಣ."

ಹರಿದಾಸ ಪರಂಪರೆಯ ಸಂತರಲ್ಲದೆ ಮಂತ್ರಾಲಯದ ಶ್ರೀ ರಾಘವೇಂದ್ರ ಯತಿಗಳು, ಕುಮಾರವ್ಯಾಸನೆಂದೇ ಪ್ರಸಿದ್ಧನಾದ ಭಕ್ತಕವಿ ಗದುಗಿನ ನಾರಣಪ್ಪ, ಅನುಭಾವಿಗಳಾದ ಶ್ರೀಮನ್ನಿಜಗುಣ ಶಿವಯೋಗಿಗಳು, ಶ್ರೀ ಚಿದಾನಂದ ಅವಧೂತರು, ಮಹಾಲಿಂಗ ರಂಗಕವಿ, ಸರ್ಪಭೂಷಣ ಶಿವಯೋಗಿಗಳು ಇವರೆಲ್ಲರೂ ಭಕ್ತಿಯ ಮೂಲಕ ಸಮಾಜದಲ್ಲಿ ಸತ್ ಸಂಸ್ಕಾರ ಮೂಡಲು ಕಾರಣೀಭೂತರಾಗಿದ್ದಾರೆ. ಇಂದಿಗೂ ಅದೆಷ್ಟೋ

ಮಂದಿ ಕೀರ್ತನಕಾರರು (ಉದಾಹರಣೆಗೆ ಸಂತ ಭದ್ರಗಿರಿ ಅಚ್ಯುತದಾಸರು) ಕಥಾ ಕೀರ್ತನ ಮಾಧ್ಯಮ, ದಾಸಸಾಹಿತ್ಯ, ಶರಣ ಸಾಹಿತ್ಯದ ಮೂಲಕ ಸಮಾಜದಲ್ಲಿ ಸದಭಿರುಚಿ, ಸಂಸ್ಕೃತಿ ಪ್ರೇಮ, ಸಮರಸತೆಯನ್ನು ಮೂಡಿಸಲು ಪ್ರಯತ್ನಿಸುತ್ತಿದ್ದಾರೆ.ಅದೇ ರೀತಿಯಲ್ಲಿ ಉತ್ತರ ಭಾರತದಲ್ಲಿ, ಬಂಗಾಲ, ಮಹಾರಾಷ್ಟ್ರಗಳಲ್ಲಿಯೂ ಭಕ್ತಕವಿಗಳು ಸಮಾಜದಲ್ಲಿರುವ ಅನಿಷ್ಟಗಳನ್ನು ದೂರ ಮಾಡಿ ಸಮಾಜದ ಅಭ್ಯುದಯಕ್ಕೆ ಕಾರಣೀಭೂತರಾಗಿದ್ದಾರೆ. ಇಂದು ಕೂಡಾ ನಾವು ಒಂದು ರೀತಿಯ ಸಂಕೀರ್ಣ ಪರಿಸ್ಥಿತಿಯನ್ನು ಎದುರಿಸುತ್ತಿದ್ದೇವೆ. ಎಲ್ಲೆಡೆ ಸ್ವಾರ್ಥ, ಭ್ರಷ್ಟಾಚಾರ, ಅನ್ಯಾಯ ಅಕ್ರಮಗಳನ್ನು ಕಾಣುತ್ತಿದ್ದೇವೆ. ಸ್ವಹಿತಾಸಕ್ತಿಯನ್ನೇ ಪರಮಾದರ್ಶವಾಗಿ ಮಾಡಿಕೊಂಡ ನಾಯಕರು, ಅದನ್ನು ಸಾಧಿಸಲು ಯಾವುದೇ ಅಕ್ರಮ ಮಾರ್ಗವನ್ನು ಅನುಸರಿಸಲು ಸಿದ್ಧರಾಗಿದ್ದು, ಅದಕ್ಕಾಗಿ ಸಮಾಜವನ್ನು ಜಾತಿ, ಮತ, ಸಂಪ್ರದಾಯಗಳ ಹೆಸರಿನಲ್ಲಿ ಒಡೆಯುತ್ತಾ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ. ಸಮಾಜಕ್ಕೆ ಧರ್ಮಬೋಧೆಯನ್ನು ನೀಡಿ ನೈತಿಕತೆಯನ್ನು ರೂಢಿಸಬೇಕಾದ ಧಾರ್ಮಿಕ ನಾಯಕರಲ್ಲಿ ಕೂಡಾ ಕೆಲವರು, ದಾರಿ ತಪ್ಪಿ ನಡೆಯುತ್ತಾ ಸಮಾಜಕ್ಕೆ ಮಾರ್ಗದರ್ಶನ ಮಾಡಬಲ್ಲ ನೈತಿಕತೆಯನ್ನು ಕಳಕೊಳ್ಳುತ್ತಿರುವುದನ್ನು ಕಾಣುತ್ತಿದ್ದೇವೆ. ಭಕ್ತಿಯ ಹೆಸರಿನಲ್ಲಿ ಮೂಢನಂಬಿಕೆ, ಜಾತೀಯತೆ, ವೈಷಮ್ಯ, ಹಿಂಸಾಚಾರಗಳು ನಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಒಂದೆಡೆ ನೈಜ ಆಧ್ಯಾತ್ಮಿಕತೆಯನ್ನು ನೆಚ್ಚಿ ನಡೆಯುವವರ ಸಂಖ್ಯೆ ಹೆಚ್ಚಾಗುತ್ತಿದ್ದರೆ, ಮತ್ತೊಂದೆಡೆ ಡಾಂಭಿಕತೆಯನ್ನು ಪೋಷಿಸುವವರ, ಪ್ರಚಾರಪ್ರಿಯರ ಸಂಖ್ಯೆಯೂ ಉಲ್ಬಣಿಸುತ್ತಿದೆ.

ಇಂತಹ ಸನ್ನಿವೇಶದಲ್ಲಿ ಭಕ್ತಿ ಸಿದ್ಧಾಂತದ ತಿರುಳನ್ನು ತಿಳಿದುಕೊಳ್ಳಲು, ಅದನ್ನು ಅನುಷ್ಠಾನಕ್ಕೆ ತಂದು ಸಮಾಜದಲ್ಲಿ ಶಾಂತಿ, ಸಾಮರಸ್ಯ, ಸಹಬಾಳ್ವೆಯನ್ನು ರೂಢಿಸಲು ಸಂತರ ಕೃತಿಗಳ ಅಧ್ಯಯನ ಇಂದಿನ ತುರ್ತು ಅಗತ್ಯವೆನಿಸಿದೆ. ಭಕ್ತಿಯು ನೀರಿನಷ್ಟೇ ಆವಶ್ಯಕವಾದ ಜೀವನ ಸಾಮಾಗ್ರಿಯಾಗಿದೆ ಎಂಬುದನ್ನು ನಾರದೀಯ ಮಹಾಪುರಾಣ(ಭಾಗ1, ಚತುರ್ಥೋಧ್ಯಾಯ, ಶ್ಲೋಕ 4, 5, ಪುಟ 60)ದಲ್ಲಿ ಹೇಳಿದ್ದಾರೆ[29]:

**ಯಥಾ ಸಮಸ್ತ ಲೋಕಾನಾಂ ಜೀವನಂ ಸಲಿಲಂ ಸ್ಮೃತಂ**

**ತಥಾ ಸಮಸ್ತ ಸಿದ್ಧೀನಾಂ ಜೀವನಂ ಭಕ್ತಿರಿಷ್ಯತೇ||೪||**

**ಯಥಾ ಭೂಮಿಂ ಸಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ**

**ತಥಾ ಭಕ್ತಿಂ ಸಮಾಶ್ರಿತ್ಯ ಸರ್ವಕಾರ್ಯಾಣಿ ಸಾಧಯೇತ್||೫||**

ಸಮಸ್ತ ಪ್ರಾಣಿಗಳಿಗೂ ಜೀವಿಸುವುದಕ್ಕೆ ನೀರು ಹೇಗೆ ಮುಖ್ಯ ಸಾಧನವೋ ಅದರಂತೆ ಸಕಲಸಿದ್ಧಿಗಳಿಗೂ ಭಕ್ತಿಯೇ ಮುಖ್ಯ ಸಾಧನವು. ಸಕಲ ಪ್ರಾಣಿಗಳೂ ಹೇಗೆ ಭೂಮಿಯನ್ನು ಆಶ್ರಯಿಸಿಕೊಂಡು ಜೀವಿಸುತ್ತವೆಯೋ ಅದರಂತೆ ಭಕ್ತಿಯನ್ನು ಆಶ್ರಯಿಸಿದರೆ ಸಕಲ ಕಾರ್ಯಗಳೂ ಸಿದ್ಧಿಸುತ್ತವೆ.

## ಟಿಪ್ಪಣಿಗಳು

1. ಹರಿದಾಸ ಆಂದೋಲನ – ಒಂದು ಅಧ್ಯಯನ, ಇದರ ಮುನ್ನುಡಿಯಲ್ಲಿ, ಲೇ: ಡಾ। ಎಸ್.ಕೆ. ರಾಮಶೇಷನ್,1474, ಕೃಷ್ಣಮೂರ್ತಿಪುರಂ, ಮೈಸೂರು – 570004, ಪ್ರ.ಮು: 1991, ಪುಟ vii
2. ಅದೇ, ಪುಟ 4
3. ಭ. ಭಾ., ರಾ.ಸತ್ಯನಾರಾಯಣ ಇವರ ಲೇಖನ 'ಭಾರತದಲ್ಲಿ ಭಕ್ತಿಪಂಥ–ಅದರಲ್ಲಿ ಹರಿದಾಸ ಪಥ', ನಿಧನಂ ಶ್ರೇಯಃ' ಎಂಬುದನ್ನು ಪರಮತಸಹಿಷ್ಣುತೆಯ ಜೀವಾಳವಾಗಿ ಸಾರುತ್ತದೆ. ಆಳ್ವಾರ್ ಸಂತರಲ್ಲಿ[4] ಜಾತಿಲಿಂಗಭೇದವು ಸರ್ವಥಾ ತ್ಯಾಜ್ಯವಾದುದು: ಮಹಿಳಾ ಆಳ್ವಾರರೂ ಹರಿಜನ ಆಳ್ವಾರರೂ ಅವರಲ್ಲಿ ಸಮಾನವಾಗಿ ಪೂಜ್ಯರು.
4. ' ಕ್ರಿ. ಶ.7–9ನೇ ಶತಮಾನಗಳ ನಡುವೆ ಇದ್ದಂತಹ ತಮಿಳುನಾಡಿನ ವೈಷ್ಣವ ಭಕ್ತರೇ ಆಳ್ವಾರರು. 'ಆಳ್ವಾರರು' ಎಂದರೆ ಭಗವದ್ಭಕ್ತಿಯಲ್ಲಿ ಮುಳುಗಿದವರು ಎಂದರ್ಥ. ತಾಯ್ನುಡಿಯಲ್ಲಿ ರಚಿತವಾದ ಇವರ ಭಕ್ತಿಸಾಹಿತ್ಯ 'ನಾಲಾಯಿರ ಪ್ರಬಂಧ'ಗಳೆಂದು ಪ್ರಸಿದ್ಧವಾಗಿವೆ. ಇವರು ಒಟ್ಟು ಹನ್ನೆರಡು ಮಂದಿ. ಏಕದೇವೋಪಾಸನೆ, ದೇವತಾಂತರ ಪರಿತ್ಯಾಗ, ಭಕ್ತಿ–ಪ್ರಪತ್ತಿಗಳ ಪಾರಮ್ಯ, ಭಗವಂತ ಪ್ರೇಮಪೂರಿತನೆಂಬ ಭಾವನೆ, ಅವನು ಜಾತಿ ಕುಲ ಸ್ತ್ರೀಪುರುಷ ಭೇದಗಳಿಲ್ಲದೆ ಎಲ್ಲರಿಗೂ ಒಲಿಯುವನೆಂಬ ನಂಬಿಕೆ – ಈ ಭಾಗವತ ಧರ್ಮದ ಮೂಲತತ್ತ್ವಗಳನ್ನು ಅನುಸರಿಸಿ ಬೋಧಿಸಿದವರು. ಹನ್ನೆರಡು ಮಂದಿ ಆಳ್ವಾರರಲ್ಲಿ ಎಲ್ಲ ಜಾತಿಯವರೂ ಇದ್ದಾರೆ. ಆಂಡಾಳ್ ಅಥವಾ ಗೋದಾದೇವಿಯೆಂಬ ಒಬ್ಬ ಹೆಣ್ಣುಮಗಳೂ ಇದ್ದಾಳೆ.'– ಹರಿದಾಸರ ಭಕ್ತಿಸ್ವರೂಪ, ಡಾ.ಟಿ.ಎನ್.ನಾಗರತ್ನ, ಪ್ರ: ಶ್ರೀ ಸುಶಮೀಂದ್ರ ಸೇವಾ ಪ್ರತಿಷ್ಠಾನ, ನಂಜನಗೂಡು, ದ್ವಿಮು. 2010, ಪುಟ 406, 407
5. 'ತಮಿಳುನಾಡಿನಲ್ಲಿ ಶೈವಧರ್ಮದ ಪುನರುತ್ಥಾನಕ್ಕೆ ಶ್ರಮಿಸಿದ ನಾಯನ್ಮಾರರು(ಶಿವನ ಭಕ್ತರು) ಕ್ರಿ. ಶ. 5ನೇ ಶತಮಾನದಿಂದ 8ನೇ ಶತಮಾನದವರೆಗೆ ಜೀವಿಸಿದ್ದರು. ಈ ಭಕ್ತರಲ್ಲಿ ಪ್ರಸಿದ್ಧರಾದವರು 63 ಮಂದಿ. ಇವರನ್ನು ಅರುವತ್ತು ಮೂವರು ಪುರಾತನರು ಎಂದು ಕರೆಯುವರು. ಈ ಭಕ್ತರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರುಗಳಿದ್ದರೂ, ವೈವಿಧ್ಯಮಯವಾದ ಕಾಯಕಗಳಲ್ಲಿ ನಿರತರಾಗಿದ್ದರೂ ಶ್ರೀಮಂತ ಹಾಗೂ ಬಡವರಿದ್ದರೂ ಇವರೆಲ್ಲರನ್ನೂ ಒಂದುಗೂಡಿಸಿರುವುದು ಶಿವಭಕ್ತಿ. ನಿಜಗುಣ ಶಿವಯೋಗಿಗಳು ಕನ್ನಡದಲ್ಲಿ ಈ 63 ಮಂದಿ ನಾಯನ್ಮಾರರ ಕುರಿತಾಗಿ ತ್ರಿಪದಿ ರೂಪದಲ್ಲಿ 'ಪುರಾತನರ ತ್ರಿವಿಧಿ' ಎನ್ನುವ ಸ್ತೋತ್ರ ಸಾಹಿತ್ಯವನ್ನು ರಚಿಸಿದ್ದಾರೆ.' – ನಿಜಗುಣರ ಸಮಗ್ರ ಕೃತಿಗಳು, ಭಾಗ–1, ಸಂ: ಡಾ.ಎಸ್. ವಿದ್ಯಾಶಂಕರ್, ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–2, 1995, ಪುಟ xv, xvi
6. ಸ್ವಾಮಿ ವಿವೇಕಾನಂದರ ಕೃತಿ ಶ್ರೇಣಿ, ಸಂಪುಟ 4, ಶ್ರೀರಾಮಕೃಷ್ಣಾಶ್ರಮ, ಮೈಸೂರು –20, ಪುಟ 70
7. 'ವಚನಕಾರರ ಆಂದೋಲನ ವಿಶ್ವ ಆಂದೋಲನದ ಹಿನ್ನೆಲೆಯಲ್ಲಿ' ಈ ಸಂಶೋಧನಾ
8. ಕನ್ನಡ ಸಂಸ್ಕೃತಿ: ನಮ್ಮ ಹೆಮ್ಮೆ, ಡಾ.ಎಂ.ಚಿದಾನಂದಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2006, ಪುಟ 7 ಪ್ರಬಂಧ ಹ.ನಂ.ವಿಜಯಕುಮಾರ್, ಮಾರ್ಗದರ್ಶಕ: ಡಾ।ಎಂ.ಚಿದಾನಂದಮೂರ್ತಿ. ಬೆಂಗಳೂರು ವಿಶ್ವವಿದ್ಯಾಲಯ.

7\. ಹರಿದಾಸ ಆಂದೋಲನ – ಒಂದು ಅಧ್ಯಯನ, ಇದರ ಮುನ್ನುಡಿಯಲ್ಲಿ, ಲೇ: ಡಾ। ಎಸ್.ಕೆ. ರಾಮಶೇಷನ್,1474, ಕೃಷ್ಣಮೂರ್ತಿಪುರಂ, ಮೈಸೂರು – 570004, ಪ್ರ.ಮು: 1991, ಪುಟ 5

10\. ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ.ಮುಗಳಿ, ಪ್ರ:ಗೀತಾ ಬುಕ್ ಹೌಸ್, ಮೈಸೂರು–1, ಹನ್ನೆರಡನೆಯ ಸಂಸ್ಕರಣ 2005, ಪುಟ 265

11. ಹರಿದಾಸ ಆಂದೋಲನ – ಒಂದು ಅಧ್ಯಯನ, ಇದರ ಮುನ್ನುಡಿಯಲ್ಲಿ, ಲೇ: ಡಾ। ಎಸ್.ಕೆ. ರಾಮಶೇಷನ್,1474, ಕೃಷ್ಣಮೂರ್ತಿಪುರಂ, ಮೈಸೂರು – 570004, ಪ್ರ.ಮು: 1991, ಪುಟ 5
12. 'ಶ್ರೀಮಾಧವೀಯ ಶ್ರೀಮಚ್ಛಂಕರ ದಿಗ್ವಿಜಯಃ' – ಶ್ರೀವಿದ್ಯಾರಣ್ಯ ಪ್ರಣೀತಃ– ಭಾಗ 2, (ಪುಟ 292–294)
13. ಅದೇ, (ಪುಟ 296–298)
14 ಅದೇ, (ಪುಟ 299)
15. ಅದೇ, (ಪುಟ 300–304)
16. ಶ್ರೀ ಶಂಕರಭಗವತ್ಪಾದಪ್ರಣೀತ ವಿವೇಕಚೂಡಾಮಣಿ, ಸ್ವಾಮೀ ಆದಿದೇವಾನಂದ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು–570002, 1987, ಪುಟ 17
17. ಅದೇ, ಶ್ಲೋಕ 32, ಪುಟ 17, 18
18. 'ಶ್ರೀ ಮಾಧವೀಯ ಶ್ರೀ ಮಚ್ಛಂಕದ ದಿಗ್ವಿಜಯಃ', ಇದರ ಪ್ರಸ್ತಾವನೆಯಲ್ಲಿ – ಪುಟ XXXV
19. ಷಡ್ದರ್ಶನ ಸಂಗ್ರಹ, ಶತಾವಧಾನಿ ಡಾ.ಆರ್.ಗಣೇಶ್, ಭಾರತೀಯ ವಿದ್ಯಾಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು–560001, 1997, ಪುಟ 121–124
20. ಶ್ರೀ ಭಗವದ್ರಾಮಾನುಜಾಚಾರ್ಯ ವಿರಚಿತ 'ವೇದಾರ್ಥ ಸಂಗ್ರಹ', ಅನುವಾದಕರು: ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳು, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ. ಹೊಳೆನರಸೀಪುರ – 11, 2005, ಪುಟ 115
21. ಭ.ಭಾ. ಪುಟ 12
22. ಭ.ಭಾ. ಪುಟ 119
23. ಕನಕದಾಸರು ರಚಿಸಿದ 'ರಾಮಾನುಜರೆ ನಮೋ ನಮೋ' ಎಂಬ ಕೀರ್ತನೆಯಿಂದ ಅವರು ಪ್ರಾರಂಭದಲ್ಲಿ ರಾಮಾನುಜ ಮತಾವಲಂಬಿಗಳಾಗಿದ್ದರು, ಮಾಧ್ವಮತದತ್ತ ವಾಲಿದ್ದು ತದನಂತರ ಎಂಬುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ – ಕನಕ ಸಾಹಿತ್ಯ ದರ್ಶನ ಸಂಪುಟ– 4, ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು, ಸಂ: ಸುಧಾಕರ್, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, 1999, ಪುಟ 73, ಕೀ.ಸಂ. 15
24. ಬೆಂಗಳೂರು ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ವಿದ್ವಾಂಸರಾದ ಡಾ.ಹೆಚ್.ಎನ್.ಮುರಳೀಧರ್‌ರವರು 1984ರಲ್ಲಿ ಅರ್ಪಿಸಿದ 'ಉಪನಷತ್ತುಗಳು ಹಾಗೂ ವಚನ ಸಾಹಿತ್ಯ: ಒಂದು ತೌಲನಿಕ ಸಮೀಕ್ಷೆ' ಎಂಬ ಸಂಶೋಧನಾ ಪ್ರಬಂಧ.
25. ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ, ಡಿ.ಆರ್.ನಾಗರಾಜ್, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ–577417, ಪುಟ 10
26. ವಚನ ಸಾಹಿತ್ಯ ಸಂಗ್ರಹ, ಸುವರ್ಣ ಸಾಹಿತ್ಯ ಗ್ರಂಥಮಾಲೆ, ಸಂ: ಸಂ.ಶಿ.ಭೂಸನೂರಮಠ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, 2006, ಪುಟ xlviii
27. "ಕ್ರಿ.ಶ. ಒಂಭತ್ತನೇ ಶತಮಾನದಲಲ್ಲಿ ಕರ್ನಾಟಕದಲ್ಲಿ ಅತ್ಯಂತ ಪ್ರಬಲರಾದ ಅಚಲಾನಂದದಾಸರಿಂದ ಪುನಃ ಅದು(ಭಾಗವತ ಧರ್ಮವು) ತನ್ನ ಸಹಜ ಸ್ವರೂಪವನ್ನು ತಾಳಿತು"– ಬೇಲೂರು ಕೇಶವದಾಸರು, ಶ್ರೀ ಕರ್ನಾಟಕ ಭಕ್ತವಿಜಯ, ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4, ಮೊ.ಮು. 1932, ಎಂಟನೆಯ ಮುದ್ರಣ 2000, ಪುಟ 3

28. ದಾಸಸಾಹಿತ್ಯ ಮತ್ತು ಸಂಸ್ಕೃತಿ, ಪ್ರೊ. ಸಾ.ಕೃ. ರಾಮಚಂದ್ರರಾವ್, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, 2003, ಪುಟ 145, 146

27. ನಾರದೀಯಮಹಾಪುರಾಣ, ಮೂಲ : ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ, ತಂತ್ರಾಂಶ ಆಕರ: ಶ್ರೀ ರಂಗ ಡಿಜಿಟಲ್ ಸಾಫ್ಟ್‌ವೇರ್ ಟೆಕ್ನಾಲಜೀಸ್, ಭಾಗ1, ಚತುರ್ಥೋಽಧ್ಯಾಯ, ಶ್ಲೋಕ 4, 5, ಪುಟ 60 rgveda%26%20puranas/Granthamala/Puranagalu/html/djvu/naradiya/Volume1/vol1.djvu?djvuopts&zoom=fitpage

13. ಭ.ಭಾ., 'ಕರ್ನಾಟಕದಲ್ಲಿ ಭಕ್ತಿ ಮಾರ್ಗ' ಎನ್ನುವ ಪ್ರಬಂಧ, ಪುಟ 12

## ೩.೩ ಸಂತ ಕವಿಗಳು, ಅವರ ಕೃತಿಗಳು – ಸುಸಂಸ್ಕೃತ ಸಮಾಜದ ನಿರ್ಮಾಣ

ಸುಸಂಸ್ಕೃತ ಜನರಿಂದ ಕೂಡಿದ ಸಮಾಜವೇ ಸುಸಂಸ್ಕೃತ ಸಮಾಜ. ಡಿ.ವಿ.ಜಿಯವರು 'ಸಂಸ್ಕೃತಿ'[1] ಈ ಗ್ರಂಥದಲ್ಲಿ(ಪುಟ 74) ಸುಸಂಸ್ಕೃತನ ಲಕ್ಷಣವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ:

"ಸುಸಂಸ್ಕೃತನ ಲಕ್ಷಣಗಳು ಮೂಲರೂಪದಲ್ಲಿ ಮುಖ್ಯವಾಗಿ ಐದು.

1. ಸ್ವಸ್ಥಾನ ಪರಿಜ್ಞಾನ : ಸುಸಂಸ್ಕೃತನಾದವನು ತನಗೆ ಗೋಚರವಾಗಿರುವ ಪ್ರಪಂಚದಲ್ಲಿ ತನ್ನ ಜಾಗ ಯಾವುದು ಎಂಬುದನ್ನು ಸರ್ವದಾ ಹುಡುಕಿ ಕಂಡುಕೊಳ್ಳುತ್ತಿರುತ್ತಾನೆ(ಪುಟ 75). ನಮ್ಮ ಮತ್ತು ಇತರರ ಅನ್ಯೋನ್ಯ ಪ್ರಾಪ್ಯಗಳ ನಡುವೆ ಆದ ಒಂದು ಒಡಂಬಡಿಕೆಯೇ ನಮಗೆ ದೊರೆಯುವ ಸ್ಥಾನ, ಅದೇನೆಂಬುದನ್ನು ನಾವು ಗ್ರಹಿಸಿ ಅದಕ್ಕೆ ತಕ್ಕಂತೆ– ಎಂದರೆ ಆ ಯೋಗ್ಯತೆಯನ್ನು ಮೀರಿ ಸಾಹಸ ಮಾಡದೆಯೂ, ಅದಕ್ಕಿಂತ ಕೀಳ್ಮಟ್ಟಕ್ಕಿಳಿಯದೆಯೂ ನಡೆದುಕೊಳ್ಳಬೇಕು. ಇದು ಒಂದು ಕಡೆ ನಯವಿನಯ ಸೌಜನ್ಯಾಭ್ಯಾಸ. ಇನ್ನೊಂದು ಕಡೆ ಶಕ್ತಿ ಸಾಮರ್ಥ್ಯ ವಿಕಾಸ (ಪುಟ 77).
2. ಪರೇಂಗಿತ ಪರಿಗ್ರಹಣ: ನಾವು ಮಾಡಿದ ಕೆಲಸ ಇತರರ ಮೇಲೆ ಹೇಗೆ ಪರಿಣಾಮವನ್ನುಂಟುಮಾಡೀತು ಎಂಬುದನ್ನು ಎಡೆಬಿಡದೆ ಚಿಂತಿಸುತ್ತಿರಬೇಕು (ಪುಟ 79).
3. ಸ್ವಾರ್ಥ ನಿಯಮನ : ಈ ಸ್ವಾರ್ಥವೆಂಬ ನಮ್ಮ ಅಂತರಂಗದ ಗೂಢಾಂಶವು ನೂರಾರು ಬಹು ಸೂಕ್ಷ್ಮ ರೂಪಗಳನ್ನು ತಾಳುತ್ತಿರುತ್ತದೆ. ನಮ್ಮ ತಿಳುವಳಿಕೆಯನ್ನು ವಂಚಿಸಿಯೇ ಅದು ಹೊರಕ್ಕೆ ಹೊರಡುತ್ತಿರುತ್ತದೆ. ಧನಧಾನ್ಯಾದಿ ಐಶ್ವರ್ಯಲೋಭನೆ, ಇಷ್ಟ ವಸ್ತುವಿನ ಮೇಲಿನ ಹಂಬಲ, ಅಧಿಕಾರ ಲಾಲಸೆ, ಕೀರ್ತಿಕಾಮನೆ ಇತ್ಯಾದಿ. ಗೂಢವಾಗಿ, ಪ್ರಕಟವಾಗಿ, ನೇರವಾಗಿ, ವ್ಯಕ್ತವಾಗಿ, ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಹೇಗೋ ಈ ಸ್ವಾರ್ಥ ಕೆಲಸ ಮಾಡುತ್ತಿರುತ್ತದೆ. ಇಂತಹ ಸ್ವಾರ್ಥದ ಸಂಪೂರ್ಣ ನಿಗ್ರಹವಲ್ಲ, ನಿಯಮನವಾಗಬೇಕು. ಅದರ ಮಾರ್ಗಗತಿಗಳನ್ನು ಧರ್ಮತತ್ವವು ಗೊತ್ತು ಪಡಿಸುವಂತಾಗಬೇಕು (ಪುಟ 83).
4. ಸಮನ್ವಯ ದೃಷ್ಟಿ : ನಮ್ಮ ವಿಚಾರಕ್ಕೆ ವಿಷಯವಾದ ಪ್ರತಿಯೊಂದು ಪ್ರಶ್ನೆಯಲ್ಲಿ ಭಿನ್ನಾಭಿಪ್ರಾಯಗಳು ಕಾಣಬರುವುದು ಸಹಜ. ಹಾಗೆ ಅಭಿಪ್ರಾಯಭೇದಗಳು ತಲೆದೋರಿದಾಗ ಅವುಗಳ ಕಾರಣದಿಂದ ನಮ್ಮ ಅನ್ಯೋನ್ಯ ಸ್ನೇಹಕ್ಕೂ ಸಮಾಜದ ಐಕ್ಯಮತಕ್ಕೂ ಹಾನಿಬಾರದಂತೆ ವರ್ತಿಸುವುದು (ಪುಟ 85).

5. ಸರಸತೆ : ಎಲ್ಲಾ ಸಂದರ್ಭಗಳಲ್ಲಿಯೂ ಸ್ವಾರಸ್ಯ ಕಣವನ್ನು ಹುಡುಕಿ ತೆಗೆಯುವಪ್ರವೃತ್ತಿ. ನಮ್ಮ ಕಣ್ಣಿಗೆ ಪ್ರತಿದಿನವೂ ಕಾಣಬರುವುದರಲ್ಲೆಲ್ಲಾ ದೋಷಭಾಗವೇ ಹೆಚ್ಚಾಗಿರುತ್ತದೆ."

ಡಿ.ವಿ.ಜಿಯವರು ಹೇಳಿರುವಂತಹ ಸುಸಂಸ್ಕೃತನ ಈ ಲಕ್ಷಣಗಳು ಓರ್ವ ನಿಜ ಭಕ್ತನಲ್ಲಿ ಸಹಜವಾಗಿರುತ್ತದೆ. ಮುಂದಿನ ಅಧ್ಯಾಯದಲ್ಲಿ ನೀಡಲಾಗಿರುವ ಭಕ್ತಿ ಸೂತ್ರಗಳ ಅಧ್ಯಯನದಿಂದ ಇದು ಸ್ಪಷ್ಟವಾಗುವುದು. ಮುಖ್ಯವಾಗಿ ಭಕ್ತನು ಹೆಚ್ಚಾಗಿ ಅಂತರ್ಮುಖಿಯಾಗಿರುವ ಕಾರಣ ಪ್ರೀತಿ, ದಯೆ, ಅನುಕಂಪಗಳು ಅವನಲ್ಲಿ ಸಹಜವಾಗಿರುವ ಕಾರಣ ಆತನು ಸುಸಂಸ್ಕೃತನು ಆಗಿರಲೇ ಬೇಕು. ಡಿ.ವಿ.ಜಿ.ಯವರೇ ಹೇಳುವಂತೆ[2]:

"'ಸಂಸ್ಕೃತಿಯೆಂದರೆ ಆತ್ಮಶಿಕ್ಷಣ; ವಿಶ್ವಪ್ರಯುಕ್ತವಾದ ಆತ್ಮ ಶಿಕ್ಷಣ. ಸಂಸ್ಕೃತಿಯು ಸಂಪೂರ್ಣದಶೆಗೆ ಬಂದಾಗ ಮನುಷ್ಯನು ವಿಶ್ವವಿಶಾಲಜೀವಿಯಾಗುತ್ತಾನೆ. ಆಗ ಕಾಲ, ದೇಶ, ಪರಿಮಿತಿಗಳು ಅವನನ್ನು ಹಿಡಿಯವು" (ಪುಟ 130). ಬಿಷಪ್ ವಿಲ್ಸನ್ ಎಂಬ ಪ್ರಾಜ್ಞನ ಮಾತನ್ನು ಉದ್ಧರಿಸಿ ಅವರು ಸಂಸ್ಕೃತಿಯ ಉದ್ದೇಶ "ಲೋಕದಲ್ಲಿ ವಿವೇಕವೂ ಭಗವದಿಚ್ಛೆಯೂ ಪ್ರಬಲಿಸುವಂತೆ ಮಾಡುವುದು" ಎಂದಿದ್ದಾರೆ (ಪುಟ 17).

ಭಕ್ತನಲ್ಲಿ ನಿತ್ಯಾನಿತ್ಯ ವಸ್ತುಗಳ ಕುರಿತಾದ ವಿವೇಕವು ಸುದೃಢವಾಗಿರುತ್ತದೆ. ಸ್ವಇಚ್ಛೆಯನ್ನು ಭಗವದಿಚ್ಛೆಯಲ್ಲಿ ಒಂದಾಗಿಸುವಂಥವನು ಭಕ್ತನು. ನಾರದ ಭಕ್ತಿ ಸೂತ್ರದಲ್ಲಿ ಹೇಳುವಂತೆ ಅವರು 'ತನ್ಮಯಾಃ ॥೭೦॥'– ತನ್ಮಯರಾಗಿರುತ್ತಾರೆ. ಅಂದರೆ ಅವರ ಮನಸ್ಸು ಭಗವನ್ಮಯವಾಗಿರುತ್ತದೆ. ಈ ಸ್ಥಿತಿಯು ಆತ್ಮ ಶಿಕ್ಷಣದ ಪರಮ ಪ್ರಯೋಜನವಾಗಿರುವುದರಿಂದ, ಭಕ್ತಿ ಸಾಧನೆಯು ಆತ್ಮ ಶಿಕ್ಷಣಕ್ಕೆ ಸರಳವಾದ ಸುಲಭವಾದ ಮಾರ್ಗವೇ ಆಗಿದೆ. ಸ್ವಾಮೀ ವಿವೇಕಾನಂದರು ಬರೆದಿರುವಂತಹ ಒಂದು ಪತ್ರದಲ್ಲಿ ಹೀಗೆ ಹೇಳಿದ್ದಾರೆ[3] :

"ಈಶ್ವರನು ಸರ್ವಜ್ಞಾನಿ....................ನಾವು ಪರಮ ಪುರುಷನ ಕಿಂಕರರು. ಅಲ್ಪ ಮನುಷ್ಯರ ನೀಚ ಚೇಷ್ಟೆಗಳನ್ನು ನಾವು ಗಮನಿಸಲಾಗದು. ಮುಂದೆ ನಡೆ. ಸೌಶೀಲ್ಯವೆಂಬಸೌಧವು ನಿಂತಿರುವುದು ಯುಗಯುಗಗಳ ಪ್ರಯತ್ನದ ಅಸ್ಥಿಭಾರದ ಮೇಲೆ ಎಂಬುದನ್ನು ಮರೆಯಲಾಗದು. ಅಧೈರ್ಯ ಪಡಬೇಡ. ಸತ್ಯದ ಒಂದಕ್ಷರವೂ ಅಳಿಯಲಾರದು. ಯುಗಯುಗಾಂತರಗಳಿಂದ ಅದು ಕಸದಡಿಯಲ್ಲಿರಬಹುದು. ಆದರೆ ಇಂದಲ್ಲ ನಾಳೆ' ಅದು ಪ್ರಕಾಶಕ್ಕೆ ಬರುವುದು. ಸತ್ಯಕ್ಕೆ ನಾಶವಿಲ್ಲ. ಸದ್ಗುಣಕ್ಕೆ ಚ್ಯುತಿಯಿಲ್ಲ. ಪರಿಶುದ್ಧತೆಗೆ ಅಳಿವಿಲ್ಲ. ಶುದ್ಧ ಹೃದಯವುಳ್ಳವನು ಒಬ್ಬನಾದರೆ ಸಾಕು, ಹಿಂಡು ಹಿಂಡಾಗಿ ಜನರು ನಮ್ಮ ಧರ್ಮವನ್ನು ಅವಲಂಬಿಸಬೇಕೆಂಬ ಆಸೆ ನನಗಿಲ್ಲ. ಮಗು ದೃಢವಾಗಿ ನಿಲ್ಲು, ಬೇರೊಬ್ಬರ ಸಹಾಯವನ್ನು ನಿರೀಕ್ಷಿಸಬೇಡ. ಭಗವಂತನ ಶಕ್ತಿ ಎಲ್ಲ ಮಾನವರ ಸಹಾಯಕ್ಕಿಂತಲೂ ಮಹೋತ್ತಮವಾದುದಲ್ಲವೇ? ನಿನ್ನ ಜೀವನ ಪವಿತ್ರವಾಗಲಿ. ಭಗವಂತನಲ್ಲೇ ಭಕ್ತಿಯನ್ನಿಡು. ಅವನನ್ನೇ ಆಶ್ರಯಿಸು. ಹೀಗಿದ್ದರೆ ನೀನು ಸನ್ಮಾರ್ಗದಲ್ಲಿರುವೆ. ನಿನಗೆ ಅಪಜಯವಿಲ್ಲ."

ಎಲ್ಲೋ ಲಕ್ಷಕ್ಕೊಬ್ಬರು ಭಕ್ತಿಸಾಧನೆ ಮಾಡಿದರೆ, ಅದರಿಂದ ಸಮಾಜಕ್ಕೆ ಏನು ಪ್ರಯೋಜನ ಎಂದು ಪ್ರಶ್ನಿಸುವವರಿಗೆ ಸೂಕ್ತ ಉತ್ತರವು ಸ್ವಾಮಿ ವಿವೇಕಾನಂದರ

ಮೇಲಿನ ಸ್ಫೂರ್ತಿದಾಯಕ ವಚನಗಳಲ್ಲಿ ಅಡಕವಾಗಿದೆ. ಭಕ್ತಿ ಸಾಧನೆಗೆ ಅತೀ ಆವಶ್ಯಕವಾದುದು ನೈತಿಕವಾದ ಪರಿಶುದ್ಧತೆ. ಡಿ.ವಿ.ಜಿಯವರು ನಿರೂಪಿಸಿರುವಂತಹ ಸುಸಂಸ್ಕೃತನ ಲಕ್ಷಣಗಳು ಸುರ್ಯೋದಯವಾದಾಗ ಕುಸುಮಗಳು ತನ್ನಿಂತಾನೆ ಅರಳುವಂತೆ ನಿಜಭಕ್ತಿಯು ಭಕ್ತನ ಹೃದಯದಲ್ಲಿ ಉದಯಿಸಿದಾಗ ಮೇಲೆ ಹೇಳಿದ ಎಲ್ಲ ಗುಣಗಣಗಳು ತನ್ನಿಂತಾನೆ ಅರಳುತ್ತವೆ. ಆಗ ಅವನಿಂದಾಗಿ ಸುತ್ತಮುತ್ತಲಿನ ಸಮಾಜವು ಪ್ರಭಾವಿತವಾಗುತ್ತದೆ. ನೈತಿಕತೆಯ ಕಂಪು ಎಲ್ಲೆಡೆ ಹರಡುತ್ತದೆ. ಕಬೀರ್, ನಾನಕ್, ಬಸವೇಶ್ವರರು, ಚೈತನ್ಯ ಮಹಾಪ್ರಭುಗಳು, ಪುರಂದರದಾಸರು, ಕನಕದಾಸರು ಈ ಸಂತಮಹಂತರೆಲ್ಲಾ ಭಕ್ತಿಯ ಶಕ್ತಿಯಿಂದಲೇ ಸಮಾಜವನ್ನು ಕಟ್ಟಿದವರು, ಒಡೆದು ಹೋಳು ಹೋಳಾಗುವುದನ್ನು ತಪ್ಪಿಸಿದವರು. ಅಷ್ಟೇ ಏಕೆ ಮಹಾತ್ಮರಾದಂತಹ ಶ್ರೀ ರಾಮಕೃಷ್ಣ ಪರಮಹಂಸರು (1836–1886), ಸ್ವಾಮಿ ವಿವೇಕಾನಂದರು (1863–1902), ಮಹಾತ್ಮ ಗಾಂಧೀಜಿಯವರು(1869–1948), ಎ.ಸಿ.ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು(1896–1977) ಭಕ್ತಿಯೆಂಬ ಅಂತಃಸ್ಸತ್ವದಿಂದಲೇ ಲೋಕಕ್ಕೆ ಜ್ಞಾನದ ಬೆಳಕನ್ನು ಬೀರಿದವರು. ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ತಮ್ಮ 'ಆತ್ಮಕಥೆ' ಅಥವಾ 'ನನ್ನ ಸತ್ಯಾನ್ವೇಷಣೆ' ಎನ್ನುವ ಗ್ರಂಥದಲ್ಲಿ ಹೇಳುತ್ತಾರೆ[4]:

"ಪರಮಾತ್ಮನ ಸ್ತುತಿ, ಪ್ರಾರ್ಥನೆ, ಉಪಾಸನೆ ಬರಿಯ ಅಂಧವಿಶ್ವಾಸವಲ್ಲ; ಅವು ನಮ್ಮ ಆಹಾರ, ಪಾನೀಯ, ಕುಳಿತಿರುವುದು, ನಡೆದಾಡುವುದು, ಈ ಎಲ್ಲಾ ಕಾರ್ಯಗಳಿಗಿಂತ ಹೆಚ್ಚು ವಾಸ್ತವ. ಅದೇ ಸತ್ಯ; ಉಳಿದವುಗಳೆಲ್ಲ ಅಸತ್ಯ–ಎಂದು ಹೇಳುವುದೂ ಅತಿಶಯೋಕ್ತಿಯಲ್ಲ. ಇಂತಹ ಉಪಾಸನೆಯೂ ಪ್ರಾರ್ಥನೆಯೂ ಬರಿಯ ವಚನವೈಭವವಲ್ಲ. ಅದರ ಮೂಲವೂ ಕಂಠವಲ್ಲ, ಹೃದಯ ಪರಿಶುದ್ಧತೆಯನ್ನು ಸಂಪಾದಿಸಿಕೊಂಡರೆ, ಹೃದಯ ತಂತಿಗಳನ್ನೆಲ್ಲ ಸುಸಂಘಟಿತವಾಗಿ ಇಟ್ಟುಕೊಂಡರೆ, ಆಗ ಹೃದಯದಿಂದ ಹೊರಡುವ ಸ್ವರ ಗಗನಗಾಮಿಯಾಗುವುದು. ಪ್ರಾರ್ಥನೆಗೆ ನಾಲಿಗೆಯ ಆವಶ್ಯಕತೆ ಇಲ್ಲ. ಅದು ಸ್ವಭಾವದಿಂದಲೇ ಅದ್ಭುತ ವಸ್ತು; ಇಂದ್ರಿಯ ವ್ಯಾಪಾರಕ್ಕೆ ಒಳಪಟ್ಟುದಲ್ಲ. ಹೃದಯವನ್ನು ವಿಕಾರರೂಪದ ಕಶ್ಮಲದಿಂದ ಶುದ್ಧಿಗೊಳಿಸಬೇಕಾದರೆ, ಉಪಾಸನೆಯೇ ಜೀವನ ಝರಿ ಎಂಬುದರಲ್ಲಿ ನನಗೆ ಸ್ವಲ್ಪವೂ ಸಂಶಯವಿಲ್ಲ. ಆದರೆ ಇದರೊಡನೆ ಪೂರ್ಣವಾದ ನಮ್ರತೆ ಬೆರೆಯಬೇಕು."

ಯಾರಲ್ಲಿ ಭಗವಂತನ ಕುರಿತಾದ ಭಕ್ತಿಯಿರುತ್ತದೆಯೋ ಅವರು ಸಹಜವಾಗಿ ತಮ್ಮ ತಂದೆ ತಾಯಿ, ಗುರು, ಪತಿ/ಪತ್ನಿ, ಬಂಧು, ಬಳಗ, ಸಮಾಜ, ದೇಶ ಇವುಗಳ್ಲೂ ತನ್ನಿಷ್ಟ ದೇವತೆಯನ್ನು ಪರಿಭಾವಿಸಿಕೊಂಡು ಸೇವಿಸುತ್ತಾರೆ. ಭಗವದ್ಭಕ್ತಿಯೇ ಮಾತೃ ಭಕ್ತಿ, ಪಿತೃ ಭಕ್ತಿ, ಪತಿಭಕ್ತಿ, ರಾಷ್ಟ್ರ ಭಕ್ತಿ ಹೀಗೆ ನಾನಾರೂಪಗಳನ್ನು ತಾಳಬಹುದು. ಅಮೂರ್ತವಾದ ತತ್ತ್ವವನ್ನು ಮೂರ್ತವಾದ ವಸ್ತು ವ್ಯಕ್ತಿಗಳಲ್ಲಿ ಕಂಡು ಪ್ರೀತಿ ಸಮರ್ಪಣಾ ಭಾವವನ್ನು ವ್ಯಕ್ತಪಡಿಸಲು ಸಂಸ್ಕಾರ ವಿಶೇಷವು ಅತೀ ಅಗತ್ಯ. ಆದರೆ ಪುರಾಣ ಇತಿಹಾಸಗಳಲ್ಲಿ ಮಾತ್ರವಲ್ಲದೆ ಇಂದಿಗೂ ಈ ರೀತಿಯ ಭಕ್ತಿ ವಿಶೇಷವನ್ನು ಮೈಗೂಡಿಸಿಕೊಂಡು ತಮ್ಮ ಮನೆ, ಕುಟುಂಬ, ಸಮಾಜವನ್ನು ಸುಸಂಸ್ಕೃತವಾಗಿಸಿಕೊಂಡ ಹಲವರನ್ನು ನಮ್ಮ ಮಧ್ಯೆಯೇ ಕಾಣಬಹುದಾಗಿದೆ. "ಪ್ರಾರ್ಥನೆ, ಉಪಾಸನೆಯ ಮೂಲಕ

ಹೃದಯ ಪರಿಶುದ್ಧತೆಯನ್ನು ಸಂಪಾದಿಸಿಕೊಂಡರೆ, ಹೃದಯ ತಂತಿಗಳನ್ನೆಲ್ಲ ಸುಸಂಘಟಿತವಾಗಿ ಇಟ್ಟುಕೊಂಡರೆ, ಆಗ ಹೃದಯದಿಂದ ಹೊರಡುವ ಸ್ವರ ಗಗನಗಾಮಿಯಾಗುವುದು" ಎನ್ನುವ ಮಹಾತ್ಮಾ ಗಾಂಧೀಜಿಯವರ ಮಾತಿನಂತೆ ಇಂದೂ ಕೂಡಾ ಹೃದಯ ಶುದ್ಧಿಯನ್ನು ಸಾಧಿಸಿಕೊಂಡಂತಹ ನೈಜ ರಾಷ್ಟ್ರಭಕ್ತರ ಮಾತಿಗೆ, ಅವರು ನಡೆಸುವ ಹೋರಾಟಕ್ಕೆ ಜನರು ಈಗಲೂ ಸ್ಪಂದಿಸುತ್ತಾರೆ, ಬೆಂಬಲಿಸುತ್ತಾರೆ. ಭ್ರಷ್ಟಾಚಾರ, ಭಯೋತ್ಪಾದನೆ, ಹಿಂಸೆ, ಜಾತೀಯತೆ, ಅಸಹಿಷ್ಣುತೆ ತುಂಬಿರುವ ಪ್ರಸ್ತುತ ಸಮಾಜದಲ್ಲಿ ಗಾಂಧೀಜಿಯವರು ಹುಟ್ಟಿ ಬಂದರೂ ಪರಿವರ್ತನೆ ಸಾಧ್ಯವಿಲ್ಲ ಎನ್ನುವವರು ಬಹಳಷ್ಟು ಮಂದಿ ಇದ್ದರೂ, ಭಕ್ತಿ ಸಿದ್ಧಾಂತದಲ್ಲಿ ವಿಶ್ವಾಸವಿರಿಸಿ ಭಕ್ತಿಯ ನೆಲೆಗಟ್ಟಿನಲ್ಲಿ ಸಮಾಜದಲ್ಲಿ ಪರಿವರ್ತನೆಯ ಹಣತೆಯನ್ನು ಹಚ್ಚಲು ಯಶಸ್ವಿಯಾಗಿರುವ ಅನೇಕ ನಿದರ್ಶನಗಳನ್ನು ನಾವು ಇಂದಿಗೂ ಗುರುತಿಸಬಹುದು. ಅಂಥವರ ಸಂಖ್ಯೆ ಕಡಿಮೆಯಿರಬಹುದು. ಆದರೆ ಭಗವಂತನನ್ನೇ ಆಶ್ರಯಿಸಿರುವಂಥವರು ಅವರು. ಸ್ವಾಮಿ ವಿವೇಕಾನಂದರು ಅಂದಂತೆ 'ಭಗವಂತನ ಶಕ್ತಿ ಎಲ್ಲಾ ಮಾನವರ ಸಹಾಯಕ್ಕಿಂತಲೂ ಮಹೋತ್ತಮವಾದುದು'. ಹಾಗಾಗಿ ಸುಸಂಸ್ಕೃತ ಸಮಾಜದ ನಿರ್ಮಾಣಕ್ಕಾಗಿ ಅಂಥವರ ಸಂಖ್ಯೆ ಹೆಚ್ಚಾಗುವುದು ಇಂದಿನ ತುರ್ತು ಅಗತ್ಯವಾಗಿದೆ.

ಸುಸಂಸ್ಕೃತ ಸಮಾಜದ ನಿರ್ಮಾಣದಲ್ಲಿ ಸಾಹಿತ್ಯ ಕಲೆಗಳ ಪಾತ್ರವನ್ನು ಯಾರೂ ಅಲ್ಲಗಳೆಯಲಾರರು. ವಿದ್ಯಾಲಂಕಾರ ಪ್ರೊ. ಎಸ್. ಕೆ. ರಾಮಚಂದ್ರರಾವ್ ಇವರು 'ಭಾರತೀಯ ಸಂಸ್ಕೃತಿ ತಿರುಳು ಮತ್ತು ಪರಂಪರೆ' ಎನ್ನುವ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ[5]:

"ಭಾರತದಲ್ಲಿ ಶಿಲ್ಪಕಲೆ, ಚಿತ್ರಕಲೆ, ಸಂಗೀತ, ನೃತ್ಯ ಮತ್ತು ನಾಟಕಗಳನ್ನು ಧಾರ್ಮಿಕ ಚಟುವಟಿಕೆಗಳೆಂದೇ ಪರಿಗಣಿಸಿರುವುದು ಸರ್ವವಿದಿತ. ಅವು ಪ್ರತ್ಯಕ್ಷವಾಗಿಯೊ ಅಥವಾ ಪರೋಕ್ಷವಾಗಿಯೊ ಉಪಾಸನಾ ಕ್ರಿಯೆಗಳಿಗೆ ಸಂಬಂಧಿಸಿವೆ. ಇಡೀ ಮಾನವ ಸಮುದಾಯ ಬದುಕಿರುವ ಸಾಂಸ್ಕೃತಿಕ ಸಂದರ್ಭವನ್ನು ಉಂಟುಮಾಡಿದ ಪ್ರಾಚೀನ ಋಷಿಗಳಿಗೆ ತನ್ನ ಋಣವನ್ನು ಕಲಾವಿದ ತನ್ನ ಸೃಜನಶೀಲತೆಯಿಂದ ತೀರಿಸುತ್ತಾನೆ".

ಒಂದು ವೇಳೆ ತನ್ನ ಸೃಜನಶೀಲತೆಯಿಂದ ಋಣವನ್ನು ತೀರಿಸಿಕೊಳ್ಳುವ ಕಲಾವಿದನು ಭಕ್ತನಾಗಿದ್ದಲ್ಲಿ ಅವನ ಕಲಾಕೃತಿ ಸುಸಂಸ್ಕೃತ ಸಮಾಜವನ್ನು ರೂಪಿಸುವಲ್ಲಿ ಮಹತ್ತರ ಕೊಡುಗೆಯಾಗುವುದರಲ್ಲಿ ಸಂಶಯವಿಲ್ಲ. ಹೀಗೆ ವೈಯಕ್ತಿಕ ಸಾಧನೆಯಾದ ಭಕ್ತಿಯು ಸಮುದಾಯದ ಹಿತವನ್ನು ಸಾಧಿಸುವಲ್ಲಿಯೂ ಮಹತ್ತರ ಪಾತ್ರ ವಹಿಸಬಲ್ಲುದು.

ಸಂತರ ಜೀವನ ಹಾಗೂ ಸಂದೇಶವನ್ನು ಅಧ್ಯಯನ ಮಾಡುವ ಉದ್ದೇಶ ಹಾಗೂ ಅದರಿಂದಾಗುವ ಪ್ರಯೋಜನದ ಕುರಿತಾಗಿ Saints and mystics ಗ್ರಂಥದಲ್ಲಿ ಉಲ್ಲೇಖಿಸಿರುವ ಅಂಶಗಳು ಇಂತಿವೆ[6]:

"We should take up this study for education, inspiration and purification. Why do we need education, inspiration and purification? The ultimate purpose of this study- of all study, in fact- is that I must be "myself", Vedanta says we have forgotten who we really are. Ignorance has veiled our real

nature from us. We have, as it were, become separated from our true selves. This study should become a bridge connecting us to our real inner being. Everyone of us is a potential saint and mystic. This study should unfold this potentiality and let the Child of Light, which everyone of really is, manifest himself."

ಪ್ರತಿಯೋರ್ವ ವ್ಯಕ್ತಿಯು ಹುಟ್ಟುತ್ತಲೇ ಸಂತನೇ ಆಗಿರುತ್ತಾನೆ, ಅಂತಃಸತ್ತ್ವದಿಂದ ಅನುಭಾವಿಯೇ ಆಗಿರುತ್ತಾನೆ. ಅಜ್ಞಾನದಿಂದ ತನ್ನ ಸ್ವರೂಪದ ವಿಸ್ಮೃತಿಯಾಗಿರುವ ವ್ಯಕ್ತಿಗೆ ಮತ್ತೆ ತನ್ನ ನಿಜ ಸ್ವರೂಪದ ದರ್ಶನವನ್ನು ಮಾಡಿಸಲು, ಅವನಲ್ಲಿ ಪರಿಸರ, ಸಂಸ್ಕಾರಗಳಿಂದಾಗಿ ಬೆಳಕಿಗೆ ಬರದೇ ಇರುವ 'ಸಂತ'ತ್ವದ ಪ್ರಾಕಟ್ಯಕ್ಕೆ ಸಹಕಾರಿಯಾದುದು ಸಂತರ ಕೃತಿಗಳ ಅಧ್ಯಯನ. ಇಂದಿನ ವೈಜ್ಞಾನಿಕ ಯುಗದಲ್ಲಿ ಮನುಷ್ಯನಲ್ಲಿ ನೆಮ್ಮದಿ ಶಾಂತಿಯ ಅರಸುವಿಕೆ ಹೆಚ್ಚಾಗಿರುವ ಈ ಕಾಲಘಟ್ಟದಲ್ಲಿ ಸಂತ ವಾಙ್ಮಯದ ಅಧ್ಯಯನ ಮತ್ತು ಅನುಷ್ಠಾನದ ಅಗತ್ಯವು ಬಹುತೇಕ ಮಂದಿಗೆ ಮನವರಿಕೆಯಾಗುತ್ತಿದೆ. ವೈಯಕ್ತಿಕವಾಗಿ ಮಾತ್ರವಲ್ಲದೆ ಸಮಾಜದ ಹಿತದೃಷ್ಟಿಯಿಂದಲೂ ಸಂತರ ಕೃತಿಗಳ ಅಧ್ಯಯನ ಅಗತ್ಯವೆನಿಸಿದೆ. ವಿಶೇಷವಾಗಿ ಭಾರತದಲ್ಲಿ ಈ ದೇಶದ ಮಣ್ಣಿನ ಗುಣಗಳೆನಿಸಿಕೊಂಡ ವೈವಿಧ್ಯತೆಯಲ್ಲಿ ಏಕತೆ, ಸೌಹಾರ್ದತೆ, ಸಾಮರಸ್ಯಗಳನ್ನು ನೂರಾರು ವರ್ಷಗಳಿಂದ ಕಾಯ್ದುಕೊಂಡು ಬರುವಲ್ಲಿ ಸಂತಕವಿಗಳು ನಿರ್ವಹಿಸಿದ ಪಾತ್ರ ಮಹತ್ವದ್ದಾಗಿದೆ ಎನ್ನಬಹುದು.

---

**ಟಿಪ್ಪಣಿಗಳು**

1. 'ಸಂಸ್ಕೃತಿ', ಡಿ.ವಿ.ಜಿ., ಪ್ರ: ಕಾವ್ಯಾಲಯ ಪ್ರಕಾಶಕರು, ಮೈಸೂರು, 1996
ಸುಸಂಸ್ಕೃತನಾದವನು ಹಾಗೆ ಎದ್ದು ಕಾಣುವ ವಿಚಾರಗಳ ನಡುವೆ ಸೊಗಸೆಲ್ಲಿರಬಹುದೆಂದು ಕುತೂಹಲದಿಂದ ಹುಡುಕುತ್ತಾನೆ."
2. 'ಸಂಸ್ಕೃತಿ', ಡಿ.ವಿ.ಜಿ., ಪ್ರ: ಕಾವ್ಯಾಲಯ ಪ್ರಕಾಶಕರು, ಮೈಸೂರು, 1996
3. ಭಕ್ತಿಮಾರ್ಗ, ಸ್ವಾಮಿ ಪರಮಾನಂದ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು 20, ಒಂಬತ್ತನೆಯ ಮುದ್ರಣ : 2000, ಪುಟ 22, 23
4. 'ನನ್ನ ಸತ್ಯಾನ್ವೇಷಣೆ' , ಮೂಲ: ಮೋಹನದಾಸ ಕರಮಚಂದ ಗಾಂಧೀಜಿ, ಭಾಷಾಂತರ : ಗೊರೂರು ರಾಮಸ್ವಾಮಿ ಅಯ್ಯಂಗಾರ್, ನವಜೀವನ ಪ್ರಕಾಶನ ಮಂದಿರ, ಅಹಮದಾಬಾದ್-380014, ಪ್ರಮು 1995, ಪುಟ 75.
5. ಭಾರತೀಯ ಸಂಸ್ಕೃತಿ ತಿರುಳು ಮತ್ತು ಪರಂಪರೆ, ಮೂಲ: The essentials of Indian Culture and Indian Cultural Heritage, ಪ್ರೊ.ಎಸ್.ಕೆ ರಾಮಚಂದ್ರರಾವ್, ಕನ್ನಡಕ್ಕೆ : ಶ್ರೀ ನೀಲತ್ತಹಳ್ಳಿ ಕಸ್ತೂರಿ, 'ಭೋಜಸ್ಮೃತಿ', ವಿ.ಸೀ. ಸಂಪದ, ರಾಜೀವ ನಗರ, ಬನಶಂಕರಿ 3ನೇ ಸ್ಟೇಜ್, ಬೆಂಗಳೂರು-85,ಪ್ರಮು:2008,ಪುಟ13
6. Saints and mystics, Published By Shri Ramakrishna Math, Mylapore, Chennai - 600004, Page - 16

*****

# ಅಧ್ಯಾಯ ೪

# ಕನ್ನಡದ ಸಂತಕವಿಗಳ ಕೃತಿಗಳಲ್ಲಿ ಭಕ್ತಿಸೂತ್ರಗಳ ಪ್ರತಿಪಾದನೆ

## ೪.೧ ಪ್ರತಿಪಾದನೆಯ ಒಳನೋಟ

ಈ ಅಧ್ಯಯನಕ್ಕೆ ದೇವರ್ಷಿ ನಾರದರ ಭಕ್ತಿ ಸೂತ್ರಗಳನ್ನು ಮೂಲ ಆಧಾರ ಗ್ರಂಥವಾಗಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಶಾಂಡಿಲ್ಯ ಭಕ್ತಿ ಸೂತ್ರಗಳನ್ನು ಆನುಷಂಗಿಕವಾಗಿ ಬಳಸಿಕೊಂಡಿರುತ್ತೇನೆ. ಈ ಗ್ರಂಥಗಳ ಕಾಲದ ಕುರಿತಾಗಿ ಈಗಾಗಲೇ ಅಧ್ಯಾಯ ೨.೨, ೨.೩, ೨.೪ ಗಳಲ್ಲಿ ಪ್ರಸ್ತಾಪಿಸಲಾಗಿದೆ. ಈ ಎರಡೂ ಸೂತ್ರ ಗ್ರಂಥಗಳ ರಚನೆಯ ಕಾಲದ ಬಗ್ಗೆ ನಿಖರವಾಗಿ ನಿರ್ಣಯವನ್ನು ಮಾಡಲು ಸಾಧ್ಯವಾಗಿಲ್ಲ. ನಾರದ ಭಕ್ತಿ ಸೂತ್ರಗಳನ್ನು ಬಹುಶಃ 12ನೇ ಶತಮಾನದಲ್ಲಿ ರಚಿಸಿದ್ದಿರಬಹುದು ಎಂಬುದು ಕೆಲವು ಪಂಡಿತರ ಮತ. ಹಾಗೆಯೇ ಶಾಂಡಿಲ್ಯ ಭಕ್ತಿ ಸೂತ್ರಗಳ ರಚನೆಯ ಕಾಲ ಬಹುಷಃ ಒಂಭತ್ತನೇ ಶತಮಾನ ಎನ್ನಲಾಗಿದೆ.

ಕಾಲದ ನೆಲೆಯಲ್ಲಿ ಕನ್ನಡದ ಸಂತ ಕವಿಗಳು ಭಕ್ತಿಸೂತ್ರಗಳನ್ನು ಅಧ್ಯಯನ ಮಾಡಿ ಅದರ ಆಧಾರದಲ್ಲಿ ತಮ್ಮ ಕೃತಿಗಳನ್ನು ರಚಿಸಿದರು ಎನ್ನುವುದಕ್ಕೆ ಯಾವುದೇ ಪುರಾವೆ ಲಭಿಸುವುದಿಲ್ಲ. ಆದರೆ ಭಕ್ತಿ ಸೂತ್ರಗಳ ಕರ್ತರಾದ ನಾರದರೇ ಪುರಂದರದಾಸರಾಗಿ ಜನಿಸಿದರೆಂಬ ಉಲ್ಲೇಖಿಸುವ ಕೆಲವು ದಾಸರ ಕೃತಿಗಳಲ್ಲಿ ಲಭಿಸುತ್ತವೆ.[1] ಇನ್ನು ಸೀತಾರಾಮ ವಿಠಲ ಎನ್ನುವ ದಾಸರು ನಾರದ ಮಹರ್ಷಿಗಳೇ ತನ್ನ ಸೂತ್ರಗಳನ್ನು ಪುರಂದರದಾಸರಾಗಿ ಜನಿಸಿ ಬಂದು ತಾವೇ ಕೀರ್ತನೆಗಳ ರೂಪದಲ್ಲಿ ಪ್ರಚುರ ಪಡಿಸಿದ್ದಾರೆ ಎಂದು ಒಂದು ಸುಳಾದಿಯಲ್ಲಿ ಹೀಗೆ ಉಲ್ಲೇಖಿಸಿದ್ದಾರೆ[2]:

**ಭಕ್ತಿಯ ಸೂತ್ರದ ಕರ್ತೃಗಳಿವರಯ್ಯ, ರಕ್ತಿಯ ಹರಿಗುಣಗಾನದಿ ಮೆರೆಸುವ**
**ಮುಕ್ತಿಯ ಹಾದಿಗೆ ಒಯ್ಯುವ ಬೋಧೆಯ, ಭಕ್ತರ ಕರ್ಣಕೆ ಒತ್ತೊತ್ತಿ ತಾಗಿಸಿ**

..........................................

**ಶಕ್ತ ಸೀತಾರಾಮ ವಿಠಲನ ಪ್ರಿಯ ನಾರದರಯ್ಯ ॥**

ಇನ್ನು ವಿಜಯದಾಸರು 'ಬಂದ ದುರಿತ ವಿನಾಶನಾ' ಎನ್ನುವ ಕೀರ್ತನೆಯಲ್ಲಿ ಪುರಂದರದಾಸರ ಸಂಪೂರ್ಣ ಚರಿತ್ರೆಯನ್ನು ಒಂಭತ್ತು ಚರಣಗಳಲ್ಲಿ ಸ್ತುತಿಸಿದ್ದಾರೆ. ಕೊನೆಯ ಚರಣದಲ್ಲಿ ಹೀಗೆ ಹೇಳಿದ್ದಾರೆ[3] :

**ಏನೊ ಇದು ಎಂದು ದೂಷಿಸದಿರಿ ದಾಸರ**
**ಸೂನು ಪೇಳಿದನು ಗುರು ವ್ಯಾಸಮುನಿಗಳಿಗೆ**
**ಆ ನಾರದರೆ ಪುರಂದರದಾಸರೆಂಬಂಥ ಈ ನುಡಿಯು ಸಿದ್ಧಾಂತದ ।**
**ಧ್ಯಾನದಲಿ ತಿಳಿದು ಸುಜ್ಞಾನಿಗಳ ಪದನಖ**
**ರೇಣಿನವನಾಗಿ ಬಿನ್ನೈಸಿದನು ಜ್ಞಾನಮಯ**
**ಆನಂದ ವಿಜಯವಿಠಲನ ಪಾದಾಂಬುಜ ಕಾಣುವ ಜನರು ಲಾಲಿಸಿ ॥**

ನಿರ್ಣಯಾತ್ಮಕವಾಗಿ ಪುರಂದರದಾಸರು, ಭಗವದಾಜ್ಞೆಯಿಂದ ಅವತರಿಸಿದ ನಾರದ ಮಹರ್ಷಿಗಳು ಎಂದು ನಿರೂಪಿಸುತ್ತಾರೆ ಈ ಕೀರ್ತನೆಯಲ್ಲಿ ವಿಜಯದಾಸರು. ಈ ಉಲ್ಲೇಖಗಳು ಐತಿಹಾಸಿಕ ಆಧಾರಗಳು ಎನ್ನಲಾಗದಿದ್ದರೂ, ಭಾವನಾತ್ಮಕ ನೆಲೆಯಲ್ಲಿ ಇದನ್ನು ಭಕ್ತರು ನಂಬಿದ್ದಾರೆ, ಒಪ್ಪಿದ್ದಾರೆ.

ಈ ಒಂದು ನಂಬಿಕೆ ಕನ್ನಡದ ಸಂತಕವಿಗಳನ್ನು ವಿಶೇಷವಾಗಿ ದಾಸರ ಹಾಗೂ ವಚನಕಾರರ ಕೃತಿಗಳನ್ನು ಮುಖಾಮುಖಿಯಾಗಿಸಲು, ಭಕ್ತಿ ಸೂತ್ರಗಳಲ್ಲಿ ನಿರೂಪಿಸಲ್ಪಟ್ಟ ವಿಚಾರಗಳು ಕನ್ನಡದ ಸಂತ ಕವಿಗಳ ಕೃತಿಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ ಎನ್ನಲು ಪ್ರೇರಣದಾಯಿಯಾಗಿದೆ. ಇಲ್ಲಿ ಕೇವಲ ಪುರಂದರದಾಸರು ಭಕ್ತಿ ಸೂತ್ರಗಳಲ್ಲಿರುವ ತತ್ತ್ವಗಳನ್ನು ತಮ್ಮ ಕೃತಿಗಳಲ್ಲಿ ಪ್ರತಿಪಾದಿಸುತ್ತಿದ್ದಾರೆ ಎನ್ನ ಬಹುದಾದರೂ ದಾಸ ಪರಂಪರೆಯಲ್ಲಿ ಬಂದಿರುವ ಇತರ ದಾಸರ ಕೃತಿಗಳಿಗೂ, ಹಲವಾರು ವಚನಕಾರರ ಕೃತಿಗಳಿಗೂ ಅಥವಾ ಇನ್ನ್ಯಾವುದೇ ಸಂತ ಕವಿಗಳ ಕೃತಿಗಳಿಗೂ ಅನೇಕ ವಿಷಯಗಳಲ್ಲಿ ಸಾಮ್ಯತೆಯಿರುವುದು ಈ ವರೆಗೆ ನಡೆದ ಹಲವಾರು ಭಕ್ತಿ ಸಾಹಿತ್ಯಕ್ಕೆ ಸಂಬಂಧಿಸಿದ ಅಧ್ಯಯನಗಳಲ್ಲಿ ನಿರೂಪಿಸಲ್ಪಟ್ಟಿವೆ. ಆ ರೀತಿಯ ಸಾಮ್ಯತೆ ಕಂಡು ಬಂದಿರುವಂತಹ ಸಂತರ ಕೃತಿಗಳನ್ನು ಈ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

ಎರಡನೆಯದಾಗಿ ನಾರದರಾಗಲೀ, ಶಾಂಡಿಲ್ಯರಾಗಲೀ ಅವರ ಕೃತಿಗಳಿಂದ ನಾವು ಅವರನ್ನು ಗುರುತಿಸುವುದು ಭಕ್ತರಾಗಿ. ಭಕ್ತಿಯೇ ಅವರ ಕೃತಿಗಳ ಮೂಲಸ್ರೋತವಾಗಿದೆ. ನಾನು ಪರಿಗಣಿಸಿರುವಂತಹ ಕನ್ನಡದ ಸಂತ ಕವಿಗಳ

ಕೃತಿಗಳಲ್ಲಿಯೂ ಭಕ್ತಿಯೇ ಆಧಾರ ಶ್ರುತಿಯಾಗಿದೆ. ಆ ನೆಲೆಯಲ್ಲಿ ಭಕ್ತಿ ತತ್ತ್ವದ ಪರಿಧಿಯಲ್ಲಿ ಬರುವಂತಹ ಕನ್ನಡದ ಸಂತ ಕವಿಗಳ ಕೃತಿಗಳನ್ನು ಭಕ್ತಿ ಸೂತ್ರಗಳ ಆಧಾರದಲ್ಲಿ ವಿಶ್ಲೇಷಿಸುವುದು ಈ ಅಧ್ಯಯನದ ಪ್ರಮುಖ ಅಂಶವಾಗಿದೆ. ಆ ರೀತಿಯಲ್ಲಿ ವಿಶ್ಲೇಷಣೆ ಮಾಡಿದಾಗ ಯಾವುದೇ ಮತ ಪಂಥಗಳಿಗೆ ಸೇರಿದ ಸಂತ ಕವಿಗಳ ಅನುಭಾವಿಕ ನೆಲೆಯು ಏಕಸೂತ್ರತೆಯನ್ನು ಹೊಂದಿರುತ್ತದೆ ಎಂಬುವುದನ್ನು ಕನ್ನಡದ ವಿವಿಧ ಸಂತ ಕವಿಗಳ ಕೃತಿಗಳ ಸಹಾಯದಿಂದ ನಿರೂಪಿಸಲಾಗಿದೆ.

ಮೂರನೆಯದಾಗಿ ಸಮಾಜಮುಖಿಯಾದ ಚಿಂತನೆಯ ಹೊಳಹುಗಳು ನಾರದ ಭಕ್ತಿ ಸೂತ್ರಗಳಲ್ಲಿಯೂ ಕನ್ನಡದ ವಿವಿಧ ಸಂತ ಕವಿಗಳ ಕೃತಿಗಳಲ್ಲಿಯೂ ವಿವಿಧ ನೆಲೆಗಳಲ್ಲಿ ಕಂಡು ಬಂದಿರುವುದರಿಂದ ಆ ನೆಲೆಯಲ್ಲಿಯೂ ವಿಶ್ಲೇಷಣೆಯನ್ನು ಮಾಡಲಾಗಿದೆ.

ನಾಲ್ಕನೆಯದಾಗಿ ಭಕ್ತಿ ಸೂತ್ರಗಳನ್ನು ಅಧ್ಯಯನ ಮಾಡಿದ ಕಾರಣ ಕನ್ನಡದ ಸಂತ ಕವಿಗಳು ಅನುಭಾವದ ನೆಲೆಯನ್ನು, ಭಕ್ತಿ ತತ್ತ್ವನಿರೂಪಣೆಯನ್ನು, ಸಮಾಜ ಮುಖಿಯಾದ ಚಿಂತನೆಯನ್ನು ತಮ್ಮ ಕೃತಿಗಳಲ್ಲಿ ಪ್ರತಿಪಾದಿಸಿದರು ಎಂದು ಈ ಅಧ್ಯಯನದಲ್ಲಿ ನಿರೂಪಿಸಲಾಗಿಲ್ಲ. ಬದಲಾಗಿ ಮಾರ್ಗವಾಗಲೀ, ದೇಸಿಯಾಗಲಿ, ಅನುಭಾವದ ನೆಲೆಯಲ್ಲಿ ಅಭಿವ್ಯಕ್ತಿಗೊಂಡ ಚಿಂತನೆಗಳಲ್ಲಿ ಅದು ಯಾವುದೇ ಕಾಲದಲ್ಲಿ

ಪ್ರಕಟಹೊಂದಿರಲಿ, ಅವುಗಳ ಮಧ್ಯೆ ಇರುವಂತಹ ಸಾಮ್ಯತೆಯಿದೆಯೆಂದು ನಿರೂಪಿಸುವ ಸಮನ್ವಯ ಸಾಧಕ ಅಧ್ಯಯನವಿದು.

ಐದನೆಯದಾಗಿ ಕನ್ನಡದ ವಿವಿಧ ಸಂತರು ಯಾವುದೇ ಮತ ಪಂಥಕ್ಕೆ ಸೇರಿದವರಾಗಿರಲಿ, ಅವರ ಚಿಂತನೆಯ ನಿರೂಪಣೆಯ ಮಾರ್ಗ ಯಾವುದೇ ಇರಲಿ, ಶೈಲಿ ತಂತ್ರಗಾರಿಕೆ ಯಾವುದೇ ಇದ್ದರೂ ಭಕ್ತಿಯ ಮೂಲಭೂತ ತತ್ತ್ವಗಳನ್ನು ಜನಸಾಮಾನ್ಯರನ್ನು ತಲುಪುವ ಸದುದ್ದೇಶವನ್ನು ಹೊಂದಿದ್ದರು ಎನ್ನುವ ಆಧಾರದಲ್ಲಿ ಅಧ್ಯಯನ ಹಾಗೂ ಅಧ್ಯಾಯದ ಶೀರ್ಷಿಕೆಯಲ್ಲಿ 'ಪ್ರತಿಪಾದನೆ' ಎನ್ನುವ ಪದವನ್ನು ಬಳಸಿಕೊಳ್ಳಲಾಗಿದೆ.

**ಟಿಪ್ಪಣಿಗಳು**

1. **ನಾರದರೇ ತಾ ಬಂದು ಧಾರುಣಿಯ ಮ್ಯಾಲೆ ಅವ । ತಾರವನು ಮಾಡಿ ಇತರರಿಗೆ ಎಲ್ಲ ।**
   **ಪಾರಮಾರ್ಥದಲಿ ಉದ್ಧಾರಮಾಡುವೆನೆಮದು । ನಾರದರೆ ಪುರಂದರ ದಾಸರೆನಿಸಿದರು ॥**
   – ಶ್ರೀ ರಘುನಾಥ ತೀರ್ಥರು ( ಕಥಾಕೀರ್ತನ ಕಲೆ, ಲಕ್ಷ್ಮಣದಾಸ ವೇಲಣಕರ್, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, 14/3, ಕೆನರಾ ಫೈನಾನ್ಸ್ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು –2, 1994, ಪುಟ 29)
   'ಗುರು ಪುರಂದರದಾಸರೇ' ಎನ್ನುವ ಕೀರ್ತನೆಯಲ್ಲಿ ವಿಜಯದಾಸರು ನಾಲ್ಕನೆಯ ಚರಣದಲ್ಲಿ ಹೀಗೆ ಹೇಳಿದ್ದಾರೆ:
   **ಮಾರಜನಕನ ಸನ್ನಿಧಾನದಿ ಸಾರಗಾನವ ಮಾಡುವ ।**
   **ನಾರದರೆ ಈ ರೂಪದಿಂದಲಿ ಚಾರುದರುಶನವ ತೋರಿದ ॥**
   ( ವಿಜಯದಾಸರ ಹಾಡುಗಳು, ಸಂ. ಕಾವ್ಯಪ್ರೇಮಿ, ಸಮಾಜ ಪುಸ್ತಕಾಲಯ, ಶಿವಾಜಿಬೀದಿ, ಧಾರವಾಡ–1, 1998, ಪುಟ 37 )
2. ಕಥಾಕೀರ್ತನ ಕಲೆ, ಪುಟ 29
3. ವಿಜಯದಾಸರ ಹಾಡುಗಳು, ಸಂ. ಕಾವ್ಯಪ್ರೇಮಿ, ಪುಟ 151

## ೪.೨. ಭಕ್ತಿಯ ರೂಪ – ಸ್ವರೂಪ

ಈ ಅಧ್ಯಾಯದಲ್ಲಿ ನಾರದ ಭಕ್ತಿಸೂತ್ರಗಳಲ್ಲಿ ವಿವೇಚಿಸಲಾಗಿರುವ ಭಕ್ತಿಯ ರೂಪ–ಸ್ವರೂಪಗಳ ಕುರಿತಾಗಿ ವಿಶ್ಲೇಷಿಸಲಾಗಿದೆ. ಮೊದಲನೆಯ ಸೂತ್ರವು ಇಂತಿದೆ:

**ಅಥಾತೋ ಭಕ್ತಿಂ ವ್ಯಾಸ್ಯಾಮಃ ॥೧ ॥**

ಈಗ ಆದುದರಿಂದ ಭಕ್ತಿಯನ್ನು ಕುರಿತು ವ್ಯಾಖ್ಯಾನಿಸುತ್ತೇವೆ[1].

ಅಮರಕೋಶದ ಪ್ರಕಾರ 'ಅಥ' ಶಬ್ದಕ್ಕೆ ನಾಲ್ಕು ಅರ್ಥಗಳುಂಟು[2] : ಮಂಗಲ, ಅನಂತರ, ಆರಂಭ ಮತ್ತು ಪ್ರಶ್ನೆ. ಹಾಗಾಗಿ ಇಲ್ಲಿ ಪ್ರಯೋಗಿಸಲಾಗಿರುವ ಅಥ ಶಬ್ದವು ಮಂಗಲವನ್ನು ಸೂಚಿಸುತ್ತಿರಬಹುದು, ಹೊಸ ವಿಷಯದ ಆರಂಭವನ್ನು ಅಥವಾ ಹೊಸ ಗ್ರಂಥಾಧ್ಯಯನದ ಆರಂಭವನ್ನು ಸೂಚಿಸುತ್ತಿರಬಹುದು, ಅಥವಾ ಹೊಸ ಪ್ರಶ್ನೆಯೊಂದನ್ನು ಎತ್ತುತ್ತಿರುವ ಬಗ್ಗೆ ಸಂಜ್ಞೆಯಾಗಿಯೂ ಬಳಕೆಯಾಗಿರಬಹುದು.

ಸಕಲಶಾಸ್ತ್ರ ವಿಶಾರದರಾದ ದೇವರ್ಷಿ ನಾರದರು ಇತರ ಶಾಸ್ತ್ರಗಳನ್ನು ರಚಿಸಿ ಉಪದೇಶಿಸಿದ ಬಳಿಕ, ಎಲ್ಲ ಶಾಸ್ತ್ರಗಳಿಗೂ ಶಿರೋಮಣಿಯಂತಿರುವ ಈ ಭಕ್ತಿಶಾಸ್ತ್ರವನ್ನು ಈಗ ಪ್ರಾರಂಭ ಮಾಡುತ್ತಿದ್ದಾರೆ ಎಂದೂ ಭಾವಿಸಬಹುದು[3].

ವೇದಾಂತಶಾಸ್ತ್ರದ ಅಧ್ಯಯನಕ್ಕೆ ವಿಹಿತಕರ್ಮಗಳನ್ನು ಮಾಡಿರಬೇಕು, ವಿವೇಕ ವೈರಾಗ್ಯ ಮುಂತಾದ ಸಾಧನಾಸಂಪತ್ತನ್ನು ರೂಢಿಸಿಕೊಂಡಿರಬೇಕು ಎಂಬ ಪೂರ್ವನಿಯಮಗಳಿವೆ. ಆದುದರಿಂದ ಅಲ್ಲಿ(ಬ್ರಹ್ಮಸೂತ್ರಗಳಲ್ಲಿ) 'ಅನಂತರ' ಎಂಬ ಅರ್ಥವು ಸರಿಹೊಂದುತ್ತದೆ. ಆದರೆ ಈ ಭಕ್ತಿಮಾರ್ಗದಲ್ಲಿ, ಭಕ್ತಿಶಾಸ್ತ್ರದ ಅಧ್ಯಯನದಲ್ಲಿ ಯಾವ ಪೂರ್ವನಿಯಮಗಳ ಅನುಸರಣೆಯೂ ಅಗತ್ಯವಿರುವುದಿಲ್ಲ, ವೈದಿಕ ಕರ್ಮಾನುಷ್ಠಾನದ ಅಧಿಕಾರವಿಲ್ಲದ ಸಮಾಜದ ನಿಂದಿತವರ್ಗದವರಿಗೂ ಭಗವದ್ಭಕ್ತಿ ಸಾಧನೆಗೆ ಅಧಿಕಾರವಿದೆ ಎಂದು ಶಾಂಡಿಲ್ಯ ಮಹರ್ಷಿಗಳೇ ಘೋಷಿಸಿದ್ದಾರೆ[4]. ಶ್ರೀಮದ್ಭಾಗವತದಲ್ಲಿಯೂ ಈ ಮಾತನ್ನು ಪುಷ್ಟೀಕರಿಸುವ ಉಲ್ಲೇಖವಿದೆ. 'ಬೆಂಕಿಯಲ್ಲಿ ಹಾಕಿದ ಚಿನ್ನವು ಹೇಗೆ ಕೊಳೆಯನ್ನು ಕಳೆದುಕೊಳ್ಳುತ್ತದೆಯೋ ಊದುವುದರಿಂದ ಮತ್ತೆ ತನ್ನ ನಿಜರೂಪವನ್ನು ಪಡೆಯುವುದೋ ಹಾಗೆಯೇ ಆತ್ಮನು ಭಕ್ತಿಯೋಗದ ಮೂಲಕ ತನ್ನ ಕರ್ಮಾಶಯವನ್ನು (ಶೇಷಕರ್ಮವನ್ನು) ಕೊಡವಿಕೊಂಡು ನನ್ನನ್ನು ಪಡೆಯುತ್ತಾನೆ'[5]. ಆದುದರಿಂದ ಇಲ್ಲಿ 'ಅನಂತರ' ಎಂಬ ಅರ್ಥವು ಹೊಂದುವುದಿಲ್ಲ ಎಂದು ಕೆಲವರ ಮತ.

ಭಗವಂತನನ್ನು ಭಜಿಸುವವರು ಯಾರೇ ಆದರೂ ಅವರ ಉದ್ಧಾರ ಖಚಿತ ಎನ್ನುವುದಕ್ಕೆ ಪುರಂದರದಾಸರು 'ಇನ್ನ್ಯಾಕೆ ಯಮನಬಾಧೆಗಳು' ಎನ್ನುವ ಕೀರ್ತನೆಯಲ್ಲಿ ಹೀಗೆ ಪುರಾವೆಗಳನ್ನು ಒದಗಿಸುತ್ತಾರೆ[6]:

**ಮುನ್ನೊಬ್ಬ ಪ್ರಹ್ಲಾದ ಸಾಕ್ಷಿ ಆ ಕನ್ಯಾ ಶಿರೋಮಣಿ ದ್ರೌಪದಿ ಸಾಕ್ಷಿ।**
**ಚಿಣ್ಣನೆಂದಜಮಿಳ ಸಾಕ್ಷಿ ನಿಜ ಪುಣ್ಯವನಾಳ್ವ ಧ್ರುವರಾಯ ಸಾಕ್ಷಿ॥**

ಭಕ್ತಿಯ ಪುಣ್ಯಜಲದಲ್ಲಿ ಮಿಂದು ಜೀವನು ತನ್ನೆಲ್ಲಾ ಪೂರ್ವದೋಷಗಳನ್ನು ಕಳೆದುಕೊಂಡು ಪುನೀತನಾಗುತ್ತಾನೆ ಎನ್ನುವುದನ್ನು ಕನಕದಾಸರು ಹೀಗೆ ಹೇಳುತ್ತಾರೆ[7]:

**ನಡತೆಹೀನನಾದರೇನಯ್ಯ– ಜಗದೊಡೆಯನ ಭಕುತಿ ಇದ್ದರೆ ಸಾಲದೆ॥ಪ॥.........**
**ದಾಸಿಯ ಜಠರದೊಳು ಜನಿಸಿದ ವಿದುರ– ಸಂನ್ಯಾಸಿಯೆಂದೆನಿಸಿಕೊಂಡ**
**ಸಾಸಿರನಾಮದೊಡೆಯ ಕೃಷ್ಣ ಬಾಡದಾದಿ ಕೇಶವನ ಭಕುತಿಯೊಂದಿದ್ದರೆ ಸಾಲದೆ॥**

ಪ್ರಾಮಾಣಿಕವಾಗಿ ಭಕ್ತಿಯ ಸಾಧನೆ ಗೈಯ್ಯುತ್ತಿದ್ದರೆ ಚಿನ್ನವು ಅಗ್ನಿಯಲ್ಲಿ ಕಶ್ಮಲಗಳನ್ನೆಲ್ಲಾ ಕಳೆದುಕೊಂಡು ಪರಿಶುದ್ಧವಾಗಿ ಶೋಭಿಸುವಂತೆ, ನಡತೆ ಹೀನನಾದನೂ ಭಕ್ತನಾದವನೂ ಕೂಡಾ ಪರಿವರ್ತನೆ ಹೊಂದುತ್ತಾ ನಿಜಭಕ್ತನಾಗುತ್ತಾನೆ ಎನ್ನುವುದು ಮೇಲಿನ ಕೀರ್ತನೆಯ ಭಾವ. ಇನ್ನು ಶಿವಶರಣರಂತೂ ಭಕ್ತಿಯ ನೆಲೆಯಲ್ಲಿ ಎಲ್ಲರನ್ನೂ ಒಪ್ಪಿಕೊಂಡವರು, ಅಪ್ಪಿಕೊಂಡವರು.

ಕವಿ ಪರಮದೇವನು ಭಕ್ತಿಯು ಎಲ್ಲರಿಗೂ ಸಾಧ್ಯ ಎನ್ನುವುದನ್ನು ನಿರೂಪಿಸಲು ಹೀಗೆ ಹೇಳುತ್ತಾನ[8]:

**ಎಲ್ಲಿ ಹುಟ್ಟಿದರೇನು ಎಲ್ಲಿ ಮಡಿದರೇನು**
**ಅಲ್ಲಿಗಲ್ಲಿಗೆ ರಾಮಸ್ಮರಣೆ ಸೊಲ್ಲು ಸೊಲ್ಲಿಗೆ ಬರುತಿರಲು** ಪ
**ಇಹವು ಎಂಬತ್ತನಾಲ್ಕು ಲಕ್ಷ ಜೀವ ರಾಶಿಯಲ್ಲಿ**
**ಮರಳಿ ಮರಳಿ ಹುಟ್ಟಿ ಸತ್ತು ಬರುವ ಜನ್ಮದೊಳಗೆ**
**ಜ್ಞಾನವಿರಲಿಕಲ್ಲಿ ಹರಿಯ ಸ್ಮರಣೆ ನಿರುತವಿರಲು**
**ನೀಚ ಜನ್ಮ ದೊರಕಲದುವೆ ಯಾವ ಜನ್ಮದಲ್ಲಿ**
**ಬಂದರದು ಆನಂದ** 1

**ನೊರಜು ಕೀಟ ಸರಿಸೃಪಾದಿ ಕ್ರಿಮಿ ಮೃಗಾದಿ ಪಕ್ಷಿನಿಚಯ**
**ತರು ಲತಾದಿ ಸಕಲ ಜೀವ ಜಂತು ಜ್ಞಾನ**
**ವಿರಲಿ ಕಾವ ಜನ್ಮದಲ್ಲಿ ಬಂದರೇನು ಅಳಿದರೇನು**
**ಹರಿಯ ನಾಮ ಸ್ಮರಣೆ ಜಿಹ್ವೆ**
**ಕೊನೆಯೊಳಿರಲಿಕದು ಆನಂದ** 2

**ಊಚು ನೀಚು ಜನ್ಮವೆಲ್ಲ ಪ್ರಾಚೀನದ ಕರ್ಮ ವಶದಿ**
**ಕೂಚುಮಾಡಿ ಜನ್ಮಕಿಕ್ಕಿ ಚಾಚಿ ಬರಗುತಿಹಳು ಮಾಯಿ ಈಚ –**
**ರಾಚರಂಗಳೆಲ್ಲ ಬ್ರಾಹ್ಮವೆಂದು ತಿಳಿದವರಿಗೆ**
**ಕೀಚಕಾರಿ ಕೋಣೆ ಲಕ್ಷ್ಮೀಪತಿಯ ಸ್ಮರಣೆಯೊಂದು ಆನಂದ** 3

ಅತಃ(ಆದುದರಿಂದ) ಎಂಬ ಪದವನ್ನು **'ಅತ: ಕಾರಣಾತ್'** (ಈ ಕಾರಣದಿಂದ), **'ಅತಃ ಪ್ರಯೋಜನಾತ್'** (ಈ ಪ್ರಯೋಜನವಿರುವುದರಿಂದ) ಎಂದು ಎರಡು ರೀತಿಯಲ್ಲಿ ವಿವರಿಸಬಹುದು. ಜೀವನದ ಚರಮ ಲಕ್ಷ್ಯವಾದ ಮೋಕ್ಷವನ್ನು ಪಡೆಯಲು ಭಕ್ತಿಯೋಗವು ಸುಲಭಸಾಧ್ಯವಾದ ಮಾರ್ಗ. ಯಾಕೆಂದರೆ ಭಕ್ತಿಯೋಗವು ಮಾನವನ ಹೃದಯದಲ್ಲಿ ಸಹಜವಾಗಿಯೇ ಇರುವ ಪ್ರೇಮವನ್ನು ಪರಮೇಶ್ವರನ ಕಡೆಗೆ ಹರಿಯಿಸುವ ಸುಲಭ ಸಾಧ್ಯವಾದ ಮಾರ್ಗ ಎನಿಸಿಕೊಂಡಿದೆ. ಅತಃ, ಆದುದರಿಂದ– ಎನ್ನಬಹುದು.

'ಭಕ್ತಿ ಚಂದ್ರಿಕೆ'[9]ಯ ಪ್ರಕಾರ ಇಲ್ಲಿ 'ಅತಃ' (ಆದ್ದರಿಂದ) ಎಂಬುದು ಶಾಸ್ತ್ರದ ಪ್ರಯೋಜನವನ್ನು ಸೂಚಿಸುವುದಕ್ಕಾಗಿ ಬಂದಿದೆ. 'ಲೋಕದಲ್ಲಿ ಜನರಿಗೆ ಪರಮಾನಂದಪ್ರಾಪ್ತಿಗೆ ತೊಡಕಾಗಿರುವುದು ಯಾವುದೆಂದರೆ ಸ್ವಭಾವದಿಂದಲೇ ಎಲ್ಲರಲ್ಲಿಯೂ ಅಡಕವಾಗಿರುವ ಅಹಂಕಾರವು. ಯಾರಲ್ಲಿ ಭಕ್ತಿ ಉದಯಿಸುವುದೋ ಅವರಿಗೆ ವಿಷಯಗಳಲ್ಲಿ ವಿರಕ್ತಿಯುಂಟಾಗಿ ಅಹಂಕಾರ ಬೆಳೆಯಲು, ಬಲಿಯಲು

ಅಡ್ಡಿಯುಂಟಾಗಿ, ಪರಮಾನಂದಪ್ರಾಪ್ತಿಗೆ ಅನುಕೂಲವಾಗುವುದು.'[10] ಆದ್ದರಿಂದ ಸಂಸಾರಿಗಳಿಗೆ ಪರಮಾನಂದಪ್ರಾಪ್ತಿಯೆಂಬ ಪ್ರಯೋಜನಕ್ಕಾಗಿ ಈ ಶಾಸ್ತ್ರವನ್ನು ಆರಂಭಿಸಿರುತ್ತೇವೆ ಎಂದರ್ಥ.

ವಿಷಯವಸ್ತುಗಳ ಅನುಭವದಿಂದ, ಕೇವಲ ಪ್ರಾಪಂಚಿಕ ವಿಷಯಗಳಲ್ಲೇ ಆಸಕ್ತರಾಗಿರುವ ಜನರ ಪ್ರೀತಿಯಿಂದ ದೊರಕುವ ಸುಖವು ಅತ್ಯಲ್ಪ ಮತ್ತು ಅಶಾಶ್ವತ. ಆದ್ದರಿಂದ ಛಾಂದೋಗ್ಯ ಉಪನಿಷತ್ತು ಹೇಳುತ್ತದೆ, 'ಭೂಮವಾದ, ಸರ್ವವ್ಯಾಪಿಯೂ ಸರ್ವಾತ್ಮನೂ ಆದ, ಪರಮಾತ್ಮನ ಪ್ರೀತಿಯಿಂದ ದೊರಕುವ ಆನಂದವು ಅಪರಿಮಿತವಾದುದು ಮತ್ತು ಶಾಶ್ವತವಾದುದು'[11]

ಭಗವದ್ಗೀತೆಯ 11ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ.

**ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂವಿಧೋರ್ಜುನ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ॥**

'ಎಲೈ ಪರಂತಪ, ಅರ್ಜುನ, ಆದರೆ ಅನನ್ಯವಾದ ಭಕ್ತಿಯಿಂದ (ಈ ವಿಧವಾದ) ನನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳಲು, ನೋಡಲು ಮತ್ತು ತತ್ತ್ವವನ್ನರಿತು ಪ್ರವೇಶಿಸಲು ಸಾಧ್ಯವು'.

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ।**

**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ॥**

**ಗೀತಾ. ಅಧ್ಯಾಯ 11, 53**

'ನೀನು ಯಾವ ಪ್ರಕಾರ ನನ್ನನ್ನು ನೋಡಿರುವೆಯೋ ಈ ರೂಪವುಳ್ಳ ನನ್ನನ್ನು ವೇದಾಧ್ಯಯನದಿಂದಲೂ, ತಪಸ್ಸಿನಿಂದಲೂ, ದಾನದಿಂದಲೂ, ಯಜ್ಞದಿಂದಲೂ ನೋಡಲು ಸಾಧ್ಯವಿಲ್ಲ. (ಅಂದರೆ ಹಲವಾರು ವರ್ಷಗಳ ವೇದಾಧ್ಯಯನ, ತಪಸ್ಸು, ಯಜ್ಞದಿಂದ ದುರ್ಲಭವಾದ ಶ್ರೀಕೃಷ್ಣನ ವಿಶ್ವರೂಪ ದರ್ಶನದ ಭಾಗ್ಯ ಅರ್ಜುನನಲ್ಲಿದ್ದಂತಹ ಶರಣಾಗತಿಯಿಂದಾಗಿ ಅವನಿಗೆ ಸಾಧ್ಯವಾಗಿದೆ)'.

**ಗೀತಾ. ಅಧ್ಯಾಯ 11. 54**

ಭಕ್ತಿ ಶಬ್ದದ ನಿರ್ವಚನ ವಿವರಣೆಗಳು ಮುಂದಿನ ಸೂತ್ರದಿಂದ ಪ್ರಾರಂಭವಾಗುತ್ತವೆ.

**ಸಾ ತ್ವಸ್ಮಿನ್ ಪರಮ ಪ್ರೇಮರೂಪಾ ॥೨॥**

ಆ ಭಕ್ತಿಯಾದರೋ ಇವನಲ್ಲಿ ಪರಮಪ್ರೇಮರೂಪವಾಗಿರುತ್ತದೆ.

ವ್ಯಾಕರಣ ಶಾಸ್ತ್ರದ ಪ್ರಕಾರ ಭಕ್ತಿ ಶಬ್ದವು 'ಭಜ್ ಸೇವಾಯಾಮ್' ಎಂಬ ಧಾತುವಿನಿಂದ ಬಂದಿದೆ[12]. 'ಪ್ರೀತಿಪೂರ್ವಕ ಸೇವೆ' ಎಂಬ ಅರ್ಥವನ್ನು ಕೊಡುವಂತಹ ಈ ಧಾತುವು ಭಜತಿ, ಭಜತೇ ಮುಂತಾದ ರೂಪಗಳನ್ನು ತಳೆಯುತ್ತದೆ.

'ಭಜ್' ಧಾತುವಿಗೆ ಅನೇಕ ಅರ್ಥಗಳಿವೆ: ವಿಭಾಗಿಸು, ಪಾಲು ತೆಗೆದುಕೊ, ಹಂಚಿಕೊ, ಸ್ವೀಕರಿಸು, ಆಶ್ರಯಿಸು, ಅವಂಬಿಸು, ಆಚರಿಸು, ಸೇವಿಸು, ಪೂಜಿಸು, ಪ್ರೀತಿಸು, ಉಪಾಸಿಸು, ಆರಾಧಿಸು, ಹೊಂದು, ಅನುಭವಿಸು, ಉಪಚರಿಸು, ಆಯ್ದುಕೊ, ಅನುಗ್ರಹಿಸು, ಕೃಪೆದೋರು, ದಯೆ ಮಾಡು, ಇತ್ಯಾದಿ. ರಾ.ಸತ್ಯನಾರಾಯಣರವರು ಹೇಳುವಂತೆ 'ಭಜ್ ಧಾತುವು ಸಕರ್ಮಕ ಎಂದರೆ ಕರ್ಮಪದವನ್ನು ಅಪೇಕ್ಷಿಸುತ್ತದೆ. ಮೇಲೆ ಹೇಳಿದ ಎಲ್ಲಾ ಅರ್ಥಗಳನ್ನೂ ಭಗವಂತ ಎನ್ನುವುದನ್ನು ಕರ್ಮಪದವಾಗಿ ಬಳಸಿಕೊಂಡು ಅನ್ವಯಿಸಿದರೆ, ಭಗವದ್ವಿಷಯವಲ್ಲದ ಅನ್ಯ ಎಲ್ಲಾ ವಿಷಯಗಳಿಂದಲೂ ತನ್ನನ್ನು ವಿಭಾಗಿಸಿಕೋ, ಬೇರ್ಪಡಿಸಿಕೋ, ಭಗವಂತನ ಅನುಗ್ರಹದಲ್ಲಿ ಪಾಲು

ತೆಗೆದುಕೋ, ಹಂಚಿಕೋ, ದೇವರ ಅನುಗ್ರಹವನ್ನು ಸ್ವೀಕರಿಸಲು ಅರ್ಹನಾಗು, ಅವನನ್ನೇ ಆಶ್ರಯಿಸು, ಅವಲಂಬಿಸು, ಭಗವತ್ಸಂಬಂಧಿಯಾದ ಎಲ್ಲಾ ಕರ್ಮಗಳನ್ನೂ, ವಿಧಿಗಳನ್ನೂ ಆಚರಿಸು, ಭಗವಂತನನ್ನೇ ಹೊಂದು, ಅವನ ಕೃಪೆಯನ್ನೂ, ಅನುಗ್ರಹವನ್ನೂ, ದಯೆಯನ್ನೂ ಸಂಪಾದಿಸು ಎಂದೆಲ್ಲಾ ಅರ್ಥಗಳನ್ನು ಅನ್ವಯ ಮಾಡಿಕೊಳ್ಳಬಹುದು.'[13]

'ಭಜನಂ (ರಸನಂ) ಭಕ್ತಿಃ,' 'ಭಾಗೋ ಭಕ್ತಿಃ' ಮತ್ತು 'ಭಂಜನಂ ಭಕ್ತಿಃ'– ಇವು ವ್ಯುತ್ಪತ್ತಿಯ ದೃಷ್ಟಿಯಿಂದ

ನೀಡಿದ ಇತರ ನಿರ್ವಚನಗಳು. ಕ್ರಮವಾಗಿ ಇವುಗಳ ಒಟ್ಟಭಿಪ್ರಾಯವನ್ನು ಹೀಗೆ ಸೂಚಿಸಬಹುದು: ಭಗವದಾನಂದವನ್ನು ಮೆಲುಕು ಹಾಕುವುದೇ ಭಕ್ತಿ; ನಾವು ಭಗವಂತನಿಗೆ ಸೇರಿದವರೆಂದು ಭಾವಿಸುವುದೇ ಭಕ್ತಿ; ನಮ್ಮ ರಾಗದ್ವೇಷಾದಿಗಳನ್ನು, ಮಾಯೆ–ಅವಿದ್ಯೆಗಳನ್ನು ನಾಶಮಾಡುವ ಶಕ್ತಿಯೇ ಭಕ್ತಿ.[14]

ಭಕ್ತಿಶಾಸ್ತ್ರಗ್ರಂಥಗಳಲ್ಲಿ ಭಕ್ತಿ ಶಬ್ದದ ನಿರ್ವಚನೆ–ವಿವರಣೆಗಳನ್ನು ಹಲವು ರೀತಿಯಿಂದ ಮಾಡಲಾಗಿದೆ. ಅವುಗಳಲ್ಲಿ ಆಯ್ದ ಕೆಲವು ಇಂತಿವೆ:

'ಅದು (ಎಂದರೆ ಭಕ್ತಿಯು) ಈಶ್ವರನಲ್ಲಿ ಅತ್ಯಂತ ಅನುರಕ್ತಿಯು'[15] – ಶಾಂಡಿಲ್ಯ ಭಕ್ತಿಸೂತ್ರ (ಸೂ. 2)

"ಪುರುಷೋತ್ತಮನಲ್ಲಿ ನಿಷ್ಕಾಮವೂ ಅಖಂಡವೂ ಆದ ಯಾವ ಭಕ್ತಿಯು ಮಾಡಲ್ಪಡುವುದೋ ಅಂತಹ ಗುಣಾತೀತ ಭಕ್ತಿಯೋಗದ ಲಕ್ಷಣವನ್ನು ಹೀಗೆ ಹೇಳಿರುತ್ತದೆ: 'ನನ್ನ ಗುಣಗಳನ್ನು ಕೇಳಿದ ಕೂಡಲೇ ಮನಸ್ಸು, ಸರ್ವಾಂತರ್ಯಾಮಿಯಾದ ನನ್ನ ಕಡೆಗೆ– ಗಂಗೆಯು ಧಾರಾವಾಹಿಯಾಗಿ ಸಮುದ್ರದ ಕಡೆಗೆ ಹರಿದು ಹೋಗುವಂತೆ–ಅವಿಚ್ಛಿನ್ನವಾಗಿ ಹರಿಯುವುದೇ'(ಭಕ್ತಿ)".[16]
– ಭಾಗ. 3.29.11–12

'ಭಗವಂತನ ಧರ್ಮ ಅರ್ಥಾತ್ ಗುಣಶ್ರವಣವೇ ಮುಂತಾದವುಗಳಿಂದ ಚಿತ್ತವು ದ್ರವೀಭೂತವಾಗಿ ಸರ್ವೇಶ್ವರನ ವಿಷಯದಲ್ಲಿ ಧಾರಾವಾಹಿಕತೆಯನ್ನು ಹೊಂದಿದ(ತೈಲಧಾರೆಯಂತೆ ಅವಿಚ್ಛಿನ್ನವಾಗಿ ಭಗವಾದಾಕಾರವನ್ನು ಹೊಂದಿದ) ಮನಸ್ಸಿನ ವೃತ್ತಿಯನ್ನೇ ಭಕ್ತಿಯೆಂದು ಕರೆಯುತ್ತಾರೆ.'[17]– ಭಗವದ್ಭಕ್ತಿರಸಾಯನಂ

**'ಬೇರೆ ಯಾವ ಆಶೆಯನ್ನೂ ಇಟ್ಟುಕೊಳ್ಳದೆ, ಜ್ಞಾನ ಕರ್ಮಾದಿಗಳಿಂದ ಸೀಮಿತವಾಗದೆ, ಅವಿರತವಾಗಿ ಪ್ರೀತಿಯಿಂದ ಕೃಷ್ಣನನ್ನು ಕುರಿತು ಚಿಂತಿಸುವುದೇ ಉತ್ತಮವಾದ ಭಕ್ತಿ'**[18] -(ಭಕ್ತಿರಸಾಮೃತಸಿಂಧು 1.11) ಶ್ರೀ ಮಧುಸೂದನ ಸರಸ್ವತಿಯವರ 'ಭಗವದ್ಭಕ್ತಿರಸಾಯನಂ' ಈ ಗ್ರಂಥದ ಅನುವಾದ ಮಾಡಿದ ಪ್ರೊ.ಎಂ.ಎ.ಹೆಗಡೆಯವರು ಭಕ್ತಿಯ ಸಾಮಾನ್ಯ ನಿರೂಪಣೆಯನ್ನು ಮಾಡುತ್ತಾ ಹೀಗೆ ಹೇಳುತ್ತಾರೆ[19]:

**ತಸ್ಮಾನ್ಮದ್ಭಕ್ತಿಯುಕ್ತಸ್ಯ ಯೋಗಿನೋ ವೈ ಮದಾತ್ಮನಃ ।**
**ನ ಜ್ಞಾನಂ ನ ಚ ವೈರಾಗ್ಯಂ ಪ್ರಾಯಃ ಶ್ರೇಯೋ ಭವೇದಿಹ ॥**

**11-20-31**

"ಭಕ್ತಿಯೋಗದ ಮಾರ್ಗವು ಭಿನ್ನವಾದುದು. ಭಗವಂತನ ಗುಣಗಳನ್ನು ಕೇಳುತ್ತ ಅರ್ಚನೆ, ಉಪಾಸನೆಯೇ ಮುಂತಾದವುಗಳನ್ನು ಮಾಡುತ್ತ ಮುಂದುವರಿಯುವ ಮಾರ್ಗ ಇದು. ಲೋಕದ ವಸ್ತುಗಳ ಕಡೆಗೆ ತನಗಿರುವ ಪ್ರೀತಿಯನ್ನು ಭಗವಂತನೆಡೆಗೆ ತಿರುಗಿಸಬೇಕು. ಆಗ ವಿಷಯ ಸುಖಗಳ ಬಗೆಗೆ ಆಸಕ್ತಿ ತಗ್ಗುತ್ತದೆ. ಭಗವಂತನ ಗುಣಗಳನ್ನು ವರ್ಣಿಸುವ ಕಥೆಗಳನ್ನು ಕೇಳುತ್ತ ಕೇಳುತ್ತ ಚಿತ್ತವು ದ್ರವಿಸತೊಡಗುತ್ತದೆ. ಇಂಥ ದ್ರುತಗೊಂಡ ಚಿತ್ತದಲ್ಲಿ ಭಗವಂತನ ಆಕಾರವೂ ನೆಲೆ ನಿಲ್ಲುತ್ತದೆ. ಆಗ ವಿಭಾವ, ಅನುಭಾವ ಹಾಗೂ ವ್ಯಭಿಚಾರೀಭಾವ ಅಥವಾ ಸಂಚಾರೀಭಾವಗಳ ಸಂಯೋಗದಿಂದ ರಸದ ನಿಷ್ಪತ್ತಿಯಾಗುತ್ತದೆ. ಅದು ಭಗವದಾಕಾರರೂಪದ್ದು. ಮನಸ್ಸಿನ ತುಂಬೆಲ್ಲ ಭಗವದಾಕಾರವೇ ತುಂಬಿರುವಾಗ ಪರಮಾನಂದದ ಸಾಕ್ಷಾತ್ಕಾರವಾಗುತ್ತದೆ. ಇದು ಭಕ್ತಿಯೋಗ. ಇದೇ ಪರಮಪುರುಷಾರ್ಥ."

ಇದು ಅನುಭವವೇದ್ಯವಾದದ್ದು. ಭಗವದ್ವಿಷಯದಲ್ಲಿ ಮಾತ್ರವಲ್ಲದೆ ನಾವು ಯಾರ ಮೇಲೆ ಹೆಚ್ಚಿನ ಪ್ರೀತಿಯನ್ನಿರಿಸಿದ್ದೇವೆಯೋ ಅವರ ಕುರಿತಾಗಿ ಇನ್ನಷ್ಟು, ಮತ್ತಷ್ಟು ಕೇಳಲು ಬಯಸುತ್ತೇವೆ. ಹಾಗೆ ಕೇಳುವಂತಹ ಸಂದರ್ಭದಲ್ಲಿ ನಮಗೆ ಬಹಳ ಆಪ್ಯಾಯಮಾನವಾದ ವಿಷಯಗಳು ನಮ್ಮ ಮನಸ್ಸನ್ನು ತಟ್ಟುತ್ತವೆ, ಕಲಕುತ್ತವೆ. ಅಂತಹ ತಟ್ಟುವಿಕೆ ನಾವು ಪ್ರೀತಿಸುವಂತಹ ವ್ಯಕ್ತಿಯ ಕುರಿತಾದ ನಮ್ಮ ಸಂಬಂಧವನ್ನು ಇನ್ನಷ್ಟು ಗಟ್ಟಿಗೊಳಿಸುತ್ತದೆ. ಇದನ್ನು ಭಾಗವತವು ಹೀಗೆ ವರ್ಣಿಸಿದೆ –

**"ತಸ್ಮಾನ್ಮದ್ಭಕ್ತಿಯುಕ್ತಸ್ಯ ಯೋಗಿನೋ ವೈ ಮದಾತ್ಮನಃ ।**
**ನ ಜ್ಞಾನಂ ನ ಚ ವೈರಾಗ್ಯಂ ಪ್ರಾಯಃ ಶ್ರೇಯೋ ಭವೇದಿಹ ॥**

**11-20-31**

ಆದುದರಿಂದ ಯಾವ ಯೋಗಿಯು ನನ್ನಲ್ಲಿ ಅನನ್ಯಭಕ್ತಿಯುಳ್ಳವನಾಗಿರುವನೋ ಸದಾಕಾಲದಲ್ಲಿಯೂ ನನ್ನ ಚಿಂತನೆಯಲ್ಲಿಯೇ ಮಗ್ನನಾಗಿರುವನೋ ಅಂಥವನಿಗೆ ಜ್ಞಾನದಿಂದಾಗಲಿ ವೈರಾಗ್ಯದಿಂದಾಗಲಿ ಆಗಬೇಕಾದುದೇನೂ ಇಲ್ಲ. ಕೇವಲ ನನ್ನ ಭಕ್ತಿಯಿಂದ ಅವನಿಗೆ ಶ್ರೇಯಸ್ಸುಂಟಾಗುತ್ತದೆ."

ಇದೇ ಗ್ರಂಥದಲ್ಲಿ ಭಕ್ತಿಯ ಲಕ್ಷಣವನ್ನು ಹೀಗೆ ಹೇಳುತ್ತಾರೆ –

**'ದ್ರುತಸ್ಯ ಭಗವದ್ಧರ್ಮಾದ್ಧಾರಾವಾಹಿಕತಾಂ ಗತಾ ।**
**ಸರ್ವೇಶೇ ಮನಸೋ ವೃತ್ತಿರ್ಭಕ್ತಿರಿತ್ಯಭಿಧೀಯತೇ ॥3॥**

**ಅನುವಾದ :** ಭಗವಂತನ ಧರ್ಮ ಅರ್ಥಾತ್ ಗುಣಶ್ರವಣವೇ ಮುಂತಾದವುಗಳಿಂದ ಚಿತ್ತವು ದ್ರವೀಭೂತವಾಗಿ ಸರ್ವೇಶ್ವರನ ವಿಷಯದಲ್ಲಿ ಧಾರವಾಹಿಕತೆಯನ್ನು ಹೊಂದಿದ (ತೈಲಧಾರೆಯಂತೆ ಅವಿಚ್ಛಿನ್ನವಾಗಿ ಭಗವದಾಕಾರವನ್ನು ಹೊಂದಿದ) ಮನಸ್ಸಿನ ವೃತ್ತಿಯನ್ನೇ ಭಕ್ತಿಯೆಂದು ಕರೆಯುತ್ತಾರೆ.

"ಈ ಶ್ಲೋಕವು ಭಕ್ತಿಯ ಲಕ್ಷಣವನ್ನು ಹೇಳುತ್ತದೆ. ಇಲ್ಲಿ ಭಗವದ್ಧರ್ಮವೆಂಬ ಪದವು ಭಗವಂತನ ಗುಣಶ್ರವಣವೆಂಬ ಅರ್ಥದಲ್ಲಿದೆ. ಭಗವಂತನ ಗುಣಶ್ರವಣವನ್ನು ಧರ್ಮಬುದ್ಧಿ ಪೂರ್ವಕವಾಗಿಯೇ ಮಾಡಬೇಕು ಎಂಬುದೇನೂ ಇಲ್ಲ **'ತಸ್ಮಾತ್ ಕೇನಾಪ್ಯುಪಾಯೇನ ಮನ: ಕೃಷ್ಣೇ ನಿವೇಶಯೇತ್'** (ಭಾಗವತ 7–1–21) ಆದ್ದರಿಂದ ಯಾವುದಾದರೊಂದು ಉಪಾಯದಿಂದ ಕೃಷ್ಣಲ್ಲಿ ಮನಸ್ಸನ್ನಿಡಬೇಕು ಎಂದು ಹೇಳಿದೆ 'ಕೇನಾಪ್ಯುಪಾಯೇನ' ಎಂಬ ಮಾತು ಅಪ್ರಯತ್ನ ಪೂರ್ವಕವಾಗಿ ಸಿದ್ಧಿದಾಯಕವಾದ ಉಪಾಯವನ್ನು ಕುರಿತು ಹೇಳುತ್ತದೆ. ಅದು ಧರ್ಮಬುದ್ಧಿ ಪೂರ್ವಕವಾಗಿಯಾದರೂ ಆಗಬಹುದು, ಬೇರೆ ರೀತಿಯದಾದರೂ ಆಗಬಹುದು.'[20]

ಭಕ್ತಿಯನ್ನು ವರ್ಣಿಸುವಾಗ ಚಿತ್ತವು ದ್ರವಾವಸ್ಥೆಯನ್ನು ತಾಳುವುದರ ಬಗೆಗೆ ಹೇಳಲಾಗಿದೆ. ಅದನ್ನು ಸ್ಪಷ್ಟಗೊಳಿಸುವುದಕ್ಕಾಗಿ ಮುಂದಿನ ಶ್ಲೋಕ[21] –

**'ಚಿತ್ತದ್ರವ್ಯಂ ಹಿ ಜತುವತ್ ಸ್ವಭಾವಾತ್ ಕಠಿನಾತ್ಮಕಮ್ ।**
**ತಾಪಕೈರ್ವಿಷಯೈರ್ಯೋಗೇ ದ್ರವತ್ವಂ ಪ್ರತಿಪದ್ಯತೇ ॥ 4॥**

**ಅನುವಾದ :** ಚಿತ್ತವೆಂಬ ದ್ರವ್ಯವು ಅರಗಿನಂತೆ ಸ್ವಭಾವತ: ಕಠಿಣವಾಗಿರುತ್ತದೆ. ಆದರೆ ತಾಪಕ ವಿಷಯುಗಳ ಸಂಯೋಗವಾದಾಗ ದ್ರವರೂಪವನ್ನು ತಾಳುತ್ತದೆ.'

ಚಿತ್ತವು ಸ್ವಭಾವತ: ಗಟ್ಟಿಯಾಗಿರುವ ವಸ್ತು. ಹಾಗಿದ್ದರೂ ಕರಗುವ ಸ್ವಭಾವವುಳ್ಳದ್ದು. ಆ ಕಾರಣದಿಂದ ಅದನ್ನು ಅರಗಿಗೆ ಹೋಲಿಸಲಾಗಿದೆ. ಅರಗು ಕರಗುವುದಕ್ಕೆ ತೀವ್ರವಾದ ಅಗ್ನಿಸಂಯೋಗ ಅಥವಾ ತಾಪವು ಅವಶ್ಯ. ಅದು ಗಟ್ಟಿಯಾಗಿದ್ದರೂ ಬಿಸಿಗೆ ಕರಗುತ್ತದೆ. ಅನಂತರ ಗಟ್ಟಿಯಾಗುತ್ತದೆ. ಚಿತ್ತವೂ ಹಾಗೆಯೇ. ಇದನ್ನು ಕರಗಿಸುವಂಥವುಗಳೆಂದರೆ ಕಾಮ ಕ್ರೋಧ ಮುಂತಾದ ಭಾವಗಳು. ಆದ್ದರಿಂದ ಅವುಗಳನ್ನು ತಾಪಕಗಳೆಂದು ಕರೆಯಲಾಗಿದೆ. ಭಾವದ ಅತ್ಯಂತ ತೀವ್ರವಾದ ಸ್ಥಿತಿಯನ್ನೇ ಚಿತ್ತದ್ರುತಿಯೆಂದು ಹೇಳಬಹುದು.

ವಿಷಯಾಕಾರವನ್ನು ತಾಳಿದ ಚಿತ್ತವು ಅದೇ ಸ್ಥಿತಿಯಲ್ಲಿ ಸ್ಥಾಯಿತ್ವವನ್ನು ಹೊಂದುವುದಿಲ್ಲ. ಉದಾಹರಣೆಗೆ ರಾಮಾಯಣ ನಾಟಕವನ್ನು ನೋಡುವಂತಹ ಸಂದರ್ಭದಲ್ಲಿ ಅಥವಾ ಶ್ರವಣ ಮಾಡುವಂತಹ ಸಂದರ್ಭದಲ್ಲಿ ಸೀತಾವಿಯೋಗದ ಸನ್ನಿವೇಶ ಬಂದಾಗ ಆ ಸನ್ನಿವೇಶ ಮನಸ್ಸನ್ನು ಕಲಕಿ ಸೀತೆಯ ಕುರಿತಾಗಿ ಸಂತಾಪ, ಸಹಾನುಭೂತಿಯ ಭಾವವನ್ನು ಮನಸ್ಸಿನಲ್ಲಿ ಹುಟ್ಟಿಸಬಹುದು. ಆದರೆ ಇದು ಸ್ಥಾಯಿಯಾದ ಭಾವವಲ್ಲ. ಕೆಲವು ಕಾಲದ ಬಳಿಕ ಆ ಭಾವ ಮನಸ್ಸಿನಿಂದ ಮಾಸಿ ಹೋಗಬಹುದು. ಆದರೆ

ಭಗವದ್ವಿಷಯಕವಾದ ಭಕ್ತಿಯು ಹಾಗಲ್ಲ. ಅದು ಸ್ಥಾಯಿಯಾಗಿರುತ್ತದೆ. ದ್ರುತಚಿತ್ತದಲ್ಲಿ ಮೂಡಿದ ಭಗವದಾಕಾರವು ಸ್ಥಿರವಾಗಿರುತ್ತದೆ.

**ದ್ರುತೇ ಚಿತ್ತೇ ವಿನಿಕ್ಷಿಪ್ತ ಸ್ವಾಕಾರೋ ಯಸ್ತು ವಸ್ತುನಾ ।**
**ಸಂಸ್ಕಾರ ವಾಸನಾ ಭಾವ ಭಾವನಾ ಶಬ್ದಭಾಗಸೌ ॥೬॥**

**ಅನುವಾದ :** ದ್ರವೀಭೂತವಾದ ಚಿತ್ತದಲ್ಲಿ ನಿಕ್ಷಿಪ್ತವಾದ ವಸ್ತುವಿನ ಆಕಾರವನ್ನೇ ಸಂಸ್ಕಾರ, ವಾಸನಾ, ಭಾವ, ಭಾವನಾ ಇತ್ಯಾದಿ ಶಬ್ದಗಳಿಂದ ಕರೆಯುತ್ತಾರೆ.

ಕರಗಿಸಿದ ಅರಗಿನಲ್ಲಿ ವಸ್ತುವಿನ ಆಕಾರವು ಮೂಡುವಂತೆ ದ್ರವಿಸಿದ ಚಿತ್ತದಲ್ಲಿ ವಸ್ತುವಿನ ಆಕಾರವು ಮೂಡುತ್ತದೆ. ಇದನ್ನು ಸಂಸ್ಕಾರವೇ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.(ಪುಟ 18)

ಪೂರ್ತಿಯಾಗಿ ದ್ರವರೂಪವನ್ನು ತಳೆದ ಮನಸ್ಸಿನಲ್ಲಿ ಮಾತ್ರ ಭಗವದಾಕಾರವು ಸ್ಥಾಯಿಯಾಗುತ್ತದೆ; ನೆಲೆಗೊಳ್ಳುತ್ತದೆ.

**ದ್ರವತಾಯಾಂ ಪ್ರವಿಷ್ಟಂ ಸದ್ಯತ್ ಕಾಠಿನ್ಯದಶಾಂ ಗತಮ್ ।**
**ಚೇತ: ಪುನರ್ದ್ರುತೌ ಸತ್ಯಾಮಪಿ ತನ್ನೈವ ಮುಂಚತಿ ॥೮॥**

**ಅನುವಾದ :** ಚಿತ್ತವು ದ್ರವರೂಪವನ್ನು ತಾಳಿದಾಗ ಅಲ್ಲಿ ಪ್ರವೇಶವನ್ನು ಪಡೆದ ವಸ್ತುವು ಅದು ಗಟ್ಟಿಯಾದ ಮೇಲೆಯೂ ಹಾಗೆಯೇ ಉಳಿಯುತ್ತದೆ. ಅದು ಪುನ: ದ್ರುತಿಯನ್ನು ಹೊಂದಿದರೂ ಬಿಡುವುದಿಲ್ಲ.'(ಪುಟ 19)

ಚಿತ್ತದ ದ್ರವಾವಸ್ಥೆಯನ್ನು ಪ್ರಣಯ, ಅನುರಾಗ, ಸ್ನೇಹ ಇತ್ಯಾದಿ ಶಬ್ದಗಳಿಂದ ಕರೆಯುತ್ತಾರೆ.'

ಭಕ್ತಿಯ ಸ್ವರೂಪವನ್ನು ವರ್ಣಿಸುವಾಗ ನಾರದರು 'ಅದು ಪರಮಪ್ರೇಮರೂಪವಾಗಿದೆ' ಎಂದು ಎರಡನೇ ಸೂತ್ರದಲ್ಲಿ ಹೇಳಿದ್ದಾರೆ. ಭಕ್ತಿಯ ಮೂಲರೂಪವು ಪ್ರೇಮವೇ ಆಗಿದೆ ಎಂದು ಅದು ಪ್ರಕಟವಾಗುವ ರೀತಿಯನ್ನು ಮಧುಸೂದನ ಸರಸ್ವತಿಯವರು ಮೇಲೆ ಹೇಳಿರುವ ಶ್ಲೋಕಗಳಲ್ಲಿ ನಿರೂಪಿಸಿರುತ್ತಾರೆ.

ಮಧುಸೂದನ ಸರಸ್ವತಿಯವರು ನಿರೂಪಿಸಿರುವ ಪ್ರಕ್ರಿಯೆಗಳೆಲ್ಲಾ ಮನಸ್ಸಿಗೆ ಸಂಬಂಧ ಪಟ್ಟದ್ದಾಗಿವೆ.

ಮನಶ್ಶಾಸ್ತ್ರಜ್ಞರು "ಜೈವಿಕ ಕ್ರಿಯೆಯ ನಿಯಂತ್ರಣ ಕ್ರಿಯೆ, ಪ್ರಚೋದನೆಯನ್ನು ಸ್ವೀಕರಿಸುವುದು, ಭಾವನೆಗಳು ಹುಟ್ಟುವುದು, ಯೋಚನೆ ಮಾಡುವುದು, ನೆನಪು ಮಾಡಿಕೊಳ್ಳುವುದು, ಕಲ್ಪನೆ ಮಾಡಿಕೊಳ್ಳುವುದು, ಸಾಧ್ಯತೆಗಳನ್ನು ಊಹಿಸುವುದು, ನಿರ್ಧಾರ ಮಾಡುವುದು, ಇವೇ ಮೊದಲಾದ ಮಿದುಳಿನಲ್ಲಿ ನಡೆಯುವ ಎಲ್ಲ ಕ್ರಿಯೆಗಳನ್ನೂ ಒಟ್ಟು ಸೇರಿಸಿ ಮನಸ್ಸು" ಎಂದಿದ್ದಾರೆ [22].

ಯಾರಲ್ಲಿ ಭಕ್ತಿ ಹುಟ್ಟಿ, ಅದು ದೃಢವಾಗುತ್ತದೋ ಆ ವ್ಯಕ್ತಿಯ ವರ್ತನೆಯಲ್ಲಿ ವಿಶೇಷವಾದ ಪರಿವರ್ತನೆಯನ್ನು ಗುರುತಿಸಬಹುದಾಗಿದೆ. ಈ ಕುರಿತಾಗಿ ನಾರದರು ಸೂತ್ರ ಸಂಖ್ಯೆ 15ರಿಂದ 20ರ ವರೆಗೆ ವಿಶ್ಲೇಷಿಸಿದ್ದಾರೆ.

ಮನಶ್ಶಾಸ್ತ್ರಜ್ಞರು ಮನುಷ್ಯನ ವರ್ತನೆಗೆ ಎರಡು ಆಯಾಮಗಳನ್ನು ಹೇಳಿದ್ದಾರೆ: "ಎಲ್ಲರೂ ಕಾಣುವಂತೆ ಅವನ ದೇಹದ ಭಂಗಿಯಲ್ಲಿ ಆಗುವ ಬದಲಾವಣೆಗಳು ಮತ್ತು ಮನುಷ್ಯ ತಾನು ಮಾತ್ರ ಗುರುತಿಸಬಹುದಾದ ಬದಲಾವಣೆಗಳು.

ಪ್ರಚೋದನೆಗೆ ಪ್ರತಿಕ್ರಿಯಿಸುವಾಗ ಮನುಷ್ಯನಲ್ಲಿ ಆಗುವ ಬದಲಾವಣೆಗಳನ್ನು ಈ ರೀತಿ ವಿಂಗಡಿಸಬಹುದು–

ಇಂದ್ರಿಯಗಳ ಮೂಲಕ ಪ್ರಚೋದನೆ ಮಿದುಳಿಗೆ ತಲುಪುತ್ತದೆ.

ಪ್ರಚೋದನೆ ತಲುಪಿದ ಮಿದುಳಿನಲ್ಲಿ ಒಂದು ಭಾವನೆ ಹುಟ್ಟುತ್ತದೆ.

ಭಾವನೆಯ ನಂತರ ಒಂದು ಯೋಚನೆ ಹುಟ್ಟುತ್ತದೆ.

ಈ ಭಾವನೆ ಮತ್ತು ಯೋಚನೆಗಳನ್ನು ಆಧರಿಸಿ ಮಿದುಳಿನಿಂದ ಸಂಜ್ಞೆಗಳು(ಇಂಪಲ್ಸ್) ಹೊರಟು ಮಾತು ಕೃತಿಯಾಗಿ ವ್ಯಕ್ತವಾಗುವಂತೆ ಮತ್ತು ಇವುಗಳ ಜೊತೆಯಲ್ಲಿಯೇ ಭಾವನೆಗಳು ಪ್ರಕಟವಾಗುವಂತೆ ದೇಹದ ಸ್ನಾಯುಗಳ ಸ್ಥಿತಿಯಲ್ಲಿ ಬದಲಾವಣೆ ಆಗಿ ವರ್ತನೆ ರೂಪುಗೊಳ್ಳುತ್ತದೆ. ಪ್ರಚೋದನೆ ತಲುಪಿ ವರ್ತನೆ ಪ್ರಕಟ ಆಗುವುದಕ್ಕಿಂತ ಹಿಂದಿನ ಕ್ಷಣದವರೆಗೆ ಮಿದುಳಿನಲ್ಲಿ ನಡೆಯುವ ಕ್ರಿಯೆ 'ಮಾನಸಿಕ ಕ್ರಿಯೆ' (ಮೆಂಟಲ್ ಆಕ್ಟಿವಿಟಿ). ಮಾನಸಿಕ ಕ್ರಿಯೆ ನಡೆಯಲು ಬಳಕೆ ಆಗುವ ಶಕ್ತಿ 'ಮಾನಸಿಕ ಶಕ್ತಿ'."[23]

**ಸ್ಥಾಯಿಭಾವಗಿರಾತೋಸೌ ವಸ್ತ್ವಾಕಾರೋಭಿಧೀಯತೇ ।**

**ವ್ಯಕ್ತಶ್ಚ ರಸತಾಮೇತಿ ಪರಾನಂದತಯಾ ಪುನ: ॥೯॥**

**ಅನುವಾದ :** ಆದ್ದರಿಂದ ದ್ರುತಚಿತ್ತದಲ್ಲಿರುವ ವಸ್ತುವಿನ ಆಕಾರವನ್ನು ಸ್ಥಾಯಿಭಾವವೆಂದು ಕರೆಯುತ್ತಾರೆ. ಅದೇ ಪರಮಾನಂದರೂಪದಿಂದ ವ್ಯಕ್ತವಾಗಿ ರಸತ್ವವನ್ನು ಪಡೆಯುತ್ತದೆ.

ಭಕ್ತಿಗೆ ಚಿತ್ತದಲ್ಲಿ ನೆಲಸಿರುವ ಭಗವದಾಕಾರವೇ ಸ್ಥಾಯಿಯೆಂದು ಮಧುಸೂದನ ಸರಸ್ವತಿಗಳು ವಾದಿಸುತ್ತಾರೆ.

**ಭಗವಾನ್ ಪರಮಾನಂದ ಸ್ವರೂಪ: ಸ್ವಯಮೇವ ಹಿ ।**

**ಮನೋಗತಸ್ತದಾಕಾರೋ ರಸತಾಮೇತಿ ಪುಷ್ಕಲಮ್ ॥೧೦॥**

**ಅನುವಾದ :** ಪರಮಾನಂದ ಸ್ವರೂಪಿಯಾದ ಭಗವಂತನೇ ಸ್ವತ: ಮನಸ್ಸಿನಲ್ಲಿ ಸ್ಥಾಯಿಭಾವದ ರೂಪದಿಂದ ಇದ್ದು ಪೂರ್ಣವಾದ ರಸತ್ವವನ್ನು ಹೊಂದುತ್ತಾನೆ.

ಭಕ್ತಿಯನ್ನು ಒಂದು ಸಾಧನೆಯನ್ನು ಪರಿಗಣಿಸಿದರೆ ಮೇಲೆ ಹೇಳಿದ ಅಂಶಗಳನ್ನು ಭಕ್ತಿ ಸಾಧನೆ ಹಾಗೂ ಅದರಿಂದ ಮಾನವನ ವ್ಯಕ್ತಿತ್ವದಲ್ಲಿ ಆಗುವ ಸದ್ ಪರಿವರ್ತನೆಗಳಿಗೆ ಅನ್ವಯಮಾಡಿಕೊಳ್ಳಬಹುದು. ಇಂದ್ರಿಯಗಳ ಮೂಲಕ ಭಗವದ್ ಮಹಿಮೆಯ ಶ್ರವಣ, ಕೀರ್ತನಗಳನ್ನು ಮಾಡಿದಾಗ ಹೃದಯದಲ್ಲಿ(ಮನಸ್ಸಿನಲ್ಲಿ) ಚಿತ್ತದ್ರುತಿಯುಂಟಾಗುತ್ತದೆ. ಆಗ ದ್ರುತಚಿತ್ತದಲ್ಲಿ ಭಗವದ್ ಭಾವವುಪ್ರಕಟಗೊಳ್ಳುತ್ತದೆ. ಇದು ಸ್ಥಾಯಿಯಾದ ಭಾವವಾಗಿದೆ. ಆ ಭಾವವು ಪ್ರಕಟವಾದಾಗ ಸಾಧಕನು ಆನಂದವನ್ನು ಅನುಭವಿಸುತ್ತಾನೆ. ಆ ಆನಂದದ ಅನುಭವದಿಂದ ಭಗವದ್ವಿಷಯಗಳಲ್ಲಿ ರತಿಯು ಹೆಚ್ಚುತ್ತದೆ. ('ಭಕ್ತಿಯೆಂಬ ಪದವನ್ನು ವಿಶ್ಲೇಷಿಸಿದರೆ ಈ ಅರ್ಥವು ಹೊರಡುವುದು ಸಾಧ್ಯ. **ಭಜ್ಯತೇ – ಸೇವತೇ**

**ಭಗವದಾಕಾರ ಮಂತ:ಕರಣಂ ಕ್ರಿಯತೇऽನಯಾ** – ಭಜಿಸಲ್ಪಡುತ್ತದೆ; ಸೇವಿಸಲ್ಪಡುತ್ತದೆ; ಅರ್ಥಾತ್ ಇದರ ಮೂಲಕವಾಗಿ ಅಂತ:ಕರಣವು ಭಗವದಾಕಾರವಾಗಿ ಮಾಡಲ್ಪಡುತ್ತದೆ.'[24]) ಮುಂದೆ ನಿರಂತರ ಸ್ಮರಣ, ಮನನಗಳ ಮೂಲಕ ಆ ಭಾವವು ದೃಢವಾಗುತ್ತದೆ. ಭಕ್ತಿಯು ಬಲಿಯುತ್ತದೆ. ಹೀಗೆ ಭಕ್ತಿಯು ಒಂದು ಸಾಧನವಾಯಿತು. ಸ್ವತ: ಪುರುಷಾರ್ಥವೆನಿಸದೆ ಆ ಪುರುಷಾರ್ಥ ಪ್ರಾಪ್ತಿಗೆ ಸಾಧನವಾಯಿತು.

ಭಕ್ತಿಯ ಎರಡನೆಯ ರೂಪ ಸಾಧ್ಯ ಅಥವಾ ಫಲ. **'ಭಜನಂ – ಅಂತ:ಕರಣಸ್ಯ ಭಗವದಾಕಾರತಾ ರೂಪಂ ಭಕ್ತಿ:** – ಭಜನ – ಅಂದರೆ ಅಂತ:ಕರಣವು ಭಗವದಾಕಾರವನ್ನು ತಾಳುವುದೇ ಭಕ್ತಿ ಯೆಂದು ಭಾವವ್ಯುತ್ಪತ್ತಿಯನ್ನು ಹೇಳಿದರೆ ಭಕ್ತಿಯೇ ಫಲವೆಂದ ಹಾಗಾಯಿತು.'[25] ಈ ಫಲವು ನಿರತಿಶಯವಾದ ಪುರುಷಾರ್ಥವೇ ಆಗುತ್ತದೆ. ಇದರಿಂದ ಭಕ್ತಿ ಸಾಧನವೂ ಹೌದು. ಸಾಧ್ಯವೂ ಹೌದು ಎಂದು ನಿರೂಪಿಸಿದಂತಾಯಿತು.

ಭಕ್ತಿಯು ಹರ್ಷ, ಶೋಕ, ಭಯಗಳಂತೆ ಆಗಂತುಕವಲ್ಲ, ಅದೊಂದು ವಿಕಾರವಲ್ಲ ಎಂಬ ಕುರಿತಾಗಿ 'ಭಗವದ್ಭಕ್ತಿರಸಾಯನಂ' ಈ ಗ್ರಂಥದ ಪ್ರಸ್ತಾವನೆಯಲ್ಲಿ ಪ್ರೊ.ಎಂ.ಎ.ಹೆಗಡೆಯವರು ಹೀಗೆ ಹೇಳುತ್ತಾರೆ:

"ಭಕ್ತಿಯ ಸ್ಥಾಯಿಭಾವವೆಂದರೆ ಭಗವದ್ವಿಷಯಕವಾದ ರತಿ. ಇದು ಚಿತ್ತದಲ್ಲಿ ಭಗವದಾಕಾರತೆಯನ್ನು ತಳೆದಿರುತ್ತದೆ. ಈ ರತಿಯು ಶಾಶ್ವತವಾಗಿರುವುದರಿಂದ ಸ್ಥಾಯಿಯೆನಿಸುತ್ತದೆ. ಯಾಕೆಂದರೆ ಚಿತ್ತದಲ್ಲಿರುವ ಭಗವದಾಕಾರವೆಂದರೆ ಆನಂದವೇ ಆಗಿದೆ. ಅದು ಆಕಾಶದಂತೆ ಇತರ ವಸ್ತುಗಳ ಇರುವಿಕೆಯನ್ನು ವಿರೋಧಿಸುವುದಿಲ್ಲ. ಇತರ ವಸ್ತುಗಳು ಮರೆಯಾದಾಗ ತಾನು ಎದ್ದು ತೋರುತ್ತದೆ. ಆಗ ಸ್ಥಾಯಿಯು ರಸವಾಗುತ್ತದೆ. ಚಿತ್ತದಲ್ಲಿ ಈ ಸ್ಥಾಯಿಯು ಆಗಂತುಕವಲ್ಲ. ಆದ್ದರಿಂದ ಭಕ್ತಿಯು ಆಗುಂತುಕವೆಂದು ಭಾವಿಸಬಾರದು.

ಇದನ್ನು ಆಧುನಿಕ ಭಾಷೆಯಲ್ಲಿ ಹೇಳುವುದಾದರೆ ಭಗವಂತನ ಅರ್ಥಾತ್ ನಮ್ಮನ್ನು ಮೀರಿದ ಶಕ್ತಿಯೊಂದರ ಕುರಿತು ನಮ್ಮಲ್ಲಿ ಪ್ರೀತಿಯ ಭಾವವು ಸುಪ್ತವಾಗಿರುತ್ತದೆ. ಇಲ್ಲಿ ಪ್ರೀತಿಯೆಂದರೆ ನಮಗೆ ಮೀರಿದ ಶಕ್ತಿಯೊಂದರ ಅರಿವು ಎಂದು ಮಾತ್ರ ತಿಳಿದರೆ ಸಾಕು. ಆದರೆ ಅದು ಪ್ರಕಟಗೊಳ್ಳುವುದಕ್ಕೆ ತಕ್ಕ ಅವಕಾಶವೊದಗಬೇಕು ಅಂದರೆ ಅರಿವು ಜಾಗ್ರತಗೊಳ್ಳುವುದಕ್ಕೆ ಅನುಕೂಲಕರವಾದ ಸನ್ನಿವೇಶವು ಸೃಷ್ಟಿಗೊಳ್ಳಬೇಕು. ಭಕ್ತನಾದವನಲ್ಲಿ ಅದು ಜಾಗ್ರತಗೊಂಡಿರುತ್ತದೆ. ಇತರರಲ್ಲಿ ಅದು ಜಾಗ್ರತಿಗೆ ಕಾಯುತ್ತಿರುತ್ತದೆ."[26]

ಇಲ್ಲಿ ಭಕ್ತಿಯು ಪ್ರತಿಯೊಬ್ಬ ಜೀವರ ಮೂಲ ಸ್ವಭಾವವಾದ ಆನಂದವೇ ಆಗಿದೆ ಎಂಬುವುದನ್ನು ಎಂ.ಎ.ಹೆಗಡೆಯವರು ಹೇಳುತ್ತಾರೆ. ಅದ್ವೈತ ಸಿದ್ಧಾಂತದ ಹಿನ್ನೆಲೆಯಲ್ಲಿ ಎಲ್ಲವೂ ಬ್ರಹ್ಮವೇ ಆಗಿದೆ ಎಂದು ಅನ್ವಯಿಸುವಾಗ, ಆ ಬ್ರಹ್ಮವು ಸತ್ ಚಿತ್ ಆನಂದ ಸ್ವರೂಪಿ ಎಂದು ಪರಿಗಣಿಸಿದಾಗ, ಆತ್ಮನೇ ಆ ಬ್ರಹ್ಮವೇ ಅಗಿದ್ದಾನೆ ಎಂದಾದಾಗ ಈ ಮಾತಿಗೆ ಪುಷ್ಟಿ ದೊರೆಯುತ್ತದೆ.

ಜೀವರಲ್ಲಿ ಸ್ವಭಾವತಃ ಭಕ್ತಿಯು ಸುಪ್ತವಾಗಿರುತ್ತದೆ, ಅದು ಜಾಗೃತಿಗಾಗಿ ಕಾಯುತ್ತಿರುತ್ತದೆ ಎಂಬ ವಿಚಾರವನ್ನು ದಾಸ ಸಾಹಿತ್ಯದ (ಶ್ರೀಮನ್ಮಧ್ವ ಸಿದ್ಧಾಂತದ) ಹಿನ್ನೆಲೆಯಲ್ಲಿ ಪ್ರೊ.ಸಾ.ಕೃ.ರಾಮಚಂದ್ರರಾಯರು ಹೀಗೆ ಹೇಳಿದ್ದಾರೆ:

"ಭಕ್ತಿಯನ್ನು ಮಾಡಬೇಕಾದವನು ಜೀವ; ಭಕ್ತಿಗೆ ಗುರಿಯಾಗುವವನು ಹರಿ. ಜೀವನು ಅಣು, ನಿತ್ಯ, ಸ್ವಪ್ರಕಾಶ, ಕುದುರೆಯ ಬಾಲದ ಒಂದು ಕೂದಲನ್ನು ನೇರವಾಗಿ ಒಂದು ಸಾವಿರ ಸೀಳುಗಳಾಗಿ ವಿಭಾಗ ಮಾಡುವುದಾದರೆ, ಒಂದು ಸೀಳು ಜೀವನ ಸ್ವರೂಪ ಪರಿಮಿತಿ. ಈ ಜೀವನ ಹೃದಯ ಕಮಲದಲ್ಲಿ ಹರಿಯು ಮೂರು ತೆರನಾಗಿ ಇದ್ದಾನೆ. ಹೃದಯ ಕಮಲದ ಕರ್ಣಿಕೆಯ ತುದಿಯಲ್ಲಿ ಸಾಧಕನ ಹೆಬ್ಬೆರಳು ಗೇಣಿನ ಪ್ರಮಾಣದಲ್ಲಿ 'ಅಗ್ರೇಶ'; ಇವನನ್ನು ಪ್ರಾಜ್ಞರೂಪವೆಂದು ಕರೆಯುತ್ತಾರೆ. ಜೀವರ ನಿದ್ರೆಗೆ ಇವನೇ ಕಾರಣ. ಹೃದಯಾಕಾಶದಲ್ಲಿ ಎಲ್ಲೆಲ್ಲೂ ವ್ಯಾಪಿಸಿಕೊಂಡು ಪ್ರಾದೇಶ ಪರಿಮಿತನಾಗಿ (ಎಂದರೆ ಹೃದಯಕಾಶವೆಷ್ಟಿದೆಯೋ ಅಷ್ಟು ಪ್ರದೇಶವನ್ನು ತುಂಬಿ)'ಪೂರ್ಣ'. ಹೃದಯ ಕಮಲದ ಬುಡದಲ್ಲಿ ಹೆಬ್ಬೆರಳ ತುದಿಯಷ್ಟು ಪರಿಮಿತಿಯುಳ್ಳ 'ಮೂಲೇಶ' ಇವನನ್ನು ವಿಜ್ಞಾನಾತ್ಮನೆಂದು ಕರೆಯುತ್ತಾರೆ. ಈ ಮೂಲೇಶನ ಪಾದವನ್ನಾಶ್ರಯಿಸಿ ಮುಖ್ಯಪ್ರಾಣ (ಹನುಮಂತ). ಶ್ವಾಸ ರೂಪನಾಗಿರುವ ಮುಖ್ಯಪ್ರಾಣನು ಹಂಸ ಮಂತ್ರವನ್ನು ಎಡೆಬಿಡದೆ ಜಪಿಸುತ್ತ ಇರುವವನು ಮತ್ತು ಇದೇ ಜಪವನ್ನು ಜೀವನಿಂದ ಮಾಡಿಸುತ್ತಲೂ ಇರುವನು. ಉಸಿರಾಡುವಾಗ ಉಸಿರನ್ನು ಒಳಗೆ ಎಳೆದುಕೊಳ್ಳುವುದು 'ಹಂ' ಹೊರಕ್ಕೆ ಬಿಡುವುದು 'ಸಃ' ಇದೇ ಹಂಸ ಜಪ. ಪ್ರತಿಯೊಬ್ಬನೂ ದಿನಕ್ಕೆ ಇಪ್ಪತ್ತೊಂದು ಸಾವಿರದ ಆರುನೂರು ಸಂಖ್ಯೆಯ ಹಂಸ ಜಪವನ್ನು ಮಾಡುತ್ತಾನೆ. ಇದನ್ನು ಅವನಿಂದ ಮಾಡಿಸುವ ಮುಖ್ಯಪ್ರಾಣನು ಹರಿಪ್ರೀತಿಗಾಗಿಯೇ ಮಾಡಿಸುತ್ತಾನೆ.

ಎಂದರೆ ಜೀವನಿಗೆ ಸ್ವಭಾವದಲ್ಲಿಯೇ ಭಕ್ತಿಯಿದೆ. ಪ್ರತಿಬಿಂಬನಾದ ಅವನ ಹೃದಯದಲ್ಲೇ ಭಕ್ತಿಯನ್ನು ಮಾಡಿಸುವ ಮುಖ್ಯಪ್ರಾಣನೂ ಇದ್ದಾನೆ, ಭಕ್ತಿಗೆ ಗುರಿಯಾಗುವ ಪರಮಾತ್ಮನು ಬಿಂಬವಾಗಿ ಇದ್ದಾನೆ. ಇರುವುದು ಮಾತ್ರವಲ್ಲ ಜೀವನನ್ನು ಉದ್ಧಾರ ಮಾಡಬೇಕೆಂಬ ಸಂಕಲ್ಪವನ್ನು ಹೊಂದಿರುತ್ತಾನೆ. ಇದೇ ಕಾರುಣ್ಯವೆನ್ನುವ ಗುಣ. ಬಿಂಬನಲ್ಲಿ ಕಾರುಣ್ಯ ಸ್ವಭಾವ ಸಿದ್ಧವಾದುದು. ಬಿಂಬನ ಕಾರುಣ್ಯವು ಅವನ ಪ್ರತಿಬಿಂಬರಾದ ಎಲ್ಲ ತತ್ತ್ವೇಶರಲ್ಲೂ ಇದೆ.

ಜೀವನಲ್ಲಿ ಸ್ವಭಾವ ಸಿದ್ಧವಾಗಿ ಭಕ್ತಿಯಿದ್ದರೂ, ಪರಮಾತ್ಮನಲ್ಲಿ ಸ್ವಭಾವ ಸಿದ್ಧವಾಗಿ ಕಾರುಣ್ಯವಿದ್ದರೂ, ಎರಡರ ಸಮಾಗಮವಾಗಲು ಸಾಧನ ಸಾಮಗ್ರಿ ಇರಬೇಕು.

ಸಾಧನ ಸಾಮಗ್ರಿಯನ್ನು ಮಧ್ವಾಚಾರ್ಯರು ತಮ್ಮ ಋಗ್ಭಾಷ್ಯದಲ್ಲಿ ಹೀಗೆ ಎಣಿಸಿದ್ದಾರೆ–

**ಸ್ವಾಧ್ಯಾಯಸ್ತತ್ತ್ವ ವಿಜ್ಞಾನಂ ವಿಷ್ಣುಭಕ್ತಿರ್ವಿರಾಗತಾ**

**ನಿಷಿದ್ಧಕರ್ಮಣಾಂ ತ್ಯಾಗೋ ವಿಹಿತಸ್ಯ ಸದಾ ಕ್ರಿಯಾ**

**ಸದಾ ವಿಷ್ಣುಸ್ಮೃತಿಶ್ಚ....**

ವಿಷ್ಣುವು ಸರ್ವೋತ್ತಮನೆಂಬ ತತ್ತ್ವದ ಅರಿವು, ವಿಷ್ಣುವಿನಲ್ಲಿ ಭಕ್ತಿ, ವಿಷಯ ಸುಖಗಳಲ್ಲಿ ವೈರಾಗ್ಯ, ಶಾಸ್ತ್ರವು ಮಾಡಬಾರದೆಂದು ಹೇಳಿರುವುದನ್ನು ಮಾಡದೆ ಇರುವುದು, ಶಾಸ್ತ್ರವು ವಿಧಿಸಿರುವುದನ್ನು ಮಾಡುವುದು, ಎಡೆಬಿಡದೆ ವಿಷ್ಣುವಿನ ಸ್ಮರಣೆ ಇವು ಸಾಧನಗಳು. ಅವರೇ ತಮ್ಮ ಅನುವ್ಯಾಖ್ಯಾನದಲ್ಲಿ

'ಸಾಧನೆಗಳಲ್ಲೆಲ್ಲಾ ಭಕ್ತಿಯೇ ಹೆಚ್ಚಿನದು, ಅದರಂತೆ ಇರುವುದು ಯಾವುದೂ ಇಲ್ಲ' (**'ಸಾಧನೇಭ್ಯೋಧಿಕಾ ಭಕ್ತಿಃ, ನೈವಾನ್ಯತ್ ತಾದೃಶಂ ಕ್ವಚಿತ್'**) ಎಂದಿದ್ದಾರೆ. ಮಧ್ವಾಚಾರ್ಯರು ಮೋಕ್ಷಕ್ಕೇ ಕಾರಣವಾಗುವ ಜ್ಞಾನ ಭಕ್ತಿಯ ಅಂಶವೇ (**'ಭಕ್ತ್ಯಂಶಕಂ ಯತೋ ಜ್ಞಾನಂ'**) ಎಂದು ಹೇಳಿ ಭಕ್ತಿಯು ಜ್ಞಾನ ಮತ್ತು ಸ್ನೇಹಗಳ ಸಮಾವೇಶವೆಂದು (**'ಜ್ಞಾನ ಸ್ನೇಹಾತ್ಮಿಕಾ ಹಿ ಸಾ'**) ನಿರ್ದೇಶಿಸುತ್ತಾರೆ (ಭಾಗವತ ತಾತ್ಪರ್ಯ ನಿರ್ಣಯ)."[27] (ಪುಟ 159-160).

ಪರಮಪ್ರೇಮರೂಪವಾದ ಭಗವದ್ಭಕ್ತಿಯ ಕುರಿತು ಕನ್ನಡದ ಸಂತಕವಿಗಳ ನಿರೂಪಣೆಯನ್ನು ವಿಶ್ಲೇಷಿಸುವ ಮೊದಲು ಭಗವಂತನ ಕುರಿತಾದ ಸಾಕಾರ, ನಿರಾಕಾರ, ಏಕತ್ವ, ವಿಶ್ವವ್ಯಾಪಕತ್ವ ಇತ್ಯಾದಿ ಲಕ್ಷಣಗಳ ಕುರಿತಾಗಿ ಸಂತಕವಿಗಳ ಅಭಿಮತವನ್ನು ವಿಶ್ಲೇಷಿಸೋಣ.

ಭಗವಂತನ ವಿಶ್ವವ್ಯಾಪಕತ್ವವನ್ನು ನಿರೂಪಿಸುವ ಬಸವೇಶ್ವರರ ವಚನವೊಂದು ಪುರುಷಸೂಕ್ತ[28] ಹಾಗೂ ವಿಶ್ವಕರ್ಮ ಸೂಕ್ತಗಳ[29] ಆಯ್ದಭಾಗದ ಕನ್ನಡಾನುವಾದದಂತಿದೆ:

**ಎತ್ತೆತ್ತ ನೋಡಿದಡತ್ತತ್ತ ನೀನೇ ದೇವ. ಸಕಲವಿಸ್ತಾರದ ರೂಹು ನೀನೇ ದೇವ.**
**ವಿಶ್ವತಶ್ಚಕ್ಷು ನೀನೇ ದೇವ. ವಿಶ್ವತೋಮುಖ ನೀನೇ ದೇವ.**
**ವಿಶ್ವತೋಬಾಹು ನೀನೇ ದೇವ. ವಿಶ್ವತೋಪಾದ ನೀನೇ ದೇವ. ಕೂಡಲಸಂಗಮದೇವ.**[30]

ಅದರಂತೆ **'..........ಸಾಕಾರ ನಿರಾಕಾರ ಏಕೋದೇವ ನಮ್ಮ ಕೂಡಲಸಂಗಮದೇವ'**[31]ಎಂದು ಭಗವಂತನ ಸಾಕಾರ ಹಾಗೂ ನಿರಾಕಾರ ಸ್ವರೂಪವನ್ನು ಏಕವಾಗಿ ಕಂಡವರು ಬಸವೇಶ್ವರರು. ಪಿಂಡಾಂಡವೇ ಇರಲಿ ಬ್ರಹ್ಮಾಂಡವೇ ಇರಲಿ ಬೀಜದೊಳಗಿರುವ ವೃಕ್ಷದಂತೆ, ಕಾಷ್ಠದೊಳಗಿರುವ ಉಷ್ಣದಂತೆ, ರವಿಯಲ್ಲಿರುವ ಕಿರಣದಂತೆ, ಬಿಂದುವಿನೊಳಗಿರುವ ನಾದದಂತೆ ಭಗವಂತ ಎಲ್ಲದರಲ್ಲೂ ಅವ್ಯಕ್ತನಾಗಿ ಅಗೋಚರನಾಗಿ ಅಡಕವಾಗಿದ್ದಾನೆ ಎನ್ನುವ ಆದಯ್ಯನ ವಚನವೊಂದು ಇಂತಿದೆ[32]:

**ಬೀಜದೊಳಗಣ ವೃಕ್ಷ ಅಂಕುರ ಪಲ್ಲವ ಪತ್ರ ಕುಸುಮ ಫಲ ಮೈದೋರದಂತೆ,**
**ಕಾಷ್ಠದೊಳಗಡಗಿ ಉಷ್ಣದೋರದಂತೆ, ಪತಂಗನ ಕರದೊಳಗಡಗಿಪ್ಪ ಮರೀಚಿ ಪ್ರವಹಿಸದಂತೆ,**
**ಬಿಂದುವಿನೊಳಗಡಗಿಪ್ಪ ನಾದ ದನಿದೋರದಂತೆ ಪಿಂಡ ಬ್ರಹ್ಮಾಂಡಗಳ ಕೂಡಿಪ್ಪ ಸೌರಾಷ್ಟ್ರ**
**ಸೋಮೇಶ್ವರಲಿಂಗವನಾರು ಭೇದಿಸಬಾರದಯ್ಯ.**

ಇದೇ ವಿಚಾರವು ಪುರಂದರದಾಸರ ಒಂದು ಉಗಾಭೋಗದಲ್ಲಿಯೂ ಧ್ವನಿಸಿದೆ[33]:

**ಅಣುವಿಗೆ ಅಣುವಾಗಿ ಘನಕೆ ಘನವಾಗಿ। ಗುಣತ್ರಯತತ್ತ್ವಕ್ಕೆ ಮೀರಿದ ದೊರೆಯಾಗಿ।**
**ತೃಣ ಮೊದಲಾಗಿ ಮೇರುಪರಿಯಂತ ಇರುವವ ನೀನಾಗಿ।**
**ಗುಣನಿಧಿ ಪುರಂದರವಿಠಲ ನಿನ್ನ ಮಹಿಮೆ। ಎಣಿಕೆ ಮಾಡುವರ್ಯಾರೊ ಎನ್ನಪ್ಪನೆ । –**

ಅಣುವಿಗಿಂತಲೂ ಸೂಕ್ಷ್ಮಾತಿಸೂಕ್ಷ್ಮನಾದ, ಮಹತ್ತಿಗಿಂತಲೂ ಮಹತ್ತಾಗಿರುವಂತಹ, ಸತ್ತ್ವ,ರಜ,ತಮೋ ಗುಣಗಳಿಗೆ ಅತೀತನಾದ ಭಗವಂತನ ಮಹಿಮೆಯನ್ನು ಮನ ಬುದ್ಧಿಗಳಿಂದ ಅಳೆಯಲು ಅಸಾಧ್ಯ ಎನ್ನುವ ಪುರಂದರ ದಾಸರು ಇನ್ನೊಂದು ಉಗಾಭೋಗದಲ್ಲಿ ಹೇಳುತ್ತಾರೆ [34]:

**ಇಕ್ಕೊ ನಮ್ಮ ಸ್ವಾಮಿ। ಸರ್ವರಂತರ್ಯಾಮಿ। ಪ್ರಕಟ ಸಹಸ್ರನೇಮಿ। ಭಕ್ತಜನಪ್ರೇಮಿ।**
**ಒಳನೋಡಿ ನಮ್ಮ ಪರಬ್ರಹ್ಮ। ನರಿಯಬೇಕು ಮರ್ಮ। –**

ಕನಕದಾಸರು ತಮ್ಮ ಕೀರ್ತನೆಯಲ್ಲಿ ಉಪನಿಷತ್ ಪ್ರತಿಪಾದ್ಯವಾದ ತತ್ತ್ವವನ್ನು ಸರಳವಾಗಿ ಹೀಗೆ ನಿರೂಪಿಸಿದ್ದಾರೆ[35]:

**ಅಣು ಮಹತ್ತಾದ ದೇವ ॥ಪ॥**
**ಅಣುವಿಂಗೆ ಅಣುವು ಮಹತಿಂಗೆ ಮಹಿಮನು ಅಖಿಳ**
**ಗುಣಭರಿತ ಪರಮಪಾವನ ಚರಿತ ಎನ್ನನಿರ–**
**ಯಣ ಸಮಯದಲ್ಲಿ ಶ್ರೀಹರಿ ಹರಿಯೆ ಎಂದೆಂಬ**
**ನೆನಹನೊಲಿದಿತ್ತು ಸಲಹೆಯ್ಯ ॥ಅ॥**

( ಕನಕ ಸಾಹಿತ್ಯ ದರ್ಶನ ಸಂಪುಟ–4 ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಕರ್ನಾಟಕ ಸರ್ಕಾರ, 1999, ಪುಟ 154)

ಹಾಗೆಯೇ ಹೊಟ್ಟೆಯಲ್ಲಿ ಹದಿನಾಲ್ಕು ಲೋಕಗಳಿಗೆ ಆಶ್ರಯಕೊಟ್ಟಂಥ ಪರಬ್ರಹ್ಮವನ್ನು ಗಂಡಭೇರುಂಡ ಪಕ್ಷಿಗೆ ಹೋಲಿಸುತ್ತಾರೆ ಕನಕದಾಸರು:

**ಪಕ್ಷಿ ಬಂದಿದೆ ಗಂಡ ಭೇರುಂಡ – ತನ್ನ**
**ಕುಕ್ಷಿಯೊಳು ಈರೇಳು ಜಾಗವನಿಂಬಿಟ್ಟಂಥ ॥ಪ॥**

(ಕನಕ ಸಾಹಿತ್ಯ ದರ್ಶನ ಸಂಪುಟ–4 ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಕರ್ನಾಟಕ ಸರ್ಕಾರ, 1999, ಪುಟ 291)

ಭಗವಂತ ಎಲ್ಲವನ್ನೂ ವ್ಯಾಪಿಸಿದ್ದಾನೆ ಎನ್ನುವುದನ್ನು ಅನುಭವದ ಮೂಲಕ ಕಂಡುಕೊಂಡ ಷಣ್ಮುಖಸ್ವಾಮಿಗಳ ವಚನ ಇಂತಿದೆ[36]:

**ಸಕಲ ವಿಸ್ತಾರದೊಳಗೆಲ್ಲ ಲಿಂಗವ ತೋರಿದ. ಆ ಲಿಂಗದೊಳಗೆ ಎನ್ನ ತೋರಿದ.**
**ಎನ್ನೊಳಗೆ ತನ್ನ ತೋರಿದ ಮಹಾಗುರುವಿಂಗೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ.**

ವಿಶ್ವದೊಳಗೆ ಲಿಂಗ, ಲಿಂಗದೊಳಗೆ ನಾನು, ನನ್ನೊಳಗೆ ಈ ಅದ್ಭುತ ಅಂತರಂಗವನ್ನು ತೋರಿದ ಗುರುವಿಗೆ ನಮಸ್ಕಾರ ಅನ್ನುತ್ತಿದ್ದಾರೆ ಅಖಂಡೇಶ್ವರರು.

ಪುರಂದರದಾಸರ ಮತ್ತೊಂದು ಕೀರ್ತನೆ ಮಾನಸಪೂಜೆಯ ಮಹತ್ವವನ್ನು ಸಾರುವ ಕೀರ್ತನೆ[25], ' **ಕಣ್ಣಿನೊಳಗೆ ನೋಡೊ ಹರಿಯ ಒಳಗಣ್ಣಿನೊಳಗೆ ನೋಡ ಮುಜ್ಜಗದೊಡೆಯನ॥** – ಇದು ಸಾಧಕನು ಧ್ಯಾನದ ಮೂಲಕ ಮನಸ್ಸನ್ನು ಅಂತರ್ಮುಖೀಗೊಳಿಸಿ ಆ ಮೂಲಕ ಅಂತರಂಗದಲ್ಲಿ ಭಗವಂತನನ್ನು ಕಾಣಲು, ಅರಿಯಲು ಪ್ರಯತ್ನಿಸಬೇಕು ಎಂಬುದನ್ನು ಸೂಚಿಸುತ್ತದೆ.

ಅಣುವಿಗಿಂತಲೂ ಸೂಕ್ಷ್ಮಾತಿಸೂಕ್ಷ್ಮನಾದ, ಮಹತ್ತಿಗಿಂತಲೂ ಮಹತ್ತಾದ[37], ಸರ್ವರಂತರ್ಯಾಮಿಯಾದ ಭಗವಂತನ ಮರ್ಮವನ್ನು ಅರಿಯಬೇಕಾದರೆ ಒಳನೋಡಬೇಕು ಅಂದರೆ ಮನಸ್ಸು ಅಂತರ್ಮುಖಿಯಾಗಬೇಕು. ಮೇಲಿನ ಕೃತಿಗಳನ್ನು

ಅವಲೋಕಿಸಿದಾಗ ಒಂದು ಅಂಶವು ವಿದಿತವಾಗುತ್ತದೆ. ಅದೇನೆಂದರೆ ಅಭಿವ್ಯಕ್ತಿಯ ವಿಧಾನಗಳಲ್ಲಿ ವ್ಯತ್ಯಾಸವಿದ್ದರೂ ಭಗವಂತನ ವಿಶ್ವವ್ಯಾಪಕತ್ವ, **ಏಕೋ ದೇವಃ ಸರ್ವಭೂತೇಷು ಗೂಢಃ** (ಒಬ್ಬನೇ ಆದ ದೇವನು ಎಲ್ಲ ಭೂತಗಳಲ್ಲಿಯೂ ಅಂತರ್ಹಿತನಾಗಿದ್ದಾನೆ),

ಅವನನ್ನು, ಅವನ ಮಹಿಮೆಯನ್ನು ಸೀಮಿತವಾದ ಮನಸ್ಸು, ಬುದ್ಧಿಗಳಿಂದ ಅರಿಯಲು ಸಾಧ್ಯವಿಲ್ಲ[38], ಅವನನ್ನು ಅರಿಯಬೇಕಾದರೆ ಮನಸ್ಸು ಅಂತರ್ಮುಖವಾಗಬೇಕು ಈ ವಿಚಾರಗಳನ್ನು ಶರಣರಾಗಲೀ, ದಾಸರಾಗಲೀ ಅಥವಾ ಇನ್ನ್ಯಾವುದೇ ಭಕ್ತಿ ಪಂಥಕ್ಕೆ ಸೇರಿದ ಸಂತಕವಿಗಳಾಗಲೀ ಮುಕ್ತವಾಗಿ ಒಪ್ಪಿಕೊಂಡಿರುವುದು.

ಚಿತ್ತವು ದ್ರವರೂಪವನ್ನು ತಾಳಿ ಅಲ್ಲಿ ಭಗವದಾಕಾರವು ರೂಪುಗೊಳ್ಳಬೇಕಾದರೆ ಮೊದಲು ಚಿತ್ತವು ಭಗವದ್ವಿಷಯದೆಡೆಗೆ ಆಕರ್ಷಿತಗೊಳ್ಳಬೇಕು. ಲೌಕಿಕ ವಿಷಯಗಳಿಂದ ಆಕರ್ಷಿತಗೊಂಡ ಮನಸ್ಸು ಅದರಲ್ಲಿ ಅನುರಕ್ತವಾಗುವುದು ಸಹಜ. ಲೌಕಿಕ ವಿಷಯ ವಸ್ತುಗಳಲ್ಲಿ ಸುಲಭವಾಗಿ ಮನಸ್ಸು ಆಸಕ್ತವಾದಂತೆ ಭಗವದ್ವಿಷಯದಲ್ಲಿ ಆಗಲಾರದು. ಇದನ್ನು ಪುರಂದರದಾಸರೇ **'ಮನವೆನ್ನ ಮಾತಕೇಳದು ಮಂದಜ್ಞಾನದಿ ತನುವಿನಾಸೆಯು ಬಿಡಲೊಲ್ಲದು'**[39]ಎಂಬ ಕೀರ್ತನೆಯಲ್ಲಿ ಬಹಳ ಸುಂದರವಾಗಿ ನಿರೂಪಿಸಿದ್ದಾರೆ. **'ಮದಗಜ ಮೆಯ್ಯ ಮರೆತು ಮುಂದುಗಾಣದೆ ಕದುವಿನೊಳಗೆ ಬಿದ್ದಂತಾಯಿತಯ್ಯ'** ಎಂದು ವಿಷಯವಸ್ತುಗಳಲ್ಲಿ ರಮಾಮಾಣವಾದ ಮನಸ್ಸಿನ ಸ್ಥಿತಿಯನ್ನು ವರ್ಣಿಸುತ್ತಾರೆ ಪುರಂದರದಾಸರು.

ಷಣ್ಮುಖಸ್ವಾಮಿಯವರು(ಅಖಂಡೇಶ್ವರರು) ತಮ್ಮ ಒಂದು ಕೃತಿಯಲ್ಲಿ ಮನಸ್ಸನ್ನು ಮರ್ಕಟಕ್ಕೆ ಹೋಲಿಸುತ್ತಾರೆ[40]

**ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ, ಇಂದ್ರಿಯಂಗಳೆಂಬ ಶಾಖೆ ಶಾಖೆಗೆ ಹಾರಿ, ವಿಷಯಂಗಳೆಂಬ ಫಲಂಗಳ ಗ್ರಹಿಸಿ, ಭವದತ್ತ ಮುಖವಾಗಿ ಹೋಗುತಿದೆ ನೋಡಾ॥'**

ಮನಸ್ಸೆಂಬ ಮರ್ಕಟವು ಇಂದ್ರಿಯಗಳೆಂಬ ಕೊಂಬೆ ರೆಂಬೆಗಳಲ್ಲಿ ಕುಳಿತು, ವಿಷಯಗಳೆಂಬ ಹಣ್ಣುಗಳನ್ನು ಮೆಲ್ಲುವುದರಲ್ಲೇ ತತ್ಪರಗೊಂಡು ಹುಟ್ಟುಸಾವುಗಳೆಂಬ ಭವಚಕ್ರದಲ್ಲಿ ಸಿಲುಕಲು ಸನ್ನದ್ಧವಾಗಿದೆ. (ಇದಕ್ಕೆ ಸಂವಾದಿಯಾದ ಸ್ವಲ್ಪ ಭಿನ್ನವಾದ ವರ್ಣನೆ ಕಠೋಪನಿಷತ್ತಿನಲ್ಲಿ ಬಂದಿದೆ[41])

ಬಿಡಬೇಕೆಂದರೂ ಬಿಡಲಾಗದ, ಐಹಿಕ ಸುಖಕ್ಕೆ ಅಂಟಿಕೊಂಡು ನರಳುವ ದುರ್ಬಲ ಮನಸ್ಸನ್ನು ವಿಡಂಬನೆ ಮಾಡುತ್ತಾರೆ ಈ ಕೆಳಗಿನ ಕೀರ್ತನೆಯ ಮೂಲಕ ಕನಕದಾಸರು[42]:

**ಎಷ್ಟು ಪ್ರೀತಿಯೊ ಮನಕೆ ಎಷ್ಟು ಪ್ರೀತಿಯೊ ॥ಪ॥**

**ಇಷ್ಟವೆಂದು ತಿಳಿದು ಈ ಕಷ್ಟ ಸಂಸಾರ ಹೊರುವುದು ॥ಅ॥**

ವಿಜಯದಾಸರು ತಮ್ಮ **ದಾಸ ದಾಸ ದಾಸರ ದಾಸ್ಯವ ಕೊಡೊ** ಎಂಬ ಕೀರ್ತನೆಯಲ್ಲಿ[43] ಹೇಳುತ್ತಾರೆ:

**ಚಿತ್ತ ಪದಸೇವೆಯೊಳಿರಲಿ। ಚಿಂತೆ ಇತರ ಬಿಡಲಿ॥**

**ಅಂತರಂಗದಲ್ಲಾನಂದಿರಲಿ। ಅಹಂಕೃತಿಯನೆ ಬಿಡಲಿ॥**

**ಸಂತತ ನಿನ್ನ ಪದಪಂಕಜ ಭಕ್ತರ। ಪಂಥವ ಪಾಲಿಸೊ ಪರಮಪುರುಷ ಹರೇ॥**

ಇಲ್ಲಿ ವಿಜಯದಾಸರು ತಮ್ಮ ಮನಸ್ಸು ಇತರ ಚಿಂತೆಯನ್ನು ಬಿಟ್ಟು ಭಗವಂತನ ಪಾದಸೇವೆಯಲ್ಲಿ ನಿರತವಾಗಿರಲಿ ಎಂದು ಪ್ರಾರ್ಥಿಸುತ್ತಾರೆ. ಹಾಗೆ ನಿರತವಾಗಿರುವಾಗ ಅಂತರಂಗವು ಆನಂದದಿಂದಿರಲಿ, ಕಾರಣ ಅಂತರಂಗವು ಆನಂದವನ್ನು ಅನುಭವಿಸುತ್ತಿದ್ದಲ್ಲಿ ಮಾತ್ರ ಯಾವುದೇ ಸೇವೆಯು ಸಾರ್ಥಕವೆನಿಸಲು ಸಾಧ್ಯ. ಆದರೆ ಸೇವೆಯನ್ನು ಮಾಡಿದಾಗ ಮನಸ್ಸಿನಲ್ಲಿ ಅಹಂಭಾವ ಹುಟ್ಟಿಕೊಳ್ಳುವುದು ಸಹಜ. ಹೀಗಾಗದೇ ಇರುವಂತೆ ಮಾಡು, ಅಲ್ಲದೆ ಸೇವೆಯಲ್ಲಿ ಮನಸ್ಸು ತತ್ಪರವಾಗುವಂತೆ ಸದಾ ನಿನ್ನ ಭಕ್ತರ ಪಂಥದಲ್ಲಿರಿಸು ಎಂಬುದಾಗಿ ಭಗವಂತನನ್ನು ಪ್ರಾರ್ಥಿಸುತ್ತಾರೆ.

ಲೌಕಿಕ ವಿಷಯಗಳಲ್ಲಿ ಉಂಟಾಗುವ ಪ್ರೀತಿಗಿಂತ ವಿಭಿನ್ನವಾದುದು, ಭಗವಂತನಲ್ಲಿ ಉಂಟಾಗುವ ಪ್ರೀತಿ. ಅದಕ್ಕಾಗಿ ನಾರದರು ಈ ಸೂತ್ರದಲ್ಲಿ ಭಕ್ತಿಯ ನಿರ್ವಚನವನ್ನು ಮಾಡುವಾಗ 'ಸಾ ತು ಅಸ್ಮಿನ್ ಪರಮಪ್ರೇಮರೂಪಾ' ಅಂದರೆ 'ಭಕ್ತಿಯಾದರೋ ಇತರ ಲೌಕಿಕಪ್ರೇಮದಂತಲ್ಲ, ಪರಮಪ್ರೇಮರೂಪಿಯಾದುದು'. ಲೌಕಿಕಪ್ರೇಮದಲ್ಲಿ ವಿಷಯವಾಸನೆ, ಪ್ರತಿಫಲಾಪೇಕ್ಷೆ, ಭಯ, ಅಸೂಯೆ ಮೊದಲಾದವು ಹುದುಗಿರುವ ಸಾಧ್ಯತೆಯಿದೆ. ಭಕ್ತಿಯೂ ಪ್ರೇಮರೂಪವಾದುದರಿಂದ ಭಕ್ತಿಯಲ್ಲಿಯೂ ಇವು ಇರಲು ಸಾಧ್ಯವೇ? ಈ ಸಂಶಯವನ್ನು ತಳ್ಳಿಹಾಕಲು 'ತು'('ಆದರೆ') ಎಂಬ ಪದವನ್ನು ಪ್ರಯೋಗಿಸಿದ್ದಾರೆ[44]. ಇನ್ನು 'ಭಕ್ತಿಚಂದ್ರಿಕೆ'ಯಲ್ಲಿ ಈ ಸೂತ್ರವನ್ನು ವ್ಯಾಖ್ಯಾನಿಸುವಾಗ,

'ಈ ಶಾಸ್ತ್ರದ ವಿಷಯವಾದ ಭಕ್ತಿಯ ಮೇಲೆ ಬರಬಹುದಾದ ಎಲ್ಲಾ ಆಕ್ಷೇಪಗಳಿಗೂ ಸಮಾಧಾನವನ್ನು ಸೂಚಿಸುವ ಸಲುವಾಗಿ ತು ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ' ಎನ್ನುತ್ತಾರೆ.[45]

ಬಂಧುಮಿತ್ರರು, ಹಿತೈಷಿಗಳು, ಐಶ್ವರ್ಯ, ಅಧಿಕಾರ ಇತ್ಯಾದಿ ವಿಷಯವಸ್ತುಗಳಲ್ಲಿ ನಮಗಿರುವ ಪ್ರೀತಿಯಲ್ಲಿ ಏರಿಳಿತಗಳುಂಟು, ಅತೃಪ್ತಿ, ಅಸೂಯೆಗಳಿಗೆ ಅವಕಾಶವುಂಟು, ಪ್ರತಿಫಲದ ಆಕಾಂಕ್ಷೆಯುಂಟು. ಆದರೆ ಭಕ್ತಿಯು ಇದಕ್ಕಿಂತ ಭಿನ್ನ ಎಂದು ಸೂಚಿಸಲು 'ಪರಮ' ಎಂಬ ಗುಣವಾಚಕವನ್ನು ಈ ಸೂತ್ರದಲ್ಲಿ ಪ್ರಯೋಗಿಸಲಾಗಿದೆ[46]. 'ಭಕ್ತಿಚಂದ್ರಿಕೆ'ಯಲ್ಲಿ ಇದೇ ವಿಚಾರವನ್ನು ವಿಶದೀಕರಿಸುತ್ತಾ ಹೇಳುತ್ತಾರೆ : 'ಯಾವ ವಸ್ತುವಿನಲ್ಲಿ ಅಥವಾ ಮತ್ತೆ ಯಾರಲ್ಲಿಯಾದರೂ ನಮಗೆ ಪ್ರೇಮವಿರುವುದು ನಮ್ಮ ಮೇಲೆ ನಮಗಿರುವ ಪ್ರೇಮಕ್ಕಾಗಿಯೇ ಹೊರತು ಅವುಗಳಿಗಾಗಿ ಅಲ್ಲ. ಆದ್ದರಿಂದ ತಾನು ತನಗೆ ಪ್ರಿಯನಾಗಿರುವಷ್ಟು ಮತ್ತೆ ಯಾವುದೂ ಪ್ರಿಯವಾಗಿರುವುದಿಲ್ಲ. ಅದಕ್ಕಾಗಿ ಶ್ರುತಿಯು ಹೇಳುತ್ತದೆ:

"ಆದ್ದರಿಂದ ಈ ಆತ್ಮನೆಂಬುದು ಮಗನಿಗಿಂತ ಪ್ರಿಯ, ಧನಕ್ಕಿಂತ ಪ್ರಿಯ, ಮಿಕ್ಕ ಎಲ್ಲಕ್ಕಿಂತಲೂ ಪ್ರಿಯ, ಇದು ಎಲ್ಲಕ್ಕಿಂತಲೂ ಒಳಗಿರುವುದು"[47]

ಅಂತೂ ಆತ್ಮನು ಎಂದರೆ ತನಗೆ ತಾನೇ ಎಲ್ಲಕ್ಕಿಂತಲೂ ಹೆಚ್ಚು ಪ್ರೀತಿಪಾತ್ರನು ಎಂದು ಲೌಕಿಕಾನುಭವದಿಂದಲೇ ಗೊತ್ತಾಯಿತಷ್ಟೆ? ಪರಮಾತ್ಮನೇ ಈ ಆತ್ಮದ ಪರಮಾರ್ಥವಾಗಿರುವುದರಿಂದ ನಮಗೆ ನಮ್ಮ ಮೇಲಿರುವ ಪ್ರೇಮವು ನಿಜವಾಗಿ ನಮ್ಮೊಳಗಿರುವ ಪರಮಾತ್ಮನಲ್ಲಿರುವ ಪ್ರೇಮವೇ ಎಂದಾಯಿತು. ಈ ಪ್ರೇಮವು ನಮಗೆ ಕಾರಣವು ಗೊತ್ತಿಲ್ಲದೆ ವಿಷಯಗಳಲ್ಲಿಯೋ, ನಮ್ಮ ಹುಸಿಯ ರೂಪವಾದ ನಾನು ಎಂಬ ಕಲ್ಪಿತಾತ್ಮನಲ್ಲಿಯೋ ಇರುತ್ತದೆ. ಇದಕ್ಕೆ ಬದಲು ನಮ್ಮೆಲ್ಲರಿಗೂ ನಿಜವಾದ ಆತ್ಮನಾಗಿರುವ ಭಗವಂತನಲ್ಲಿ ಇದೇ ಪ್ರೇಮವುಂಟಾದರೆ ಅದು ಭಕ್ತಿಯೆನಿಸುವುದು. ಈ ಕಾರಣದಿಂದ ಈತನಲ್ಲಿ ಪರಮಪ್ರೇಮರೂಪವಾಗಿರುವುದೇ ಭಕ್ತಿ ಎಂದು ಈ ಸೂತ್ರದಲ್ಲಿ ಹೇಳಿರುತ್ತದೆ'.[48]

ಮೇಲೆ ಹೇಳಿದ ವಿಚಾರವು ಕನ್ನಡದ ಸಂತ ಕವಿಗಳಾದ ನಿಜಗುಣಶಿವಯೋಗಿಗಳು 'ಕೈವಲ್ಯ ಪದ್ಧತಿ' ಎಂಬ ಗ್ರಂಥದ 'ನೀತಿಕ್ರಿಯಾಚರ್ಯ ಸ್ಥಲ'ದಲ್ಲಿ ಬರುವ **'ಕರುಣಿಸೆನಗಿದನೆ ಬೇಡುವೆನಭವ ಬೇರೊಂದು ವರವನೊಲ್ಲೆನು ಮುಕುತಿ ದೊರೆವ ಸಾಧನವ'** ಎನ್ನುವ ಕೀರ್ತನೆಯ ಎರಡನೆಯ ಚರಣದಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ[49] :

**ಆವಕಾಲದೊಳು ಬಳಿಕಾವ ದೇಶದೊಳು ಬೇ_**
**ರಾವ ವಸ್ತುವಿನೊಳೆಡೆವೆರೆಯದತಿ ಮಮತೆ ।**
**ಆವಪರಿಯೊಳು ತನ್ನ ಮೇಲಿರ್ಪುದಂತೆ ಗುರು_**
**ದೇವತೆಯೊಳನುರಾಗವಿಹುದೆ ನಿಜಭಕ್ತಿ ॥**

ಯಾವ ಕಾಲದಲ್ಲೇ ಆಗಲಿ, ಯಾವ ದೇಶ, ಪರಿಸ್ಥಿತಿಯಲ್ಲೇ ಆಗಲಿ ಮನುಷ್ಯ ತನ್ನ ಬಗ್ಗೆ ಅದೆಷ್ಟು ಮಮತೆಯನ್ನಿರಿಸಿಕೊಂಡಿರುತ್ತಾನೋ ಅಷ್ಟು ಇನ್ನ್ಯಾರನ್ನೂ ಪ್ರೀತಿಸಲಾರ. ಅಜ್ಞಾನದಿಂದ ದೇಹವೇ ತಾನೆಂದು ತಿಳಿದುಕೊಂಡು ತನ್ನ ದೇಹದ ಬಗ್ಗೆ ಇರಿಸಿಕೊಂಡಿರುವ ಮಮತೆಯನ್ನು ದೇಹದೊಳಗೆ ದೇಹಿಯಾಗಿರುವ ಗುರು ಮತ್ತು ದೇವರಲ್ಲಿ (ಸ್ವರೂಪತಃ ಗುರು ಮತ್ತು ದೇವರು ಒಂದೇ ಆಗಿದ್ದಾರೆ[50]) ಇರಿಸುವುದೇ ನಿಜಭಕ್ತಿ ಎನ್ನುತ್ತಾರೆ ನಿಜಗುಣ ಶಿವಯೋಗಿಗಳು.

ಪ್ರೀತಿಯೇ ಭಕ್ತಿಯ ಮೂಲ ಸೆಲೆಯಾಗಿದೆ. ಆದರೆ ಪ್ರೀತಿಯನ್ನೇ ತಪ್ಪಾಗಿ ಅರ್ಥೈಸಿಕೊಂಡವರು ಬಹಳ ಮಂದಿ. ಪ್ರೀತಿಯೆಂದರೇನು? ಈ ಕುರಿತಾಗಿ ಚಿಂತಕರಾದ ಜಿಡ್ಡು ಕೃಷ್ಣಮೂರ್ತಿಯವರ ಕೆಲವು ಆಯ್ದ ಚಿಂತನೆಗಳು ಇಂತಿವೆ:

"ನಾನು ಕೋಟು, ಕಾರು, ಮನೆ, ಸೀರೆಗಳನ್ನು ಹೊಂದಿರುತ್ತೇನೆ. ಅವುಗಳನ್ನು ಪಡೆದಿರುವುದರಿಂದ ತೃಪ್ತಿಯ ಭಾವವನ್ನು ಅನುಭವಿಸುತ್ತೇನೆ. ಆ ಭಾವದ ಮೇಲೆ ಅವಲಂಬಿತನಾಗಿರುತ್ತೇನೆ. ನನ್ನ ಅಂತರಂಗಕ್ಕೆ ಈ ಭಾವ ತೃಪ್ತಿ ಮುಖ್ಯವಾಗಿರುತ್ತದೆ. ಹೀಗೆ ಯಾರನ್ನಾದರೂ ಹೊಂದುವುದು, ಪಡೆದುಕೊಂಡಿರುವುದು, ಭಾವನಾತ್ಮಕವಾಗಿ ಇನ್ನೊಬ್ಬರ ಮೇಲೆ ಅವಲಂಬಿತನಾಗಿರುವುದು, ಇದನ್ನೇ ನಾವು ಪ್ರೀತಿಯೆಂದು

ಕರೆಯುತ್ತೇವೆ. ಆದರೆ ಪರೀಕ್ಷಿಸಿ ನೋಡಿದರೆ, 'ಪ್ರೀತಿ' ಎಂಬ ಪದದ ಹಿಂದೆ ಮನಸ್ಸು ಮತ್ತೊಬ್ಬ ವ್ಯಕ್ತಿಯನ್ನು ತನ್ನದಾಗಿಸಿಕೊಂಡು, ಹೊಂದಿ, ಪಡೆದು ಹಾಗೆ ತನ್ನದಾಗಿಸಿಕೊಂಡಿರುವುದರಲ್ಲಿ ತೃಪ್ತಿಯನ್ನು ಪಡೆಯುತ್ತಿರುವುದು ತಿಳಿಯುತ್ತದೆ. ಅನೇಕ ಸೀರೆಗಳು, ಒಳ್ಳೆಯ ಕಾರು, ದೊಡ್ಡ ಮನೆ, ಇವುಗಳನ್ನೆಲ್ಲ ಪಡೆದಿರುವುದರಿಂದ, ಇವೆಲ್ಲ ನಿಮ್ಮದಾಗಿರುವುದರಿಂದ, ಒಳಗೇ ಒಂದು ತರದ ದೊಡ್ಡ ತೃಪ್ತಿ ಇರುತ್ತದೆ. 'ನಾನು' ಮತ್ತು 'ನನ್ನದು' ಎಂಬ ಭಾವಗಳೇ ಮನಸ್ಸಿನ ತಿರುಳು. ಮನಸ್ಸೆಂದರೆ ಅದೇ. ಮನಸ್ಸು ತಾನು ಏನೋ ಆಗಿದ್ದೇನೆ, ಮಹಾಪುರುಷ, ಜಾಣ, ಮೂರ್ಖ ಇತ್ಯಾದಿಯಾಗಿ ಅಂದುಕೊಂಡಷ್ಟೂ ತನ್ನ ಸುತ್ತ ಗೋಡೆಗಳನ್ನು ಕಟ್ಟಿಕೊಂಡು ಮುಚ್ಚಿದ ಮನಸ್ಸು, ಡಲ್ ಆದ ಮನಸ್ಸು ಆಗಿಬಿಡುತ್ತದೆ. ಮುಚ್ಚಿಕೊಂಡ ಮನಸ್ಸಿನಲ್ಲಿ ನೋವು ಹುಟ್ಟುವುದು ಅನಿವಾರ್ಯ. ನೋವಿನಿಂದ ನರಳುವ ಮನಸ್ಸು 'ಈಗ ನಾನೇನು ಮಾಡಲಿ' ಎಂದು ಕೇಳುತ್ತದೆ. ಎಚ್ಚರ ಮತ್ತು ಸ್ಫುಟವಾದ ಆಲೋಚನೆಯ ಮೂಲಕ ತನ್ನ ಸುತ್ತಲೂ ಗೋಡೆಗಳನ್ನು ಕೆಡವಿಕೊಳ್ಳುವ ಬದಲು, ತನ್ನ ಸುತ್ತಲೂ ಗೋಡೆಗಳು ಏಕಿವೆ ಎಂದು ಅರಿಯುವ ಬದಲು, ತನ್ನಿಂದಾಚೆಗೆ ಇರುವ ಮತ್ತೆ ಯಾವುದೋ ಸಂಗತಿಯ ಅವಲಂಬನೆಗೆ ಮತ್ತೆ ಆ ಅವಲಂಬನೆಗೆ ಸಿಕ್ಕಿಬೀಳುವುದಕ್ಕೆ ಬಯಸುತ್ತದೆ. ಕ್ರಮೇಣ ಮನಸ್ಸೇ ಪ್ರೀತಿಗೆ ಬಲು ದೊಡ್ಡ ಪ್ರತಿಬಂಧಕವಾಗುತ್ತದೆ. ಅಡಚಣೆಯಾಗುತ್ತದೆ. ಮನಸ್ಸನ್ನು ಅರ್ಥಮಾಡಿಕೊಳ್ಳುವುದೆಂದರೆ ನಮ್ಮ ಆಲೋಚನೆಯ ದಾರಿಗಳನ್ನು ತಿಳಿದುಕೊಳ್ಳುವುದು. ಮನಸ್ಸೇ ನಮ್ಮ ಎಲ್ಲ ಕ್ರಿಯೆಗಳ ಒಳಮೂಲ ಅದನ್ನು ಅರ್ಥಮಾಡಿಕೊಳ್ಳದಿದ್ದರೆ ಪ್ರೀತಿ ಎಂದರೇನು ಎಂದು ತಿಳಿಯಲು ಸಾಧ್ಯವಿಲ್ಲ."[51]

ಸ್ವಾರ್ಥದಿಂದ ಕೂಡಿರುವ ಮೋಹಕ್ಕೂ, ಪ್ರೀತಿಗೂ ವ್ಯತ್ಯಾಸವಿದೆ. ಈ ವ್ಯತ್ಯಾಸದ ಕುರಿತು ಹೀಗೆ ಹೇಳುತ್ತಾರೆ:

"ನಿಮ್ಮಲ್ಲಿ ಮತ್ತೊಬ್ಬರ ಬಗ್ಗೆ ಆಕರ್ಷಣೆ ಹುಟ್ಟಿದಾಗ ಅವರು ನಿಮ್ಮವರಾಗಬೇಕು, ನೀವು ಅವರನ್ನು ಪಡೆಯಬೇಕು ಎಂಬ ಹಂಬಲ ಹುಟ್ಟುತ್ತದೆ. ಆ ವ್ಯಕ್ತಿ ನಿಮ್ಮನ್ನು ಬಿಟ್ಟು ಬೇರೆ ಯಾರನ್ನೂ ನೋಡಬಾರದು, ಬಯಸಬಾರದು ಎನ್ನುತ್ತೀರಿ. ಮತ್ತೊಬ್ಬ ಮನುಷ್ಯ ಜೀವಿಯನ್ನು ಹೀಗೆ ನಿಮ್ಮ ಆಧೀನದಲ್ಲಿಟ್ಟುಕೊಳ್ಳುವುದು ಪ್ರೀತಿಯೇ? ಖಂಡಿತ ಅಲ್ಲ, ಮತ್ತೊಬ್ಬ ಮನುಷ್ಯ ಜೀವಿಯ ಸುತ್ತಲೂ 'ಇದು ನನ್ನದು' ಎಂಬ ಗೋಡೆ ಕಟ್ಟಿದಾಗ ಪ್ರೀತಿ ಇರುವುದಿಲ್ಲ."[52]

ಸಂತರು ಭಗವಂತನಲ್ಲಿಡುವ ಪ್ರೀತಿಯಲ್ಲಿ ಸ್ವಾರ್ಥಕ್ಕೆ, ಫಲಾಪೇಕ್ಷೆಗೆ ಎಳ್ಳಷ್ಟು ಅವಕಾಶವಿಲ್ಲ, ಏನಿದ್ದರೂ ಶರಣಾಗತಿಯ, ಸಮರ್ಪಣಾಭಾವ. ಶ್ರೀಪಾದರಾಜರು ಭಗವಂತನನ್ನು ಪ್ರಾರ್ಥಿಸುತ್ತಾರೆ[53]:

'ನಾ ನಿನ್ನೊಳೇನನ್ನು ಬೇಡುವುದಿಲ್ಲ, ಹೃದಯಮಂಟಪದೊಳು ನೆಲೆಸಿರು ಹರಿಯೆ'
ಶಿರ ನಿನ್ನ ಚರಣಕ್ಕೆರಗಲಿ ಚಕ್ಷು ಎರಕದಿಂದಲಿ ನಿನ್ನ ನೋಡಲಿ ಹರಿಯೆ
ಕರಣ ಗೀತಂಗಳ ಕೇಳಲಿ ನಾಸಿಕ ನಿರುವಾಲ್ಯನುದಿನ ಘ್ರಾಣಿಸಲಿ ಹರಿಯೆ ॥

..............................

**ಚಿತ್ತ ನಿನ್ನೊಳು ಮುಳುಗಾಡಲಿ । ನಿನ್ನ ಭಕ್ತ ಜನರ ಸಂಗ ದೊರಕಲಿ ಹರಿಯೆ । ವೃತ್ತಿ ತತ್ವಯೋಗಾಭ್ಯಾಸಕ್ಕಾಗಲಿ – ರಂಗ ವಿಠಲ ನಿನ್ನ ದಯವಾಗಲಿ ಹರಿಯೆ ॥**

ಒಟ್ಟಾರೆಯಾಗಿ ಶರಣಾಗತಿ ಈ ಕೀರ್ತನೆಯು ಆಧಾರಶ್ರುತಿಯಾಗಿದೆ. ಬಸವಣ್ಣನವರ ಒಂದು ಸುಪ್ರಸಿದ್ಧ ವಚನವು ಸರ್ವ ಸಮರ್ಪಣಾ ಭಾವದ ಪರಾಕಾಷ್ಠೆಯನ್ನು ಬಿಂಬಿಸುತ್ತದೆ[54]:

**ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ**

**ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ**

ಶರಣಾಗತಿಯ ಉತ್ಕಟ ಭಾವವನ್ನು ವ್ಯಕ್ತಪಡಿಸುವ ಅದ್ವೈತಪರಂಪರೆಯ ಹರಿದಾಸರಾದ ಕರ್ಕಿ ಕೇಶವದಾಸರ ಒಂದು ಕೀರ್ತನೆ ಇಂತಿದೆ[55]: (ಪುಟ 213)

**ಹರಿಯೇ ನಿನ್ನಯ ಭಕ್ತಿಯದರವೊಂದುಳಿದು ನಾ**
**ಸಿರಿಯರಸನೆ ನಿನ್ನೊಳನ್ಯ ಕೇಳೆನು ರಂಗಾ** ಪ
**ಸತಿ ಬೇಡ ಸುತ ಬೇಡ ಪತಿ ಬೇಡ ಸುತೆ ಬೇಡ**
**ಸತತ ಶ್ರೀ ಹರಿ ನಿನ್ನಧ್ಯಾನವ ಕೊಡಲೋ** 1
**ಗತಿ ಬೇಡ ಸ್ಥಿತಿ ಬೇಡ ಸುಖ ದು:ಖ ಭವ ಬೇಡ**
**ಪತಿತ ಪಾವನ ನಿನ್ನ ಸ್ತೋತ್ರವ ಕಲಿಸೋ** 2
**ಸಿರಿ ಬೇಡ ಕರಿ ಬೇಡ ಹಣ ಬೇಡ ಮನೆ ಬೇಡ**
**ಸಿರಿ ಚೆನ್ನಕೇಶವನ ಮಹಿಮೆಯ ತಿಳಿಸೋ**

ಈ ರೀತಿಯ ಸರ್ವಸಮರ್ಪಣಾಭಾವವೇ ಪರಮ ಪ್ರೇಮದ ಲಕ್ಷಣವಾಗಿದೆ, ಭಕ್ತಿಯ ಕುರುಹಾಗಿದೆ.

ಶಾಂಡಿಲ್ಯ ಭಕ್ತಿ ಸೂತ್ರದಲ್ಲಿ ಭಕ್ತಿಯನ್ನು ನಿರ್ವಚನ ಮಾಡುವ ಸಂದರ್ಭದಲ್ಲಿ **'ಸಾ ಪರಾನುರಕ್ತಿರೀಶ್ವರೇ'**[56] – 'ಅದು ಈಶ್ವರನಲ್ಲಿ ಅತ್ಯಂತ ಅನುರಕ್ತಿ' ಎಂಬುದಾಗಿ ಹೇಳಿದ್ದಾರೆ. ಪ್ರಾಪಂಚಿಕ ಪ್ರೀತಿಯು ಸಾಮಾನ್ಯ ವಿಷಯವಸ್ತುಗಳನ್ನು, ಬಂಧುಮಿತ್ರಾದಿಗಳನ್ನು ಕುರಿತಾದದ್ದು ಆಗಿದೆ. ಆದರೆ ಭಕ್ತಿಯು ಜಗತ್ಕರ್ತೃವೂ ಜಗನ್ನಿಯಾಮಕನೂ ಆದ ಈಶ್ವರನನ್ನು ಕುರಿತದ್ದಾಗಿದೆ.

ಅನುರಕ್ತಿ ಎಂಬ ಪದದಲ್ಲಿರುವ 'ಅನು' ಎಂಬ ಶಬ್ದವು ಅನುಸರಿಸಿ ಬರುವ, ಅನಂತರ ಉಂಟಾಗುವ ಎಂಬ ಅರ್ಥವುಳ್ಳದ್ದು. ಓರ್ವ ವ್ಯಕ್ತಿಯ ಕುರಿತು ತಿಳಿಯುತ್ತಾ ಹೋದಂತೆ, ಒಂದು ವೇಳೆ ಆ ವ್ಯಕ್ತಿಯು ಶ್ರೇಷ್ಠನಾಗಿದ್ದಲ್ಲಿ, ಆ ವ್ಯಕ್ತಿಯ ಮೇಲಿನ ಪ್ರೀತಿ, ಗೌರವ ಹೆಚ್ಚಾಗುತ್ತಾ ಹೋಗುತ್ತದೆ. ಹಾಗೆಯೇ ಈಶ್ವರನ ಮಾಹಾತ್ಮ್ಯ ಜ್ಞಾನವು ಆದ ಬಳಿಕ, ಆ ಮಾಹಾತ್ಮ್ಯವನ್ನು ಹೆಚ್ಚು ಹೆಚ್ಚು ಅನುಭವ ಮಾಡುತ್ತಾ ಹೋದಂತೆ ಅವನ ಕುರಿತಾದ ಪ್ರೀತಿಯು ಅಥವಾ ಭಕ್ತಿಯೂ ಸಹ ಹೆಚ್ಚಾಗುತ್ತದೆ.

ಇದಕ್ಕಾಗಿಯೇ ಶ್ರೀ ಮನ್ಮಧ್ವಾಚಾರ್ಯರು ಭಕ್ತಿಯ ಸ್ವರೂಪದ ನಿಷ್ಕರ್ಷೆಯನ್ನು ಮಾಡುವಾಗ ಹೀಗೆ ವಿವರಿಸಿದರು[57]:

**'ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ ।**

**ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನಚಾನ್ಯಥಾ ॥' – ಭಾರತ ತಾತ್ಪರ್ಯ ನಿರ್ಣಯ**

(ವಸ್ತುವಿನ ಹಿರಿಮೆಯ ಅರಿವಿನಿಂದ ಪುಟಗೊಂಡು ಎಲ್ಲವನ್ನೂ ಮೀರಿನಿಂತ ಅಚಲವಾದ ಪ್ರೀತಿಯೆ ಭಕ್ತಿ)[58]. ಮಾಹಾತ್ಮ್ಯಜ್ಞಾನವೂ ಸುದೃಢ ಸ್ನೇಹವೂ ಸೇರಿದರೆ ಭಕ್ತಿ.(ಹರಿದಾಸರ ಎಣಿಕೆಯಲ್ಲಿ ಜ್ಞಾನವೆಂದರೆ ಹರಿಯು ಬಿಂಬನೆಂಬ, ಜೀವನು ಪ್ರತಿಬಿಂಬನೆಂಬ ಅರಿವು; ಪರಸ್ನೇಹವೆಂದರೆ ಬಿಂಬೋಪಾಸನೆ. ಎರಡೂ ಕೂಡಿ ಭಕ್ತಿಯೆಂದರೆ ಬಿಂಬಾಪರೋಕ್ಷ.[59]) ಭಗವಂತನ ಹಿರಿಮೆಯನ್ನು ಅರಿಯುತ್ತಾ ಹೋದಂತೆ ದೃಢವಾಗುವಂಥಾದ್ದು ಭಕ್ತಿ. ಇದಕ್ಕಾಗಿ ಉಪಾಸನೆಯ ಕುರಿತಾಗಿ ಹೇಳುವಾಗಲೂ ಮಧ್ವಾಚಾರ್ಯರು ಉಪಾಸನೆಯಲ್ಲಿ ಎರಡು ಬಗೆಗಳು ಎಂದು ತಿಳಿಯಹೇಳಿದರು[60]:

**'ಸೋಪಾಸಾ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಣೀ।**

**ಧ್ಯಾನರೂಪಾ ಪರಾ ಚೈವ ತದಂಗಂ ಧಾರಣಾಧಿಕಂ॥**

ಮೊದಲನೆಯದು ಶ್ರವಣ–ಮನನರೂಪವಾದುದು, ಶಾಸ್ತ್ರಾವಮರ್ಶನ, ಶಾಸ್ತ್ರಾಭ್ಯಾಸ. ಎರಡನೆಯದು ಧ್ಯಾನ(ಧ್ಯಾನಂ ಹರೇಃ).'

ಭಗವದ್ವಿಷಯವನ್ನು ಶ್ರವಣ ಮಾಡಿದಾಗ ಅಥವಾ ಅಧ್ಯಯನ ಮಾಡಿದಾಗ ಲಭಿಸುವಂತಹ ಮಾಹಾತ್ಮ್ಯ ಜ್ಞಾನವನ್ನು ಒಂದು ಪ್ರಚೋದನೆಯೆಂದು ಪರಿಗಣಿಸಿದರೆ, ಪ್ರಚೋದನೆಯಿಂದ ಆಗುವ ಪರಿವರ್ತನೆಯ ಕುರಿತು ಮನಶ್ಶಾಸ್ತ್ರಜ್ಞರು ಹೀಗೆ ಹೇಳುತ್ತಾರೆ[61]:

"ಒಂದು ಪ್ರಚೋದನೆಗೆ ಸಂಬಂಧಪಟ್ಟಂತೆ ಭಾವನೆ, ಯೋಚನೆ ಮತ್ತು ವರ್ತನೆ ಸರದಿಯಂತೆ ನಿಧಾನವಾಗಿ ರೂಪುಗೊಳ್ಳಬಹುದು ಅಥವಾ ಈ ಎಲ್ಲವೂ ಒಟ್ಟಿಗೆ ಎಂಬಂತೆ ಕ್ಷಣಾರ್ಧದಲ್ಲಿ ನಡೆದುಬಿಡಬಹುದು. ಪ್ರಚೋದನೆಯಿಂದ ಭಾವನೆ, ಯೋಚನೆ ಮತ್ತು ವರ್ತನೆ ತಮ್ಮಷ್ಟಕ್ಕೆ ತಾವೇ ಆಗಿಬಿಡುತ್ತವೆ ಎಂಬುದೂ ನಿಜ. ಹಾಗೆಯೇ ಇವನ್ನು ಬದಲಾಯಿಸಿಕೊಳ್ಳುವಂತೆ ಅವುಗಳ ಮೇಲೆ ಹತೋಟಿ ಸಾಧಿಸಲು ಮನುಷ್ಯನಿಗೆ ಸಾಧ್ಯವಿದೆ ಎಂಬುದೂ ನಿಜ."

ಭಗವದ್ವಿಷಯವನ್ನು ಶ್ರವಣ ಮಾಡಿದಾಗ ಮನಸ್ಸು ಪ್ರಚೋದನೆಗೆ ಒಳಗಾಗಬಹುದು, ಸದ್ಭಾನೆ ಮೂಡಬಹುದು. ಆ ಸದ್ಭಾವನೆ ಶ್ರವಣ, ಕೀರ್ತನ, ಸ್ಮರಣಾದಿ ಭಕ್ತಿ ಸಾಧನೆಗಳಿಗೆ ಪ್ರೇರಣದಾಯಿಯಾಗಬಹುದು. ಈ ಪ್ರಕ್ರಿಯೆಯ ಘಟಿಸುವಿಕೆಗೆ ನಾವು ಯಾವುದೇ ಕಾಲ ನಿರ್ಣಯವನ್ನು ಮಾಡಿಕೊಳ್ಳಲು ಸಾಧ್ಯವಿಲ್ಲ. ಕಾರಣ ಮನಶ್ಶಾಸ್ತ್ರಜ್ಞರು ಹೇಳುವ ಮಾನಸಿಕ ಪರಿವರ್ತನೆಯ ಕುರಿತಾದ ಮಾತು ಒಂದು ಜನ್ಮಕ್ಕೆ ಮಾತ್ರ ಸೀಮಿತಗೊಂಡದ್ದಾಗಿದೆ. ಆದರೆ ಭಕ್ತಿಯ ಬೆಳವಣಿಗೆ ಜನ್ಮ ಜನ್ಮಾಂತರಗಳ ಸಂಸ್ಕಾರಗಳಿಗೆ ಸಂಬಂಧಿಸಿದ್ದಾಗಿದೆ. ಕನಕದಾಸರು ತಮ್ಮ ಒಂದು ಕೀರ್ತನೆಯಲ್ಲಿ ಹೇಳುತ್ತಾರೆ[62]:

**ಪೂರ್ವ ಜನ್ಮದಲಿ ನಾ ಮಾಡಿದ ಕರ್ಮದಿಂ**

**ಉರ್ವಿಯೊಳು ಜನಿಸಿದೆನೊ ಕೃಷ್ಣ॥**

ಹಾಗೆಯೇ ಪುರಂದರದಾಸರು ಕೂಡಾ ತಮ್ಮ **'ಆದದ್ದೆಲ್ಲಾ ಒಳಿತೇ ಆಯಿತು'** ಎನ್ನುವ ಕೀರ್ತನೆಯಲ್ಲಿ ತಮ್ಮ ಪೂರ್ವ ವೃತ್ತಾಂತವನ್ನು ಅರುಹುತ್ತಾ, ನವಕೋಟಿ

ನಾರಾಯಣರಾಗಿದ್ದ ತಮ್ಮ ಜೀವನದಲ್ಲಿ ಆದ ಪರಿವರ್ತನೆಯ ಕುರುಹನ್ನು ನೀಡುತ್ತಾರೆ[63]:

**ದಂಡಿಗೆ ಬೆತ್ತ ಹಿಡಿಯುವುದಕ್ಕೆ ಮಂಡೆ ಮಾಚಿ ನಾಚುತಿದ್ದೆ।**

**ಹೆಂಡತಿ ಸಂತತಿ ಸಾವಿರವಾಗಲಿ ದಂಡಿಗೆ ಬೆತ್ತ ಹಿಡಿಸಿದಳಯ್ಯ॥**

**ಗೋಪಾಲಬುಟ್ಟಿ ಹಿಡಿಯುವುದಕ್ಕೆ ಭೂಪತಿಯಂತೆ ಗರ್ವಿಸುತಿದ್ದೆ।**

**ಆ ಪತ್ನಿ ಕುಲ ಸಾವಿರವಾಗಲು ಗೋಪಾಲಬುಟ್ಟಿ ಹಿಡಿಸಿದಳಯ್ಯ॥**

**ತುಳಸೀಮಾಲೆಯ ಹಾಕುವುದಕ್ಕೆ ಅರಸನಾಗಿ ನಾಚುತಿದ್ದೆ।**

**ಸರಸಿಜಾಕ್ಷ ಪುರಂದರವಿಠಲನು ತುಳಸೀಮಾಲೆ ಹಾಕಿಸಿದನು॥**

ಭಗವಂತನಲ್ಲಿ ಶರಣಾಗತಿಯು ಆಗಿಂದಾಗ್ಯೆ ಹುಟ್ಟಿಕೊಳ್ಳುವಂತಹುದಲ್ಲ. ಸ್ವಾಮಿ ನಿತ್ಯಸ್ಥಾನಂದರು 'ಅಹಂಪ್ರತ್ಯಯವನ್ನು ಪೂರ್ಣದೊಂದಿಗೆ ಒಂದಾಗಿಸುವುದೇ ಶರಣಾಗತಿ'[64] ಎನ್ನುತ್ತಾರೆ. ಇಲ್ಲಿ ಪೂರ್ಣ ಅಂದರೆ ಭಗವಂತ. ಈ ಕುರಿತಾಗಿ ಮನಶ್ಶಾಸ್ತ್ರದ ಆಧಾರದಲ್ಲಿ ಅವರು ನೀಡುವ ವಿವರಣೆ ಇಂತಿದೆ[65]:

"Transactional Analysis ಎಂಬ ಮನಶ್ಶಾಸ್ತ್ರದ ವಿಧಾನದಲ್ಲಿ ಅಹಂ ಪ್ರತ್ಯಯವನ್ನು ಮೂರು ಅವಸ್ಥೆಗಳಾಗಿ ವಿಭಾಗಿಸಲಾಗಿದೆ. ಪಿತೃ–ಅಹಂ( Parental ego), ವಯಸ್ಕ ಅಹಂ(Adult ego) ಮತ್ತು ಶಿಶು–ಅಹಂ(Child ego). ಈ ಮೂರು ಅವಸ್ಥೆಗಳು ವ್ಯಕ್ತಿಯ ಆಯುಸ್ಸಿಗೆ ಅಥವಾ ವಯೋಮಾನಕ್ಕೆ ಸಂಬಂಧಿಸಿದುದಲ್ಲ, ಇವು ಪ್ರತಿಯೊಬ್ಬರಲ್ಲಿಯೂ ವಿವಿಧ ಪ್ರಮಾಣದಲ್ಲಿ ಇರುವಂಥವು..... ಅಹಂನ ಈ ಮೂರು ಅವಸ್ಥೆಗಳು, ವಿವಿಧ ಅಂಶಗಳು ಸೇರಿ ನಮ್ಮ ವ್ಯಕ್ತಿತ್ವ ರೂಪಿತವಾಗಿದೆ ಎಂಬುದನ್ನು ಸೂಚಿಸುತ್ತವೆ. ಮೊದಲನೆಯ ಪಿತೃ–ಅಹಂ ನಾವು ಹೊರಗಿನಿಂದ ಪಡೆದುದು(ವಿಶೇಷವಾಗಿ ತಂದೆ ತಾಯಿಯರ ಮನೋಭಾವಗಳು, ಧೋರಣೆಗಳು, ವರ್ತನೆಗಳು ಇವುಗಳ ಮೂಲಕ ರೂಪಿತವಾದುದು ಪಿತೃ–ಅಹಂ). ಎರಡನೆಯ ವಯಸ್ಕ–ಅಹಂ ನಾವು ಈಗ ನಮ್ಮ ಅನುಭವಗಳ ಮೂಲಕ ಪಡೆಯುವಂತಹುದು. ಇದು ವಾಸ್ತವ ದೃಷ್ಟಿಕೋನದ ರೂಪದಲ್ಲಿ ವ್ಯಕ್ತವಾಗುತ್ತದೆ. ಮೂರನೆಯ ಶಿಶು–ಅಹಂ ನಾವು ಹುಟ್ಟುವಾಗಲೆ ಪಡೆದುಕೊಂಡು ಬಂದ ಆಸ್ತಿ– ಅದು ನಮ್ಮ ಪೂರ್ವಸಂಸ್ಕಾರಗಳ ಮೊತ್ತ. ಕಾಮಕ್ರೋಧಾದಿ ಭಾವೋದ್ವೇಗಗಳಿಗೆ ವಶವಾಗುವ

ಪ್ರವೃತ್ತಿ ಮತ್ತು ಸ್ವಾಭಾವಿಕವಾಗಿ ಹರ್ಷದಿಂದ ಕೂಡಿರುವ ಪ್ರವೃತ್ತಿ ಈ ಅಹಂಕಾರಕ್ಕೆ ಸಂಬಂಧಿಸಿದುದು. ಇವಿಷ್ಟೂ ವ್ಯಕ್ತಿಯ ಮಾನಸಿಕ ಸ್ತರಕ್ಕೆ ಸೇರಿರುವುದೆಂಬುದು ಸ್ಪಷ್ಟ. ಹಿಂದೂಶಾಸ್ತ್ರದ ದೃಷ್ಟಿಯಿಂದ ಇದು ಮನೋಮಯಕೋಶಕ್ಕೆ ಸಂಬಂಧಿಸಿದುದು."

ಮೇಲಿನ ವಿಚಾರದಿಂದ ಭಗವಂತನ ಕುರಿತಾದ ಒಲವು ನಮ್ಮಲ್ಲಿ ಅರಳಬೇಕಾದರೆ ಪೂರ್ವಜನ್ಮದ ಸಂಸ್ಕಾರಗಳ ಪಾತ್ರವೂ ಮಹತ್ವದ್ದಾಗಿದೆ ಎಂದು ತಿಳಿಯುವುದು.

ಸ್ವಾಮಿ ವಿವೇಕಾನಂದರು ಈ ಕುರಿತಾಗಿ ಹೀಗೆ ಹೇಳುತ್ತಾರೆ[66]:

"ಈ ಕ್ಷಣದಲ್ಲಿ ನಾನೇನಾಗಿದ್ದೇನೆಯೋ ಅದು ನನ್ನ ಪೂರ್ವಜನ್ಮದ ಸಮಸ್ತ ಸಂಸ್ಕಾರಗಳ ಮೊತ್ತದ ಫಲ. ನಿಜವಾಗಿಯೂ ಶೀಲ ಎಂದರೆ ಇದೇ."

ಈ ನೆಲೆಯಲ್ಲಿ ಶಾಂಡಿಲ್ಯರು ಹೇಳುವಂತಹ 'ಅನುರಕ್ತಿ' ಎನ್ನುವ ಪದದಲ್ಲಿನ 'ಅನು' ಎನ್ನುವ ಶಬ್ದವನ್ನು ವಿಶ್ಲೇಷಿಸಿದರೆ, ಅದೆಷ್ಟೋ ಜನ್ಮಗಳ ಸತ್ ಸಂಸ್ಕಾರಗಳ ಫಲವಾಗಿ ಭಗವಂತನ ಕುರಿತಾಗಿ ಮೂಡುವಂತಹ ಪ್ರೇಮವೇ ಭಕ್ತಿ ಎನ್ನಬಹುದು.

ಈ ಭಕ್ತಿಯು ಪರಮಪ್ರೇಮ ರೂಪವಾದುದು. ಪ್ರೇಮ ಎನ್ನುವುದು ಎಲ್ಲರಿಗೂ ಅನುಭವವೇದ್ಯವಾದುದು. ತಾಯಿ ಮಗುವನ್ನು ಪ್ರೀತಿಸುತ್ತಾಳೆ. ಗಂಡ ಹೆಂಡತಿಯನ್ನು ಪ್ರೀತಿಸುತ್ತಾನೆ. ಪತ್ನಿಯು ಪತಿಯನ್ನು ಪ್ರೀತಿಸುತ್ತಾಳೆ. ಆದರೆ ಈ ಸಾಮಾನ್ಯ ಪ್ರೀತಿಯಲ್ಲೆಲ್ಲಾ ಪ್ರತಿಫಲಾಕಾಂಕ್ಷೆಯ ಮಲಿನತೆ ಹುದುಗಿದೆ. ಪ್ರೀತಿಗೆ ಪ್ರತಿಯಾಗಿ ಪ್ರೀತಿಸುವ ವ್ಯಕ್ತಿಯು ಪ್ರೀತಿಸಲ್ಪಡುವ ವ್ಯಕ್ತಿಯಿಂದ ಅದೇ ಪ್ರಮಾಣದಲ್ಲಿ ಪ್ರೀತಿಯನ್ನು ನಿರೀಕ್ಷಿಸುತ್ತಾನೆ. ಇಲ್ಲವಾದರೆ ಪ್ರೀತಿಯ ಬದಲಾಗಿ ಐಶ್ವರ್ಯವೋ, ಅಧಿಕಾರವೋ, ಮತ್ಯಾವುದೋ ಲೌಕಿಕವಾದ ಪ್ರಯೋಜನವನ್ನು ಬಯಸುತ್ತೇವೆ.

ಸಾಮಾನ್ಯವಾಗಿ ಲೌಕಿಕವಾದ ಪ್ರೀತಿಯಲ್ಲಿ ಪ್ರತಿಫಲದ ಅಪೇಕ್ಷೆ ಹೂರಣವಾಗಿದೆ. ಆದರೆ ಭಕ್ತಿಯಲ್ಲಿ ಹಾಗಿಲ್ಲ, ಭಗವಂತನಲ್ಲಿ ವಿಜಯದಾಸರ ಕೋರಿಕೆ ಇದು:

**ಹೊನ್ನ ಹಣವ ಕೊಡಿಸಲಿ ಬ್ಯಾಡ**

**ಮನ್ನಣೆಯ ಮಾಡಿಸಲಿ ಬ್ಯಾಡ**

.............

**ನಿನ್ನವನೊ ನಿನ್ನವನೊ ನಿನ್ನವನೆಂಬೋದು**

**ಅನ್ನಂತ ಕಾಲದಲ್ಲಿ ಅನ್ನಿಸಿ ಪ್ರೀತಿಬಡಿಸೊ**

**ಕಣ್ಣಿಗೆ ಸುಳಿದು ನಿತ್ಯ ಮೂರ್ತಿಯ ತೋರೊ**

**ಘನ್ನ ವಿಜಯ ವಿಠಲರೇಯ......** (ದಾಸಸಾಹಿತ್ಯ ದರ್ಶನ, ಪುಟ 245, 246)

ಮಾನವನ ಮನಸ್ಸು ರಾಗದ್ವೇಷಗಳ ತವರು, ಅಹಂಕಾರದ ಗೂಡು, ಅಹಂಕಾರದಿಂದ ಪ್ರೇರಿತವಾದ ರಾಗ ದ್ವೇಷಯುಕ್ತ ಮನಸ್ಸುಳ್ಳ ಮನುಜರು, ತೋರುವ ಪ್ರೀತಿ ಎಂತಹುದು ಎನ್ನುವುದನ್ನು ಶ್ರೀಪಾದರಾಜರು ವರ್ಣಿಸುತ್ತಾರೆ.

**ಉಂಟಾದ ಕಾಲಕ್ಕೆ ನೆಂಟರು ಇಷ್ಟರು ಬಂಟರಾಗಿ ಬಂದು ಬಾಗಿಲ ಕಾಯ್ವರು**

**ಉಂಟಾದತನ ತಪ್ಪಿ ಬಡತನ ಬಂದರೆ ಒಂಟೆಯಂತೆ ಗೋಣ ಮೇಲೆತ್ತುವರು–**

(ಶ್ರೀಪಾದರಾಜರ ಕೃತಿಗಳು, ಸಂ.ಡಾ.ಜಿ.ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1987, ಪುಟ 17, ಕೀ.ಸಂ. 15)

ಆದರೆ ಪರಮಪ್ರೇಮದಲ್ಲಿ ಅಥವಾ ಪರಾನುರಕ್ತಿಯಲ್ಲಿ ಯಾವುದೇ ರೀತಿಯ ಪ್ರಯೋಜನದ ನಿರೀಕ್ಷೆಯಿರುವುದಿಲ್ಲ. ಅಲ್ಲಿ ಭಕ್ತನಿಗೆ ಭಗವಂತನ ಹೊರತಾಗಿ ಇನ್ನ್ಯಾವುದೂ ಬೇಕಾಗಿರುವುದಿಲ್ಲ. ಈ ಮನೋಭಾವವನ್ನು ಸಂತರ ಅನೇಕ ಕೃತಿಗಳಲ್ಲಿ ಗುರುತಿಸಬಹುದಾಗಿದೆ. ಅವುಗಳಲ್ಲಿ ಕೆಲವು ಇಂತಿವೆ:

ಶ್ರೀಪಾದರಾಜರ ಒಂದು ಕೀರ್ತನೆ [67],

**ಪಾಲೊಳಗದ್ದು ನೀರೊಳಗದ್ದು ಹರಿ ನಾ ನಿನ್ನ ನಂಬಿದೆನೊ।**

**ಜಲಜನಾಭ ನೀನಿಟ್ಟ ತೆರದಲ್ಲಿ ಇರುವೆನಯ್ಯ ||**

ಪುರಂದರದಾಸರ **'ತೇಲಿಸೊ ಇಲ್ಲಾ ಮುಳುಗಿಸೊ ನಿನ್ನ ಕಾಲಿಗೆ ಬಿದ್ದೆನೊ ಪರಮ ಕೃಪಾಳೋ'** ಎಂಬ ಕೀರ್ತನೆಯಲ್ಲಿ ಪರಮ ಪ್ರೇಮದ ಕುರುಹುಗಳನ್ನು ಕಾಣಬಹುದಾಗಿದೆ[68].

ಕನಕದಾಸರು ತಮ್ಮ ಅಂತರಂಗದ ಪ್ರೇಮವನ್ನು ಈ ರೀತಿ ಅರಿಕೆ ಮಾಡಿಕೊಳ್ಳುತ್ತಾರೆ (ಕ.ಸಾ.ಸಂ., ಪುಟ 104, ಕೀ.ಸಂ.104) :

**ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ**

**ಮರೆಯ ಮಾತೇಕಿನ್ನು ಅರಿತು ಪೇಳುವೆನು ॥ ಪ ॥**

ತಾಯಿ, ತಂದೆ, ಬಂಧುಗಳು, ರಾಜ್ಯ, ಅನ್ನ, ಪಡೆದ ಭೂಮಿ, ಮಡದಿ, ಮಕ್ಕಳು, ಕೊನೆಗೆ ಪ್ರಾಣವನ್ನಾದರೂ ಬಿಡಬಹುದು ಆದರೆ ನಿನ್ನಡಿಯ ಬಿಡಲಾಗದು ಎನ್ನುತ್ತಾರೆ ಕನಕದಾಸರು.

**ಪ್ರಾಣವನು ಪರರು ಬೇಡಿದರೆತ್ತಿಕೊಡಬಹುದು**

**ಮಾನದಲಿ ಮನವ ತಗ್ಗಿಸಲುಬಹುದು**

**ಪ್ರಾಣನಾಯಕನಾದ ಆದಿಕೇಶವರಾಯ**

**ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದೊ**

ಮುಂದಿನ ಸೂತ್ರದಲ್ಲಿ ಭಕ್ತಿಯ ಸ್ವರೂಪವನ್ನು ವರ್ಣಿಸುತ್ತಾ

**'ಅಮೃತಸ್ವರೂಪಾ ಚ ॥ ೩ ॥** ಮತ್ತು (ಅದು) ಅಮೃತಸ್ವರೂಪವೂ ಆಗಿರುತ್ತದೆ' ಅನ್ನುತ್ತಾರೆ ನಾರದರು[69].

ಅಮೃತ ಶಬ್ದಕ್ಕೆ ಹಲವು ಅರ್ಥಗಳುಂಟು. ಅಮೃತವು ಅತ್ಯಂತ ರುಚಿಕರವಾದ ವಸ್ತು. ಹಾಗೆಯೇ ಪರಾಭಕ್ತಿಯೂ ಕೂಡ. ಪರಾಭಕ್ತಿಯನ್ನು ಪಡೆದವನು 'ಅಮೃತ'ನಾಗುತ್ತಾನೆ; ಎಂದರೆ, ಅಮೃತತ್ವವನ್ನು ಪಡೆಯುತ್ತಾನೆ ಎನ್ನುತ್ತಾರೆ ನಾರದರು ಈ ಸೂತ್ರದಲ್ಲಿ.

ಮುಂಡಕೋಪನಿಷತ್ತು ಹೇಳುತ್ತದೆ (3–2–9):

'ಯಾರು ಆ ಪರಮವಾದ ಬ್ರಹ್ಮವನ್ನು ಅರಿತುಕೊಳ್ಳುತ್ತಾನೆಯೋ ಅವನು ಬ್ರಹ್ಮನೇ ಆಗುತ್ತಾನೆ. ಇವನ ಕುಲದಲ್ಲಿ ಬ್ರಹ್ಮವನ್ನರಿಯದವನು ಇರುವುದಿಲ್ಲ. ಅವನು ಶೋಕವನ್ನು ದಾಟುತ್ತಾನೆ, ಪಾಪವನ್ನು ದಾಟುತ್ತಾನೆ. ಹೃದಯ ಗುಹೆಯಲ್ಲಿರುವ (ಅವಿದ್ಯೆಯೆಂಬ) ಕಟ್ಟುಗಳಿಂದ ಬಿಡಲ್ಪಟ್ಟವನಾಗಿ ಅಮೃತನಾಗುತ್ತಾನೆ.'[70]

ಮುಂದೆ 4ನೇ ಸೂತ್ರದಲ್ಲಿ ನಾರದರು ಪರಾಭಕ್ತಿಯನ್ನು ಹೊಂದಿದ ಭಕ್ತನ ಲಕ್ಷಣವನ್ನು ಹೇಳುತ್ತಾ **'ಯಲ್ಲಬ್ಧ್ವಾ ಪುಮಾನ್ ಸಿದ್ಧೋ ಭವತಿ, ಅಮೃತೋ ಭವತಿ, ತೃಪ್ತೋ ಭವತಿ'** – ಅದನ್ನು ಪಡೆದು ಮನುಷ್ಯನು ಸಿದ್ಧನಾಗುತ್ತಾನೆ, ಅಮೃತನಾಗುತ್ತಾನೆ, ತೃಪ್ತನಾಗುತ್ತಾನೆ[71].

ಪರಾಭಕ್ತಿಯನ್ನು ಹೊಂದಿದಂತಹ ಭಕ್ತನೂ ಅಮೃತದಂತೆಯೇ ಸದ್ರುಚಿಯುಳ್ಳವನೂ, ಪ್ರೇಮಮಯವಾದ ವ್ಯಕ್ತಿತ್ವವುಳ್ಳವನೂ ಆಗುತ್ತಾನೆ ಎಂದು ಈ ಸೂತ್ರವು ಸೂಚಿಸುತ್ತದೆ. 'ಅಮೃತೀ ಭವತಿ' ಎಂಬ ಪಾಠಭೇದವೂ ಇದನ್ನೇ ಸೂಚಿಸುತ್ತದೆ. 'ಅಮೃತಿ' ಎಂದರೆ ಅಮೃತವುಳ್ಳವನು, ಅಮೃತದಂತೆ ರುಚಿಕರ, ಪರಮ ಹಿತಕಾರಿ, ಪರಮ ಪ್ರೇಮಮಯಿ ಎಂದು ಅರ್ಥೈಸಿಕೊಳ್ಳಬಹುದು.

ಅಮೃತವನ್ನು ಪಾನ ಮಾಡಿದವನಿಗೆ ಮರಣವಿಲ್ಲ ಎಂಬ ಪೌರಾಣಿಕ ನಂಬಿಕೆಯೂ ಇದೆ. ಇಲ್ಲಿ ಯಾರಿಗೆ ಪರಾಭಕ್ತಿಯು ಪ್ರಾಪ್ತವಾಗಿದೆಯೋ ಅವನು ಜನನ ಮರಣಗಳೆಂಬ ಭವಚಕ್ರದಿಂದ ಪಾರಾಗುತ್ತಾನೆ ಎಂದು ಕೂಡಾ ಅರ್ಥೈಸಬಹುದು. ಇದನ್ನು ನಿರೂಪಿಸುವಂತಹ ಅನೇಕ ಸಂತ ಕವಿಗಳ ಕೃತಿಗಳು ಲಭ್ಯವಿದೆ.

ಧನಲೋಭಿಯಾಗಿದ್ದ ಶ್ರೀನಿವಾಸ ನಾಯಕನು ಪುರಂದರದಾಸರಾಗಿ ಪರಿವರ್ತನೆ ಹೊಂದಿ, ಸ್ವರೂಪೋದ್ಧಾರಕರಾದ ವ್ಯಾಸರಾಯರಿಂದ ಹರಿದಾಸ ದೀಕ್ಷೆಯನ್ನು ಪಡೆದು ಕೃತಾರ್ಥರಾದ ಸಂದರ್ಭದಲ್ಲಿ ರಚಿಸಿದ್ದರೆನ್ನಲಾದ ಈ ಕೀರ್ತನೆ ನಿಜಭಕ್ತಿಯು ಹೃದಯದಲ್ಲಿ ತುಂಬಿದಾಗ ಅನುಭವಿಸುವ ಪರಮಾನಂದ ಹಾಗೂ ಪರಮ ಸಂತೃಪ್ತಿಯ ದ್ಯೋತಕವಾಗಿದೆ[72].

**ಹರಿದಾಸರ ಸಂಗವು ದೊರೆಯಿತು ಎನಗೀಗ ಇನ್ನೇನಿನ್ನೇನು ॥**

**ವರಗುರುವುಪದೇಶ ನೆರವಾಯ್ತು ಎನಗೇ ಇನ್ನೇನಿನ್ನೇನು ॥ಪ॥**

**ಏನೆಂದು ಹೇಳಲಿ ಆನಂದ ಸಂಭ್ರಮ । ಇನ್ನೇನಿನ್ನೇನು ॥**

**ಆ ನಂದಗೋಪನ ಕಂದನ ಮಹಿಮೆಯೇ ಇನ್ನೇನಿನ್ನೇನು ॥4॥**

**ಎನ್ನ ವಂಶಗಳೆಲ್ಲ ಪಾವನವಾದವು । ಇನ್ನೇನಿನ್ನೇನು ॥**

**ಚಿನ್ಮಯ ಪುರಂದರ ವಿಠಲಯ್ಯ ದೊರಕಿದ । ಇನ್ನೇನಿನ್ನೇನು ॥5॥** [73]

ಹರಿದಾಸ ದೀಕ್ಷೆಯನ್ನಿತ್ತ ಗುರುಗಳಾದ ವ್ಯಾಸರಾಯರನ್ನು ಸ್ತುತಿಸುವ ಸುಳಾದಿಯೊಂದರಲ್ಲಿ ಅಮೃತೋಪಮವಾದ ಆ ಸಂತೃಪ್ತಿಯನ್ನು ಮತ್ತೆ ಸೂಚಿಸುತ್ತಾರೆ[74].

**ವ್ಯಾಸರಾಯರ ಚರಣ ಕಮಲದರುಶನವೆನಗೆ**

**ಏಸು ಜನ್ಮದ ಸುಕೃತ ಫಲ ದೊರಕಿತೋ ಎನ್ನ**

**ಸಾಸಿರ ಕುಲಕೋಟಿ ಪಾವನ್ನವಾಯಿತು**

**ಶ್ರೀಶನ್ನ ಭಜಿಸುವದಕಧಿಕಾರಿ ನಾನಾದೆ**

**ದೋಷರಹಿತನಾದ ಪುರಂದರ ವಿಠಲನ**

**ದಾಸರ ಕರುಣವೆನ್ನ ಮೇಲೆ ಇರಲಾಗಿ**

ಇಂತಹುದೇ ಸಂದರ್ಭದಲ್ಲಿ ಆನಂದದಿಂದ ಪುರಂದರದಾಸರು ಹಾಡಿದರೆನ್ನಲಾದ ಉಗಾಭೋಗ [75]:

**ಇಂದಿನ ದಿನವೇ ಶುಭದಿನವು । ಇಂದಿನ ವಾರವೆ ಶುಭ ವಾರ ।**

**ಇಂದಿನ ತಾರೆಯೆ ಶುಭ ತಾರೆ । ಇಂದಿನ ಯೋಗವೆ ಶುಭ ಯೋಗ।**

**ಇಂದಿನ ಕರಣವೆ ಶುಭಕರಣ । ಇಂದು ಪುರಂದರ ವಿಠಲರಾಯನ ।**

**ಸಂದರುಶನ ಫಲವೆಮಗಾಯಿತು.**

ಹರಿಭಕ್ತಿಯ ಸವಿ ಅದು ಅನುಭವಿಸಿದವರಿಗಷ್ಟೆ ಗೊತ್ತು ಎಲ್ಲರೂ ಅದನ್ನು ಅರಿಯಲಾರರು ಎಂಬುವುದನ್ನು ಹಲವಾರು ಉಪಮೆಗಳ ಮೂಲಕ ನಿರೂಪಿಸುತ್ತಾರೆ ಪುರಂದರದಾಸರು[76] :

**ಹರಿಭಕುತಿ ಸವಿಯ ॥ ಹರಿಭಕುತಿ ಸವಿಸುಖವು ॥**

**ಅನುಭವಿಗಳಲ್ಲದೆ ಮಿಕ್ಕ । ನರಕುರಿಗಳದ ಸವಿ ಬಲ್ಲವೆ ರಂಗಯ್ಯ ॥ಪ॥**

**ನಂದಾದೀಪದ ಬೆಳಕ ಮೂಢಮತಿ ಬಲ್ಲನೇ ।**

**ಅಂಧಕನು ಆಡಿಸಲು ಅದರ ಸವಿ ಬಲ್ಲನೇ ॥**

**ಚಂದ ಮುತ್ತಿನ ಹಾರ ಕಪಿಯಿಡಲು ಬಲ್ಲುದೇ ।**

**ಎಂದೆಂದು ಪುರಂದರ ವಿಠಲ ನಿನಗಲ್ಲದೆ ॥೨॥**

ಮಂಗಬಲ್ಲುದೆ ಮಾಣಿಕ್ಯದ ಬೆಲೆಯನು ಎಂಬಂತೆ, ಹರಿಭಕ್ತಿಯ ಸವಿ ಭಕ್ತ ಹಾಗೂ ಭಗವಂತನಿಗಷ್ಟೆ ಗೊತ್ತು ಎನ್ನುತ್ತಾರೆ ಪುರಂದರದಾಸರು.

ಅದೇ ರೀತಿ ಭಕ್ತ ಕನಕದಾಸರೂ ಕೂಡಾ ತಮಗೆ ಗುರೂಪದೇಶ (ವ್ಯಾಸತೀರ್ಥದಿಂದ)ದೊರಕಿದ ಸಂದರ್ಭದಲ್ಲೋ, ಭಗವತ್ ಸಾಕ್ಷಾತ್ಕಾರವಾದ ಸಂದರ್ಭದಲ್ಲಿಯೋ ಉಂಟಾದ ಕೃತಕೃತ್ಯ ಭಾವವನ್ನು ಸುಪ್ರಸಿದ್ಧವಾದ ಒಂದು ಕೀರ್ತನೆಯಲ್ಲಿ ಸುಂದರವಾಗಿ ವ್ಯಕ್ತಪಡಿಸಿದ್ದಾರೆ[77]:

**ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು ॥ಪ॥**

**ಪದುಮನಾಭನ ಪಾದದೊಲುಮೆ ಎನಗಾಯಿತು ॥ಅ॥**

**ಮುಕುತರಾದರು ಎನ್ನ ನೂರೊಂದು ಕುಲದವರು ।**

**ಮುಕುತಿಮಾರ್ಗಕೆ ಯೋಗ್ಯ ನಾನಾದೆನೊ**

**ಅಕಳಂಕ ಶ್ರೀ ಹರಿ ಭಕುತಿಗೆನ್ನ ಮನ ಬೆಳೆದು**

**ರುಕುಮಿಣಿಯರಸ ಕೈ ವಶನಾದನೆನಗೆ ॥ ೨ ॥**

ಇಲ್ಲಿ 'ಬದುಕಿದೆನು ಬದುಕಿದೆನು' ಎಂಬ ಪುನರುಕ್ತಿ ಆನಂದಾತಿಶಯವನ್ನು ಸಾಭಿನಯಗೊಳಿಸುತ್ತಿದೆ. 'ತಾನು ಮಾತ್ರ ಮುಕ್ತಿಗೆ ಯೋಗ್ಯನಾದದ್ದಲ್ಲದೆ ತನ್ನ ನೂರೊಂದು ಕುಲದವರೂ ಉದ್ಧಾರವಾದರು' ಎನ್ನುವುದರ ಮೂಲಕ ಪರಾಭಕ್ತಿಯು ಅಮೃತಕ್ಕಿಂತಲೂ ಶ್ರೇಷ್ಠವಾದದ್ದು ಎಂದು ನಿರೂಪಿಸುತ್ತಾರೆ. ಅಮೃತವನ್ನು ಸೇವಿಸಿದವನು ತಾನು ಮಾತ್ರ ಮರಣದಿಂದ ಮುಕ್ತನಾದರೆ, ಹರಿಭಕ್ತಿಯಿಂದ ತನ್ನ ನೂರೊಂದು ಕುಲದವರು ಭವಬಂಧನದಿಂದ ಪಾರಾದರು ಎಂದು ಘಂಟಾಘೋಷವಾಗಿ ಸಾರುತ್ತಾರೆ ಕನಕದಾಸರು. ಕೊನೆಯ ಚರಣದಲ್ಲಿ ಆಧ್ಯಾತ್ಮಿಕ ರಹಸ್ಯವನ್ನು ಅನಾವರಣಗೊಳಿಸುತ್ತಾರೆ. 'ಪದುಮನಾಭನ ಪಾದದೊಲುಮೆ' ತನಗಾಗುವ ಮೂಲಕ, ಅಂದರೆ ಪರಾಭಕ್ತಿಯು ತನ್ನಲ್ಲಿ ಉದಯಿಸುವುದರ ಮೂಲಕ ತನ್ನ ಜೀವಕ್ಕೆ ಸಕಲ ಸಂಪತ್ತು ಪ್ರಾಪ್ತವಾಯಿತು. ಹೇರಳವಾದ ಸಂಪತ್ತು ಹೊಂದಿದ್ದ 'ಕನಕ ನಾಯಕ'ನೆನಿಸಿ ಕೊಂಡಿದ್ದ ತಿಮ್ಮಪ್ಪ ನಾಯಕನು ಆದಿಕೇಶವನ ಆಣತಿಯಂತೆ ಐಹಿಕ ಸಂಪತ್ತನ್ನೆಲ್ಲಾ ತ್ಯಾಗ ಮಾಡಿ 'ಕನಕದಾಸ'ರಾದರು ಎಂದು ಐತಿಹ್ಯವಿದೆ.[78] ಹಾಗಿರುವಾಗ 'ಜೀವಕ್ಕೆ ಸಕಲ ಸಂಪದವಾಯಿತು' ಅಂದರೆ ಲೌಕಿಕವಾದ ಅಶಾಶ್ವತವಾದ ಸಂಪತ್ತಲ್ಲ, ಸಾಧನಾ ಸಂಪತ್ತು ಪ್ರಾಪ್ತವಾಯಿತು ಎಂದು ಅರ್ಥೈಸಬೇಕಾಗುತ್ತದೆ. ಒಂದು ವೇಳೆ ಸಾಧಕನು ಪ್ರಸ್ತುತ ಜನ್ಮದಲ್ಲಿ ಭಗವತ್ಸಾಕ್ಷಾತ್ಕಾರಕ್ಕೆ ಅತೀ ಅವಶ್ಯವಾದ ಶಮದಮಾದಿ ಷಟ್ಕ ಸಂಪತ್ತನ್ನು ಅಭ್ಯಾಸದ ಮೂಲಕ ರೂಢಿಸಿಕೊಳ್ಳಲು ಸಾಧ್ಯವಾಗದೇ ಇದ್ದರೂ, ಭಗವಂತನ ವಿಶೇಷ ಕೃಪೆಯಿಂದ ಅವನಲ್ಲಿ ನಿಜಭಕ್ತಿ ಹುಟ್ಟಿಕೊಂಡರೆ, ಆಗ ಸೂರ್ಯನು ಉದಯಿಸಿದಾಗ ಕೆಸರಿನಲ್ಲಿದ್ದರೂ ಕಮಲವು ಅರಳಿಕೊಳ್ಳುವಂತೆ ಸಾಧಕನಲ್ಲಿ ಶಮ,

ದಮ, ತಿತಿಕ್ಷಾ, ಉಪರತಿ, ಶ್ರದ್ಧಾ, ಸಮಾಧಾನ ಎನ್ನುವ ಸಾಧನಾ ಸಂಪತ್ತು ರೂಢಿಗೊಳ್ಳುವವು. ಆದ್ದರಿಂದ ಯಾವುದೇ ವ್ಯಕ್ತಿ ಯಾವುದೇ ಹಿನ್ನೆಲೆ (ಜಾತಿ, ಕುಲ, ಗೋತ್ರ, ಕೌಟುಂಬಿಕ ಹಿನ್ನಲೆ, ಆರ್ಥಿಕ ಸ್ಥಿತಿ) ಯಿಂದ ಬಂದಿದ್ದರೂ ಅವನಲ್ಲಿ ಆರ್ತಭಾವ ಮೂಡಿ ಭಗವಂತನಿಗೆ ಶರಣಾದಾಗ, ಭಗವಂತನ ವಿಶೇಷ ಕೃಪೆಯಿಂದ ಅವನು ಭಗವತ್ಸಾಕ್ಷಾತ್ಕಾರಕ್ಕೆ ಅರ್ಹ ಅಧಿಕಾರಿಯೆನಿಸಿಕೊಳ್ಳಬಹುದು. ಕೊನೆಯ ಚರಣದ ಕೊನೆಯ ಎರಡು ಸಾಲಿನಲ್ಲಿ **'ತಂದೆ ಶ್ರೀ ಕಾಗಿನೆಲೆಯಾದಿ ಕೇಶವರಾಯ ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ'** ಎನ್ನುವ ಮೂಲಕ ಪರಾಭಕ್ತಿಯ ಲಕ್ಷಣವನ್ನು ಹೇಳುತ್ತಾರೆ ಕನಕದಾಸರು. ಯಾರಿಗೆ ಈ ಭಕ್ತಿ ಪ್ರಾಪ್ತವಾಗಿದೆಯೋ ಅವರಿಗೆ ನಿರಂತರ ಭಗವದನುಸಂಧಾನ ಸಹಜವಾಗಿ ಬಿಡುತ್ತದೆ, ಎನ್ನುವುದನ್ನು ಈ ಸಾಲಿನ ಮೂಲಕ ಸೂಚಿಸುತ್ತಾರೆ ಕನಕದಾಸರು.

ಅಕ್ಕ ಮಹಾದೇವಿಯು ತನ್ನ ಒಂದು ವಚನದಲ್ಲಿ, ತನಗೆ ಪ್ರಾಪ್ತವಾದ ಅನುಭವದ ಸ್ಥಿತಿಯನ್ನು ವರ್ಣಿಸುತ್ತಾಳೆ.[79]

**ಶ್ರೀ ಗುರುಲಿಂಗದೇವರು ತಮ್ಮ ಹಸ್ತವ ತಂದು**
**ಎನ್ನ ಮಸ್ತಕದ ಮೇಲೆ ಇರಿಸಿದಾಗಲೇ**
**ಎನ್ನ ಭವಂ ನಾಸ್ತಿಯಾಯಿತು! ಎನ್ನ ತನ್ನಂತೆ ಮಾಡಿದ !**
**ಎನಗೆ-ತನಗೆ ತೆರಹಿಲ್ಲದಂತೆ ಮಾಡಿ ತೋರಿದನು ನೋಡಾ !**
**ತನ್ನ ಕರಸ್ಥಲದಲ್ಲಿದ್ದ ಮಹಾಲಿಂಗವನು**
**ಎನ್ನ ಕರಸ್ಥಲದಲ್ಲಿ ಮೂರ್ತಿಗೊಳಿಸಿದ !**
**ಎನ್ನ ಕರಸ್ಥಲದಲ್ಲಿ ಮಹಾಲಿಂಗವನು**
**ಎನ್ನ ಮನಸ್ಥಲದಲ್ಲಿ ಮೂರ್ತಿಗೊಳಿಸಿದ ।**

ಶ್ರೀ ಗುರುಲಿಂಗದೇವರ ಕರ ಸ್ಪರ್ಶವಾದಾಗಲೇ ತನ್ನ ಭವವು ನಾಶವಾಯಿತು. ಅಂದರೆ ಹುಟ್ಟು ಸಾವುಗಳೆಂಬ ಶೃಂಖಲೆಯಿಂದ ತಾನು ಮುಕ್ತಳಾದೆ. ಅಮೃತವನ್ನು ಸೇವಿಸಿದ ಸ್ವರ್ಗವಾಸಿಗಳೂ ಕೂಡಾ ಅವರ ಪುಣ್ಯ ಸಂಚಯವು ಕ್ಷೀಣಿಸಿದಾಗ ಮತ್ತೆ ಮರ್ತ್ಯಲೋಕದಲ್ಲಿ ಮರಳಿ ಜನಿಸುವ ಸಾಧ್ಯತೆ ಇದೆ.[80]

ಜಗತ್ತಿನಲ್ಲಿ ಲೌಕಿಕ ವಸ್ತುಗಳ ಉಪಭೋಗದಿಂದ ತೃಪ್ತಿ ದೊರಕುವುದು ಸಹಜವಾದರೂ ಅದು ತಾತ್ಕಾಲಿಕ. ಉದಾಹರಣೆಗೆ ಹಸಿದವನಿಗೆ ಸುಗ್ರಾಸವಾದ ಭೋಜನ ತೃಪ್ತಿಯನ್ನು ನೀಡಬಹುದು. ಆದರೆ ಅದು ತಾತ್ಕಾಲಿಕ. ಯಾಕೆಂದರೆ ಹಸಿವು ಮತ್ತೆ ಬಾಧಿಸುವುದರಿಂದ ಒಂದು ವಸ್ತುವನ್ನು ಪಡೆಯಲು ಹಾತೊರೆಯುವಂತಹ ಮನಸ್ಸು ಆ ವಸ್ತು ದೊರೆತಾಗ ಸ್ವಲ್ಪ ಕಾಲ ತೃಪ್ತಿಯನ್ನು ಪಡೆಯುತ್ತದೆ. ಸ್ವಲ್ಪ ಸಮಯ ಕಳೆದ ಬಳಿಕ ಮತ್ತೊಂದು ವಸ್ತುವಿಗಾಗಿ ಪರಿತಪಿಸುತ್ತದೆ. ವಿಜಯದಾಸರು ಇದನ್ನು ಒಂದು ಉಗಾಭೋಗದಲ್ಲಿ ಸುಂದರವಾಗಿ ನಿರೂಪಿಸುತ್ತಾರೆ.[81]

**ಸಪ್ಪೆ ಮೆಲುವಾಗ ಸೊಪ್ಪಿನ ಚಿಂತೆ। ಸೊಪ್ಪು ದೊರಕಿದರೆ ಉಪ್ಪು ಬರಲಿಲ್ಲವೆಂಬ ಚಿಂತೆ । ಉಪ್ಪು ದೊರಕಿದರೆ ತುಪ್ಪ ಬರಲಿಲ್ಲವೆಂಬ ಚಿಂತೆ । ತುಪ್ಪವೇ ದೊರಕಿದರೆ ಕೊಪ್ಪರಿಗೆ ಸಿಗದೆಂಬ ಚಿಂತೆ ।**

ಪುರಂದರದಾಸರು ತಮ್ಮ ಕೀರ್ತನೆಯಲ್ಲಿ ಇದೇ ವಿಚಾರವನ್ನು ಹೀಗೆ ಹೇಳುತ್ತಾರೆ[82] :

**ಅನುಗಾಲವು ಚಿಂತೆ ಈ ಜೀವಕೆ । ಮನವು ಶ್ರೀರಂಗನೊಳು ನೆಚ್ಚುವ ತನಕ ॥**

ಎಲ್ಲಿಯವರೆಗೆ ನಮ್ಮ ಮನಸ್ಸು ಭಗವಂತನಲ್ಲಿ ರಮಾಮಾಣವಾಗುವುದಿಲ್ಲವೋ ಅಲ್ಲಿಯವರೆಗೆ ಚಿಂತೆ, ಅತೃಪ್ತಿ ನಮ್ಮನ್ನು ಬಿಟ್ಟಿರಲು ಸಾಧ್ಯವಿಲ್ಲ. ಅತೃಪ್ತಿಯು ಪೂರಯಿಸದ ಆಶೆಗಳಿಂದ ಉಂಟಾಗುತ್ತದೆ. ಪೂರ್ಣ ಕಾಮುನಾದ ಪರಮೇಶ್ವರನನ್ನು ಸಾಕ್ಷಾತ್ಕರಿಸಿಕೊಂಡ ಭಕ್ತನಿಗಾದರೋ ಯಾವ, ಆಶೆಗಳೂ ಇರುವುದಿಲ್ಲ. ಆದುದರಿಂದ ನಾರದ ಭಕ್ತಿ ಸೂತ್ರದಲ್ಲಿ 'ತೃಪ್ತೋಭವತಿ' ಭಕ್ತಿಯನ್ನು ಹೊಂದಿ ಸಾಧಕನು ಸಂತೃಪ್ತನಾಗುತ್ತಾನೆ ಎಂದು ಹೇಳಿದ್ದಾರೆ. ಭೋಜನದ ದೃಷ್ಟಾಂತವನ್ನು ಕೊಟ್ಟು

ಶ್ರೀ ಮದ್ಭಾಗವತವು (11.2.42-43) ಇದನ್ನು ಸೊಗಸಾಗಿ ವಿವರಿಸಿದೆ:

**ಭಕ್ತಿ: ಪರೇಶಾನುಭವೋ ವಿರಕ್ತಿರನ್ಯತ್ರ ಚೈಷ ತ್ರಿಕ ಏಕಕಾಲಃ ।**

**ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯುಸ್ತುಷ್ಟಿಃ ಪುಷ್ಟಿಃ ಕ್ಷುದಪಾಯೋ ನುಘಾಸಮ್ ॥**

**ಇತ್ಯಚ್ಯುತಾಂಘ್ರಿಂ ಭಜತೋ ನುವೃತ್ತ್ಯಾ ಭಕ್ತಿರ್ವಿರಕ್ತಿರ್ಭಗವತ್ಪ್ರಬೋಧಃ ।**

**ಭವಂತಿ ವೈ ಭಾಗವತಸ್ಯ ರಾಜಂಸ್ತತಃ ಪರಾಂ ಶಾಂತಿಮುಪೈತಿ ಸಾಕ್ಷಾತ್ ॥**

'ಊಟ ಮಾಡುತ್ತಿರುವವನಿಗೆ ಹೇಗೆ ಏಕಕಾಲದಲ್ಲಿಯೇ ತೃಪ್ತಿ, ದೇಹಪುಷ್ಟಿ ಮತ್ತು ಹಸಿವಿನಿಂದ ಬಿಡುಗಡೆ ಇವು ಮೂರೂ ಉಂಟಾಗುತ್ತವೆಯೋ, ಹಾಗೆಯೇ, ಭಗವಂತನಲ್ಲಿ ಶರಣಾದವನಿಗೆ ಭಕ್ತಿ, ಪರಮೇಶ್ವರನ ಸಾಕ್ಷಾತ್ಕಾರ ಮತ್ತು ಇತರ ವಸ್ತುಗಳಲ್ಲಿ ವೈರಾಗ್ಯ ಈ ಮೂರೂ ಸಮಕಾಲದಲ್ಲಿಯೇ ಉಂಟಾಗುತ್ತವೆ.

ಹೀಗೆಯೇ, ರಾಜನೇ, ಯಾರು ತನ್ನ ಮನಸ್ಸಿನಲ್ಲಿ ಸದಾಕಾಲವೂ ಅಚ್ಯುತನ ಪಾದವನ್ನು ಭಜಿಸುವನೋ ಆ ಭಾಗವತನಿಗೆ ಭಕ್ತಿ, ವೈರಾಗ್ಯ, ತತ್ತ್ವಜ್ಞಾನವುಂಟಾಗಿ, ತತ್ಫಲವಾಗಿ ಅವನು ಪರಮಶಾಂತಿಯನ್ನು ನೇರವಾಗಿಯೇ ಪಡೆಯುತ್ತಾನೆ' ಭಗವದ್ಗೀತೆಯೂ ಇದನ್ನೇ ಸಮರ್ಥಿಸುತ್ತದೆ. (6.22):

**'ಯಂ ಲಬ್ಧ್ವಾ ಚಾಪರಂ ಲಾಭಂ ನಾಧಿಕಂ ಮನ್ಯತೇ ತತಃ'**

**'ಯಾವ (ಅತ್ಯುತ್ತಮ ಸುಖವನ್ನು) ಹೊಂದಿ ಮತ್ತಾವ ಲಾಭವನ್ನೂ ಅಧಿಕವೆಂದು ಭಾವಿಸುವುದಿಲ್ಲವೋ.......'**

ಅಂತಹ ಪರಮ ಸುಖವನ್ನೂ, ಶಾಂತಿಯನ್ನೂ ನೀಡುವಂತಹುದು ಭಕ್ತಿ, ಎಂಬುದಾಗಿ ಭಕ್ತಿಯ ಸ್ವರೂಪವನ್ನು ನಿರೂಪಿಸುತ್ತಾರೆ ನಾರದರು.

## ಟಿಪ್ಪಣಿಗಳು

1. ದೇ.ನಾ.ಭ. ಪುಟ 2
2. **ಮಂಗಲಾನಂತರರಾಂಭಪ್ರಶ್ನಕಾರ್ತ್ಸ್ನ್ಯೇಷ್ವಥೋ ಅಥ।** ಅಥೋ, ಅಥ= ಮಂಗಳ, ಅನಂತರ, ಆರಂಭ, ಪ್ರಶ್ನೆ, ಸಾಕಲ್ಯಗಳ ಬೋಧಕಗಳು- ಅಮರಸಿಂಹನ ನಾಮಲಿಂಗಾನುಶಾಸನ ಅಥವಾ ಅಮರಕೋಶ, ವಿದ್ವಾನ್ ರಂಗನಾಥ ಶರ್ಮಾ, ಸುವಿದ್ಯಾ ಪ್ರಕಾಶನ, ಬಸವನಗುಡಿ, ಬೆಂಗಳೂರು - 4, ಪುಟ 311, ಶ್ಲೋಕ ಸಂಖ್ಯೆ 1448
3. 1. ನಾರದ ಭಕ್ತಿ ಸೂತ್ರ, 2. ನಾರದ ಸ್ಮೃತಿ, 3. ನಾರದೀಯ ಶಿಕ್ಷಾ, 4. ನಾರದ ಪರಿವ್ರಾಜಕೋಪನಿಷತ್, 5. ನಾರದೀಯ ಪುರಾಣ, 6. ನಾರದ ಪಾಂಚ ರಾತ್ರ ಹಾಗೂ 7. ಸಂಗೀತ ಮಕರಂದ - ದೇ.ನಾ.ಭ., ಪುಟ xii
4. **ಆನಿಂದ್ಯಯೋನಿ ಅಧಿಕ್ರಿಯತೇ ಪಾರಂಪರ್ಯಾತ್, ಸಾಮಾನ್ಯವತ್** ನಿಂದಿತಜನ್ಮವನ್ನು ಪಡೆದವರವರೆಗೆ ಎಲ್ಲರಿಗೂ ಭಕ್ತಿಯಲ್ಲಿ ಅಧಿಕಾರವಿರುತ್ತದೆ. ಪರಂಪರೆಯಿಂದ ಅವರೂ ಭಕ್ತಿಯ ವಿಷಯವನ್ನು ಅರಿಯಬಹುದು. ಸಾಮಾನ್ಯಧರ್ಮದಂತೆಯೇ ಇದೂ ಕೂಡ. (ಶಾಂಡಿಲ್ಯ ಭಕ್ತಿಸೂತ್ರಗಳು, ಸೂ. 78)

5. ಯಥಾಽಗ್ನಿನಾ ಹೇಮ ಮಲಂ ಜಹಾತಿ ಧ್ಮಾತಂ ಪುನಃ ಸ್ವಂ ಭಜತೇ ಚ ರೂಪಮ್।
ಆತ್ಮಾ ತು ಕರ್ಮಾನುಶಯಂ ವಿಧೂಯ ಮದ್ಭಕ್ತಿಯೋಗೇನ ಭಜತ್ಯಥೋ ಮಾಮ್॥
– ಶ್ರೀಮದ್ಭಾಗವತ 11. 14.

6. ಪು.ದಾ.ಕೀ., ಪುಟ 71, ಕೀ.ಸಂ. 109

7. ಕ.ಸಾ.ಸಂ.–4, ಪುಟ 199, ಕೀ.ಸಂ. 88

8. ಸಮಗ್ರ ದಾಸ ಸಾಹಿತ್ಯ, ಸಂಪುಟ:33, ಕವಿ ಪರಮದೇವ ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು, ಪುಟ 26, ಕೀ.ಸಂ. 24

9 ಭಕ್ತಿಚಂದ್ರಿಕೆ (ನಾರದ ಭಕ್ತಿಸೂತ್ರಗಳ ವಿವರಣೆ) – ಲೇ: ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು, ಪುಟ 3

10. ಭಕ್ತಿಃ ಪರೇಶಾನುಭವೋ ವಿರಕ್ತಿರನ್ಯತ್ರ ಚೈಷ ತ್ರಿಕ ಏಕಕಾಲಃ।
ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯುಸ್ತುಷ್ಟಿಃ ಪುಷ್ಟಿಃ ಕ್ಷುದಪಯೋಽನುಘಾಸಮ್॥–ಶ್ರೀಮದ್ಭಾಗವತ 11.2.42

11. ಯೋವೈ ಭೂಮಾ ತತ್ಸುಖಂ, ನಾಲ್ಪೇ ಸುಖಮಸ್ತಿ – ' ಯಾವುದು ಮಹತ್ತಾದುದೋ ಅದೇ ಸುಖವು, ಅಲ್ಪದರಲ್ಲಿ ಸುಖವಿಲ್ಲ.'– ಛಾಂದೋಗ್ಯ ಉಪನಿಷತ್ತು 7–23–1, ಉಪನಿಷತ್ತು, ಡಾ.ಎನ್.ಎಸ್.ಅನಂತರಂಗಾಚಾರ್ಯ, ಭವನದ ಗಾಂಧೀ ಕೇಂದ್ರ, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು–1, 2002, ಪುಟ 70

12. ಶ್ರೀ ಶಬ್ದಾರ್ಥ ಕೌಸ್ತುಭಃ – ಸಂಸ್ಕೃತ ಕನ್ನಡ ಶಬ್ದಕೋಶ – ಸಂಪುಟ 5

13. ಭಕ್ತಿಭಾರತಿ – ಇದರಲ್ಲಿ ಪ್ರಕಟಿತ ರಾ.ಸತ್ಯನಾರಾಯಣ ಇವರ 'ಭಾರತದಲ್ಲಿ ಭಕ್ತಿಪಂಥ –ಅದರಲ್ಲಿ ಹರಿದಾಸ ಪಥ' ಎಂಬ ಪ್ರಬಂಧ, ಪುಟ 115

14. ದೇವರ್ಷಿ ನಾರದರ ಭಕ್ತಿಸೂತ್ರಗಳು – ಸ್ವಾಮಿ ಹರ್ಷಾನಂದ, ಪುಟ 4–5

15. ಸಾ ಪರಾಽನುರಕ್ತಿರೀಶ್ವರೇ॥ – ಶಾಂಡಿಲ್ಯ ಭಕ್ತಿಸೂತ್ರಗಳು – ಸ್ವಾಮಿ ಹರ್ಷಾನಂದ, ಸೂತ್ರ 2, ಪುಟ 2

16. ಮದ್ಗುಣಶ್ರುತಿಮಾತ್ರೇಣ ಮಯಿ ಸರ್ವಗುಹಾಶಯೇ।
ಮನೋಗತಿರವಿಚ್ಛಿನ್ನಾ ಯಥಾ ಗಂಗಾಂಭಸೋಂಬುಧೌ॥
ಲಕ್ಷಣಂ ಭಕ್ತಿಯೋಗಸ್ಯ ನಿರ್ಗುಣಸ್ಯ ಹ್ಯುದಾಹೃತಮ್।
ಅಹೈತುಕ್ಯವ್ಯವಹಿತಾ ಯಾ ಭಕ್ತಿಃ ಪುರುಷೋತ್ತಮೇ॥ – ಶ್ರೀಮದ್ಭಾಗವತ 3.29.11–12

17. ದ್ರುತಸ್ಯ ಭಗವದ್ಧರ್ಮಾದ್ಧಾರಾವಾಹಿಕತಾಂ ಗತಾ ।
ಸರ್ವೇಶೇ ಮನಸೋ ವೃತ್ತಿರ್ಭಕ್ತಿರಿತ್ಯಭಿಧೀಯತೇ ॥3॥
– ಭಗವದ್ಭಕ್ತಿರಸಾಯನಂ– ಮೂಲ: ಶ್ರೀ ಮಧುಸೂದನ ಸರಸ್ವತಿ, ಅನುವಾದ ಮತ್ತು ವ್ಯಾಖ್ಯಾನ– ಪ್ರೊ।ಎಂ.ಎ.ಹೆಗಡೆ, ಉದಯ ಪ್ರಕಾಶನ, ನಂ. 984, 11ನೇ 'ಎ' ಮುಖ್ಯರಸ್ತೆ, 3ನೇ ವಿಭಾಗ, ರಾಜಾಜಿ ನಗರ, ಬೆಂಗಳೂರು– 10, 2008, ಪುಟ 15

18. **ಅನ್ಯಾಭಿಲಷಿತಾಶೂನ್ಯಂ ಜ್ಞಾನಕರ್ಮಾದ್ಯನಾವೃತಮ್। ಅನುಕೂಲ್ಯೇನ ಕೃಷ್ಣಾನುಶೀಲನಂ ಭಕ್ತಿರುತ್ತಮಾ॥** –(ಭಕ್ತಿರಸಾಮೃತಸಿಂಧು 1.11) ದೇ.ನಾ.ಭ., ಪುಟ 6
19. ಭ.ರ., ಪುಟ 4
20. ಅದೇ, ಪುಟ 15
21. ಅದೇ,ಪುಟ 17, 18, 19
22. ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ, ಡಾ।ಮೀನಗುಂಡಿ ಸುಬ್ರಮಣ್ಯ, ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು– 1, ಪುಟ 57
23. ಅದೇ, ಪುಟ 54 (ಪುಟ 21)
24. ಭ.ರ., ಪುಟ 8
25. ಅದೇ, ಪುಟ 8
26. ಅದೇ, ಪುಟ xviii
27. ದಾ.ಸಾ.ಸಂ., ಪುಟ 159, 160
28. '**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್**........' – ಆದಿಪುರುಷನು ಅಸಂಖ್ಯವಾದ ಶಿರಸ್ಸುಗಳುಳ್ಳವನೂ, ಅಸಂಖ್ಯಾತ ಚಕ್ಷುಗಳುಳ್ಳವನೂ, ಪಾದಗಳನ್ನು ಹೊಂದಿದವನೂ ಆಗಿದ್ದಾನೆ.... – ಋಗ್ವೇದ ಮಂಡಲ 10, ಅನುವಾಕ 5, ಸೂಕ್ತ 90, ಪುಟ 717 ಮೂಲ: ಶ್ರೀಜಯಚಾಮರಾಜೇಂದ್ರ ವೇದರತ್ನಮಾಲಾ, ಸಾಯಣಭಾಷ್ಯ ಸಮೇತಾ ಋಗ್ವೇದ ಸಂಹಿತಾ, rgveda%26%20puranas/Granthamala/Rigveda/Rig_Vol10/Rig_Vol10.djvu?djvuopts&page=717
29. '**ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತ:ಸ್ಪಾತ್। ಸಂ ಬಾಹುಭ್ಯಾಂ ಧಮತಿ**.......'– ಸರ್ವತ್ರ ಪ್ರಸರಿಸಿದ ಕಣ್ಣುಗಳುಳ್ಳವನೂ, ಸರ್ವತ್ರ ಹೊಂದಿರತಕ್ಕ ಮುಖಗಳುಳ್ಳವನೂ, ಎಲ್ಲಾ ಕಡೆಯೂ ನೀಡಿದ ಪಾದಗಳುಳ್ಳವನೂ ಆದ ಈಶ್ವರನು ತನ್ನ ಬಾಹುಗಳಿಂದ ದ್ಯುಲೋಕವನ್ನು ಪ್ರೇರಿಸುತ್ತಾನೆ........ – ಋಗ್ವೇದ ಮಂಡಲ 10, ಅನುವಾಕ 6, ಸೂಕ್ತ 81, ಪುಟ 205 ಮೂಲ: ಶ್ರೀಜಯಚಾಮರಾಜೇಂದ್ರ ವೇದರತ್ನಮಾಲಾ, ಸಾಯಣಭಾಷ್ಯ ಸಮೇತಾ ಋಗ್ವೇದ ಸಂಹಿತಾ,rgveda%26%20puranas/Granthamala/Rigveda/Rig_Vol10/Rig_Vol10.djvu?djvuopts&page=205
30. ಬಸವಣ್ಣನವರ ವಚನಗಳು, ಸಂ.ಡಾ.ಎಲ್.ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು–570001, ಪ್ರಥಮ ಪ್ರಕಾಶನ 1952, ಒಂಬತ್ತನೆಯ ಸಂಸ್ಕರಣ, 2008, ಪುಟ 108, ವ.ಸಂ. 312
31. ವ.ಸಾ.ಸಂ., ಪುಟ.120, ವ.ಸಂ.122
32. ಅದೇ, ಪುಟ 29, ವ.ಸಂ.10
33. ಪುರಂದರದಾಸರ ಕೀರ್ತನೆಗಳು, ಸಂ. ದಿ.ಪಾವಂಜೆ ಗುರುರಾಯರು, ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ–1, ಐದು ಭಾಗಗಳಲ್ಲಿ ಪ್ರಥಮ ಪ್ರಕಾಶನ: 1917ರಿಂದ 1932, ಸಂಯುಕ್ತ ಸಂಪುಟದ ಪ್ರಥಮ ಮುದ್ರಣ: 2001, ಸಂಯುಕ್ತ ಆವೃತ್ತಿ 2010, ಅನುಬಂಧ 1, ಪುಟ 646, ಉಗಾಭೋಗ ಸಂಖ್ಯೆ 39

34. ಪುರಂದರದಾಸರ ಕೀರ್ತನೆಗಳು, ಅನುಬಂಧ 1, ಪುಟ 646–647, ಉಗಾಭೋಗ ಸಂಖ್ಯೆ 43

35. ವ.ಸಾ.ಸಂ., ಪುಟ.117, ವ.ಸಂ.76

36. ಪುರಂದರದಾಸರ ಕೀರ್ತನೆಗಳು, ಪುಟ 169, ಕೀ.ಸಂ. 269

37. **'ಅಣೋರಣೀಯಾನ್ ಮಹತೋ ಮಹೀಯಾನ್ ಆತ್ಮಾಽಸ್ಯ ಜಂತೋರ್ನಿಹಿತೋ ಗುಹಾಯಾಮ್।'**– 'ಅಣುವಿಗಿಂತ ಅಣುವಾಗಿ, ಮಹತ್ತಿಗಿಂತ ಮಹತ್ತಾಗಿ ಆತ್ಮನು ಈ ಪ್ರಾಣಿಗಳ ಗುಹೆಯಲ್ಲಿ ಇದ್ದಾನೆ'. ಕಠೋಪನಿಷತ್, ಎರಡನೆಯ ವಲ್ಲಿ, ಶ್ಲೋಕ 20, ಪುಟ 101, ಉಪನಿಷತ್ ಭಾವಧಾರೆ, ಲೇ:ಸೋಮನಾಥಾನಂದ, ಪ್ರ: ಶ್ರೀ ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು–20, ನಾಲ್ಕನೆಯ ಮುದ್ರಣ: 1989

38. **'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ।**
**ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್॥'**
– ಈ ಆತ್ಮ ಪ್ರವಚನದಿಂದ ಲಭ್ಯನಲ್ಲ. ಮೇಧಾಶಕ್ತಿಯಿಂದಲೂ ಶ್ರವಣದಿಂದಲೂ ಲಭ್ಯನಲ್ಲ. ಕಠೋಪನಿಷತ್, ಎರಡನೆಯ ವಲ್ಲಿ, ಶ್ಲೋಕ 23, ಪುಟ 104, 105 ಉಪನಿಷತ್ ಭಾವಧಾರೆ, ಲೇ:ಸೋಮನಾಥಾನಂದ, ಪ್ರ: ಶ್ರೀ ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು–20, ನಾಲ್ಕನೆಯ ಮುದ್ರಣ: 1989

39. ಪುರಂದರದಾಸರ ಕೀರ್ತನೆಗಳು, ಪುಟ 437–438, ಕೀ.ಸಂ. 703

40. ವ.ಸಾ.ಸಂ., ಪುಟ 59, ವ.ಸಂ. 52

41. **ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು।**
**ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ॥ – ಕಠೋಪನಿಷತ್, 1–3–3**
'ಆತ್ಮನನ್ನು ಸಾರಥಿಯೆಂದು, ಶರೀರವನ್ನು ರಥವೆಂದು, ಬುದ್ಧಿಯನ್ನು ಸಾರಥಿ ಎಂದು ಮನಸ್ಸನ್ನು ಲಗಾಮೆಂದು ತಿಳಿ'.– ಕಠೋಪನಿಷತ್, ಮೂರನೆಯ ವಲ್ಲಿ, ಶ್ಲೋಕ 3, ಪುಟ 113 ಉಪನಿಷತ್ ಭಾವಧಾರೆ, ಲೇ:ಸೋಮನಾಥಾನಂದ, ಪ್ರ: ಶ್ರೀ ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು–20, ನಾಲ್ಕನೆಯ ಮುದ್ರಣ: 1989

42. ಕನಕ ಸಾಹಿತ್ಯ ದರ್ಶನ ಸಂಪುಟ–4 ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, 1999, ಪುಟ 65

43. ದಾಸಸಾಹಿತ್ಯ ಮಾಲಿಕೆ:7 ವಿಜಯದಾಸರ ಹಾಡುಗಳು, ಸಂ: ಕಾವ್ಯಪ್ರೇಮಿ, ಪ್ರ : ಸಮಾಜ ಪುಸ್ತಕಾಲಯ, ಧಾರವಾಡ–1, ಚತುರ್ಥ ಮುದ್ರಣ–1998 ಪುಟ 82

44. ದೇವರ್ಷಿ ನಾರದರ ಭಕ್ತಿಸೂತ್ರಗಳು – ಸ್ವಾಮಿ ಹರ್ಷಾನಂದ, ಪುಟ 3

45. ಭಕ್ತಿಚಂದ್ರಿಕೆ(ನಾರದ ಭಕ್ತಿಸೂತ್ರಗಳ ವಿವರಣೆ) – ಲೇ:ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು, ಪ್ರ: ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1992, ಪುಟ 11

46. ದೇವರ್ಷಿ ನಾರದರ ಭಕ್ತಿಸೂತ್ರಗಳು – ಸ್ವಾಮಿ ಹರ್ಷಾನಂದ, ಪುಟ 4

47. **ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋಽನ್ಯಸ್ಮಾತ್ ಸರ್ವಸ್ಮಾದನ್ತರತರಂ ಯದಯಮಾತ್ಮಾ॥**– ಬೃಹದಾರಣ್ಯಕೋಪನಿಷತ್, 1–4–8

48. ಭಕ್ತಿಚಂದ್ರಿಕೆ (ನಾರದ ಭಕ್ತಿಸೂತ್ರಗಳ ವಿವರಣೆ)– ಲೇ: ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು, ಪ್ರ: ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1992, ಪುಟ 10

49. ನಿಜಗುಣರ ಸಮಗ್ರ ಕೃತಿಗಳು, ಭಾಗ 1, ಜನಪ್ರಿಯ ಪ್ರಾಚೀನ ಸಾಹಿತ್ಯ ಮಾಲೆ, ಸಂ. ಡಾ.ಎಸ್.ವಿದ್ಯಾಶಂಕರ್, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು–2, 1995, ಪುಟ 71, ಕೀ.ಸಂ. 22

**50. ಯಸ್ಯದೇವೇ ಪರಾಭಕ್ತಿಃ ಯಥಾದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ಪ್ರಕಾಶಂತೇ ಮಹಾತ್ಮನ್ ॥**
'ಯಾರಿಗೆ ಪರಮೇಶ್ವರನಲ್ಲಿ ಪರಾಭಕ್ತಿ ಇರುವುದೋ ಅದರಮತೆಯೇ ಗುರುವಿನ ಮೇಲೆಯೂ ಪರಾಭಕ್ತಿ ಇರುವುದೋ ಅಂತಹ ಮಹಾತ್ಮನಿಗೆ ಹೇಳಲ್ಪಟ್ಟ ಭಾವನೆಗಳು ಪ್ರಕಾಶಕ್ಕೆ ಬರುತ್ತವೆ....' – **ಶ್ವೇತಾಶ್ವತರ ಉಪನಿಷತ್, ಅಧ್ಯಾಯ 6, ಶ್ಲೋಕ 23**– ಉಪನಿಷತ್ ಭಾವಧಾರೆ, ಲೇ:ಸೋಮನಾಥಾನಂದ, ಪ್ರ: ಶ್ರೀ ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು–20, ನಾಲ್ಕನೆಯ ಮುದ್ರಣ: 1989, ಪುಟ 747

51. ಪ್ರೀತಿ ಎಂದರೇನು? – ಜೆ. ಕೃಷ್ಣಮೂರ್ತಿ, ಅನುವಾದ : ಓ. ಎಲ್. ನಾಗಭೂಷಣ ಸ್ವಾಮಿ. ಪ್ರ : ಬೆಂಗಳೂರು ಶಿಕ್ಷಣ ಕೇಂದ್ರ, ಕೃಷ್ಣಮೂರ್ತಿ ಫೌಂಡೇಶನ್ ಇಂಡಿಯಾ, ಬೆಂಗಳೂರು–2005, ಪುಟ 14, 15

52. ಅದೇ, ಪುಟ 19

53. ಶ್ರೀ ಪಾದರಾಜರ ಕೃತಿಗಳು ಸಂ: ಡಾ.ಜಿ.ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1987, ಪುಟ 30, ಕೀ.ಸಂ 27.

54. ಬ.ವ., ಪುಟ 48, ವ.ಸಂ. 41

55. ಸಮಗ್ರ ದಾಸ ಸಾಹಿತ್ಯ, ಸಂಪುಟ 33, ಕವಿ ಪರಮದೇವ ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು, ಸಂ: ಡಾ.ಕೆಳದಿ ವೆಂಕಟೇಶ ಜೋಯಿಸ್, ಡಾ.ಡಿ.ಆರ್.ಪಾಂಡುರಂಗ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–2, 2003, ಪುಟ 213, ಕೀ.ಸಂ. 235

**56. ಸಾ ಪರಾಽನುರಕ್ತಿರೀಶ್ವರೇ॥** ಶಾಂಡಿಲ್ಯ ಭಕ್ತಿ ಸೂತ್ರ, ಸ್ವಾಮಿ ಹರ್ಷಾನಂದ, **ಸೂತ್ರ 2, ಪುಟ 2**

57. ದಾ.ಮ.ಸಂ., ಪ್ರೊ. ಸಾ.ಕೃ.ರಾಮಚಂದ್ರ ರಾವ್, ಪುಟ 148

58. ಭ.ಭಾ., ಬನ್ನಂಜೆ ಗೋವಿಂದಾಚಾರ್ಯರ ಅನುವಾದ, ಪುಟ 13

59. ದಾ.ಮ.ಸಂ., ಪ್ರೊ. ಸಾ.ಕೃ.ರಾಮಚಂದ್ರ ರಾವ್, ಪುಟ 148

60. ಅದೇ, ಪುಟ 325

61. 'ಮನಸ್ಸು' ಇಲ್ಲದ ಮಾರ್ಗ, ಡಾ.ಮೀನಂಗುಡಿ ಸುಬ್ರಮಣ್ಯ, ಪುಟ 54

62. ಕ.ಸಾ.ಸಂ.–4, ಪುಟ 94, ಕೀ.ಸಂ. 25

63. ಪು.ದಾ.ಕೀ., ಪುಟ 43, ಕೀ.ಸಂ.67

64. ಪರಿಪೂರ್ಣ ವ್ಯಕ್ತಿತ್ವ, ಸ್ವಾಮಿ ನಿತ್ಯಸ್ಥಾನಂದ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು–570020, 2006, ಪುಟ 339

65. ಅದೇ, ಪುಟ 339, 340

66. ಕೃತಿ ಶ್ರೇಣಿ, ಸಂಪುಟ 1, ಪುಟ 54

67. ಶ್ರೀಪಾದರಾಯರ ಹಾಡುಗಳು, ದಾಸಸಾಹಿತ್ಯ ಮಾಲಿಕೆ–8, ಸಂ.ಕಾವ್ಯಪ್ರೇಮಿ, ಸಮಾಜಪುಸ್ತಕಾಲಯ, ಧಾರವಾಡ, 2000, ಪುಟ 23, 24

68. ಪು.ದಾ.ಕೀ., ಪುಟ 274, 275, ಕೀ.ಸಂ. 437

69. ದೇ.ನಾ.ಭ., ಪುಟ 6

70. ಉ.ಭಾ., ಪುಟ 462

71. ದೇ.ನಾ.ಭ. ಸೂ. 4, ಪುಟ 10

72. ಶ್ರೀ ಪುರಂದರದಾಸರು, ಲೇ: ಕೊರಟಿ ಶ್ರೀನಿವಾಸ ರಾವ್, ಭಾಗ್ಯಲಕ್ಷ್ಮಿಪ್ರಕಾಶನ, ಬೆಂಗಳೂರು, 1984, ಪುಟ 220

73. ಪು.ದಾ.ಕೀ.. ಪುಟ 589 ಕೀ. ಸಂ 948

74. ಶ್ರೀ ಪುರಂದರದಾಸರು, ಲೇ: ಕೊರಟಿ ಶ್ರೀನಿವಾಸ ರಾವ್, ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು, 1984, ಪುಟ 220

75. ಸಮಗ್ರ ದಾಸ ಸಾಹಿತ್ಯ ಸಂಪುಟ–4, ಪುರಂದರದಾಸರ ಉಗಾಭೋಗಗಳು ಮತ್ತು ಸುಳಾದಿಗಳು ಪುಟ 22, ಉಗಾಭೋಗ 28

76. ಪು.ದಾ.ಕೀ. – ಪುಟ 592 – 593, ಕೀ.ಸಂ. 954

77. ಕ.ಸಾ.ಸಂ.–4, ಪುಟ, 86. ಕೀ.ಸಂ. 20

78. ಶ್ರೀ ಕನಕದಾಸರು, ಲೇ: ಕೊರಟಿ ಶ್ರೀನಿವಾಸರಾವ್, ಭಾಗ್ಯಲಕ್ಷ್ಮಿ ಪ್ರಕಾಶನ, 87, 3ನೇ ಕ್ರಾಸ್, 4ನೇ ಬ್ಲಾಕ್, ಬನಶಂಕರಿ 3ನೇ ಸ್ಟೇಜ್, 3ನೇ ಫೇಸ್, ಬೆಂಗಳೂರು– 85, ಪುಟ 241

79. ಅಕ್ಕನ ವಚನಗಳು, ಪುಟ 54, ವ.ಸಂ: 41 ಸಂ.ಡಾ। ಎಲ್. ಬಸವರಾಜು ಗೀತಾಬುಕ್ ಹೌಸ್, ಮೈಸೂರು, ಪ್ರಥಮ ಪ್ರಕಾಶನ 1966 ಎಂಟನೆಯ ಮುದ್ರಣ 2008)

80. (ಪುರಾಣ ನಾಮ ಚೂಡಾಮಣಿ, ಪುಟ 633), **ಕ್ಷೀಣೇ ಪುಣ್ಯೇ ಮರ್ತ್ಯ ಲೋಕಂ ವಿಶಂತಿ**
**– ಗೀತೆ 9.21**

81. ಮೂಲ ಲಭಿಸಿಲ್ಲ, ಸಂತ ಭದ್ರಗಿರಿ ಅಚ್ಯುತದಾಸರು ತಮ್ಮ ಹರಿಕಥೆಗಳಲ್ಲಿ, ಹಾಗೂ ತಾವು ರಚಿಸಿದ ಗ್ರಂಥ **'ಹರಿಕಥಾಮೃತ ಸಿಂಧು'** ವಿನಲ್ಲಿ ಉಲ್ಲೇಖಿಸಿದ್ದಾರೆ.

82. ಸಾವಿರಾರು ಕೀರ್ತನೆಗಳು, ಸಂ. ಪ್ರೊ.ಎ.ವಿ.ನಾವಡ, ಡಾ.ಗಾಯತ್ರಿ ನಾವಡ, ಅಂಕಿತ ಪುಸ್ತಕ,2002, ಪುಟ 186,

## ೪.೩ ಭಕ್ತಿ ಸಾಧನೆಯ ಫಲ ನಿರ್ದೇಶನ

ಭಕ್ತಿಯಲ್ಲಿ ಅಭಿರುಚಿಯನ್ನು ಪ್ರೇರೇಪಿಸಲು ಭಕ್ತಿ ಸಾಧನೆ, ಹಾಗೂ ಅದರಿಂದ ಪ್ರಾಪ್ತವಾಗುವ ಪರಾಭಕ್ತಿ ಸಿದ್ಧಿಯಿಂದ ಆಗುವಂತಹ ಫಲಗಳನ್ನು ಈ ಕೆಳಗಿನ ಸೂತ್ರಗಳಲ್ಲಿ ಹೇಳುತ್ತಾರೆ:

**ಯಲ್ಲಬ್ಧ್ವಾ ಪುಮಾನ್ ಸಿದ್ಧೋಭವತಿ, ಅಮೃತೋಭವತಿ, ತೃಪ್ತೋಭವತಿ ॥೪॥**

ಅದನ್ನು ಪಡೆದು (ಭಕ್ತಿಯನ್ನು ಪಡೆದು) ಮನುಷ್ಯನು ಸಿದ್ಧನಾಗುತ್ತಾನೆ, ಅಮೃತನಾಗುತ್ತಾನೆ ತೃಪ್ತನಾಗುತ್ತಾನೆ.

**ಯತ್ ಪ್ರಾಪ್ಯ ನ ಕಿಂಚಿದ್ ವಾಂಛತಿ, ನ ಶೋಚತಿ, ನ ದ್ವೇಷ್ಟಿ, ನ ರಮತೇ, ನೋತ್ಸಾಹೀ ಭವತಿ ॥೫॥**

ಅದನ್ನು (ಪರಾಭಕ್ತಿಯನ್ನು) ಹೊಂದಿ ಮತ್ತಾವುದನ್ನೂ ಬಯಸನು, ಶೋಕಿಸನು, ದ್ವೇಷಿಸನು,ರಮಿಸನು, ಉತ್ಸಾಹಿಯಾಗನು.

**ಯಜ್ಞಾತ್ವಾ ಮತ್ತೋ ಭವತಿ, ಸ್ತಬ್ಧೋಭವತಿ, ಆತ್ಮಾರಾಮೋ ಭವತಿ ॥೬॥**

ಅದನ್ನು (ಪರಾಭಕ್ತಿಯನ್ನು) ಅರಿತುಕೊಂಡು ಮತ್ತನಾಗುತ್ತಾನೆ, ಸ್ತಬ್ಧನಾಗುತ್ತಾನೆ, ಆತ್ಮಾರಾಮನಾಗುತ್ತಾನೆ.

ಈ ಮೂರು ಸೂತ್ರಗಳಲ್ಲಿಯೂ 'ಯತ್' ಎಂಬ ಸರ್ವನಾಮವನ್ನು ಪ್ರಯೋಗಿಸಲಾಗಿದೆ. 'ಯತ್' ಎಂಬ ಸರ್ವನಾಮವು ನಪುಂಸಕ ಲಿಂಗ. ಆದುದರಿಂದ ಈ ಲಿಂಗ ವ್ಯತ್ಯಯವನ್ನು ಆರ್ಷ ಪ್ರಯೋಗ (ಋಷಿವಾಕ್ಯ) ಎಂದು ಭಾವಿಸಿ ಕಡೆಗಣಿಸಬಹುದು. ಅಥವಾ, 'ಯತ್ ಪರಮಪ್ರೇಮ ಲಬ್ಧ್ವಾ ಎಂದಾಗಲೀ, 'ಯತ್ ಅಸ್ಮಿನ್ ಪದನಿರ್ದಿಷ್ಟವ್ ಅಂತರ್ಯಾಮಿತತ್ತ್ವಂ ಲಬ್ಧ್ವಾ' ಎಂದಾಗಲೀ ಅರ್ಥಮಾಡಿಕೊಳ್ಳಬಹುದು'.

'ಪುಮಾನ್' ಎಂಬ ಪದವು ಪುರುಷನನ್ನು ನಿರ್ದೇಶಿಸಿದರೂ ಇಲ್ಲಿ ಮಾನವ ಜಾತಿಯ ಎಲ್ಲರಿಗೂ ಅನ್ವಯಿಸುತ್ತದೆಯೆಂದು ಅರಿಯಬೇಕು. ಈ ಪದವು ಜಾತಿ, ಕುಲಗೋತ್ರ ಲಿಂಗ ಯಾವುದನ್ನೂ ಗಣಿಸದೆ, ಮನುಷ್ಯ ಮಾತ್ರರೆಲ್ಲರಿಗೂ ಭಕ್ತಿಮಾರ್ಗದಲ್ಲಿ ಅಧಿಕಾರವುಂಟು ಎಂಬುದನ್ನು ಸೂಚಿಸುತ್ತದೆ.

ಯಾವುದನ್ನು ನಾವು 'ಪಡೆಯ'ಬೇಕಾದರೂ (ಲಬ್ಧ್ವಾ = ಪಡೆದು) ಅದು ಬೇರೆ, ನಾವು ಬೇರೆ ಎಂಬ ದ್ವೈತಭಾವನೆ ಇದ್ದರೆ ಮಾತ್ರ ಸಾಧ್ಯ. ಆದುದರಿಂದ ಇಲ್ಲಿ ಆ ಪದವನ್ನು ದ್ವೈತಭಾವನೆ ಇನ್ನೂ ಇರುವ ಸಾಮಾನ್ಯ ಭಕ್ತನ ದೃಷ್ಟಿಯಿಂದ, ಅವನ ಉಪದೇಶಕ್ಕಾಗಿ, ಪ್ರಯೋಗಿಸಿದೆ ಎನ್ನಬಹುದು'

'ಸಿದ್ಧನಾರು? ಅಣಿಮಾದಿ ಅಷ್ಟ ಸಿದ್ಧಿಗಳನ್ನು ಪಡೆದವನೇ? ಅಣಿಮಾದಿ ಅಷ್ಟಸಿದ್ಧಿಗಳು ಕ್ಷುದ್ರ ಫಲಗಳು. 'ಈ ಸಿದ್ಧಿಗಳು ಹರಿಭಕ್ತಿಯೆಂಬ ಮಹಾದೇವಿಯನ್ನು ದಾಸಿಗಳಂತೆ

ಅನುಸರಿಸುವವರು' ಎಂದು ನಾರದ ಪಾಂಚರಾತ್ರವೆನ್ನುತ್ತದೆ. ಪರಾಭಕ್ತಿಯನ್ನು ಪಡೆದವನು ಸಿದ್ಧನಾಗುತ್ತಾನೆ ಎಂದರೆ ಕೃತಕೃತ್ಯನಾಗುತ್ತಾನೆ ಎಂದು ಅರ್ಥೈಸಿಕೊಳ್ಳಬೇಕು. ಪತಂಜಲಿಯು ತನ್ನ ಯೋಗಸೂತ್ರದಲ್ಲಿ 'ಈಶ್ವರ ಭಕ್ತಿಯಿಂದ ಸಮಾಧಿಯನ್ನೂ ತನ್ಮೂಲಕ ಕೈವಲ್ಯ ಸಿದ್ಧಿಯನ್ನೂ ಪಡೆಯಬಹುದು'(**ಈಶ್ವರ ಪ್ರಣಿಧಾನಾದ್ವಾ ॥೨೩॥**) ಎಂದು ಹೇಳಿರುತ್ತಾನೆ.

ಶ್ರೀಮನ್ನಿಜಗಣ ಶಿವಯೋಗಿಗಳು 'ಕೈವಲ್ಯ ಪದ್ಧತಿ' ಗ್ರಂಥದ ನೀತಿಕ್ರಿಯಾಚರ್ಯ ಸ್ಥಲದ ಒಂದು ಕೀರ್ತನೆಯಲ್ಲಿ ಹೇಳುತ್ತಾರೆ[1]:

**ಕಾಲಕರ್ಮ ಮಾಯೆಯೆಂಬಿವನು ಗೆಲಲಹುದು ವಿ।**

**ಶಾಲಮತಿಗಳು ಶಿವಭಕ್ತಿಯುಕ್ತರಾಗಿರೆ ॥ಪ॥**

ವಿಶಾಲವಾದ ಬುದ್ಧಿಯುಳ್ಳವರು ಶಿವಭಕ್ತಿಯುಳ್ಳವರಾದರೆ ಯಮನನ್ನೂ (ಮೃತ್ಯುವನ್ನು), ಕರ್ಮವನ್ನೂ, ಮಾಯೆಯನ್ನೂ ಗೆಲ್ಲುವುದು ಸಾಧ್ಯ – ಅದಕ್ಕೆ ಮಾರ್ಕಂಡೇಯಾದಿ ಶಿವಭಕ್ತರಉದಾಹರಣೆಗಳನ್ನು ನೀಡುತ್ತಾರೆ[2].

**ಭಕ್ತಿ ಮಾತ್ರವನು ಮಾಡಿದೊಡೆ ಕೇಳಂಗನೆ ।**

**ಮುಕ್ತಿಯನೊಲಿದೀವ ನೀಶನು ॥**

ಕೇವಲ ಭಕ್ತಿಯೊಂದನ್ನು ಸಾಧಿಸಿದರೆ ಸಾಕು, ಪರಮಾತ್ಮನು ಪ್ರೇಮದಿಂದ ಮುಕ್ತಿಯನ್ನು ಕೊಡುವನೆಂದು ನಿಜಗುಣರು ಹೇಳಿದ್ದಾರೆ.

**'ಅನುಪಮ ಅಚಲ ಭಕ್ತಿ ಭಾವಾನುಕೂಲನೆ ಶಂಭುಲಿಂಗ'**

ಅಂದರೆ ಉಪಮಾನ ರಹಿತವಾದ ಅಚಲ ಭಕ್ತಿ ಭಾವಕ್ಕೆ ಪರಮಾತ್ಮನು ಅನುಕೂಲನಾಗುತ್ತಾನೆಂದು ಹೇಳಿದ್ದಾರೆ. ಆದ್ದರಿಂದ ಭಕ್ತಿಯು ಅಚಲವಾದದ್ದಿರಬೇಕು[3]. ಪುರಂದರದಾಸರು ತಮ್ಮ ಒಂದು ಕೀರ್ತನೆಯಲ್ಲಿ ಯಾರಿಗೆ ಭಕುತಿ ಒಲಿದಿದೆಯೋ ಅವರಿಗೆ ಆಗಲೇ ಮುಕುತಿ ಎಂಬ ಭರವಸೆಯನ್ನು ನೀಡುತ್ತಾರೆ.[4]

**ಇದೀಗ ಭಕುತಿಯು ।ಮ॥ತ್ತಿದೀಗ ಮುಕುತಿಯು**

**ಮಧುದ್ವಿಷನ ಪದಕಮಲಕೇ ಮಧುಪನಂತೆ ಮುದದಿ ಪಂದಿಪಡೆ ॥**

ವಿಜಯದಾಸರು ಭಕ್ತಿಯ ಕುರಿತಾದ ತಮ್ಮ ಒಂದು ಸುಳಾದಿಯಲ್ಲಿ ಹೇಳುತ್ತಾರೆ[5]

**'ಹಯವದನ ನಮ್ಮ ವಿಜಯ ವಿಠಲನ ಪರಿಪರಿ ನೆನೆದವಗೆ ನರಕ ಪರಿಹಾರ ॥**

ಎಲ್ಲ ಸಾಧನೆಗಳಿಗಿಂತ ಮಿಗಿಲಾದುದು ಭಕ್ತಿ ಸಾಧನೆ, ಮುಕ್ತಿಯ ಪಥವಿದು ಎಂದು ಸ್ಪಷ್ಟವಾಗಿ ಈ ಉಗಾಭೋಗದಲ್ಲಿ ಹೇಳುತ್ತಾರೆ[6]:

**ಸಕಲ ಸಾಧನಕೆಲ್ಲ ಸಿದ್ಧಿಗೊಳಿಸುವುದು ಭಕುತಿ ಸಾಧನವಲ್ಲದನ್ಯ ಸಾಧನವುಂಟೆ**

**ಭಕುತಿಗಭಿಮಾನಿ ಭಾರತಿಯ ಕರುಣದಿಂ ಮುಕುತಿಗೆ ಪಥವೆಂದು ಮನವಿಟ್ಟು ಭಜಿಸಿರೋ**

**ಅಖಿಳೇಶ ಪುರಂದರ ವಿಠಲ ತಾನೊಲಿವ ॥**

ಸಾಧನೆಯ ದೃಢತೆಯಿಲ್ಲದ ಭಕ್ತರಿಗೆ ಸಿದ್ಧಿಗಳು ಒದಗಿದಾಗ ಅವರ ಸ್ಥಿತಿ **'ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟ ನೆಗೆದಂತಾಯಿತ್ತು ಕಾಣಾ ರಾಮನಾಥಾ'** ಎಂದು ಜೇಡರ ದಾಸೀಮಯ್ಯ ಹೇಳುತ್ತಾನೆ[7]. ಸಾಧನೆಯ ಹಾದಿಯಲ್ಲಿ ಸಿದ್ಧಿಗಳು ಒದಗುವುದು ಸ್ವಾಭಾವಿಕ. ಸಿದ್ಧಿಗಳು ಒದಗಿದಾಗ ಐಹಿಕ ಭೋಗದ ಆಸೆಯಿಂದ ಸಿದ್ಧಿಗಳ ಹಿಂದೆ ಹೋಗುವವರು ಭಕ್ತಿ ಪಥದಿಂದ ವ್ಯತಿಚಲಿಸಿ ಭ್ರಷ್ಟರಾಗುತ್ತಾರೆ ಎಂದು ಈ ವಚನಕಾರನು ಎಚ್ಚರಿಸುತ್ತಾನೆ.

ಷಣ್ಮುಖ ಸ್ವಾಮಿಗಳು ವಿದ್ಯೆ, ಬುದ್ಧಿ, ಐಶ್ವರ್ಯ ಸಿದ್ಧಿಗಳು ಲಭ್ಯವಾದರೇನು ಮನದಲ್ಲಿ ಭಕ್ತಿ ಬಡವಾದರೆ? ಎಂದು ವಚನವೊಂದರಲ್ಲಿ ಪ್ರಶ್ನಿಸುತ್ತಾರೆ.

**ವಿದ್ಯೆಯ ಬಹಳ ಕಲಿತಡೇನು, ಭಕ್ತಿಯಲ್ಲಿ ಶುದ್ಧಿಯಿಲ್ಲದಾತನು?**
**ಬುದ್ಧಿಯಲ್ಲಿ ವಿಶೇಷವೆನಿಸಿದಡೇನು, ಭಕ್ತಿಯಲ್ಲಿ ಬಡಮನದವನು ?**
**ಅರ್ಥದಲ್ಲಿ ಅಧಿಕನಾದಡೇನು ಕರ್ತೃ ಶಿವನ ನೆನೆಯದವನು ?**
**ಮದ್ದುಗುಣಿಕೆಯ ತಿಂದ ಮದೋನ್ಮತ್ತರ ಎನ್ನತ್ತ ತೋರದಿರಯ್ಯ ಅಖಂಡೇಶ್ವರಾ.**

"ಭಕ್ತಿ ಸಾಧನೆಯಲ್ಲಿ ಬಡವರಾಗಿ ವಿದ್ಯೆ, ಬುದ್ಧಿ, ಐಹಿಕ ಸಿದ್ಧಿ ಪ್ರಸಿದ್ಧಿಗಳಲ್ಲಿ ಮದೋನ್ಮತ್ತರಾದವರನ್ನು ಎನ್ನತ್ತ ತೋರಬೇಡ' ಎಂದು ಪ್ರಾರ್ಥಿಸುತ್ತಾರೆ ಷಣ್ಮುಖ ಸ್ವಾಮಿಗಳು". [8]

ಭಕ್ತಿಯೆನ್ನುವ ಬೀಜವನ್ನು ಬಿತ್ತಿದಲ್ಲಿ ದೊರಕುವ ಫಲವನ್ನು ಈ ಕೆಳಗಿನ ಕೀರ್ತನೆಯಲ್ಲಿ ನಿರೂಪಿಸಿದ್ದಾರೆ[9]:

**ಭಕ್ತಿಯೆಂಬ ಬೀಜ ಬಿತ್ತಯ್ಯ ಅದರಲ್ಲಿ ಬೆಳೆವ**
**ಮುಕ್ತಿಯೆಂಬ ಫಲವ ತಿನ್ನಯ್ಯ ॥ ಪ ॥**
**ಭಕ್ತಿಯೆಂಬ ಬೀಜ ಬಿತ್ತಿ ತ್ಯಾಗವೆಂಬ ಕ್ಷೇತ್ರದಲ್ಲಿ**
**ಶಕ್ತಿ ಮೀರಿ ನೀರ ಸಂಚಿ ಯುಕ್ತಿಯಿಂದ ಸಾಕಿರೋ ॥ ೧ ॥**
**ಪ್ರೀತಿಯಿಂದ ಮರವ ಸೇರಿ ಧರ್ಮವೆಂಬ ಟೊಂಗೆ ಹತ್ತಿ**
**ಆತುರದೀ ಜ್ಞಾನವೆಂಬ ಕುಸುಮವನ್ನೇ ಮೂಸಿರೋ ॥ ೨ ॥**
**ಜ್ಞಾನದಿಂದ ಹರಿಯ ಸೇವೆಯನ್ನು ಮಾಡಿ ಹರಿಯು ಕೊಡುವ**
**ಹಣ್ಣ ನೀವು ತೆಗೆದುಕೊಂಡು ತೋಷದಿಂದ ನೋಡಿರೋ ॥ ೩ ॥**
**ಮುಕ್ತಿಯೆಂಬ ಹಣ್ಣ ನೀವು ಸ್ವಾರ್ಥವೆಂಬ ಸಿಪ್ಪೆ ಬಿಸುಟು**
**ಭಕ್ತರಂತೆ ಕೇಶವಾಯೆಂದು ಭಕ್ತಿಯಿಂದ ತಿನ್ನಿರೋ ॥ ೪ ॥**

ಮುಂದಿನ ಸೂತ್ರದಲ್ಲಿ ನಾರದರು ಹೇಳುತ್ತಾರೆ:

**ಯತ್ಪ್ರಾಪ್ಯ ನ ಕಿಂಚಿದ್ ವಾಂಛತಿ, ನ ಶೋಚತಿ, ನ ದ್ವೇಷ್ಟಿ, ನ ರಮತೇ, ನೋತ್ಸಾಹೀ ಭವತಿ ॥೫॥**

ಅದನ್ನು (ಪರಾಭಕ್ತಿಯನ್ನು) ಹೊಂದಿ ಮತ್ತಾವುದನ್ನೂ ಬಯಸನು, ಶೋಕಿಸನು, ದ್ವೇಷಿಸನು, ರಮಿಸನು, ಉತ್ಸಾಹಿಯಾಗನು.

ಹಿಂದಿನ ಸೂತ್ರದಲ್ಲಿ 'ಲಬ್ಧ್ವಾ' ಎಂದೂ ಈ ಸೂತ್ರದಲ್ಲಿ 'ಪ್ರಾಪ್ಯ' ಎಂದೂ ಪದ

ಪ್ರಯೋಗವಿದೆ. ಲಾಭದ ಹಿಂದೆ ಮತ್ತೊಬ್ಬರ ಔದಾರ್ಯವಿದೆಯೆಂದೂ, ಪ್ರಾಪ್ತಿಯ ಹಿಂದೆ ಸ್ವಪ್ರಯತ್ನವಿದೆಯೆಂದೂ ಒಂದು ವ್ಯಾಖ್ಯಾನ. ಸಿದ್ಧತ್ವ–ಅಮೃತತ್ವ–ತೃಪ್ತ್ಯತ್ವಗಳ ಹಿಂದೆ ಭಗವತ್ಕೃಪೆಯ ಪಾತ್ರ ಹಿರಿದಾಗಿದ್ದರೆ, ಈಗ ಹೇಳುವ ಲಕ್ಷಣಗಳನ್ನು ಪಡೆಯಲು ಭಗವತ್ಕೃಪೆಯ ಜೊತೆಗೆ ವಿಶೇಷವಾದ ಸ್ವಪ್ರಯತ್ನ, ಸಾಧನೆಯೂ ಬೇಕು. ಆದರೆ ಸಿದ್ಧಪುರುಷನಲ್ಲಿ ಇವು ಸಹಜವಾಗಿಯೇ ಇರುತ್ತವೆ ಎಂದು ವ್ಯಾಖ್ಯಾನಿಸುತ್ತಾರೆ.

ವಾಂಛಾ ಎಂದರೆ ಆಶೆ. ಪರಾಭಕ್ತಿಯನ್ನು ಹೊಂದಿದವನ ಮನಸ್ಸಿನಲ್ಲಿ ಮತ್ತಾವ ಆಶೆಯೂ ಇರಲು ಸಾಧ್ಯವಿಲ್ಲ.

ಹಿಂದಿನ ಸೂತ್ರದಲ್ಲಿ ಇದನ್ನೇ 'ತೃಪ್ತೋ ಭವತಿ' ಎಂದು ಹೇಳಿದೆ. ಅತೃಪ್ತನಾದವನಿಗೆ ಆಶೆಗಳಿಲ್ಲ.

ಶ್ರೀ ಪಾದರಾಜರ ಪ್ರಸಿದ್ಧವಾದ ಕೀರ್ತನೆ 'ನಾನಿನ್ನೊಳೇನನ್ನು ಬೇಡುವುದಿಲ್ಲ. ಹೃದಯ ಮಂಟಪದೊಳು ನೆಲೆಸಿರು ಹರಿಯೆ' ಈ ತೃಪ್ತಿಗೆ ಒಂದು ದೃಷ್ಟಾಂತವಾಗಿದೆ. ಹಾಗೆಯೇ ಗೋಪಾಲದಾಸರ ಒಂದು ಜನಪ್ರಿಯ ಕೀರ್ತನೆ.[10]

**'ಏನು ಬೇಡಲಿ ನಿನ್ನ ಬಳಿಗೆ ಬಂದು । ನೀನಿತ್ತ ಸೌಭಾಗ್ಯ ನಿಬಿಡವಾಗಿದೆ ಎನಗೆ ॥ಪ॥**

ಇದರಲ್ಲಿ ಭಕ್ತಿಯಿಂದಾಗಿ ಆಂತರ್ಯದಲ್ಲಿ ಮಡುಗಟ್ಟಿದ ಸಂತೃಪ್ತಿ ಸಂಪೂರ್ಣವಾಗಿ ಐಹಿಕವಾದ ಭೋಗಭಾಗ್ಯಗಳನ್ನು ಬೇಡಿ ಬಳಲಿದವರ ಪೌರಾಣಿಕ ಉದಾಹರಣೆಗಳನ್ನು ನೀಡುತ್ತಾರೆ. ಈ ಕೀರ್ತನೆಯಲ್ಲಿ ಗೋಪಾಲದಾಸರು ಮಾತಾ, ಪಿತೃ, ಸತಿ, ಸುತಾದಿಗಳನ್ನು ಬಯಸಿ, ಬೇಡಿ ಪಡೆದವರ ಗತಿ ಏನಾಯಿತು ಎಂಬುದನ್ನು ವಿವಿಧ ಚರಣಗಳಲ್ಲಿ ನಿರೂಪಿಸಿ, ಕೊನೆಯ ಚರಣದಲ್ಲಿ ಈ ರೀತಿ ಅರಿಕೆ ಮಾಡಿಕೊಳ್ಳುತ್ತಾರೆ:

**ಬೇಡುವೆನು ನಾ ನಿನ್ನ ಬೇಡತಕ್ಕುದ ದೇವಾ ।**

**ನೀಡೇನೆಂಬುದು ನಿನ್ನ ಮನದೊಳಿತ್ತೇ ।**

**ಮೂಡಲಗಿರಿವಾಸ ಗೋಪಾಲ ವಿಠಲ ।**

**ಬೇಡದಂದದಿ ಪರರ ಮಾಡೆನ್ನ ತಂದೆ ॥**

ಎಲ್ಲವನ್ನು ನೀಡುವವನು ಭಗವಂತನೇ, ಜೀವದ ಯೋಗ್ಯತಾನುಸಾರ ಏನು ಕೊಡಬೇಕೋ ಅದನ್ನು ಕೊಟ್ಟೇ ಕೊಡುತ್ತಾನೆ ಎಂಬ ದೃಢವಿಶ್ವಾಸದಿಂದ ಕೊನೆಯ ಸಾಲಿನಲ್ಲಿ ಭಗವಂತನೊಂದಿಗಿರುವ ಸಲುಗೆ, ಅಕ್ಕರೆ, ಅಭಿಮಾನ ಇವನ್ನೆಲ್ಲಾ ಎರಕ ಹೊಯ್ದಂತೆ 'ಬೇಡದಂದದಿ ಪರರ ಮಾಡೆನ್ನ ತಂದೆ' ಎಂದು ಹೃದಯಾಂತರಾಳದಿಂದ ಪ್ರಾರ್ಥಿಸುತ್ತಾರೆ. ಭಕ್ತನಲ್ಲಿ ಆಸೆಗಳಿಲ್ಲದೆ ಇರಬಹುದು. ಆದರೆ ಜೀವನ ನಿರ್ವಹಣೆಗೆ ಏನು ಬೇಕೋ ಅಷ್ಟನ್ನು ಪಡೆಯಲು ಮತ್ತೊಬ್ಬರಲ್ಲಿ ಕೈಯೊಡ್ಡದಂತೆ ಮಾಡು ಎಂಬ ಕಳಕಳಿಯನ್ನೂ ವ್ಯಕ್ತಪಡಿಸುತ್ತಾರೆ ಗೋಪಾಲದಾಸರು. ಈ ಕೊನೆಯ ಸಾಲಿನಲ್ಲಿ ಪಾರಮಾರ್ಥಿಕತೆಯ ಉನ್ನತ ಆದರ್ಶ ಹಾಗೂ ವಾಸ್ತವಿಕ, ವ್ಯಾವಹಾರಿಕ ಜೀವನದ

ಮಧ್ಯೆ ಒಂದು ಸಮನ್ವಯವನ್ನು ಸಾಧಿಸುತ್ತಾರೆ ಗೋಪಾಲದಾಸರು. ಹೆಚ್ಚಿನ ಸಂತರೆಲ್ಲಾ (ವಿಶೇಷವಾಗಿ ಕರ್ನಾಟಕದ ಶರಣರು, ದಾಸರು) ಸಂಸಾರಿಗಳು, ಸಂಸಾರಿಗಳ ಬಾಳಿನಲ್ಲಿ ಬೇಕುಗಳಿಗೆ ಅವುಗಳದ್ದೇ ಆದ ಸ್ಥಾನವಿದೆ. ಭಕ್ತನಿಗೆ ವಾಂಛೆ ಇಲ್ಲದೇ ಇರಬಹುದು. ಪೂರ್ಣತೃಪ್ತನಾಗಿದ್ದಿರಬಹುದು ಆದರೆ ಸಂಸಾರ ನಿರ್ವಹಣೆ ಮಾಡದೇ ಹೋದರೆ ಬಾಳು ಗೋಳಾಗಬಹುದು. ಅದಕ್ಕಾಗಿ ಜಗನ್ನಾಥದಾಸರು **'ಫಲವಿದು ಬಾಳ್ದುದಕೆ'** ಎಂಬ ಕೀರ್ತನೆಯಲ್ಲಿ ಹೇಗೆ ಬಾಳಬೇಕು ಎಂದು ನಿರೂಪಿಸುತ್ತಾರೆ[11].

**ಸ್ವೋಚಿತ ಕರ್ಮಗಳಾಚರಿಸುತ್ತ ಬಲು**
**ನೀಚರಲ್ಲಿಗೆ ಪೋಗಿ ಯಾಚಿಸದೆ**
**ಖೇಚರವಾಹ ಚರಾಚರ ಬಂಧವಿ**
**ಮೋಚಕನಿಹನೆಂದ್ಯೋಚಿಸುತಿಪ್ಪದೆ ॥೧॥**
**ನಿಚ್ಚ ಭಕುತಿಯೊಳಚ್ಯುತನಂಘ್ರಿಗ**
**ಳರ್ಚಿಸಿ ಮೆಚ್ಚಿಸುತೆಚ್ಚರದಿ**
**ತುಚ್ಛ ವಿಷಯಗಳಿಗಿಚ್ಛೈಸದೆ ಯ**
**ದೃಚ್ಛಲಾಭದಿಂ ಪ್ರೋಚ್ಚನಾಗುವದೆ ॥೨॥**

ತನಗೆ ಉಚಿತವಾದ ಕರ್ಮಗಳನ್ನು ಮಾಡುತ್ತಿರಬೇಕು. ನೀಚರಲ್ಲಿ ಹೋಗಿ ಯಾಚಿಸಬಾರದು, ಭಕ್ತಿಯೊಳು ಅಚ್ಯುತನ ಪಾದಪದ್ಮಗಳನ್ನು ಅರ್ಚಿಸುತ್ತಿರಬೇಕು. ತುಚ್ಛವಿಷಯಗಳಿಗೆ ಇಚ್ಛಿಸಬಾರದು, ಎಂದು ಜಗನ್ನಾಥದಾಸರು ಹೇಳುತ್ತಾರೆ.

ಶೋಕಕ್ಕೆ ಮೂಲವಾದುದು ಆಶೆಯೇ ಆಗಿದೆ, **(ಆಶಾ ದುಃಖಸ್ಯ ಕಾರಣಮ್),** ಇಷ್ಟಪಟ್ಟ ವಸ್ತುವು ಸಿಕ್ಕದೇ ಹೋದಾಗ, ಅಥವಾ ಇಷ್ಟವಾದ ವಸ್ತುವಿನ ವಿಯೋಗವುಂಟಾದಾಗ ದುಃಖವುಂಟಾಗುತ್ತದೆ. ಆದರೆ ಭಕ್ತನಿಗೆ ಪರಮಾತ್ಮನೊಬ್ಬನೇ ಇಷ್ಟ ವಸ್ತು. ಅವನು ಇಷ್ಟಪಟ್ಟ ವಸ್ತುವು ಅವನ ಒಳಗೂ ಹೊರಗೂ, ಎಲ್ಲೆಲ್ಲೂ ವ್ಯಾಪಿಸಿರುವ ಕಾರಣ, ಆ ವ್ಯಾಪಕತೆಯನ್ನು ಭಕ್ತನು ಅನುಕ್ಷಣವೂ ಅನುಭವ ಮಾಡಿಕೊಳ್ಳುವ ಕಾರಣ ಅವನಿಗೆ ಇಷ್ಟವಿಯೋಗ ಎನ್ನುವಂಥಾದ್ದೇ ಇರಲು ಸಾಧ್ಯವಿಲ್ಲ. ಆದುದರಿಂದ ದುಃಖಕ್ಕೆ ಅವಕಾಶವೆಲ್ಲಿದೆ ?

ಇನ್ನು ಈಡೇರದ ಆಶೆಗಳಿಂದ ದುಃಖವುಂಟಾಗುತ್ತದೆಯೆಂದರೆ, ಭಕ್ತನು ನಿತ್ಯ ತೃಪ್ತನಾಗಿರುವುದರಿಂದ **(ತೃಪ್ತೋಭವತಿ)** ಹಾಗೂ ಎಲ್ಲಾ ಆಶೆಗಳಿಂದಲೂ ಮುಕ್ತನಾಗಿರುವ ಕಾರಣ **(ನ ಕಿಂಚಿದ್ ವಾಂಛತಿ)** ಅಂತಹ ಶೋಕಕ್ಕೆ ಅವಕಾಶವೇ ಇಲ್ಲ.

ಅಕ್ಕ ಮಹಾದೇವಿಯು ಹೇಳುತ್ತಾಳೆ[12]:

**ಹಸಿವಾದರೆ ಊರೊಳಗೆ ಭಿಕ್ಷಾನ್ನಗಳುಂಟು।**
**ತೃಷೆಯಾದರೆ ಕೆರೆ-ಬಾವಿ-ಹಳ್ಳಗಳುಂಟು ।**
**ಶಯನಕ್ಕೆ ಹಾಳುದೇಗುಲವುಂಟು ।**
**ಚೆನ್ನ ಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು ।**

ಈ ವಚನದ ಕೊನೆಯ ಸಾಲಿನಲ್ಲಿ ಬರುವಂತಹ ಶಬ್ದ 'ಆತ್ಮ ಸಂಗಾತ', ಇಲ್ಲಿ ಆತ್ಮ ಅಂದರೆ ಮನಸ್ಸು ಎಂದು ಅರ್ಥೈಸಿದರೆ ಮನಸ್ಸು ಸಂಗಾತಿಯನ್ನು ಬಯಸುವುದು ಸಹಜ. ಮನುಷ್ಯ ಸಮಾಜ ಜೀವಿ. ಹಾಗಾಗಿ ಮನಸ್ಸು ಯಾವುದಾದರೂ ಆಲಂಬನೆಯನ್ನು ಬಯಸುತ್ತದೆ. ಮನೆ ಬಿಟ್ಟು ತೆರಳಿದ್ದ ಅಕ್ಕ ಮಹಾದೇವಿಯು ತಾನು ಏಕಾಂಗಿಯಾಗಿ ಅಲೆಯುತ್ತಿದ್ದರೂ, ಏಕಾಕಿತನ ತನ್ನನ್ನು ಕಾಡುತ್ತಿಲ್ಲ. ಚೆನ್ನ ಮಲ್ಲಿಕಾರ್ಜುನನೇ ನನ್ನ ಸಂಗಾತಿ. ಅವನಲ್ಲೇ ತನ್ನ ಮನಸ್ಸು ರಮಾಮಾಣವಾಗುತ್ತದೆ ಎಂದು ಹೇಳುತ್ತಾಳೆ.

ಇದಕ್ಕೆ ಸಂವಾದಿಯಾದ ಮತ್ತೊಂದು ವಚನವು ಇಂತಿದೆ[13]:

**ಹಸಿವಿಂಗೆ ಭಿಕ್ಷೆವುಂಟು.**

**ತೃಷೆಗೆ ಹಳ್ಳದಲ್ಲಿ ಸುಚಿತ್ತವಾದ ಅಗ್ಘವಣಿಯುಂಟು !**

**ಕಟ್ಟಿಕೊಂಬೊಡೆ ತಿಪ್ಪೆಯ ಮೇಲೆ ಅರಿವೆಯುಂಟು**

**ಶಯನಕ್ಕೆ ಹಾಳು ದೇಗುಲವುಂಟು !**

**ನನ್ನ ಸಮಸುಖಿಯಾಗಿ ನಿಮ್ಮ ಜ್ಞಾನವುಂಟು**

**ಚೆನ್ನ ಮಲ್ಲಿಕಾರ್ಜುನ**

ಅಕ್ಕನ ಮತ್ತೊಂದು ವಚನ ಭಕ್ತನ ಮನಸ್ಥಿತಿಯನ್ನು ಚೆನ್ನಾಗಿ ನಿರೂಪಿಸುತ್ತದೆ[14].

**ಆಶೆಯಾಮಿಷವಳಿದು ಹುಸಿವಿಷಯಂಗಳೆಲ್ಲಾ ಹಿಂಗಿ**

**ಸಂಶಯ ಸಂಬಂಧ ವಿಸಂಬಂಧವಾಯಿತು ನೋಡಾ ।**

**ಎನ್ನ ಮನದೊಳಗೆ ಘನ ಪರಿಣಾಮವ ಕಂಡು ಮನ ಮಗ್ನವಾಯಿತ್ತಯ್ಯ!**

**ಚೆನ್ನಮಲ್ಲಿಕಾರ್ಜುನ ನಿಮ್ಮ ಶರಣ ಪ್ರಭುದೇವರ ಕರುಣದಿಂದ ಬದುಕಿದೆನಯ್ಯ.**

ಭಕ್ತನ ಮನಸ್ಸಿನಲ್ಲಿ ಆಸೆ ಆಮಿಷಗಳಿಲ್ಲ, ಸಂಬಂಧ ಉಳಿದಿರುವುದು ಭಗವಂತನೊಂದಿಗೆ ಮಾತ್ರ.

ಹಾಗಾಗಿ ಅಳಿದುಳಿದ ಎಲ್ಲಾ ಸಂಬಂಧಗಳೂ ವಿಶೇಷ ಸಂಬಂಧಗಳು, ಯಾಕೆಂದರೆ ಆ ಎಲ್ಲಾ ಸಂಬಂಧಿಗಳಲ್ಲೂ ಭಗವಂತನನ್ನೇ ಕಾಣುತ್ತಾರೆ ಅವರು. ಮನಸ್ಸು ಅಂತರ್ಯದ ಚೈತನ್ಯದಲ್ಲಿ (ಚೆನ್ನ ಮಲ್ಲಿಕಾರ್ಜುನನಲ್ಲಿ) ಒಂದಾದ ಸ್ಥಿತಿ ಪ್ರಾಪ್ತವಾಗಿದೆ. ಈಶಾವಾಸ್ಯ ಉಪನಿಷತ್ ಹೇಳುತ್ತದೆ **'ತತ್ರ ಕೋ ಮೋಹಃ ಕಶ್ಶೋಕ ಏಕತ್ವಮನು ಪಶ್ಯತಃ'** 'ಎಲ್ಲೆಲ್ಲಿಯೂ ಏಕತ್ವವನ್ನೇ ಕಾಣುತ್ತಿರುವವನಿಗೆ ಮೋಹವೆಲ್ಲಿಯದು? ಶೋಕವೆಲ್ಲಿಯದು ?' ಈಶಾವಾಸ್ಯ ಉಪನಿಷತ್ (7)

'ಕ್ರೋಧಕ್ಕೆ ಕಾರಣ ಕಾಮ, ಕಾಮದಿಂದ ಕ್ರೋಧ ಹುಟ್ಟುತ್ತದೆ' – **ಕಾಮಾತ್ ಕ್ರೋಧೋಭಿಜಾಯತೇ** (ಭಗವದ್ಗೀತೆ 2, 63) ಕಾಮವೇ ಇಲ್ಲವೆಂದ ಮೇಲೆ ಕೋಪವೆಲ್ಲಿಯದು ?

ಪತಂಜಲಿ ಯೋಗಸೂತ್ರದಲ್ಲಿ ಹೇಳುತ್ತಾರೆ : **'ದುಃಖಾನುಶಯೀ ದ್ವೇಷಃ'**, ದುಃಖದ (ಅನುಭವ ಬಂದು ಹೋದ ಮೇಲೆ ಅದರ ಬಗೆಗೆ ಮನಸ್ಸಿನಲ್ಲಿ) ಉಳಿಯುವ (ಭಾವನಾ ವಿಶೇಷವೇ) ದ್ವೇಷ (ಯೋಗ ಸೂತ್ರಗಳು 2.8) ಯಾರಿಗೆ ಶೋಕವಿಲ್ಲವೋ ಅಂಥವರಿಗೆ ಆ ದುಃಖಾನುಭವದ ದೆಸೆಯಿಂದ ಮನಸ್ಸಿನಲ್ಲಿ ದ್ವೇಷ ಹೇಗೆ ತಾನೇ ಹುಟ್ಟಲು ಸಾಧ್ಯ ? ಬಸವೇಶ್ವರರು ಒಂದು ವಚನದಲ್ಲಿ ಹೇಳುತ್ತಾರೆ[15]:

**ಆರು ಮುನಿದು ನಮ್ಮನ್ನೇನ ಮಾಡುವರು ?**

**ಊರು ಮುನಿದು ನಮ್ಮ ನೆಂತು ಮಾಡುವರು ?**

**ನಮ್ಮ ಕುನ್ನಿಗೆ ಕೂಸ ಕೊಡಬೇಡ, ನಮ್ಮ ಸೊಣಗಂಗೆ ತಳಿಗೆಯನ್ನಿಕ್ಕ ಬೇಡ**

**ಆನೆಯ ಮೇಲೆ ಹೋಹನ ಶ್ವಾನ ಕಚ್ಚ ಬಲ್ಲುದೆ –**

**ನಮಗೆ ನಮ್ಮ ಕೂಡಸಂಗಯ್ಯನುಳ್ಳನ್ನಕ್ಕ ?**

ಆನೆಯ ಮೇಲೆ ಹೋಗುವವನನ್ನು ಶ್ವಾನ ಏನು ತಾನೇ ಮಾಡಬಲ್ಲುದು ? ಅದೇ ರೀತಿ ಸದಾ ಉನ್ನತ ಭಾವದಲ್ಲಿರುವ ಮನಸ್ಸುಳ್ಳ ಭಕ್ತನ ಬಗ್ಗೆ ಅನ್ಯರು ಸಿಟ್ಟು, ದ್ವೇಷ ಏನೇ ವ್ಯಕ್ತ ಪಡಿಸಿದರೂ ಅವನೇನೂ ಸಿಟ್ಟುಗೊಳ್ಳಲಾರ, ಯಾರನ್ನೂ ದ್ವೇಷಿಸಲಾರ. ಸಂತ ಶಿಶುನಾಳ ಷರೀಫರು **'ಸಾಧುವಿಗೊಂದಿಸುವೆ ನಿತ್ಯದಿ'** ಎಂಬ ಕೀರ್ತನೆಯಲ್ಲಿ ಪರಾಭಕ್ತಿಯನ್ನು ಹೊಂದಿದ ಸಾಧುವಿನ ಲಕ್ಷಣವನ್ನು ವರ್ಣಿಸುತ್ತಾರೆ[16]:

**ಭೇದವನಳಿದಾತ್ಮ ಬೋಧವ ತಿಳಿಯುತ**

**ಕ್ರೋಧಾದಿಗಳ ಸುಟ್ಟು ಮೋದದಿಂದಿರುವಂಥ ॥1॥**

**ಕ್ಲೇಶ ಪಾಶ ಕೆಡಿಸಿ ಮಾಯಾಂಗನೆಯ ಆಸೆ ಎಲ್ಲವ ಬಿಡಿಸಿ**

**ದೋಷ ಭವದುರಿತ ನಾಶ ಶಿಶುನಾಳೇಶನೊಳು ಮನ ಮುಳುಗಿ ನಿತ್ಯದಿ**

**ರಾಶಿ ತಾಪವ ತೊಳೆದು ಕರ್ಮ ವಿದ್ವಾಂಸರೆನಿಸುವ ಭಾಸುರಾಗಿಹ ॥2॥**

ಮೊದಲನೆಯ ಚರಣದಲಿ, 'ಭೇದವನಳಿದಾತ್ಮ ಬೋಧವ ತಿಳಿಯುತ ಕ್ರೋಧಾದಿಗಳ ಸುಟ್ಟು ಮೋದದಿಂದಿರುವಂಥ' ಎನ್ನುವ ಮೂಲಕ ಪರಾಭಕ್ತಿಯನ್ನು (ಆತ್ಮ ಬೋಧವನ್ನು ಹೊಂದಿದಾತನೇ ಪರಾಭಕ್ತಿಯನ್ನು ಪಡೆದ ಭಕ್ತ) ಹೊಂದಿದವನು ಎಲ್ಲೆಲ್ಲೂ ಏಕಮೇವಾದ್ವಿತೀಯವಾದ ಆತ್ಮಚೈತನ್ಯವನ್ನೇ ಕಾಣುವನಾದುದರಿಂದ ಕ್ರೋಧಾದಿ ದೋಷಗಳಿಗೆ ಎಡೆಯೇಯಿಲ್ಲದೆ ಸದಾ ಆನಂದದಿಂದ ಇರುತ್ತಾನೆ, ಎಂದು ನಿರೂಪಿಸುತ್ತಾರೆ.

ಶಿಶುನಾಳ ಷರೀಫರು ಇದಕ್ಕೆ ಸಂವಾದಿಯಾದ **'ಸಾಧುವಿಗೊಂದಿಸುವ ನಿತ್ಯದಿ'** (ಶಿಶುನಾಳ ಶರೀಫ್ ಗೀತೆಗಳು, ಪುಟ 67, ಗೀ.ಸಂ. 77) ಎಂಬ ಹಾಡಿನ ಮೊದಲಚರಣದಲ್ಲಿ **'ಭೇದ ಕ್ರೋಧ ಛೇದಿಸಿ ಮೋದದಿ ಸದ್ಗುರು ಪಾದಕ್ಕೊಂದಿದ'** ಎಂದು ಸಾಧುವಿನ ಲಕ್ಷಣವನ್ನು ಹೇಳುತ್ತಾರೆ ಷರೀಫರು.

ಮುಂದೆ ಇದೇ ಸೂತ್ರದಲ್ಲಿ **'ನ ರಮತೇ, ನೋತ್ಸಾಹಿ ಭವತಿ' 'ರಮಿಸನು ಉತ್ಸಾಹಿಯಾಗನು'** ಅನ್ನುತ್ತಾರೆ ನಾರದರು. 'ರಮ್' ಧಾತುವಿಗೆ ಕ್ರೀಡೆ, ಕೀಡೆಯಿಂದ ದೊರಕುವ ಸುಖ

ಅಥವಾ ಆನಂದ ಎಂದರ್ಥ. (To rejoice at, be pleased with, To play, sport, amuse oneself. The students Sanskrith, English Dictonery, V.S Apte, Motilal Banarsidass, Delhi, Varanasi, Patna, 1965, p.468) ಇಂತಹ ಕ್ರೀಡೆಗೆ ತನಗಿಂತ ಬೇರೆಯಾದ ತನಗೆ ಪ್ರಿಯವಾದ ವಸ್ತುವೊಂದಿರಬೇಕು. ಯಾವ ಪರಮಭಕ್ತನು ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಆತ್ಮವಸ್ತುವನ್ನೇ ಕಾಣುತ್ತಿರುವನೋ ಅವನು 'ಆತ್ಮಕ್ರೀಡ'ನೂ 'ಆತ್ಮರತಿ'ಯೂ (ಮುಂಡಕೋಪನಿಷತ್ 3.1.4) ಆಗುವನೇ ಹೊರತು ವಿಷಯ ವಸ್ತುಗಳಲ್ಲಿ ರಮಿಸುವುದಿಲ್ಲ.

**'ಪ್ರಾಣೋಹ್ಯೇಷಯಃ ಸರ್ವ ಭೂತೈರ್ವಿಭಾತಿ ವಿಜಾನನ್ ವಿದ್ವಾನ್ ಭವತೇನಾತಿವಾದೀ ।**
**ಆತ್ಮಕ್ರೀಡೆ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ ॥4॥**

'ಈ ಪ್ರಾಣನೇ ಸರ್ವಭೂತಗಳಾಗಿ ಪ್ರಕಾಶಿಸುತ್ತಿರುವನು, ಇದನ್ನು ಅರಿತುಕೊಂಡ ವಿದ್ವಾಂಸನು ಅತಿವಾದಿಯಾಗಿರುವುದಿಲ್ಲ. ಆತ್ಮಕ್ರೀಡನೂ, ಆತ್ಮರತಿಯೂ, ಕ್ರಿಯಾವಂತನೂ ಆದ ಈತನೂ ಬ್ರಹ್ಮವಿದರಲ್ಲಿ ಅತ್ಯಂತ ಶ್ರೇಷ್ಠನಾಗಿದ್ದಾನೆ[17].'

ಶ್ರೀಮದ್ಭಾಗವತದ (6.12.22) ಒಂದು ಶ್ಲೋಕವು ಇಲ್ಲಿ ಸಂಗತವಾಗುತ್ತದೆ.

**ಯಸ್ಯ ಭಕ್ತಿರ್ಭಗವತಿ ಹರೌ ನಿಶ್ರೇಯಸೇಶ್ವರೇ ।**
**ವಿಕ್ರೀಡತೋಮೃತಂಬೋಧೌ ಕಿಂ ಕ್ಷುದ್ರೈಃ ಖಾತಕೋದಕೈಃ ॥**

'ಯಾರಿಗೆ ಭಗವಂತನೂ ನಿಶ್ರೇಯಸ್ಸಿನ ಅಧಿಪತಿಯೂ ಆದ ಶ್ರೀಹರಿಯಲ್ಲಿ ಭಕ್ತಿಯಿರುವುದೋ ಅವನು ಅಮೃತಸಾಗರದಲ್ಲಿ ಕ್ರೀಡಿಸುತ್ತಿದ್ದಾನೆ. ಇಂಥವನಿಗೆ ಕ್ಷುದ್ರವಾದ ಹಳ್ಳದ ನೀರಿನೆಂದೇನಾದೀತು?'

ಅಕ್ಕಮಹಾದೇವಿಯ ಒಂದು ಪ್ರಸಿದ್ಧ ವಚನ ಇದೇ ಭಾವವನ್ನು ಬಿಂಬಿಸುತ್ತದೆ[17].

**'ಗಿರಿಯಲ್ಲಲ್ಲದೇ ಹುಲುಮೊರಡಿಯಲಾಡುವುದೇ ನವಿಲು?**
**ಕೊಳನಲ್ಲಲ್ಲದೆ ಕಿರುವಳ್ಳಕೆಳಸುವುದೇ ಹಂಸೆ?**
**ಮಾಮರ ತಳಿತಲ್ಲದೇ ಸ್ವರಗೈಯುವುದೇ ಕೋಗಿಲೆ?**
**ಪರಿಮಳವಿಲ್ಲದ ಪುಷ್ಪಕೇಳಸುವುದೇ ಭ್ರಮರ?**
**ಎನ್ನದೇವ ಚೆನ್ನಮಲ್ಲಿಕಾರ್ಜುನಗಲ್ಲದೆ.'**
**ಅನ್ಯಕೆಳಸುವುದೇ ಎನ್ನ ಮನ ಕೇಳಿರೆ ಕೆಳದಿಯರಿರಾ?।**

ಅಂತರ್ಯದ ಪ್ರಭುವಾದ ಚೆನ್ನಮಲ್ಲಿಕಾರ್ಜುನನಲ್ಲದೆ ಅನ್ಯ ವಿಷಯಗಳಲ್ಲಿ ಅದೆಂತು ತನ್ನ ಮನಸ್ಸು ರಮಿಸಲು ಸಾಧ್ಯ? ಎಂದು ಪ್ರಶ್ನಿಸುತ್ತಾಳೆ ಅಕ್ಕ. ಇನ್ನು ದಾಸಸಾಹಿತ್ಯವನ್ನು ಪರಿಗಣಿಸಿದರೆ ಕೃಷ್ಣ ಪರಮಾತ್ಮನ
ಬಾಲಲೀಲೆಗಳನ್ನು ಪರಿಭಾವಿಸಿಕೊಂಡು ತಮ್ಮನ್ನು ತಾವು ಬಾಲಕೃಷ್ಣನ ಸ್ಥಾನದಲ್ಲಿ ಯಶೋಧೆಯ ಸ್ಥಾನದಲ್ಲಿ ಕಲ್ಪಿಸಿಕೊಂಡು, ಗೋಪಿಕೆಯರ ಸ್ಥಾನದಲ್ಲಿ ಕಲ್ಪಿಸಿಕೊಂಡು, ಕೃಷ್ಣನ ಓರಗೆಯ ಮಿತ್ರರ ಸ್ಥಾನದಲ್ಲಿ ಕಲ್ಪಿಸಿಕೊಂಡು ವಾತ್ಸಲ್ಯ, ಮಧುರ, ವಿರಹ ಹೀಗೆ ಅನೇಕ ಭಾವಗಳಿಂದ ಕೂಡಿದ ಅಸಂಖ್ಯಾತ ಕೀರ್ತನೆಗಳು ಸಿಗುತ್ತದೆ.

ಉದಾಹರಣೆಗೆ ಪುರಂದರದಾಸರ ಕೀರ್ತನೆಗಳನ್ನು ತೆಗೆದುಕೊಂಡರೆ (ಸ.ದಾ.ಸಾ., ಸಂಪುಟ 3, ಭಾಗ 1, ಪುರಂದರದಾಸರ ಕೀರ್ತನೆಗಳು, ಭಾಗ 1, ಸಂ. ಡಾ.ಬಸವರಾಜ ಸಬರದ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, 2003, ಈ ಗ್ರಂಥದಲ್ಲಿ ಅವಲೋಕಿಸಿದ) ಆಯ್ದ ಕೆಲವು ಕೀರ್ತನೆಗಳ ಪಟ್ಟಿ ಇಂತಿದೆ:

1. ಅಂಗನೆಯರೆಲ್ಲ ನೆರೆದು ಚಪ್ಪಾಳೆಯಿಕ್ಕುವ ದಿವ್ಯಮಂಗಳನಾಮವ ಪಾಡಿ ರಂಗನ ಕುಣಿಸುವರು (ಪುಟ 55, ಕೀ. ಸಂ 56)
2. ಆಡಹೋಗಲು ಬೇಡವೊ-ರಂಗಯ್ಯ (ಪುಟ 57, ಕೀ. ಸಂ 58)
3. ಆಡಹೋಗೋಣ ಬಾರೊ ರಂಗ (ಪುಟ 57, ಕೀ. ಸಂ 59)
4. ಆಡಹೋದಲ್ಲಿ ಮಕ್ಕಳು ಎನ್ನನು ಆಡಿಕೊಂಬರು ನೋಡಮ್ಮ (ಪುಟ 58, ಕೀ. ಸಂ 60)
5. ಇವನ ಹಿಡಿದುಕೊಂಡು ಹೋಗೆಲೋ ಜೋಗಿ (ಪುಟ 62, ಕೀ. ಸಂ 64)
6. ಎತ್ತಿಕೊಳ್ಳೆ ಗೋಪೀ ರಂಗನ (ಪುಟ 63, ಕೀ. ಸಂ 66)
7. ಎಂಥ ಪುಣ್ಯವೇ ನಿನ್ನದೆಂಥ ಭಾಗ್ಯವೇ ಗೋಪಿ (ಪುಟ 64, ಕೀ. ಸಂ 68)
8. ಎನಗೂ ಆಣೆ ನಿನಗೂ ಆಣೆ(ಪುಟ 65, ಕೀ. ಸಂ 69)
9. ಏನಾಯಿತು ರಂಗಗೆ ನೋಡಿರಮ್ಮ (ಪುಟ 68, ಕೀ. ಸಂ 74)
10. ಕಂದ ಹಾಲಕುಡಿಯೋ ನಮ್ಮ ಗೋವಿಂದ ಹಾಲಕುಡಿಯೊ (ಪುಟ 72, ಕೀ. ಸಂ 79)
11. ಚೆಂಡನಾಡುತ ಬಂದಿ ಪುಂಡ ಕೃಷ್ಣನು (ಪುಟ 88, ಕೀ. ಸಂ 97)
12. ಜಗದುದ್ಧಾರಕ ತನ್ನ ಮಗನೆಂದು ಒಗೆದುನಿಗಮಗೋಚರನ ಆಡಿಸಿದಳು ಯಶೋದೆ (ಪುಟ 93, ಕೀ. ಸಂ 100)
13. ತಾಳು ತಾಳೆಲೊ ರಂಗಯ್ಯ (ಪುಟ 94, ಕೀ. ಸಂ 102)
14. ತುಂಟನಿವನು ಕಾಣಮ್ಮ ಗೋಪಾಲನು (ಪುಟ 95, ಕೀ. ಸಂ 103)
15. ನಿಮ್ಮಪ್ಪ ಸುಮ್ಮಗಿರೋ ಗೋಪಾಲ (ಪುಟ 98, ಕೀ. ಸಂ 106)
16. ನಿನ್ನ ಮಗನ ಲೂಟಿ ಘನವಮ್ಮ (ಪುಟ 101, ಕೀ. ಸಂ 110)
17. ನಿನ್ನ ಮಗನೇನೆ ಗೋಪಿ ಗೋಪಮ್ಮ (ಪುಟ 102, ಕೀ. ಸಂ 111)
18. ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ (ಪುಟ 109, ಕೀ. ಸಂ 119)
19. ಬಗೆ ಬಗೆ ಆಟಗಳೆಲ್ಲ ಕಲಿತಿಯೋ ಜಗದ ಮೋಹಕನೇ (ಪುಟ 110, ಕೀ. ಸಂ 120)
20. ಬಣ್ಣಿಸಿ ಗೋಪಿ ತಾ ಹರಸಿದಳು (ಪುಟ 113, ಕೀ. ಸಂ 121)
21. ಬಂದನೇನೆ ರಂಗ ಬಂದನೇನೆ (ಪುಟ 114, ಕೀ. ಸಂ 122)
22. ಬಾರೊ ಮುನಿಸೇತಕೆ ಭಾವಜನಯ್ಯ (ಪುಟ 115, ಕೀ. ಸಂ 124)
23. ಬೂಚಿ ಬಂದಿದೆ ರಂಗ ಬೂಚಿ ಬಂದಿದೆ (ಪುಟ 126, ಕೀ. ಸಂ 126)

24. ಮಗನೆಂದಾಡಿಸುವಳು । ಮೊಗ ನೋಡಿ ನಗುವಳು (ಪುಟ 119, ಕೀ. ಸಂ 129)

25. ಮಂದಗಮನೆ ಇವನಾರೆ ಪೇಳಮ್ಮ (ಪುಟ 120, ಕೀ. ಸಂ 130)

26. ಮನೆಯೊಳಗಾಡೊ ಗೋವಿಂದ (ಪುಟ 121, ಕೀ. ಸಂ 132)

27. ಮುದ್ದು ತಾರೊ ಕೃಷ್ಣ ಎದ್ದು ಬಾರೊ (ಪುಟ 124, ಕೀ. ಸಂ 136)

28. ಮುಯ್ಯಾಕೆ ಮುಯ್ಯ ತೀರಿತು (ಪುಟ 125, ಕೀ. ಸಂ 137)

29. ಲಾಲಿಸಿದಳು ಮಗನ – ಯಶೋಧೆ (ಪುಟ 129, ಕೀ. ಸಂ 143)

30. ಸದ್ದು ಮಾಡಲು ಬೇಡವೊ – ನಿನ್ನ ಕಾಲಿಗೆ ಬಿದ್ದು ನಾ ಬೇಡಿಕೊಂಡೆ (ಪುಟ 134, ಕೀ. ಸಂ 148)

31. ಸಾಕು ಮಾಡಿರವ್ವ ರಂಗನ । ಏಕೆ ದೂರುವಿರೆ? (ಪುಟ 135, ಕೀ. ಸಂ 149)

32. ಸಿಕ್ಕಿದನೆಲೆ ಜಾಣೆ ಶ್ರೀ ವೇಣುಗೋಪಾಲ (ಪುಟ 136, ಕೀ. ಸಂ 150)

33. ಸುಮ್ಮನಿರು ಬೇಡಿಕೊಂಡೆ ಕಾಡದಿರು ಕೃಷ್ಣ (ಪುಟ 137, ಕೀ. ಸಂ 151)

37. ಸೆರಗ ಬಿಡಯ್ಯ ಕೃಷ್ಣ – ಕರೆಯಲು ಪೋಪೆನು (ಪುಟ 138, ಕೀ. ಸಂ 152)

38. ಸೈಸಲಾರೆನೆ ಗೋಪಿ ನಿನ್ನ ಮಗನ ಲೂಟಿ (ಪುಟ 138, ಕೀ. ಸಂ 153)

39. ಹಣ್ಣು ತಾ ಬೆಣ್ಣೆ ತಾರೆ – ಗೋಪಮ್ಮ (ಪುಟ 139, ಕೀ. ಸಂ 154)

40. ಹೇಳಬಾರದೆ ಬುದ್ಧಿಯ – ಮಗನ ಊರಗೂಳಿಯ ಮಾಡಿದೇನೆ? (ಪುಟ 141, ಕೀ. ಸಂ 156)

41. ಹೊರಹೋಗಿ ಆಡದಿರೊ ಹರಿಯೆ (ಪುಟ 142, ಕೀ. ಸಂ 157)

ಮೇಲಿನ ಕೀರ್ತನೆಗಳೆಲ್ಲಾ ಕೃಷ್ಣ ಲೀಲೆಗೆ ಸಂಬಂಧಿಸಿದವೇ ಆಗಿವೆ. ಕೃಷ್ಣನ ಬಾಲಲೀಲೆಯೊಳಗೆ ತಮ್ಮನ್ನೂ ಒಂದು ಪಾತ್ರವಾಗಿ ಪರಿಭಾವಿಸಿಕೊಂಡು, ಆ ಲೀಲೆಗಳನ್ನು ಅನುಭವಿಸಿ ರಚಿಸಿದಂತಹ ಕೀರ್ತನೆಗಳು. ಕೃಷ್ಣನ ಸಾಂಗತ್ಯಕ್ಕೆ ಮನಸ್ಸು ಒಳಗಾಗದೆ ಇಂತಹ ರಮಣೀಯವಾದ ಕೃತಿ ರಚಿಸಲು ಸಾಧ್ಯವಿಲ್ಲ. ಇದೇ ರೀತಿ ದಾಸ ಪರಂಪರೆಯಲ್ಲಿ ಬಂದ ಆನೇಕ ದಾಸರು ನೂರಾರು ಕೀರ್ತನೆಗಳನ್ನು ರೂಪಕಗಳನ್ನು ಭಗವಂತನ ಲೀಲೆಗಳ ಕುರಿತಾಗಿ ತಾವು ಅನುಭವಿಸಿ ರಚಿಸಿದ್ದಾರೆ. ಉದಾಹರಣೆಗಾಗಿ ಆಯ್ದ ಕೆಲವನ್ನು ಮಾತ್ರ ಮೇಲೆ ಪಟ್ಟಿ ಮಾಡಲಾಗಿದೆ.

ಪ್ರಸಿದ್ಧ ಕೀರ್ತನಕಾರರಾದ ಸಂತ ಶ್ರೀ ಭದ್ರಗಿರಿ ಅಚ್ಯುತದಾಸರು ಶ್ರೀ ಮದ್ಭಾಗವತವನ್ನು ಕೀರ್ತನಕಲಾಭ್ಯಾಸಿಗಳಿಗೆ ಅನುಕೂಲವಾಗುವಂತೆ ರಚಿಸಿದ ಶ್ರೀ ಹರಿಕಥಾಮೃತಸಿಂಧು – ಶ್ರೀಕೃಷ್ಣಕಥಾವಾಹಿನಿ – ಭಾಗ – 2, ಇದರಲ್ಲಿ ದಾಸಸಾಹಿತ್ಯವನ್ನೇ ಬಳಸಿಕೊಂಡು ಶ್ರೀ ಕೃಷ್ಣನ ಬಾಲಲೀಲೆಗಳನ್ನು ಮನೋಹರವಾಗಿ ವರ್ಣನೆಮಾಡಿರುತ್ತಾರೆ (ಪುಟ 182–253).

ಮುಂದೆ ಇದೇ ಸೂತ್ರದಲ್ಲಿ **'ಸೋತ್ಸಾಹಿ ಭವತಿ'** ಉತ್ಸಾಹಿಯಾಗನು (ಪರಾಭಕ್ತಿಯನ್ನು ಹೊಂದಿದವನು) ಎಂದು ಹೇಳಿದ್ದಾರೆ.

ವ್ಯವಹಾರಿಕ ಜೀವನದಲ್ಲಿ ತನಗಿಷ್ಟವಾದುದನ್ನು ಪಡೆಯಲು ಮತ್ತು ಅನಿಷ್ಟವಾದುದನ್ನು ಹೋಗಲಾಡಿಸಲು ಮಾನವನು ಕರ್ಮ ಮಾಡುತ್ತಾನೆ. ಈ ಕರ್ಮದ ಹಿಂದೆ ಇರುವ ಪ್ರೇರಕ ಶಕ್ತಿಯೇ ಉತ್ಸಾಹ. ಉತ್ಸಾಹವಿದ್ದರೆ ಕರ್ಮವು ಸಾಧ್ಯ. ಇಷ್ಟ ಪ್ರಾಪ್ತಿ ಮತ್ತು ಅನಿಷ್ಟ ನಿವೃತ್ತಿ ಎನ್ನುವ ಹಂಬಲವೇ ಭಕ್ತನಿಗಿಲ್ಲದಿದ್ದ ಮೇಲೆ ಕರ್ಮದಲ್ಲಿ ಉತ್ಸಾಹಿಯಾಗುವುದರಲ್ಲಿ ಸಂಶಯವಿಲ್ಲ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೇಳುತ್ತಾನೆ. (ಭಗವದ್ಗೀತಾ 12.16)

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**

**ಸರ್ವಾರಂಭ ಪರಿತ್ಯಾಗೀ ಯೋ ಮದ್ಭಕ್ತಸ್ಸಮೇ ಪ್ರಿಯಃ ॥**

'ಏನನ್ನೂ ಬಯಸದ, ಪರಿಶುದ್ಧನಾದ, ಸಮರ್ಥನಾದ, (ಭಗವಂತನ ಹೊರತು ಇತರ ವಿಷಯಗಳಲ್ಲಿ) ಉದಾಸೀನನಾದ, ದುಃಖವನ್ನು
ದೂರಮಾಡಿಕೊಂಡಿರುವ, ಎಲ್ಲ ಕರ್ಮಗಳನ್ನು ಕೈ ಬಿಟ್ಟಿರುವ, ಯಾವ ನನ್ನ ಭಕ್ತನಿರುವನೋ ಅವನು ನನಗೆ ಪಿಯನು.' ಈ ಸೂತ್ರದಲ್ಲಿ ಹೇಳಿರುವ ಪರಮಭಕ್ತನ ಲಕ್ಷಣ ತಪ್ಪು ಕಲ್ಪನೆಯನ್ನು ಹುಟ್ಟಿಸುವ ಸಾಧ್ಯತೆ ಇದೆ. ಭಕ್ತನು ಯಾರ ಗೊಡವೆಗೂ ಹೋಗದೆ, ಕರ್ಮದಲ್ಲೂ ನಿರುತ್ಸಾಹಿಯಾಗಿದ್ದು ತನ್ನ ಪಾಡಿಗೆ ಕಲ್ಲು ಗುಂಡಿನಂತೆ ಇದ್ದು ಬಿಡುವನೆ? ತನ್ನ ಸುತ್ತ ಮುತ್ತಲಿನ ಸಮಾಜದಲ್ಲಿ ಜನರು ದುಃಖದಲ್ಲಿ ತೊಳಲಾಡುತ್ತಿರಬೇಕಾದರೆ ಅವನು ಈ ರೀತಿ ನಿರುತ್ಸಾಹಿಯಾಗಿರುವುದು ಸಮಂಜಸವೇ?

ಇದಕ್ಕೆ ಶ್ರೀ ಮದ್ಭಾಗಮದಲ್ಲಿ ಭಾಗವತೋತ್ತಮ ಎನಿಸಿದ ಪ್ರಹ್ಲಾದನು ಭಗವಂತನಲ್ಲಿ ಮಾಡುವ ಪ್ರಾರ್ಥನೆಯೇ (ಶ್ರೀ ಮದ್ಭಾಗವತ 7.9.43) ಸೂಕ್ತ ಪರಿಹಾರವನ್ನು ನೀಡುತ್ತದೆ.

**"..... ಶೋಚೇ ತತೋ ವಿಮುಖ ಚೇತಸ ಇಂದ್ರಿಯಾರ್ಥ ಮಾಯಾಸುಖಾಯ**

**ಭರಮುದ್ವಹತೋ ವಿಮೂಢಾನ್ ॥**

'ಹೇ ಪರಮಾತ್ಮನೇ, ಯಾರ ಮನಸ್ಸು ನಿನ್ನಿಂದ ವಿಮುಖವಾಗಿ ಇಂದ್ರಿಯ ವಿಷಯ ವಸ್ತು ಸಂಯೋಗದಿಂದ ಬರುವ ಮಾಯಾ ಸುಖಕ್ಕಾಗಿ ಈ ಸಂಸಾರದ ಭಾರವನ್ನು ಹೊರುತ್ತಿರುವರೋ ಅಂತಹ ಮೂರ್ಖರಿಗಾಗಿ ಶೋಕಿಸುತ್ತೇನೆ'. ಮುಂದೆ ಹೇಳುತ್ತಾನೆ :

'ಪ್ರಾಯೇಣ ದೇವ ಮುನಯಃ ಸ್ವವಿಮುಕ್ತಿಕಾಮಾಃ
ಮೌನಂ ಚರಂತಿ ವಿಜನೇ ನ ಪರಾರ್ಥ ನಿಷ್ಠಾಃ ।
ನೈತಾನ್ ವಿಹಾಯ ಕೃಪಣಾನ್ ವಿಮುಮುಕ್ಷ ಏಕೋ
ನಾನ್ಯಂ ತ್ವದಸ್ಯ ಶರಣಂ ಭ್ರಮತೋಽನುಪಶ್ಯೇ ॥

'ಹೇ ದೇವ, ಬಹುಮಟ್ಟಿಗೆ ಮುನಿಗಳು ತಮ್ಮ ಮುಕ್ತಿಯನ್ನು ಬಯಸಿ ನಿರ್ಜನ ಪ್ರದೇಶದಲ್ಲಿ ಮೌನಾದಿಗಳನ್ನು ಆಚರಿಸುತ್ತಾರೆ. ಅವರಿಗೆ ಇತರರ ಒಳಿತಿನಲ್ಲಿ ನಿಷ್ಠೆಯಿಲ್ಲ. ನಾನಾದರೋ ಈ ದೀನರನ್ನು ಬಿಟ್ಟು ನಾನೊಬ್ಬನೇ ಮುಕ್ತಿಯನ್ನು ಪಡೆಯಲು ಇಚ್ಚಿಸುವುದಿಲ್ಲ. ಸಂಸಾರದಲ್ಲಿ ತೊಳಲಾಡುತ್ತಿರುವ ಇವರಿಗೆ ನಿನ್ನ ಹೊರತು ಮತ್ತಾವ ಆಶ್ರಯವನ್ನು ಕಾಣೆ ।' (ಶ್ರೀ ಮದ್ಭಾಗವತ 7.9.44)

ಪರಮಭಕ್ತನು ತನ್ನ ಸ್ವಾರ್ಥಕ್ಕಾಗಿ ಕರ್ಮಗಳಲ್ಲಿ ಉತ್ಸಾಹದಿಂದ ತೊಡಗದಿದ್ದರೂ ತಾನು ಮಾಡಬೇಕಾದ ಕರ್ತವ್ಯ ಹಾಗೂ ಲೋಕಸಂಗ್ರಹಕ್ಕಾಗಿ ಕರ್ಮದಲ್ಲಿ ಪ್ರವೃತ್ತನಾಗುತ್ತಾನೆ. ಶ್ರೀ ಕೃಷ್ಣನು ಈ ರೀತಿ ಬಾಳಿ ಬೋಧಿಸಿದ ಆದರ್ಶಪುರುಷ'

'ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷುಲೋಕೇಷು ಕಿಂಚನ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ।

'ಎಲೈ ಅರ್ಜುನ, ಈ ಮೂರೂ ಲೋಕಗಳಲ್ಲಿ ನಾನು ಮಾಡಬೇಕಾದ ಯಾವ ಕರ್ತವ್ಯವೂ ಇಲ್ಲ. ನಾನೂ ಪಡೆಯದೇ ಇದ್ದ, ಪಡೆಯಬೇಕಾದ, ಯಾವ ವಸ್ತುವೂ ಇಲ್ಲ, ಆದರೂ ನಾನು ಕರ್ಮದಲ್ಲಿ ತೊಡಗಿಯೇ ಇದ್ದೇನೆ.' –ಭಗವದ್ಗೀತೆ3.22

ಈ ವಿಶಿಷ್ಟವಾದ ಬದುಕನ್ನು ಕಟ್ಟಿಕೊಳ್ಳುವ ಸೂತ್ರವನ್ನು ಕನ್ನಡದ ಮಹಾನ್ ದಾರ್ಶನಿಕರಾದ ಡಿ. ವಿ. ಗುಂಡಪ್ಪನವರು ಮಂಕುತಿಮ್ಮನ ಕಗ್ಗದಲ್ಲಿ ನಿರೂಪಿಸಿದ್ದಾರೆ[18].

ಎರಡು ಕೋಣೆಗಳ ನೀಂ ಮಾಡು ಮನದಾಲಯದಿ ।
ಹೊರಕೋಣೆಯಲಿ ಲೋಗರಾಟಗಳ ನಾಡು ॥
ವಿರಮಿಸೊಬ್ಬನೆ ಮೌನದೊಳಮನೆಯ ಶಾಂತಿಯಲಿ ।
ವರಯೋಗ ಸೂತ್ರವಿದು – ಮಂಕುತಿಮ್ಮ ॥

ಮನವೆಂಬ ಮನೆಯಲ್ಲಿ ಎರಡು ಕೋಣೆಗಳ ಮಾಡು. ಹೊರಕೋಣೆಯಲಿ ಲೌಕಿಕದ ಆಟಗಳನ್ನಾಡು (ವಿಧ್ಯುಕ್ತ ಕರ್ಮಗಳನ್ನು ಮಾಡು) ಒಳಕೋಣೆಯಲ್ಲಿ ಓರ್ವನೇ ಮೌನದಿಂದಿರು ಶಾಂತಿಯ ಪಡೆ ಇದೇ ಯೋಗ ಸೂತ್ರ[18].

ಮಹಾತ್ಮ ಗಾಂಧೀಜಿಯವರು ಬಹಳ ಮೆಚ್ಚಿದ ಒಂದು ಅಭಂಗದಲ್ಲಿ (ಮರಾಠಿ ಸಂತಳಾದ ಮುಕ್ತಾಭಾಯಿ ವಿರಚಿತ) ನಾರದರ ಈ ಸೂತ್ರದಲ್ಲಿ ಹೇಳಿರುವ ಪರಮಭಕ್ತರ ಲಕ್ಷಣವನ್ನು ಬಹಳ ಚೆನ್ನಾಗಿ ನಿರೂಪಿಸಲಾಗಿದೆ[19].

**ಯೋಗಿ ಪಾವನ ಮನಾಚಾ ಸಾಹೆ ಅಪರಾಧ ಜನಾಚಾ ॥**

**ವಿಶ್ವ ರಾಗೇ ಝಾಲೇ ವಹ್ನಿ ಸಂತಿಸುಖೇವಾವ್ಹೇ ಪಾನಿ ॥**

**ಶಬ್ದಶಸ್ತ್ರೇ ಝಾಲೇ ಕ್ಲೇಶ ಸಂತೀ ಮನಾವಾ ಉಪದೇಶ ।**

**ವಿಶ್ವಪಟ ಬ್ರಹ್ಮ ದೋರಾ ತಾಟೀ ಉಘಢಾ ಜ್ಞಾನೇಶ್ವರಾ ॥**

**ಅನುವಾದ ಇಂತಿದೆ :** ಯೋಗಿಯ ಮನಸ್ಸು ಪಾವನ. ಅವನು ಜನರ ಅಪರಾಧ ಸಹಿಸುವನು. ಕೋಪವೆಂಬ ಬೆಂಕಿಯಲ್ಲಿ ಜಗತ್ತು ಸುಡುವುದು. ಸಂತರು ನೀರೆರೆದು ತರುವರು ಶಾಂತಿ. ಶಬ್ದಶಸ್ತ್ರದಿಂದ ಕ್ಲೇಶ ಆಯಿತು ಸಂತರು ಉಪದೇಶ ಹೇಳುವರು. ವಿಶ್ವ ಒಂದು ಬಟ್ಟೆ, ಬ್ರಹ್ಮ ಅದರ ದಾರ, ವಿಶ್ವ ಗಾಳಿಪಟ, ಬ್ರಹ್ಮ ಅದರ ಸೂತ್ರ, ಬಾಗಿಲು ವಿಶಾಲವಾಗಿ ತೆರೆಯೋ ಜ್ಞಾನೇಶ್ವರ.

ಗ್ರಹಸ್ಥ ಧರ್ಮವನ್ನು ಶ್ರದ್ಧೆಯಿಂದ ಅನುಷ್ಠಾನಗೈದು, ಈ ಕಲಿಕಾಲದಲ್ಲಿಯೂ ಧರ್ಮನಿಷ್ಠೆ, ಕರ್ತವ್ಯ ನಿಷ್ಠೆಯನ್ನು ಬಿಡದೆ ಪರಮಾರ್ಥವನ್ನು ಸಾಧಿಸಲು ಸಾಧ್ಯ ಎಂದು ತೋರಿಸಿಕೊಟ್ಟು ಮಂಗಳೂರಿನಲ್ಲೇ ಜನಿಸಿದ ಮಹಾತ್ಮರಾದ ದಿವ್ಯಮಾತೆ ಶ್ರೀ ರಮಾದೇವಿಯವರು (1911–1978) ತಮ್ಮ Bhakti - means and the end ಎನ್ನುವಂತಹ ಗ್ರಂಥದಲ್ಲಿ ಮೇಲೆ ಹೇಳಿದ ಸೂತ್ರಕ್ಕೆ ಸಮನ್ವಯವಾಗುವ ಆಧ್ಯಾತ್ಮಿಕ ರಹಸ್ಯವನ್ನು ಅನಾವರಣಗೊಳಿಸುತ್ತಾರೆ[20] :

"The whole empirical processes and earthly affinities are cased on the personal 'I' . When this 'I' is lost in the oceanic love of God, one forgets one's own body, possessions, kith and kin, domestic happiness, worldly duties, the notions of day and night, and the existence of the objective world. Consiousness, shedding the subject - object relation, now shines as identical with the supreme being. It was in this state of nondual God consiousness that those crest jewels of Bhakthi, the Gopies of Vrindavan revelled."

'ಎಲ್ಲಾ ಅನುಭವಾತ್ಮಕವಾದ ಪ್ರಕ್ರಿಯೆಗಳು ಮತ್ತು ಭೌತಿಕ ಸಂಬಂಧಗಳು ವೈಯಕ್ತಿಕವಾದ 'ಅಹಂ' ಅನ್ನು ಆಧರಿಸಿರುವಂತಹುದು. ಈ 'ನಾನು' ಎನ್ನುವ ಅಹಂಕಾರವು ಭಗವತ್ಪ್ರೇಮವೆಂಬ ಸಾಗರದಲ್ಲಿ ಕೊಚ್ಚಿ ಹೋದಾಗ, ವ್ಯಕ್ತಿಯು ತನ್ನ ದೇಹ, ಅಧಿಕಾರ, ದೌಲತ್ತು, ಕೌಟುಂಬಿಕ ಸಂತೋಷ, ತನ್ನ ಕರ್ತವ್ಯಬಾಧ್ಯತೆ, ಹಗಲು ರಾತ್ರಿ, ಅಷ್ಟೇ ಏಕೆ ಈ ಪ್ರಪಂಚದ ಅಸ್ತಿತ್ವವನ್ನೇ ಮರೆಯುತ್ತಾನೆ. ಅವನ ಪ್ರಜ್ಞೆಯು ವಸ್ತು, ವಿಷಯಗಳೆಂಬ ಎಲ್ಲಾ ಸಂಬಂಧಗಳನ್ನು ಕಳೆದುಕೊಂಡು ಪರಬ್ರಹ್ಮದಲ್ಲಿ ಒಂದಾಗಿ ಪ್ರಕಾಶಿಸುತ್ತದೆ. ಭಕ್ತಿಯ ಅನರ್ಘ್ಯ ರತ್ನಗಳೆನಿಸಿಕೊಂಡ ವೃಂದಾವನದ ಗೋಪಿಯರು ಇಂತಹ ಅದ್ವೈತದ ಪರಮಪ್ರಜ್ಞೆಯಲ್ಲಿ ಸ್ಥಿತರಾಗಿದ್ದರು.'

"In the self - forgetting God-love, no upadhis, no duties, no merit or sin, no scriptural injuctions, no social norms, can have any hold on one's consiousness. Everything is left behind when the soul enters the inner chamber of God. Fully possessed of God, the entire responsibility of the God - intoxicated devotee now rests with the Lord."

(ಅದೇ, ಪುಟ 15)

'ತನ್ನನ್ನೇ ವಿಸ್ಮರಿಸುವಂತಹ ಈ ಭಗವತ್ಪ್ರೇಮದ ಪರಾಕಾಷ್ಠೆಯಲ್ಲಿ ಯಾವುದೇ ಉಪಾಧಿಗಳಿಲ್ಲ, ಯಾವುದೇ ಕರ್ತವ್ಯಗಳಿಲ್ಲ, ಯಾವುದೇ ಪುಣ್ಯ ಪಾಪಗಳಿಲ್ಲ, ಶಾಸ್ತ್ರದ ವಿಧಿನಿಷೇಧಗಳು, ಸಾಮಾಜಿಕ ಕಟ್ಟುಪಾಡುಗಳು, ಭಕ್ತನ ಪ್ರಜ್ಞೆಯನ್ನು ನಿರ್ಬಂಧಿಸಲಾರವು, ನಿಯಂತ್ರಿಸಲಾರವು. ಭಕ್ತನು ಭಗವಂತನ ಅಂತರ್ಯವನ್ನು ಪ್ರವೇಶಿಸುವಾಗ (ಒಂದಾಗುವಾಗ) ಇವೆಲ್ಲವೂ ಹಿಂದುಳಿಯುತ್ತವೆ. ದೈವೀ ಪ್ರಜ್ಞೆಯಲ್ಲಿ ಪ್ರತಿಷ್ಠಿತನಾದ ಭಕ್ತನ ಸಮಸ್ತ ದಾಯಿತ್ವ ಭಗವಂತನ ಹೆಗಲೇರುತ್ತದೆ. ಈ ಸಂದರ್ಭದಲ್ಲಿ (ಭಗವಂತನೇ ಭಕ್ತನ ಯೋಗಕ್ಷೇಮವನ್ನು, ಕರ್ತವ್ಯ ಬಾಧ್ಯತೆಗಳನ್ನು ವಹಿಸಿಕೊಳ್ಳುತ್ತಾನೆ). ಒಂದು ವೇಳೆ ಭಕ್ತನು ಭಗವತ್ಪ್ರೇಮದಲ್ಲಿ ತನ್ನ ಕ್ಷುದ್ರ ಅಹಂಕಾರವನ್ನು ಕಳೆದುಕೊಂಡು ಅವನ ಮನಸ್ಸು ಭಗವಂತನಲ್ಲಿ ಒಂದಾಗಿದ್ದಲ್ಲಿ ಆತ ಭಗವಂತನ ಕೈಯಲ್ಲಿ ಒಂದು ಯಂತ್ರವಾಗುತ್ತಾನೆ. ಆಂತರಿಕವಾಗಿ ಆತ ಕರ್ತವ್ಯ ಕರ್ಮಗಳ ಕುರಿತು ನಿರುತ್ಸಾಹಿಯಂತೆ ಕಂಡು ಬಂದರೂ, ಭಗವಂತ ಆತನನ್ನು ಧರ್ಮಭ್ರಷ್ಟನಾಗದಂತೆ ಅವನು ಲೋಕಸಂಗ್ರಹಕಾರ್ಯದಲ್ಲಿ ಪ್ರವೃತ್ತನಾಗುವಂತೆ ಮಾಡಿ ಲೋಕೋದ್ಧಾರದ ಕಾರ್ಯವನ್ನು ಅವನಿಂದ ಮಾಡಿಸುತ್ತಾನೆ.'

ಮುಂದಿನ ಸೂತ್ರದಲ್ಲಿ ನಾರದರು ಹೇಳುತ್ತಾರೆ :

**ಯಜ್ಞಾತ್ವಾ ಮತ್ತೋಭವತಿ, ಸ್ತಬ್ಧೋಭವತಿ, ಆತ್ಮಾರಾಮೋ ಭವತಿ ॥೬॥**

ಅದನ್ನು ಅರಿತುಕೊಂಡು ಮತ್ತನಾಗುತ್ತಾನೆ, ಸ್ತಬ್ಧನಾಗುತ್ತಾನೆ, ಆತ್ಮಾರಾಮನಾಗುತ್ತಾನೆ. ಪರಾಭಕ್ತಿಯ ಕುರಿತಾಗಿ 'ಜ್ಞಾತ್ವಾ' ಎಂಬ ಶಬ್ದವನ್ನು ಪ್ರಯೋಗಿಸಿರುವುದರಿಂದ ಪರಾಭಕ್ತಿ – ಪರಜ್ಞಾನಗಳು ಒಂದೇ ಅನುಭವವೆಂಬುವುದನ್ನು ದೃಢೀಕರಿಸಿದಂತಾಯಿತು. ಕೆಲವರು ಜ್ಞಾನದಿಂದ ಭಕ್ತಿಯೆಂದು ಇನ್ನು ಕೆಲವರು ಭಕ್ತಿಯಿಂದ ಜ್ಞಾನವೆಂದು ಅಭಿಪ್ರಾಯ ಪಡುತ್ತಾರೆ. ಸಾಧನಾರೂಪವಾದ ಜ್ಞಾನದಿಂದ ಪರಾಭಕ್ತಿಯ ಅನುಭವವಾಗುತ್ತದೆ ಎಂದರಿತರೆ ಎರಡು ಮತಗಳೂ ಸಮಾನ ಅಭಿಪ್ರಾಯವನ್ನು ವ್ಯಕ್ತಪಡಿಸಿದಂತಾಗುತ್ತದೆ. ಶಾಂಡಿಲ್ಯ ಭಕ್ತಿ ಸೂತ್ರದಲ್ಲಿ 'ಪರಾಭಕ್ತಿಯೇ ಮುಖ್ಯ, ಏಕೆಂದರೆ ಇತರ ಸಾಧನಗಳು (ಗೌಣಭಕ್ತಿ, ಜ್ಞಾನ, ಯೋಗ ಮೊದಲಾದವು) ಇದನ್ನು ಅಪೇಕ್ಷಿಸುತ್ತದೆ. ಅವು ಕೃತಕೃತ್ಯವಾಗಬೇಕಾದರೆ ಪರಾಭಕ್ತಿಯನ್ನು ಅಪೇಕ್ಷಿಸುತ್ತದೆ. **ಸಾಮುಖ್ಯಾ ಇತರಾಪೇಕ್ಷಿತತ್ವಾತ್** ॥೧೦॥' ಎಂದು ಹೇಳಲಾಗಿದೆ[21].

'ಭಕ್ತಿ ಚಂದ್ರಿಕೆಯಲ್ಲಿ ಹೇಳುತ್ತಾರೆ (ಪುಟ 27) : ಮುಖ್ಯ ಭಕ್ತಿಯೆಂದರೆ ಆತ್ಮಾಕಾರವಾದ ವೃತ್ತಿಯೇ ಆಗಿರುತ್ತದೆ. ಆತ್ಮನು ಜ್ಞಾನಾನಂದ ರೂಪವೆಂದು ಶ್ರುತಿಗಳು ಹೇಳುತ್ತಿರುವುದರಿಂದ ಅಂತಹ ಆತ್ಮನ ಅನುಭವಕ್ಕೆ ಪ್ರೇಮದಿಂದೊಡಗೂಡಿದ

ಆತ್ಮಾಕಾರವಾದ ವೃತ್ತಿಯೇ ಅವಶ್ಯವಾಗಿರುತ್ತದೆ. ಲೋಕದಲ್ಲಿ ಒಂದು ವಸ್ತುವಿನ ಜ್ಞಾನವಾಗುವಾಗ ಅದರಲ್ಲಿ ಪ್ರೇಮವೂ ಇರಬೇಕೆಂಬ ನಿಯಮವೇನೂ ಇರುವುದಿಲ್ಲ. ಉದಾರಣೆಗೆ ಹಾವಿನಾಕಾರದ ವೃತ್ತಿಯುಂಟಾದಾಗ ಅದರ ಜ್ಞಾನದ ಹಿಂದೆಯೇ ಹೆದರಿಕೆಯೆಂಬ ವೃತ್ತಿಯೂ ಹುಟ್ಟುವುದು. ಆದರೆ ಆತ್ಮನ ವಿಚಾರದಲ್ಲಿ ಹೀಗಿಲ್ಲ. ಆನಂದರೂಪನಾಗಿರುವ ಆತ್ಮನ ಜ್ಞಾನವುಂಟಾಗುವಾಗ ಪ್ರೇಮಾಕಾರವಾದ ವೃತ್ತಿಯೂ

ಅವಶ್ಯವಾಗಿ ಎದ್ದುಕೊಳ್ಳಲೇಬೇಕು. ಇಷ್ಟೇ ಅಲ್ಲ. ಆತ್ಮನ ಅನುಭವರೂಪವಾದ ಜ್ಞಾನವುಂಟಾಗುವುದಕ್ಕೂ ಪ್ರೇಮವು ಅತ್ಯವಶ್ಯಕವಾಗಿರುತ್ತಾರೆ. ಆದ್ದರಿಂದಲೇ ಶ್ರೀ ಕೃಷ್ಣನು ಅರ್ಜುನನಿಗೆ ಹೇಳುತ್ತಾನೆ :

**'ಬ್ರಹ್ಮಭೂತ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**

**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥**

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**

**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್ ॥'**

–(ಗೀತೆ.,18. 54–55)

"ಬ್ರಹ್ಮಸ್ವರೂಪನಾದವನು ಅಂತಃಕರಣದಲ್ಲಿ ಪ್ರಸನ್ನನಾಗಿ ಶೋಕವನ್ನೂ ಕಾಂಕ್ಷೆಯನ್ನು ಬಿಟ್ಟು ಬಿಡುತ್ತಾನೆ. ಸರ್ವಭೂತಗಳಲ್ಲಿಯು ಸಮನಾಗಿದ್ದುಕೊಂಡು ನನ್ನ ಪರಾಭಕ್ತಿಯನ್ನು ಪಡೆದುಕೊಳ್ಳುತ್ತಾನೆ. ಭಕ್ತಿಯಿಂದ ನಾನು ಎಷ್ಟು ಮಹಿಮೆಯುಳ್ಳವನು ಯಾವ ಸ್ವರೂಪದವನು? ಎಂಬುದನ್ನು ಅರಿತು ಆ ತತ್ತ್ವಜ್ಞಾನದಿಂದ ನನ್ನನ್ನೇ ಸೇರುತ್ತಾನೆ". ಹತ್ತನೇ ಅಧ್ಯಾಯದಲ್ಲಿ ಹೇಳುತ್ತಾರೆ.

**'ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**

**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥**– (ಗೀತೆ.10.10)

'ಹೀಗೆ ಸದಾ ನನ್ನಲ್ಲಿ ನೆಟ್ಟ ಮನಸ್ಸುಳ್ಳವರಾಗಿ ಪ್ರೀತಿಯಿಂದ ನನ್ನನ್ನು ಭಜಿಸುತ್ತಿರುವ ಅವರಿಗೆ ನಾನು ಬುದ್ಧಿಯೋಗವನ್ನು ಕೊಡುತ್ತೇನೆ. ಅದರ ಮೂಲಕ ಅವರು ನನ್ನನ್ನು ಹೊಂದುತ್ತಾರೆ.'

ಈ ಮೇಲಿನ ಪ್ರಮಾಣಗಳಿಂದ ಗೌಣೀಭಕ್ತಿಯನ್ನು ಸಾಧಿಸಿ ಪರಾಭಕ್ತಿಯನ್ನು ಹೊಂದಿದ ಭಕ್ತ ಹಾಗೂ ಆತ್ಮಜ್ಞಾನವನ್ನು ಹೊಂದಿದ ಜ್ಞಾನಿ ಇವರಿರ್ವರೂ ಒಂದೇ ಎಂಬುವುದು ನಿಶ್ಚಯವಾಗುವುದು. ಅಂತಹ ಪರಾಭಕ್ತಿಯನ್ನು ಹೊಂದಿದ ಭಕ್ತನು 'ಮತ್ತ'ನಾಗುತ್ತಾನೆ, 'ಸ್ತಬ್ಧ'ನಾಗುತ್ತಾನೆ, 'ಆತ್ಮರಾಮ'ನಾಗುತ್ತಾನೆ ಎಂದು ಈ ಸೂತ್ರದಲ್ಲಿ ಹೇಳಲಾಗಿದೆ.

ಭಕ್ತಿಯಿಂದ ಉನ್ಮತರಾದ ಭಕ್ತರ ವರ್ಣನೆ ಭಾಗವತದಲ್ಲಿ ಅಲ್ಲಲ್ಲಿ ಉಲ್ಲೇಖಿಸಲಾಗಿದೆ. ಅವುಗಳಲ್ಲಿ ಕೆಲವು ಇಂತಿವೆ.

**ದೇಹಂ ಚ ನಶ್ವರಮವಸ್ಥಿತಮುತ್ಥಿತಂ ವಾ ।**

**ಸಿದ್ಧೋ ನ ಪಶ್ಯತಿ ಯತೋಽಧ್ಯಗಮತ್ ಸ್ವರೂಪಮ್ ।**

**ದೈವಾದಪೇತಮುತ ದೈವವಶಾದುಪೇತಂ ವಾಸೋ**

**ಯಥಾ ಪರಿಕೃತಂ ಮದಿರಾಮದಾಂಧಃ ॥** –(ಭಾಗ. 11.13.36)

'ಸಿದ್ಧ ಪುರುಷನು ನಶ್ವರವಾದ ತನ್ನ ದೇಹವು ಎದ್ದಿರಲಿ, ಬಿದ್ದಿರಲಿ, ಅದನ್ನು ನೋಡುವುದಿಲ್ಲ, ಏಕೆಂದರೆ ಅವನು ತನ್ನ ನಿಜ ಸ್ವರೂಪವನ್ನು ಪಡೆದುಕೊಂಡು ಬಿಟ್ಟಿರುತ್ತಾನೆ. ಸುರಾಪಾನದಿಂದ ಉನ್ಮತ್ತನಾಗಿ ಕಣ್ಣು ಕಾಣದಿರುವವನು ತನ್ನ ಮೈ ಮೇಲಿನ ಬಟ್ಟೆಯು ಅಕಸ್ಮತ್ತಾಗಿ ಜಾರಿ ಬಿದ್ದಿವೆಯೇ ಅಥವಾ ಮೈಮೇಲೆಯೇ ಇದೆಯೇ ಎಂಬುದನ್ನು ಹೇಗೆ ಅರಿಯಲಾರನೋ ಹಾಗೆಯೇ ಇಲ್ಲಿಯೂ'

**ಏವಂವ್ರತಃ ಸ್ವಪ್ರಿಯನಾಮ ಕೀರ್ತ್ಯಾ ಜಾತಾನುರಾಗೋ ದ್ರುತಚಿತ್ತ ಉಚ್ಚೈಃ ।**

**ಹಸತ್ಯಥೋ ರೋದಿತಿ ರೌತಿ ಗಾಯತ್ಯುನ್ಮಾದವನ್ನೃತ್ಯತಿ ಲೋಕಬಾಹ್ಯಃ ॥** – (ಭಾಗ. 11.2.40)

'ಇಂತಹ (ಭಕ್ತಿ ವ್ರತವನ್ನು ಕೈಗೊಂಡಿರುವವನು ತನಗೆ ಪ್ರಿಯವಾದ ಭಗವನ್ನಾಮ ಸಂಕೀರ್ತನೆಯಿಂದ ಭಗವದನು ರಾಗವನ್ನು ಪಡೆದಾಗ ಅವನ ಮನಸ್ಸು ಕರಗಿ, ಗಟ್ಟಿಯಾಗಿ ನಗುತ್ತ, ಅಳುತ್ತ, ಕೂಗುತ್ತ, ಹಾಡುತ್ತ, ಹುಚ್ಚನಂತೆ, ಸಮಾಜದಿಂದ ಹೊರಗಾದವನಂತೆ ನರ್ತಿಸುತ್ತಾನೆ.'

ಮುಂದೆ ಮುಖ್ಯಭಕ್ತರ ಲಕ್ಷಣವನ್ನು ನಿರೂಪಿಸುವಾಗ 68ನೇ ಸೂತ್ರದಲ್ಲಿ ನಾರದರು ಮೇಲೆ ಹೇಳಿದ ಲಕ್ಷಣಗಳಿಗೆ ಸಂವಾದಿಯಾದ ಲಕ್ಷಣಗಳನ್ನು ಉಲ್ಲೇಖಿಸುತ್ತಾರೆ:

**ಕಂಠಾವರೋಧ– ರೋಮಾಂಚಾಶ್ರುಭಿಃ ಪರಸ್ಪರಂ ಲಪಮಾನಾಃ ಪಾವಯಂತಿ ಪೃಥಿವೀಂ ಚ ॥೬೮॥**

'ಗಂಟಲು ಕಟ್ಟುವುದು, ಮೈ ನವಿರೇಳುವುದು, ಆನಂದಬಾಷ್ಪ ಇವುಗಳಿಂದ ಕೂಡಿ ಪರಸ್ಪರ (ಭಗವದ್ವಿಷಯವನ್ನೇ ಕುರಿತು) ಮಾತನಾಡುವವರಾಗಿ (ತಮ್ಮ) ವಂಶಗಳನ್ನು ಹಾಗೂ ಪೃಥ್ವಿಯನ್ನು ಪಾವನಗೊಳಿಸುತ್ತಾರೆ.'

ಶ್ರೀಮಂತ ಚಿನಿವಾರ ಶ್ರೀನಿವಾಸನಾಯಕನಾಗದ್ದ ಪುರಂದರದಾಸರು ವ್ಯಾಸತೀರ್ಥರಿಂದ ಹರಿದಾಸ ದೀಕ್ಷೆಯನ್ನು ಪಡೆದು ಮಧುಕರ ವೃತ್ತಿಯನ್ನು ಅವಲಂಭಿಸಿ, ಕಾಲಿಗೆ ಗೆಜ್ಜೆ ಕಟ್ಟಿ ತಾಳತಂಬೂರಿ ಹಿಡಿದು ಹರಿಕೀರ್ತನೆಗಳನ್ನು ಮೈ ಮರೆತು ಹಾಡುತ್ತಾ ಬೀದಿಯಲ್ಲಿ ಹೋಗುವುದನ್ನು ಕಂಡ ಜನರು, ಇದೇನು 'ಇವರಿಗೆ ಹುಚ್ಚು ಹಿಡಿಯಿತೇ' ಎಂದು ಮೂದಲಿಸಿದಾಗ ಪುರಂದರದಾಸರು ಹಾಡಿದ್ದರೆನ್ನಲಾದ[22] ಕೀರ್ತನೆಯಲ್ಲಿ ಶ್ರೀ ಮದ್ಭಾಗವತದಲ್ಲಿ ಮೇಲೆ ನಿರೂಪಿಸಿರುವ ಲಕ್ಷಣಗಳು ಮೈ ತಳೆದಿದೆ[23]:

**ಹುಚ್ಚು ಹಿಡಿಯಿತೋ ಎನಗೆ ಹುಚ್ಚು ಹಿಡಿಯಿತು ॥ಪ॥**

**ಅಚ್ಯುತನಧ್ಯಾನವೆಂಬ ಅಚ್ಚು ಮೆಚ್ಚು ತಲೆಗೆ ಏರಿ ॥ಅ.ಪ॥**

**ವಾಸುದೇವನೆಂಬ ನಾಮವದನದಲಿ ಒದರುವೆ ಮಾಯಾ**

**ಪಾಶವೆಂಬ ಬಲೆಯ ಹರಿದು ಹರಿದು ಹಾಕುವೆ ॥**

**ಕೇಶವನ ಹೂವ ಮುಡಿದು ಕುಣಿದು ಕುಣಿದು ಆಡುವೆ ಕೆಟ್ಟ**

**ದೋಷವೆಂಬ ಗೋಡೆಯನ್ನು ಕೆದರಿ ಕೆದರಿ ಹಾಕುವಂಥ ॥ ೧ ॥**

ಕೃಷ್ಣನಂಘ್ರಿ ಕಮಲಗಳಲ್ಲಿ ನಲಿದು ನಲಿದು ಬೀಳುವೆ ಭವ

ಕಷ್ಟವೆಂಬ ಕುಂಭಗಳನು ಒಡೆದು ಒಡೆದು ಹಾಕುವೆ ॥

ನಿಷ್ಠರನ್ನು ಕಂಡು ಅವರ ಹಿಂದೆ ಹಿಂದೆ ತಿರುಗುವೆ ಕಡು

ದುಷ್ಟ ಮನುಜರನ್ನು ಕಂಡು ಕಲ್ಲು ಕಲ್ಲಲಿಕ್ಕುವಂಥ ॥ ೨ ॥

ಮಂದಮತಿಗಳನು ಕಂಡರೆ ಮೂಕನಾಗುವೆನು ಹರಿಯ

ನಿಂದೆ ಮಾಡುವವರ ಮೇಲೆ ಮಣ್ಣು ಮಣ್ಣು ಚೆಲ್ಲುವೆ ॥

ಬಂಧುಬಳಗದವರೊಳುದಾಸೀನನಾಗಿ ಬಾಳುವೆ ಎನ್ನ

ತಂದೆ ಪುರಂದರ ವಿಠಲನ ನೆನೆದು ಕುಣಿದು ಆಡುವೆ ॥ ೩॥ [24]

ಈ ಕೀರ್ತನೆಯನ್ನು ಬಹಳವಾಗಿ ಮೆಚ್ಚಿಕೊಂಡ ಡಾ. ರಾನಡೆಯವರು ಈ ಹಾಡಿನ ವಿಸ್ತೃತವಾದ ವಿವರಣೆಯನ್ನು(Pathway to God in Kannada Literature, page 286) ಸಂತ ತುಕಾರಾಮ, ಸಂತ ಕಬೀರ ಹಾಗೂ ಸಂತ ಮೀರಾಳ ಕೀರ್ತನೆಗಳ ಮೂಲಕ ಮಾಡಿದ್ದಾರೆ. ಹೇಗೆ ಅನುಭಾವಿಗಳಲ್ಲಿ ಕಂಡು ಬರುವಂತಹ ಈ ದೈವೀ ಉನ್ಮಾದವು ಏಕ ರೂಪದ್ದಾಗಿರುತ್ತದೆ ಎನ್ನುವುದನ್ನು ವಿವರಿಸುತ್ತಾರೆ (ದಾಸ – ಕನಕ ಪ್ರಭೆ, ಸಂ. ಹೆರಂಜೆ ಕೃಷ್ಣ ಭಟ್ಟ, ಕನಕದಾಸ ಅಧ್ಯಯನ ಸಂಶೋಧನ ಪೀಠ, ಎಂ.ಜಿ.ಎಂ. ಕಾಲೇಜು, ಉಡುಪಿ – 576102, ಪುಟ 48)

'ಮಧುಕರ ವೃತ್ತಿ ಎನ್ನದು' ಎನ್ನುವ ಮತ್ತೊಂದು ಪ್ರಸಿದ್ಧವಾದ ಕೀರ್ತನೆಯಲ್ಲಿ ಹೇಳುತ್ತಾರೆ [25]:

ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ। ಆಲಾಪಿಸುತ್ತ ಬಲು ಓಲಗ ಮಾಡುವಂಥ ॥ ೧ ॥

ರಂಗನಾಥನ ಗುಣ ಹಿಂಗದೆ ಪಾಡುತ । ಶೃಂಗಾರ ನೋಡುತ್ತ ಕಂಗಳಾನಂದವೆಂಬ ॥ ೨ ॥

'ವ್ಯಾಪಾರ ನಮಗಾಯಿತು' ಎನ್ನುವ ಇನ್ನೊಂದುಕೀರ್ತನೆಯಲ್ಲಿ ಹೇಳುತ್ತಾರೆ[26]:

'ನುಡಿ ನುಡಿಗಾನಂದ ಬಾಷ್ಪ ರೋಮಾಂಚನ ಮುಡುಪಿನೊಳಗೆ ಇಟ್ಟ ಕೈ ಜೀತವು ॥'

ಶಿವರಾಮ ಶಾಸ್ತ್ರಿ ಎನ್ನುವ ತತ್ವಪದಕಾರರು ರಚಿಸಿದ ಒಂದು ಕೀರ್ತನೆಯಲ್ಲಿ ಆತ್ಮಜ್ಞಾನಿಯಾದ ಪರಮಭಕ್ತನ ಲಕ್ಷಣವನ್ನು ಸುಂದರವಾಗಿ ನಿರೂಪಿಸಿದ್ದಾರೆ[24].

ಎಲ್ಲಾ ರೂಪವು ತಾನಂತೆ ಎಲ್ಲೆಲ್ಲೂ ತುಂಬಿಹನಂತೆ

ಅಲ್ಲಲ್ಲರಸುತ ಗುಡಿಗಳ ತಿರುಗುವ ಕಳ್ಳರ ಕಣ್ಣಿಗೆ ಕಲ್ಲಂತೆ ॥ ಪ ॥

ದೃಶ್ಯ ವಿದಾದವ ತಾನಂತೆ ದೃಶ್ಯವನರಿವನು ತಾನಂತೆ ।

ದೃಶ್ಯಾದೃಕ್ಕಿನೊಳೆರಡರ ನಡುವೆ ಶಾಶ್ವತನಾದವ ತಾನಂತೆ ॥ ೧ ॥

ಕಳವಳಗಳು ತನಗಿಲ್ಲಂತೆ ಮೊಳೆಯುವ ದಿನ್ನೊಂದಿಲ್ಲಂತೆ ।

ಒಳಹೊರಗುದಿಸುವ ಕಲ್ಪಿತರೂಪವ ಬೆಳಗಿಸಿ ತಾ ಬೆಳಗುವನಂತೆ ॥ ೨ ॥

ಕಳೆದುಳಿಯುವುದೇ ತಾನಂತೆ ಉಳಿಯುವ ಕಳಿಯುವರಿಲ್ಲಂತೆ ।

ಕುಲಶೀಲಗಳೆಂಬ ಕೊಳೆಯಿಲ್ಲದ ನಿರ್ಮಲದೊಳಗಿರುವನು ತಾನಂತೆ ॥ ೪ ॥

'ದೇವರ್ಷಿ ನಾರದರ ಭಕ್ತಿಸೂತ್ರಗಳು' ಈ ಗ್ರಂಥದಲ್ಲಿ ಜಾಬಾಲೋಪನಿಷತ್ತಿನಿಂದ ಉದ್ಧರಿಸಿದ ಒಂದು ಉಲ್ಲೇಖ ಹೀಗಿದೆ:

**'ಅವ್ಯಕ್ತಲಿಂಗಾ ಅವ್ಯಕ್ತಾಚಾರಾ ಅನುನ್ಮತ್ತಾ ಉನ್ಮತ್ತವದ್ ಆಚರಂತಃ'** –

'(ಮುಕ್ತ ಪುರುಷರು) ಬಾಹ್ಯ ಚಿಹ್ನೆಗಳಿಲ್ಲದೆ ಬಾಹ್ಯಾಚಾರಗಳನ್ನು ತ್ಯಜಿಸಿ, ಉನ್ಮತ್ತರಲ್ಲದಿದ್ದರೂ ಉನ್ಮತ್ತರಂತೆ ಆಚರಿಸುತ್ತಾ (ವ್ಯವಹರಿಸುತ್ತಿರುತ್ತಾರೆ)'.

ಪರಮಜ್ಞಾನಿಗಳೂ ಪರಮಭಕ್ತರೂ ಆದ ಜೀವನ್ಮುಕ್ತ ಪುರುಷರು ಕೆಲವೊಮ್ಮೆ ಹುಚ್ಚರಂತೆ ವಿಚಿತ್ರವಾಗಿ ನಡೆದುಕೊಂಡರೂ, ಹಾಗೆ ನಡೆದುಕೊಳ್ಳುವವರೆಲ್ಲಾ ಜೀವನ್ಮುಕ್ತರೆಂದು ಭಾವಿಸಬಾರದು.

ಸ್ತಬ್ಧನಾಗುವುದು ಎಂದರೆ ಯಾವ ಚಟುವಟಿಕೆಯೂ ಇಲ್ಲದೆ ಸುಮ್ಮನಿರುವುದು. ಶ್ರೀಮದ್ಭಾಗವತವು (7–4–_41) ಪ್ರಹ್ಲಾದನ ಸ್ಥಿತಿಯನ್ನು ಹೀಗೆ ವಿವರಿಸುತ್ತದೆ:

**ಕ್ವಚಿದು ತ್ಪಲಕ ಸ್ತೂಷ್ಣೀಮಾಸ್ತೇ ಸಂಸ್ಪರ್ಶನಿರ್ವೃತಿಃ ।**
**ಅಸ್ಪಂದಪ್ರಣಯಾನಂದಸಲಿಲಾಮೀಲಿತೇಕ್ಷಣಃ ॥**

'ಕೆಲವೊಮ್ಮೆ ರೋಮಾಂಚನಗೊಂಡು ಸುಮ್ಮನೆ ಕುಳಿತು ಬಿಡುತ್ತಾನೆ. ಬಾಹ್ಯವಿಷಯಗಳ ಸ್ಪರ್ಶದ ಅನುಭವವೇ ಇರದು ಭಕ್ತಿಯ ಆನಂದದಿಂದ ಕಣ್ಣೀರು ಸುರಿಸುತ್ತ ಕಣ್ಣುಮುಚ್ಚಿಕೊಂಡು ಸ್ವಲ್ಪವೂ ಅಲ್ಲಾಡದೆ ಕುಳಿತುಕೊಳ್ಳುತ್ತಾನೆ.'

ಮತ್ತೊಂದು ಕಡೆ ಉಲ್ಲೇಖವಿದೆ:

**'ಭವಂತಿ ತೂಷ್ಣೀಂ ಪರಮೇತ್ಯ ನಿರ್ವೃತಾಃ'** ಪರವಸ್ತುವನ್ನು ಹೊಂದಿ (ಭಕ್ತರು) ಅತ್ಯಾನಂದವನ್ನು ಪಡೆದು ಸುಮ್ಮನಾಗಿ ಬಿಡುತ್ತಾರೆ' (ಭಾಗವತ 11–3–32)

ಸದ್ಗುರುವಿನಿಂದ ಉಪದೇಶ ಪಡೆದು ಸಾಧನೆ ಮಾಡಿ ಆತ್ಮಜ್ಞಾನವನ್ನು ಪಡೆದ ಪರಾಭಕ್ತನನ್ನು ಒಂದು ಮದ್ದಾನೆ (ಮತ್ತವಾದ ಆನೆ)ಗೆ ಹೋಲಿಸುತ್ತಾರೆ ಸಂತ ಶಿಶುನಾಳ ಷರೀಫರು[27]:

**ಸದ್ಗುರು ಸಾಕಿದ ಮದ್ದಾನೆ ಬರುತಿದೆ. ಎದ್ದು ಹೋಗಿರಿ ಇದ್ದ ನಿಂದಕರು ॥ ಪ ॥**
**ಬಿದ್ದು ಈ ಭವದೊಳು ಒದ್ದಾಡುವ ಜನರನ್ನು ಉದ್ಧಾರ ಮಾಡುತ ಬರುತಲಿದೆ ॥ ಅ. ಪ. ॥**
**ಆಕಾಶ ನೋಡುತ ವಾಯುವ ನುಂಗುತ ಝೇಂಕರಿಸುತಲದು ಬರುತಲಿದೆ**
**ಓಂಕಾರ ಹಿಡಿದು ಜವನ ಬಾಧೆ ಗೆದ್ದು ಆನಂದಭರಿತವಾಗಿ ಬರುತಲಿದೆ ॥ ೧ ॥**
**ಪ್ರಣವ ಸ್ವರೂಪವ ಅನುದಿನ ನೋಡುತ ಘನಸುಖದಲಿ ಅದು ಬರುತಲಿದೆ ।**
**ಪ್ರಣವ ಶಿಶು ನಾಳೇಶನೊಳು ಮನವ ಮಗ್ನ ಮಾಡಿ ಚಿನುಮಯಾತ್ಮಿಕವಾಗಿ ಬರುತಲಿದೆ ॥ ೨ ॥**

ಹೀಗೆ ಶರೀರದ ಪ್ರಜ್ಞೆಯೇ ಇಲ್ಲದೆ ಭಗವಂತನಲ್ಲೇ ಮನಸ್ಸನ್ನಿರಿಸಿ ಓಡದಂತಿರುವ ಇಂತಹ ಭಕ್ತನ ಲೌಕಿಕ ವ್ಯವಹಾರವು ಹೇಗೆ ನಡೆಯುವುದು ಎನ್ನುವುದಕ್ಕೆ ಶ್ರುತಿಯು ಒಂದು ದೃಷ್ಟಾಂತನ್ನು ಕೊಡುವುದು ಭಕ್ತಿಚಂದ್ರಿಕೆ.[28]

**ನೋಪಜನಂ ಸ್ಮರನ್ನಿದಂ ಶರೀರಂ ಸ ಯಥಾ ಪ್ರಯೋಗ್ಯ ಆಚರಣೇ**

**ಯುಕ್ತ ವಾವಮೇಯಮಸ್ಮಿನ್ ಶರೀರೇ ಪ್ರಾಣೋ ಯುಕ್ತಃ॥**

– ಛಾಂದೋಗ್ಯ ಉಪನಿಷತ್ 8–12–3

'ಈತನು ಮನುಷ್ಯ ಶರೀರವನ್ನು ಸ್ವಲ್ಪವೂ ಸ್ಮರಿಸಿಕೊಳ್ಳದೇ ಇದ್ದರೂ ಚೆನ್ನಾಗಿ ತಿದ್ದಿ ಪಳಗಿಸಿದ ಎತ್ತು, ಕುದುರೆ – ಮುಂತಾದ ಪ್ರಾಣಿಗಳು ದಾರಿಯನ್ನು ನಡೆದು ಮೊದಲು ಅಭ್ಯಾಸವಾಗಿರುವುದರಿಂದ ಗಾಡಿಯವನು ನೋಡಿಕೊಳ್ಳದೆ ಸುಮ್ಮನಿರುವಾಗಲೂ ತಾವೇ ಮುಂದುವರಿದು ಮುಟ್ಟಬೇಕಾದ ಸ್ಥಳಕ್ಕೆ ಗಾಡಿಯನ್ನು ಹೇಗೆ ಒಯ್ಯುವವೋ, ಅದರಂತೆ ಶರೀರದ ಕೆಲಸಗಳೂ ಪ್ರಾರಬ್ಧಕರ್ಮದ ಬಲದಿಂದ ಶರೀರದಲ್ಲಿ ಕೆಲಸ ಮಾಡುತ್ತಿರುವ ಪ್ರಾಣಶಕ್ತಿಯ ವಶದಿಂದ ತಾವೇ ನಡೆಯುತ್ತಿರುವವು. ಶ್ರೀ ಶ್ರೀಚೈತನ್ಯ ಚರಿತಾವಳಿಯಲ್ಲಿ ದಿವ್ಯ ಪೇಮೋನ್ಮಾದಕ್ಕೆ ಒಳಗಾದ ಶ್ರೀ ಚೈತನ್ಯ ಮಹಾಪ್ರಭುಗಳ ಸ್ಥಿತಿಯನ್ನು ಈ ರೀತಿ ವರ್ಣನೆ ಮಾಡಲಾಗಿದೆ[29]:

**ಸಿಂಚನ್ ಸಿಂಚನ್ ನಯನ ಪಯಸಾ ಪಾಂಡುಗಂಡ ಸ್ಥಲಾನ್ತಂ**

**ಮುಂಚನ್ ಮುಂಚನ್ ಪ್ರತಿಮುಹುರಹೋ ದೀರ್ಘ ನಿಃಶ್ವಾಸಜಾತಂ ।**

**ಉಚ್ಚೈಃ ಕ್ರಂದನ್ ಕರುಣ ಕರುಣೋದ್ಗೀರ್ಣಹಾಹೇತಿರಾವೋ**

**ಗೌರಃ ಕೋಪಿ ವ್ರಜವಿರಹಿಣೀ ಭಾವಮಗ್ನಶ್ಚಕಾಸ್ತಿ ॥**

**(ಶ್ರೀ ಪ್ರಬೋಧಾನಂದ)**

ಕಣ್ಣುಗಳಿಂದ ಹರಿಯುವ ಅಶ್ರುಧಾಋಏಗಳಿಂದ ಕೆನ್ನೆಗಳೆರಡೂ ತೊಯ್ದಿವೆ. ಪ್ರತಿಕ್ಷಣವೂ ಸುದೀರ್ಘವಾದ ನಿಃಶ್ವಾಸವನ್ನು ಬಿಡುತ್ತಾ ಇದ್ದಾರೆ. ಹಾ! ಹಾ! ಎಂದು ಕರುಣೆ ವಿರಹದಿಂದ ವ್ರಜವಿರಹಿಣಿಯಂತೆ ಜೋರಾಗಿ ಆಕ್ರಂದನವನ್ನು ಮಾಡುತ್ತಿದ್ದಾಳೆ.

**'ಸ್ತಬ್ಧೋ ಭವತಿ'** ಶ್ರೀ ರಾಮಕೃಷ್ಣ ಪರಮಹಂಸರ ವಚನಗಳಲ್ಲಿ ಮೇಲೆ ಹೇಳಿದ ಸೂತ್ರಕ್ಕೆ ಸಮನ್ವಯಗೊಳಿಸಬಹುದಾದ ಉತ್ತರವನ್ನು ಕಂಡುಕೊಳ್ಳಲು ಸಾಧ್ಯ. ಜ್ಞಾನಚರ್ಚೆಯಲ್ಲಿ ಆಸಕ್ತಿಯುಳ್ಳ ಓರ್ವ ಪಂಡಿತನಿಗೆ ಶ್ರೀರಾಮಕೃಷ್ಣರು ನೀಡಿದ ಉಪದೇಶ ಮನನೀಯವಾದುದು[30]:

"ಶಾಸ್ತ್ರಗಳ ಸಂಬಂಧವಾಗಿ ವಿಚಾರ ಎಲ್ಲಿಯವರೆಗೆ? ಭಗವಂತನ ಸಾಕ್ಷಾತ್ಕಾರ ಆಗದವರೆಗೆ. ದುಂಬಿ ಎಲ್ಲಿಯವರೆಗೆ ಝೇಂಕರಿಸುತ್ತದೆ? ಹೂವಿನ ಮೇಲೆ ಕೂಡದವರೆಗೆ. ಹೂವಿನ ಮೇಲೆ ಕುಳಿತು ಮಧುಪಾನ ಮಾಡಲು ಆರಂಭಿಸಿದೊಡನೆಯೇ ಶಬ್ದ ಎಲ್ಲನಿಂತುಹೋಗಿ ಬಿಡುತ್ತದೆ. ಆದರೆ ಒಂದು ವಿಷಯವನ್ನು ನೀನು ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ಭಗವಂತನ ದರ್ಶನ ದೊರೆತ ನಂತರವೂ ಮಾತುಕತೆ ನಡೆಯಯಹುದು. ಅದು ಕೇವಲ ಭಗವಂತನ ಮತ್ತು ಆತನಲ್ಲಿ ದೊರೆಯುವ ಆನಂದದ ವಿಷಯವಾಗಿ ಮಾತ್ರವೇ. ಅದು ಕುಡುಕ 'ಜೈ ಕಾಳಿ!' ಅಂತ ಹೇಳುವುದಿಲ್ಲವೆ, ಹಾಗೆ. ಆತನಿಗೆ ಬೇರೇನೂ ಸಾಧ್ಯವಿಲ್ಲ. ಮತ್ತು ಹಿಡಿದಿರುವುದರಿಂದ, ಮತ್ತೆ ಇದು ದುಂಬಿ ಹೂವಿನ ಮೇಲೆ ಕುಳಿತು ಮಧುಪಾನ ಮಾಡಿದ ನಂತರ ಮೆಲ್ಲಗೆ ಅಸ್ಪಷ್ಟ ಧ್ವನಿ ಮಾಡುವ ಹಾಗೆ.

ಆದರೆ ವಿಜ್ಞಾನಿಗಳ ಸ್ವಭಾವ ಬೇರೆ. ಅವರಿಗೆ ಈ ಜಗತ್ತಿನ ಎಲ್ಲದರ ಮೇಲೂ ಔದಾಸೀನ್ಯ. ಒಮ್ಮೊಮ್ಮೆ ಅವರು ಉಟ್ಟಿದ್ದ ಬಟ್ಟೆ ಕಳಚಿ ಎಲ್ಲೋ ಬಿದ್ದುಹೋಗಿ ಬಿಡಬಹುದು. ಅಥವಾ ಅವನ್ನು ಕಂಕುಳಲ್ಲಿ ತುರುಕಿಕೊಂಡು ಮಕ್ಕಳ ಹಾಗೆ ಸುತ್ತಾಡಬಹುದು...

ಈ ಅವಸ್ಥೆಯಲ್ಲಿ ಕಾಮ – ಕ್ರೋಧಾದಿಗಳೆಲ್ಲ ಭಸ್ಮವಾಗಿ ಹೋಗುತ್ತವೆ. ಅದರಿಂದ ಶರೀರವೇನೂ ಬದಲಾಯಿಸುವುದಿಲ್ಲ. ಉಳಿದವರ ಶರೀರದ ಹಾಗೆಯೇ ಇರುತ್ತದೆ. ಆದರೆ ಒಳಗಡೆ ಎಲ್ಲ ಖಾಲಿಯಾಗಿರುತ್ತದೆ."

ಇಲ್ಲಿ ವಿಜ್ಞಾನಿ ಅಂದರೆ ಆತ್ಮಜ್ಞಾನಿ ಅಥವಾ ಪರಾಭಕ್ತಿಯನ್ನು ಹೊಂದಿದ ಭಕ್ತ ಎಂದು ಸಮನ್ವಯ ಮಾಡಿಕೊಳ್ಳಬಹುದು.

ಇದೇ ಸೂತ್ರದಲ್ಲಿ ನಾರದರು 'ಪರಾಭಕ್ತನು ಆತ್ಮಾರಾಮಿಯಾಗಿರುತ್ತಾನೆ' ಅಂದಿದ್ದಾರೆ. 'ಆತ್ಮಾರಾಮ' ಎಂದರೆ ಆತ್ಮವಸ್ತುವಿನಲ್ಲಿ ಆರಾಮವನ್ನು ಆನಂದವನ್ನು ಪಡೆದವನು. ಈ ಅನುಭವವನ್ನು ಪಡೆದವನ ವರ್ಣನೆ ಛಾಂದೋಗ್ಯ ಉಪನಿಷತ್ತಿನಲ್ಲಿ (7.25–2) ಹೀಗೆ ಹೇಳಲಾಗಿದೆ:

**'ಸ ವಾ ಏಷ ಏವಂ ಪಶ್ಯನ್ ಏವಂ ಮನ್ವಾನಃ ಏವಂ ವಿಜಾನನ್ ಆತ್ಮರತಿಃ ಆತ್ಮಕ್ರೀಡಃ ಆತ್ಮಮಿಥುನಃ ಆತ್ಮಾನಂದಃ ಸ ಸ್ವರಾಟ್ ಭವತಿ'.** 'ಆ ಇವನು ಹೀಗೆ ನೋಡುತ್ತಾ ಹೀಗೆ ಚಿಂತಿಸುತ್ತಾ ಹೀಗೆ ಅರಿಯುತ್ತಾ ಆತ್ಮನಲ್ಲಿಯೇ ರತಿಯನ್ನು ಹೊಂದಿ ಆತ್ಮನಲ್ಲಿಯೇ ಕ್ರೀಡಿಸುವವನೂ ಆತ್ಮನಲ್ಲಿಯೇ ಬೆರೆತು ಆತ್ಮನಲ್ಲಿಯೇ ಆನಂದವನ್ನು ಪಡೆದು ತನಗೆ ತಾನೇ ಅಧಿಪತಿಯಾಗುತ್ತಾನೆ'. ಭಗವಂತನೇ ನಮ್ಮ ಆತ್ಮನಾಗಿರುವುದರಿಂದ ಭಕ್ತಿಯ ಮೂಲಕ ಅವನನ್ನು ಪಡೆದವರೂ ಆತ್ಮಾರಾಮರೇ ಆಗುತ್ತಾರೆ.

ಶ್ರೀ ನಿಜಗುಣ ಶಿವಯೋಗಿಗಳು 'ಕೈವಲ್ಯ ಪದ್ಧತಿ' ಗ್ರಂಥದ ಜ್ಞಾನಪ್ರತಿಪಾದನ ಸ್ಥಲದಲ್ಲಿ ಜ್ಞಾನಿಯ (ಪರಾಭಕ್ತನ ಈ ಸ್ಥಿತಿಯನ್ನು ಹೀಗೆ ವರ್ಣಿಸುತ್ತಾರೆ)[31]:

**ಏನೆಂದು ಪೇಳುವೆನು ಪರಮಾನಂದವೆನಗಾದ ಹದನು ನಾನಿನ್ನು ॥ ಪ ॥**

**ಆನೆಂಬುದವರರ್ಥವೇನೆಂದು ನಿಗಮಾನುಮಾನವಿಡಿದು ವಿಚಾರಿಸೆ ಜ್ಞಾನನಿಧಿ ಶಂಭುಲಿಂಗದ ನಿಜರೂಪವಾನಾಗಿ ಸುಖದೊಳಿಹುದ ॥ ೩ ॥**

**ಇದೇ ಸ್ಥಲದ 'ತಾನೆ ತನ್ನೊಳು ತನ್ನನಿಜವ ನೋಡಲು ಪರ –**
**ಮಾನಂದ ಮಯ ಚಿದಖಂಡ ರೂಪಹನು ॥ ಪ ॥**

**ತನುವಿನ ಬಾಹ್ಯವೆಲ್ಲವರಿವುದರಿಂದೆ ಮನಮಾತುಗಳನು ಮೀರಿಹುದರಿಂದೆ ಇನಿತನಿತೆಂದು**
**ರೂಹಿಸಬಾರದಿಹುದರಿಂದನುಪಮನಹುದರಿಂದ ವಿರಳನಹನು ॥ ೧ ॥**

**ಹವಣಿಸುತಿಹ ದೇಶಕಾಲವಸ್ತುಗಳೆಂಬ ನಿವಹಕಲ್ಪನೆ ಮಿಥ್ಯೆಯಹುದರಿಂದೆ**
**ಭವದೂರನೆನಿಸುವ ಗುರುಶಂಭುಲಿಂಗದೊಳವಿಭೇದನಹುದರಿಮದವೆ ಪೂರ್ಣನಹನು ॥ ೩ ॥**

ಯಾರಿಗೆ ಈ ಅದ್ವೈತಾನುಭೂತಿಯೀಗುತ್ತದೋ ಅವನು ಆತ್ಮಾರಾಮಿಯಾಗಿರುತ್ತಾನೆ ಎನ್ನುವುದು ಸಂತರ ಅನುಭವದ ಮಾತಾಗಿರುತ್ತದೆ.

## ಟಿಪ್ಪಣಿಗಳು

1. ಶ್ರೀಮನ್ನಿಜಗುಣ ಶಿವಯೋಗಿಗಳಿಂದ ವಿರಚಿತ 'ಕೈವಲ್ಯ ಪದ್ಧತಿ', ಲೇ: ಮತ್ತು ಪ್ರ: ಶ್ರೀ ಚಿಕ್ಕ ರಾಮಾರೂಢಸ್ವಾಮಿ, ಶ್ರೀ ರಾಮಾರೂಢಸ್ವಾಮಿ ಸ್ವಾಮಿ ಬ್ರಹ್ಮವಿದ್ಯಾಶ್ರಮ, ಮಲ್ಲಾಪೂರ, ಬಾಗಲಕೋಟ, 1984, ಪುಟ 432–436
2. 'ಕೈವಲ್ಯ ಪದ್ಧತಿ', ನೀತಿಕ್ರಿಯಾಚರ್ಯ ಸ್ಥಳ, ಪುಟ 347
3. 'ಕೈವಲ್ಯ ಪದ್ಧತಿ' ಪುಟ 350
4. ಪುರಂದರದಾಸರ ಕೀರ್ತನೆಗಳು, ಪುಟ 64, ಪದ್ಯ 100 ಶ್ರೀ ಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ಉಡುಪಿ 2010
5. ಹರಿದಾಸ ಸಾಹಿತ್ಯ ಒಂದು ಅಧ್ಯಯನ, ಪುಟ 58–ಲೇ: ಬೇಲೂರು ಕೇಶವದಾಸರು, ಪ್ರ: ಭಾರತಿ ಪ್ರಕಾಶನ ಸರಸ್ವತಿ ಪುರಂ, ಮೈಸೂರು 570 009 ಪ್ರಥಮ ಮುದ್ರಣ – 1944, ತೃತೀಯ ಮುದ್ರಣ 2005
6. ಹರಿದಾಸ ಸಾಹಿತ್ಯ ಒಂದು ಅಧ್ಯಯನ, ಪುಟ 68
7. ವಚನ ಸಾಹಿತ್ಯ ಸಂಗ್ರಹ ವಚನ 73, ಪುಟ 268
8. ವಚನ ಸಾಹಿತ್ಯ ಸಂಗ್ರಹ, ಅಧ್ಯಾಯ ವಿವೇಚನೆ, ಪುಟ 267, ವಚನ 67
9. ಸಮಗ್ರ ದಾಸ ಸಾಹಿತ್ಯ, ಸಂಪುಟ:33, ಕವಿ ಪರಮದೇವ ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು, ಸಂ: ಡಾ.ಕೆಳದಿ ವೆಂಕಟೇಶ ಜೋಯಿಸ್, ಡಾ.ಡಿ.ಆರ್.ಪಾಂಡುರಂಗ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, 2003, ಪುಟ 216
10. ಶ್ರೀ ಗೋಪಾಲದಾಸರ ಕೃತಿಗಳು, ಸಂ.ಡಾ.ಟಿ.ಎನ್.ನಾಗರತ್ನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., 1987, ಪುಟ 31, ಕೀ.ಸಂ. 17.
11. ಶ್ರೀ ಜಗನ್ನಾಥದಾಸರ ಕೃತಿಗಳು, ಸಂ.ಸಂ.ಡಾ.ಟಿ.ಎನ್.ನಾಗರತ್ನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., 1987, ಪುಟ 104,105, ಕೀ.ಸಂ. 84
12. ಅಕ್ಕನ ವಚನಗಳು : ಪುಟ 102, ವ.ಸಂ.199
13. ಅಕ್ಕನ ವಚನಗಳು : ಪುಟ 118, ವ.ಸಂ.226
14. ಅಕ್ಕನ ವಚನಗಳು : ಪುಟ 120, ವ.ಸಂ.234
15. ವಚನ ಸಾಹಿತ್ಯ ಸಂಗ್ರಹ ಅಧ್ಯಾಯ 13 ಅಚಲಭಕ್ತಿ, ವ.ಸಂ. 24, ಪುಟ 285
16. ಶಿಶುನಾಳ ಷರೀಫ ಗೀತೆಗಳು ಸಂ: ಡಾ। ಶಿವಾನಂದ ಗುಬ್ಬಣ್ಣವರ ಅಕ್ಷಯ ಪ್ರಕಾಶನ ಧಾರವಾಡ 580 007, 2002, ಪುಟ 68 ಪು.ಸಂ.79
17. **ಅಕ್ಕನವಚನಗಳು, ಪುಟ 154, ವ. ಸಂ 315**
18. ಡಿ.ವಿ.ಜಿ ಅವರ ಮಂಕುತಿಮ್ಮನ ಕಗ್ಗ (ತಾತ್ಪರ್ಯ ಸಹಿತ), ತಾತ್ಪರ್ಯ: ವಿದ್ಯಾವಾಚಸ್ಪತಿ ಕವಿತಾಕೃಷ್ಣ ಪ್ರ:ತನು –ಮನು ಪ್ರಕಾಶನ, ತೃಪ್ತಿ 42, 'ಜಿ' ಬ್ಲಾಕ್, 3ನೇ ತಿರುವು, ರಾಮಕೃಷ್ಣ ನಗರ, ಮೈಸೂರು–22, ಮೊ.ಮು. 2003, ಪುಟ 58

19. 'ವಿಜ್ಞಾನಯುಗದ ಮಹಾಪ್ರಾಜ್ಞ ಮಹಾತ್ಮ ಗಾಂಧೀಜಿಯವರ ನೂರು ಮುಖಗಳ ದರ್ಶನ. ಲೇ:ಪ್ರೊ.ಎನ್. ಕೃಷ್ಣಸ್ವಾಮಿ. ಪ್ರ: ಭಾರತೀಯ ವಿದ್ಯಾಭವನದ ಗಾಂಧೀ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಕೇಂದ್ರ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು – 1. ಮೊದಲ ಮುದ್ರಣ : 2000, ಪುಟ 89–90
20. Bhakti. The Means and the End - Divine Mother Sree Rama Devi, RamaShakti mission, Shakthinagar, Mangalore,- 16. 1980, ಪುಟ 14
21. ಶಾಂ. ಭ. ಸೂ. , (ಪುಟ 9)
22 ಕಥಾಕೀರ್ತನ ಸಿರಿ ಲೇ: ಕೀರ್ತನಾಚಾರ್ಯ, ಶ್ರೀ ಲಕ್ಷ್ಮಣದಾಸ ವೇಲಣಕರ್. ಪ್ರ : ಪುರಂದರ ವಿಠಲ ಸೇವಾಶ್ರಮ. 'ದಾಸ ಜ್ಯೋತಿ' ಅಂಚೆ : ಮೂಡುಮಾರ್ನಾಡು, ದ.ಕ. – 574 213 ಪುಟ : 119
23. ಪು.ದಾ.ಕೀ., ಪುಟ 612, ಕೀ.ಸಂ. 986
24. ಪುರಂದರದಾಸರ ಕೀರ್ತನೆಗಳು. ಪುಟ 432, ಕೀ.ಸಂ. 694.
25. ಪು.ದಾ. ಕೀರ್ತನೆಗಳು ಪುಟ 525, 526, ಕೀ. ಸಂ. 848.
26.ತತ್ವ ಪದಗಳು, ಪ್ರಾತಿನಿಧಿಕ ಸಂಕಲನ, ಪ್ರಸಂ. ಶಾಂತರಸ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು–2, 2000, ಪುಟ 81
27. ಶಿಶುನಾಳ ಷರೀಫ್ ಗೀತೆಗಳು, ಸಂ.ಡಾ.ಶಿವಾನಂದ ಗುಬ್ಬಣ್ಣವರ, ಐದನೆಯ ಆವೃತ್ತಿ, ಅಕ್ಷಯ ಪ್ರಕಾಶನ, ಧಾರವಾಡ– 580007, ಗೀ.ಸಂ. 190
28. ಭಕ್ತಿಚಂದ್ರಿಕೆ. ಪುಟ 28, 29.
29 ಶ್ರೀ ಶ್ರೀ ಚೈತನ್ಯ ಚರಿತಾವಳಿ, ಲೇ: ಪ್ರಭುದತ್ತಬ್ರಹ್ಮಚಾರಿ, ಪುಟ 610.
30. ಶ್ರೀ ರಾಮಕೃಷ್ಣ ವಚನವೇದ, ಪೂರ್ವಾರ್ಧ – 'ಮ' ಮೂಲವಂಗ ಲೇಖಕರು. 497) ಶ್ರೀ ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು – 570 020 (ಪುಟ 496 )
31. ಶ್ರೀ ನಿಜಗುಣ ಶಿವಯೋಗಿಗಳು 'ಕೈವಲ್ಯ ಪದ್ಧತಿ' ಗ್ರಂಥ (ಪುಟ 127, 128 ಕೀ ಸಂ. 27)

## ೪.೪. ಕಾಮಕ್ಕೂ ಭಕ್ತಿಗೂ ಇರುವ ವೈಲಕ್ಷಣ್ಯ

7ನೇ ಸೂತ್ರದಿಂದ 11ನೆಯ ಸೂತ್ರದ ವರೆಗೆ ಭಕ್ತಿಯು ಕಾಮಕ್ಕಿಂತ ಹೇಗೆ ಭಿನ್ನ, ವಿಲಕ್ಷಣ ಎಂಬುವುದನ್ನು ಹೀಗೆ ವಿವರಿಸುತ್ತಾರೆ.

**7. ಸಾ ನ ಕಾಮಯಮಾನಾ, ನಿರೋಧರೂಪತ್ವಾತ್ ॥ ೭ ॥**

'ಆ ಭಕ್ತಿಯು (ಮತ್ತೊಂದನ್ನು) ಕಾಮಿಸುವಂಥದ್ದಲ್ಲ; ಏಕೆಂದರೆ (ಅದು) ನಿರೋಧ ರೂಪದ್ದಾಗಿರುತ್ತದೆ.'[1]

**8. ನಿರೋಧಸ್ತುಲೋಕವೇದವ್ಯಾಪಾರ ನ್ಯಾಸಃ ॥ ೮ ॥**

ನಿರೋಧವಾದರೋ, ಲೌಕಿಕ ಮತ್ತು ವೈದಿಕ ಕರ್ಮಗಳನ್ನು ಬಿಡುವುದು (ಅಥವಾ ಸಮರ್ಪಿಸುವುದು)[2].

**9. ತಸ್ಮಿನ್ ಅನನ್ಯತಾ ತದ್ವಿರೋಧಿಷು ಉದಾಸೀನತಾ ಚ ॥ ೯ ॥**

ಮತ್ತು ಅವನಲ್ಲಿ ಅನನ್ಯತೆ (ಹಾಗೂ) ಅದಕ್ಕೆ ಪ್ರತಿಕೂಲವಾದವುಗಳಲ್ಲಿ ಉದಾಸೀನತೆ(ಇದೂ ನಿರೋಧವೇ)[3].

**10. ಅನ್ಯಾಶ್ರಯಾಣಾಂ ತ್ಯಾಗೋऽನನ್ಯತಾ ॥ ೧೦ ॥**

ಇತರ ಆಶ್ರಯಗಳನ್ನು ತ್ಯಜಿಸುವುದೇ ಅನನ್ಯತೆ[4].

**11. ಲೋಕವೇದೇಷು ತದನುಕೂಲಾಚರಣಂ ತದ್ವಿರೋಧಿಷು ಉದಾಸೀನತಾ ಚ ॥ ೧೧ ॥**

'ಅದಕ್ಕೆ ಪ್ರತಿಕೂಲವಾದವುಗಳಲ್ಲಿ ಉದಾಸೀನತೆ' ಎಂದರೆ ಲೌಕಿಕ ಮತ್ತು ವೈದಿಕ ಕರ್ಮಗಳಲ್ಲಿ ಅದಕ್ಕೆ ಅನುಕೂಲವಾದುದನ್ನೇ ಮಾಡುತ್ತಿರುವುದು[5].

ಭಕ್ತಿಯನ್ನು ಪರಮಪ್ರೇಮವೆಂದು ನಿರ್ವಚನ ಮಾಡಿರುವುದರಿಂದ (ಸೂ. 2) ಭಗವತ್ಪ್ರೇಮವು ಭಗವಂತನನ್ನು ಬಯಸುವ ಪ್ರಕ್ರಿಯೆಯಾಗಿರುವ ಕಾರಣ, ಅದು ಕೂಡಾ ಕಾಮದ (ಆಶೆಯ) ಒಂದು ಪ್ರಕಾರವೇ ಅಲ್ಲವೇ? ಎನ್ನುವ ಪ್ರಶ್ನೆ ಉದ್ಭವಿಸುವುದು ಸಹಜ.

ಕಾಮಕ್ಕಿರುವ ಅರ್ಥವ್ಯಾಪ್ತಿ ಅಪಾರ. 'ಕಾಮು – ಕಾಂತೌ' ಎಂಬ ಧಾತು ಮೂಲದ ಈ ಶಬ್ದದ ಪ್ರಾಥಮಿಕ ಅರ್ಥವೇ ಬಯಕೆ, ಆಕರ್ಷಣೆ ಎಂದು[6]. ಎಲ್ಲ ಬಗೆಯ ಸೆಳೆತಗಳೂ ಬಯಕೆಗಳ 'ಪ್ರಥಮ ಸೃಷ್ಟಿ' ಎಂದೇ ಹೇಳಿದ್ದಾರೆ[7]. ಮಾತ್ರವಲ್ಲ ಇದು ಮನಸ್ಸಿನ ಮೊದಲ ಕುಡಿಯೆಂದೂ ಒಕ್ಕಣಿಸಿದ್ದಾರೆ[8]. ಹೀಗಾಗಿಯೇ ಕಾಮವನ್ನು ಮನಸಿಜ, ಮನೋಜ, ಮನೋಭವ, ಚಿತ್ತಜ, ಸಂಕಲ್ಪಯೋನಿ ಎಂದೆಲ್ಲ ಹೆಸರಿಸಿದ್ದಾರೆ (ಮನಸು
ಸಂಕಲ್ಪವಿಕಲ್ಪಾತ್ಮಕ. ಆದುದರಿಂದಲೇ ಅದರಲ್ಲಿ ಬಯಕೆ ಜನಿಸುತ್ತದೆ)[9]. ಹೀಗಾಗಿ ಇಡಿಯ ಸೃಷ್ಟಿಯೇ ಕಾಮದ ಅನುಜ, ಕಾಮವನ್ನು ಹಿಂಬಾಲಿಸಿ ಹೊಮ್ಮಿತು ಎಂದು ಹೇಳುತ್ತಾರೆ[10].

ಕಾಮವು ಬಹಳ ವಿಚಿತ್ರವಾದುದು. 'ಕಾಮ ಒಂದು ಪುರುಷಾರ್ಥ' ಈ ಗ್ರಂಥದ ಒಳ್ನುಡಿಯಲ್ಲಿ ಖ್ಯಾತ ವಿದ್ವಾಂಸರಾದ ಡಾ| ಆರ್. ಗಣೇಶ್ ಅವರ ವ್ಯಾಖ್ಯೆ ಇಂತಿದೆ: "ಧರ್ಮದ ಚೌಕಟ್ಟಿನಲ್ಲಿ ಅಡಗಿದಾಗ ಅದು (ಕಾಮವು) ಪಂಜರದೊಳಗಿರುವ ಶಾರ್ದೂಲದಂತೆ ಸುಂದರ, ರಾಜಗಂಭೀರ. ಹೀಗಾಗಿಯೇ ಅದೊಂದು ಪುರುಷಾರ್ಥ. (ಪುರುಷೈಃ ಅರ್ಥ್ಯತೇ – ತನ್ನ ಆತ್ಮವನ್ನು ಅರಿಯುವ ಸಾಧನ). ಇಂತಲ್ಲದೆ, ವಿಶ್ರಂಖಲವಾಗಿ ದಾಂಧಲೆ ನಡೆಸಿದಾಗ ಅದೊಂದು ವೈರಿ, ಆರುಮುಖ್ಯ ಚಿರವೈರಿಗಳಲ್ಲಿ ಅಗ್ರಗಣ್ಯ. ಅರಿಷಡ್ವರ್ಗದ ನೇತಾರ. **ಧರ್ಮಾವಿರುದ್ಧೋಭೂತೇಷು ಕಾಮೋಽಸ್ಮಿ ಭರತರ್ಷಭ** (ಭಗವದ್ಗೀತೆ 7–11) ಎಂದ ಗೀತಾಚಾರ್ಯ. ಕಾರಣ ಇಂಥ ನಿಯಂತ್ರಿತ ಕಾಮವು ಪಳಗಿದ ಕುದುರೆಯಂತೆ ಗಮ್ಯವನ್ನು ಸೇರಿಸುವ ಅನುಕೂಲ ಸಾಧನ. ಇದಕ್ಕೆ 'ಅರ್ಥ'ವು ಬಲುದೊಡ್ಡ ಬೆಂಗಾವಲು. ಹೀಗಲ್ಲದಿರಲು ಕಾಮವು ಕೆರಳಿ ಕಂಟಕವಾದೀತು. ಧರ್ಮವಿರುದ್ಧವಾಗ ಕಾಮವು ಸಹಜವಾಗಿಯೇ ವಿಫಲವಾಗುತ್ತದೆ. ಈ ತೆರನಾದ ವೈಫಲ್ಯದಿಂದ ಮತ್ತಷ್ಟು ಕೆರಳಿದ ಕಾಮವು

ಕ್ರೋಧವಾಗುತ್ತದೆ. ಒಂದು ವೇಳೆ ಈ ಮುನಿಸು ಹಠದಿಂದ ಗೆಲುವನ್ನು ಸಾಧಿಸಿತೋ, ಅದು ಸಂಪ್ರಾಪ್ತ ವಸ್ತುವಿನಲ್ಲಿ ಲೋಭವನ್ನೂ ಮೋಹವನ್ನೂ ಇರಿಸಿಕೊಂಡು ಮದಮುಕ್ತವಾಗಿ ಮಲೆಯುತ್ತದೆ. ಇಂತಲ್ಲದೆ ಗೆಲ್ಮೆ ಗಳಿಸಲಿಲ್ಲವೋ, ಆಗಲೂ ಅದು ನೆಮ್ಮದಿಯಾಗದೆ ಮಾತ್ಸರ್ಯದ ಅಗ್ನಿಯಲ್ಲಿ ತನ್ನನ್ನೂ ತನ್ನ ಪರಿಸರವನ್ನೂ ಹಾಳ್ಗೆಡುವುತ್ತದೆ. – ಹೀಗಿದೆ ಅರಿಷಡ್ವರ್ಗದ ಅಗಟ–ವಿಗಟ. ಆದುದರಿಂದಲೇ ಕಾಮವನ್ನು ಸರ್ವದಾ ಪುರುಷಾರ್ಥಗಳಲ್ಲಿ ಒಂದಾಗಿಸಿ ಬಳಸಿಕೊಂಡರೆ ಕಾಡಿನ ಕಿಚ್ಚು ಮನೆ ಬೆಳಗುವ ದೀಪವಾದಂತೆ, ಬಿರುಗಾಳಿಯು ತಂಬೆಲರಾದಂತೆ, ಹುಚ್ಚು ಹೊಳೆಯು ಹೊಲಗದ್ದೆಗಳಿಗೆ ಹುಲುಸು ಬೆಳೆಯನ್ನು ತರುವ ನೀರಾವರಿಯಾದಂತೆ.

ನಮ್ಮ ಬದುಕಿನ ಸವಾಲೆಲ್ಲ ಮುಖ್ಯವಾಗಿ, ಬಹುಶಃ ಸಂಪೂರ್ಣವಾಗಿ ಕೂಡ, ಕಾಮವನ್ನು ಧರ್ಮಾವಿರುದ್ಧವಾಗಿಸುವುದೇ; ಕಾಮವನ್ನು ಮೋಕ್ಷಗಾಮಿಯಾಗಿಸುವುದೇ. ಇದಕ್ಕಿರುವ ರಾಜಮಾರ್ಗ ಲೋಕಸಂಗ್ರಹ. ಇದಾದರೋ ಯಜ್ಞ–ದಾನ–ತಪೋ ರೂಪಿ........ ಇಷ್ಟಕ್ಕೂ ಕಾಮವೆಂಬುದಾದರೂ ಏನು? ಡಾ। ಎಸ್.ಎಲ್. ಭೈರಪ್ಪನವರು 'ಸಾಕ್ಷಿ' ಕಾದಂಬರಿಯಲ್ಲಿ ಹೇಳುವಂತೆ 'ನಾನು' ಎಂಬುದರ ಭಟ್ಟಿಯಿಳಿಸಿದ ರೂಪವೇ ಕಾಮ. ಆದುದರಿಂದಲೇ ಅದನ್ನು ಅಭಿಮಾನ, ಅಹಂಕಾರ (ಅಹಂಕಾರವೆಂದರೆ 'ಗರ್ವ' ಎಂಬರ್ಥವಿಲ್ಲಿ ವಿವಕ್ಷಿತವಲ್ಲ) ಎಂದೂ ವಿವರಿಸುವುದುಂಟು. ಇಂಥ ಅಸ್ತಿತ್ವದ, ಪ್ರಜ್ಞೆಯನ್ನೇ ಉದಾತ್ತೀಕರಿಸಿದರೆ ಅದು ಮೋಕ್ಷವೇ ಆದೀತು."

ಎಲ್ಲಾ ಸಂತರೂ ತೋರಿರುವ ಹಾದಿ ಇದುವೇ ಆಗಿದೆ ಅನ್ನಬಹುದು. ಹುಚ್ಚು ಹೊಳೆಯಾಗಿ ಹತ್ತಾರು ದಿಕ್ಕುಗಳಲ್ಲಿ ಹರಿಯುವ ಬಯಕೆಗಳ ಪ್ರವಾಹವನ್ನು ಭಗವತ್ಸೇವೆ, ತಪಸ್ಸು, ಎಂಬ ಲೋಕಸಂಗ್ರಹದ ಮೂಲಕ ಭಗವನ್ಮುಖೀಗೊಳಿಸಿ ಧರ್ಮವೆಂಬ ನಿರ್ದಿಷ್ಟ ಜಾಡನ್ನು ಹಿಡಿದು ಹರಿಯುವಂತೆ ಮಾಡಿ ತನ್ಮೂಲಕ ತಮ್ಮ ಆತ್ಮೋದ್ಧಾರವನ್ನೂ ಲೋಕೋದ್ಧಾರವನ್ನೂ ಗೈದರು, ಸಂತರು, ನಾರದರು, ಭಕ್ತಿಸೂತ್ರದಲ್ಲಿ ನಿರೂಪಿಸುತ್ತಿರುವ ಪರಮ ಪ್ರೇಮದ ವಿಲಕ್ಷಣತೆ ಇರುವುದು, ಸ್ವಾಭಾವಿಕವಾಗಿ ಪ್ರಾಪಂಚಿಕ ವಿಷಯವಸ್ತುಗಳ ಕಡೆಗೆ ಆಕರ್ಷಿತವಾಗುವ

ದೇಹೇಂದ್ರಿಯ ಮನಸ್ಸುಗಳನ್ನು, ನಿರೋಧಿಸಿ ಭಗವನ್ಮುಖಿಯಾಗಿಸುವುದರಲ್ಲಿ. ಹೀಗೆ ಭಕ್ತಿಯ ಪ್ರೇಮಕ್ಕೆ ನಿರೋಧವು ಮೊದಲ ಹೆಜ್ಜೆಯಾಗಿದೆ.

ಶ್ರೀ ಮದ್ಭಾಗವತದಲ್ಲಿ ಪ್ರಹ್ಲಾದನು ನೃಸಿಂಹರೂಪೀ ನಾರಾಯಣನನ್ನು ಹೀಗೆ ಪ್ರಾರ್ಥಿಸುತ್ತಾನೆ. (ಶ್ರೀ ಮದ್ಭಾಗವತ 7–10–7)

**ಯದಿ ರಾಸೀಶ ಮೇ ಕಾಮಾನ್ವರಾಂಸ್ತ್ವಂ ವರದರ್ಷಭ ।**

**ಕಾಮಾನಾಂ ಹೃದ್ಯಸಂರೋಹಂ ಭವತಸ್ತು ವೃಣೇ ವರಮ್ ॥**

'ಹೇ ಪ್ರಭುವೇ! ವರದಾತೃಗಳಲ್ಲಿ ಅಗ್ರಗಣ್ಯನೆ! ಒಂದು ವೇಳೆ ನೀನು ನಾನು ಬಯಸಿದ ವರಗಳನ್ನು ಕೊಡುವೆಯಾದರೆ, ನನ್ನ ಹೃದಯದಲ್ಲಿ ಕಾಮಗಳೇ ಏಳದಿರಲಿ! ನಿನ್ನಿಂದ ನಾನು ಬೇಡುವ ವರವು ಇದೇ!'

ಎಲ್ಲಾ ರೀತಿಯ ಬಯಕೆಗಳು ಮತ್ತು ಇಚ್ಛೆಗಳು ಕಾಮವೆಂದೆನಿಸುವವು.

ಋಗ್ವೇದದಲ್ಲಿ 'ಮನಸ್ಸಿನ ಮೊದಲ ಬೀಜವಾದ ಕಾಮವು ಆರಂಭದಲ್ಲಿ ಇತ್ತು' ಎಂಬ ನುಡಿ ಇದೆ[10]. ಮನುಷ್ಯನ ಮನಸ್ಸು ಬಯಸ್ಸಿದ್ದೆಲ್ಲವೂ ಕಾಮವಾಗಿರುವುದರಿಂದ ಅದನ್ನು ಪ್ರಥಮ ಬೀಜವೆಂದು ಕರೆಯಲಾಗಿದೆ. ಮನುಸ್ಮೃತಿಯಲ್ಲಿಯೂ ಸಹ ಈ ಪದವನ್ನು ಉಪಯೋಗಿಸಲಾಗಿದೆ. 'ಮನುಷ್ಯನ ಪ್ರತಿಯೊಂದು ಚಟುವಟಿಕೆಗಳು ಕಾಮ(ಇಚ್ಛೆ) ದಿಂದೊಡಗೂಡಿರುತ್ತದೆ. ಕಾಮರಹಿತವಾದ ಚಟುವಟಿಕೆ ಮನುಷ್ಯನಲ್ಲಿ ಕಂಡುಬರುವುದೇ ಇಲ್ಲ.'[12] ಇಲ್ಲಿ ಮನು ಮಹರ್ಷಿಯ 'ಆಸೆ', 'ಬಯಕೆ' ಎಂಬ ಅತ್ಯಂತ ವಿಶಾಲ ಅರ್ಥದಲ್ಲಿ ಕಾಮ ಪದವನ್ನು ಬಳಸಿರುವನು.

ಮನಸ್ಸಿನಲ್ಲಿ ಸಾಮಾನ್ಯ ಕಾಮನೆಗಳು ಎದ್ದಾಗ ಮಾನವನು ಅವುಗಳಿಗೆ ಅಡೆ ತಡೆ ಹಾಕದೆ ಪೂರೈಸಿಕೊಳ್ಳಲು ಪ್ರಯತ್ನಿಸುತ್ತಾನೆ. ಇವುಗಳಿಗಾಗಿ ಲೌಕಿಕ ಕರ್ಮಗಳನ್ನಾಗಲೀ, ತನ್ಮೂಲಕ ಕಾಮನಾ ತೃಪ್ತಿಯು ಅಸಾಧ್ಯ ಎಂದರಿತಾಗ ವೇದೋಕ್ತ ಕರ್ಮಗಳನ್ನಾಗಲೀ ಆಶ್ರಯಿಸುತ್ತಾನೆ.

ಆದರೆ ಹೃದಯದಲ್ಲಿ ಭಗವಂತನ ಕುರಿತಾದ ಒಲವು ಉದಯಿಸಿದಾಗ ಅದಕ್ಕೆ ಸಾಮಾನ್ಯ ಬಯಕೆಗಳಿಂದ ರಕ್ಷಣೆ ಕೊಡಬೇಕು. ಇಲ್ಲವಾದರೆ ಬೇಲಿಯಿಲ್ಲದ ಸಸಿಯನ್ನು ಪಶುಗಳು ತಿನ್ನುವಂತೆ ಅಥವಾ ಕಳೆಯಾಗಿ ಬೆಳೆದ ಗಿಡಗಳು ಪೈರಿನ ಸಸಿಯನ್ನು ನಾಶ ಮಾಡುವಂತೆ ಅವು (ಬಯಕೆಗಳು) ಭಕ್ತಿಯ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತವೆ. ಆದ್ದರಿಂದ ಭಕ್ತಿಗೆ ನಿರೋಧದ ಆವಶ್ಯಕತೆ ಬಹಳಷ್ಟಿದೆ.

'ನಿರೋಧ'ವೆಂದರೇನು? ಮನಸ್ಸಿನ ಆಶೆಗಳನ್ನು ಅವು ಅಭಿವ್ಯಕ್ತವಾಗದ ರೀತಿಯಲ್ಲಿ ಅದುಮಿ ಹಿಡಿಯುವುದು ನಿರೋಧವಲ್ಲ. ನಿರೋಧವು 'ನ್ಯಾಸ'. ಸ್ವಾಮಿ ಹರ್ಷಾನಂದರು ನೀಡಿರುವ ವ್ಯಾಖ್ಯಾನದಂತೆ[13]: ನ್ಯಾಸವೆಂದರೆ ಸಂನ್ಯಾಸ, ತ್ಯಾಗ; ಇದು ಮೊದಲನೆಯ ಅರ್ಥ. ಎರಡನೆಯ ಅರ್ಥ: ಸಮರ್ಪಣೆ. ಈ ಎರಡೂ ಅರ್ಥಗಳ ಸಹಾಯವನ್ನು ಪಡೆದುಕೊಳ್ಳಬಹುದು.

ಭಕ್ತಿ ಮಾರ್ಗದ ಸಾಧಕನು ಸ್ವಾರ್ಥಪ್ರೇರಿತ, ಕಾಮನಾಪ್ರೇರಿತ, ಕರ್ಮಗಳನ್ನು–ಅವು ಲೌಕಿಕವೇ ಆಗಲಿ,

ವೈದಿಕವೇ ಆಗಲಿ ತ್ಯಾಗ ಮಾಡಬೇಕು. ಇದು ಅವಶ್ಯಕ. ಇಲ್ಲದಿದ್ದರೆ ಮನಸ್ಸಿನ ಶಕ್ತಿಯೆಲ್ಲವೂ ಅಪವ್ಯಯಗೊಂಡು ಭಕ್ತಿ ಸಾಧನೆ ಸಾಧ್ಯವಾಗುವುದಿಲ್ಲ. (ನಿಷಿದ್ಧ ಅಥವಾ ಪಾಪಕರ್ಮಗಳನ್ನಂತೂ ತ್ಯಜಿಸಲೇಬೇಕು) ಇದಕ್ಕಾಗಿ ಬಸವೇಶ್ವರರು ವಚನದಲ್ಲಿ **'ನರವಿಂಧ್ಯದೊಳಗೆನ್ನ ಹುಲುಗಿಳಿಯು ಮಾಡಿ'**[14] ಎಂಬ ವಚನದಲ್ಲಿ **'ಭಕ್ತಿ ಎಂಬ ಪಂಜರದೊಳಗಿಕ್ಕಿ ಸಲಹು ಕೂಡಲ ಸಂಗಮದೇವ'** ಎಂದು ಭಗವಂತನನ್ನು ಪ್ರಾರ್ಥಿಸುತ್ತಾರೆ. ಕಾಮ, ಕರ್ಮಗಳೆಂಬ ಬಂಧನದಿಂದ ಮುಕ್ತಿಯನ್ನು ಬಯಸಿ ನಿಂತರೆ ಕಾಮ, ಕರ್ಮಗಳ ಬಲೆಯಿಂದ ಪಾರಾಗಬಹುದು ಎನ್ನುವ ಉದ್ದೇಶದಿಂದ, ಹೀಗೆ ಪ್ರಾರ್ಥಿಸುತ್ತಾರೆ [15]:

'ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ.
ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ.
ಮತ್ತೊಂದು ಕೇಳದಂತೆ ಕಿವುಡನ ಮಾಡಯ್ಯ ತಂದೆ
ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸು
ಕೂಡಲಸಂಗಮದೇವ'

ಹೆಳವನ ಮಾಡು, ಅಂಧಕನ ಮಾಡು, ಕಿವುಡನ ಮಾಡು ಎಂದು ಸಾಮಾನ್ಯರು ಪ್ರಾರ್ಥನೆ ಮಾಡಲು ಸಾಧ್ಯವಿಲ್ಲವಾದರೂ, ವ್ಯರ್ಥವಾದ ಇಂದ್ರಿಯ ವ್ಯಾಪಾರಗಳನ್ನು ಕಡಿಮೆ ಮಾಡಿಕೊಂಡು ಆತ್ಮಾರಾಮರಾಗಬೇಕು ಎಂಬುದು ಈ ವಚನದ ಸಂದೇಶವಾಗಿದೆ.

ಇನ್ನು ಭಕ್ತಿಯಿಲ್ಲದೆ ಮಾಡುವ ಡಂಭಾಚಾರದಿಂದ ಕೂಡಿದ ಧಾರ್ಮಿಕ ಆಚರಣೆಗಳು ವ್ಯರ್ಥ ಎಂಬುದನ್ನು ಕನಕದಾಸರು ಈ ಕೀರ್ತನೆಯಲ್ಲಿ ಹೇಳುತ್ತಾರೆ[16].

ಎಳ್ಳು ಕಾಳಿನಷ್ಟು ಭಕ್ತಿ ಎನ್ನೊಳಗಿಲ್ಲ ॥ ಪ ॥
ಕಳ್ಳರಿಗೆ ಕಳ್ಳನಂತೆ – ಬೆಳ್ಳಕ್ಕಿಯಿಂದದಿ ಡಂಭ ॥ ಅ.ಪ.॥

ಗಾಣದೆತ್ತಿನಂತೆ ಕಣ್ಣ ಮುಚ್ಚಿ ಪ್ರದಕ್ಷಿಣೆಯ ಮಾಡಿ
ಕಾಣದೆ ತಿರುಗುವೆನೆರಡು ಕಣ್ಣಿದ್ದು ನಾನು
ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರು ಕೂಡಿ
ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತನಯ್ಯ ॥ ೧ ॥

ಗುಂಡುಮುಳುಗನ ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ
ಮಂಡೆ ಶೂಲೆ ಬಾಹೋದಲ್ಲದೆ ಗತಿಯ ಕಾಣೆನೊ
ಮಂಡೂಕ ನಂದದಲಿ ನೀರತಡಿಯಲಿ ಕುಳಿತುಕೊಂಡು
ಮುಂಡೆ ಮುಸುಕನಿಕ್ಕಿ ಮೂಗು ಹಿಡಿದು ಬಿಡುವ ಭ್ರಮಿತನಯ್ಯ ॥ ೨ ॥

ಗಾಣದೆತ್ತು, ಗುಂಡು ಮುಳುಗನ ಹಕ್ಕಿ, ಮಂಡೂಕಗಳ ರೂಪಕದ ಮುಖಾಂತರ ಶುಷ್ಕ ಆಚಾರಗಳು ಹೇಗೆ ನಿಷ್ಪ್ರಯೋಜಕ ಎಂಬುದನ್ನು ಮುಷ್ಟಿಗ್ರಾಹ್ಯ ಮಾಡಿದ್ದಾರೆ ಕನಕದಾಸರು[17]. ಸ್ವಾರ್ಥಪ್ರೇರಿತ ನಿಷ್ಪ್ರಯೋಜಕ ಕರ್ಮಗಳನ್ನು ತ್ಯಜಿಸಿದರೂ, ತನ್ನದೇ ಆದ ಕರ್ತವ್ಯ ಕರ್ಮಗಳನ್ನು ಮಾತ್ರ ಭಗವದರ್ಪಣ ಬುದ್ಧಿಯಿಂದ ಮಾಡಬೇಕು, ಮಾಡಿ ಭಗವಂತನಿಗೆ ಸಮರ್ಪಿಸಬೇಕು. ಈ ರೀತಿ ನ್ಯಾಸವನ್ನು ಮಾಡುತ್ತಿದ್ದಲ್ಲಿ ಭಕ್ತಿಯು ಬೆಳೆಯುತ್ತದೆ, ಅದು ಬೆಳೆದಂತೆಲ್ಲ ಸ್ವಾರ್ಥ ಕಾಮನೆಗಳು ತಾವಾಗಿಯೇ ಮಾಯವಾಗುತ್ತವೆ. ಮೊದಲು ಯಾವುದನ್ನು ಪ್ರಯತ್ನ ಪೂರ್ವಕವಾಗಿ ಮಾಡಬೇಕಾಗಿತ್ತೋ ಅದು ಈಗ ಪ್ರಯತ್ನವಿಲ್ಲದೆ ಸಿದ್ಧಿಸುತ್ತದೆ. ಈ ತತ್ವವನ್ನು ಸಮರ್ಥಿಸುವ ಶಾಸ್ತ್ರವಾಕ್ಯಗಳು ಇಂತಿವೆ :

'ಎಲೈ ಅರ್ಜುನ, ನೀನು ಏನನ್ನು ಮಾಡುವಿಯೋ, ಏನನ್ನು ತಿನ್ನುವಿಯೋ, ಏನನ್ನು ಹೋಮಿಸುವಿಯೋ, ಏನನ್ನು ದಾನ ಮಾಡುವಿಯೋ, ಯಾವ ತಪಸ್ಸನ್ನು ಮಾಡುವಿಯೋ ಅದೆಲ್ಲವನ್ನೂ ನನಗೆ ಅರ್ಪಿಸು.' (ಗೀತಾ. 9.27)[17]

ಶ್ರೀ ಮದ್ಭಾಗವತದಲ್ಲಿ ಗೋಪಿಯರಲ್ಲಿ ಸರ್ವಕರ್ಮ ಸಮರ್ಪಣಾ ಭಾವದ ಅತ್ಯುನ್ನತ ಆದರ್ಶವನ್ನು ಕಾಣುತ್ತೇವೆ:

'ನಮ್ಮ ಮಾತು (ನಿನ್ನ) ಗುಣಕಥನದಲ್ಲಿಯೂ ಕಿವಿಗಳು (ನಿನ್ನ) ಕಥೆಯನ್ನು (ಕೇಳುವುದರಲ್ಲಿಯೂ) ಕೈಗಳು (ನಿನ್ನ ಕರ್ಮದಲ್ಲಿಯೂ) ಮನಸ್ಸು ನಿನ್ನ ಪಾದಗಳನ್ನು ಸ್ಮರಿಸುವುದರಲ್ಲಿಯೂ, ಶಿರಸ್ಸು ನಿನ್ನ ನಿವಾಸವಾದ ಜಗತ್ತನ್ನು ನಮಸ್ಕರಿಸುವುದರಲ್ಲಿಯೂ, ದೃಷ್ಟಿಯು ನಿನ್ನ ಶರೀರವೇ ಆಗಿರುವ ಸತ್ಪುರುಷರನ್ನು ನೋಡುವುದರಲ್ಲಿಯೂ ನಿರಂತರವಾಗಿರಲಿ!' [18]. – ಶ್ರೀ ಮದ್‌ಭಾಗವತ (10.10.38)

ಅನನ್ಯ ಶರಣಾಗತಿಯ ಈ ತತ್ವವನ್ನು ನಿರೂಪಿಸುವ ಹಲವಾರು ಕೀರ್ತನೆಗಳು, ವಚನಗಳು ಕನ್ನಡ ಭಕ್ತಿಸಾಹಿತ್ಯದಲ್ಲಿ ಲಭ್ಯವಿದೆ. ಅವಲ್ಲಿ ಕೆಲವನ್ನು ಮಾತ್ರ ಈ ಕೆಳಗೆ ಕೊಟ್ಟಿರುತ್ತೇನೆ;

**'ನಾ ನಿನಗೇನು ಬೇಡುವುದಿಲ್ಲ'** ಎಂಬ ಶ್ರೀಪಾದರಾಜರ ಕೀರ್ತನೆ ಶ್ರೀ ಮದ್ಭಾಗವತದಲ್ಲಿ ಗೋಪಿಯರು ಮಾಡಿದ ಪ್ರಾರ್ಥನೆಯ ಭಾವಾನುವಾದದಂತಿದೆ[19]. ಅವರದೇ ಆದ ಇನ್ನೊಂದು ಸುಳಾದಿಯಲ್ಲಿ **ನಾಹಂಕರ್ತಾ ಹರಿಃ ಕರ್ತಾ** ಎಂಬ ಅನನ್ಯ ಶರಣಾಗತಿ ಭಾವ ಮಡುಗಟ್ಟಿದೆ[20]:

**ನಿನ್ನಾಧೀನ ಶರೀರ ಕರಣ ಚೇಷ್ಟೆಗಳೆಲ್ಲ**
**ನಿನ್ನಾಧೀನ ಬಂಧಮೋಕ್ಷ ನಿರಯಗಳು**
**ನಿನ್ನಾಧೀನ ಯೋಗ್ಯತೆ ಸಾಧನ ಸಾಧ್ಯಗಳೆಲ್ಲ**
**ನಿನ್ನಾಧೀನ ಸುಕೃತ ದುಷ್ಕೃತ ಫಲವು**
**ನಿನ್ನಾಧೀನ ವಿಷಯಾತ್ಮಬುದ್ಧಿಗಳೆಲ್ಲ**
**ನಿನ್ನಾಧೀನ ಚರಾಚರವೆಂದು ಶ್ರುತಿ ಸಾರುತಲಿದೆ**
**ಇಂತು ಪುಣ್ಯ ಪಾಪವೆಲ್ಲ ನಿನ್ನ ಲೇಪಿಸವೋ ದೇವ**
**ಎಂತು ಜೀವರನು ಪುಣ್ಯ ಪಾಪಂಗಳನುಣಿಸುವೆ**
**ಅಂತರಾತ್ಮನೆ ನಿನ್ನ ಮಹಿಮೆಗೆ ನಮೋ ಎಂಬೆ**
**ಎಂತೋ ಚಿತ್ತವಿನ್ನೆಂತೋ ಪಾಲಿಸೋ ರಂಗವಿಠಲ**

ಪರಮಾತ್ಮ ಎಲ್ಲಾ ಜೀವಿಗಳಿಗೆ ಪ್ರೇರಕನಾಗಿದ್ದು ತಾನು ಮಾತ್ರ ನಿರ್ಲಿಪ್ತನಾಗಿರುತ್ತಾನೆ, ಪುಣ್ಯ ಪಾಪಗಳು ಅವನನ್ನು ಸೋಂಕಲಾರವು. ಇದೇ ಸುಳಾದಿಯ ಮೂರನೇ ಚರಣ ಇಂತಿದೆ:

**ಕರಣಗಳು ಬಿಡದೆ ತಮ್ಮ ತಮ್ಮ**

**ವಿಷಯಗಳಿಗೆ ಎಳೆವುತಲಿದೆ.**

**(ಎನ್ನ) ಹರಣ ನಿನ್ನದು ಕರುಣಾಕರನೇ**

**(ಈ ಧರೆ ರಮಣ) ಮಾಣಿಸೋ ಹರಿಯೇ**

**ನಿನ್ನ ಚರಣ ಭಕುತರ ಶರಣಾದೆನು**

**ಹೊರೆವುದು ಎನ್ನ ರಂಗವಿಠಲರೇಯ. ೨**

ವಿಷಯಾಗಳೆಡೆಗೆ ಸೆಳೆಯಲ್ಪಡುವ ಇಂದ್ರಿಯಗಳನ್ನು ನಿಯಂತ್ರಿಸಿ ತನ್ನಾಧೀನ ಮಾಡಿಕೊಳ್ಳುವಂತೆ ಭಗವಂತನನ್ನು ಪ್ರಾರ್ಥಿಸುತ್ತಾರೆ ಶ್ರೀ ಪಾದರಾಜರು ಈ ಸುಳಾದಿಯಲ್ಲಿ ಇದೇ ಭಾವವನ್ನು ಸೂಚಿಸುವ ಕನಕದಾಸರ ಸುಪ್ರಸಿದ್ಧವಾದ ಕೀರ್ತನೆ ಇಂತಿದೆ[21]:

**ತನು ನಿನ್ನದು ಜೀವನ ನಿನ್ನದು ರಂಗ ॥ ಪ ॥**

**ಅನುದಿನದಲಿ ಬಾಹೊ ಸುಖ ದುಃಖ ನಿನ್ನದಯ್ಯ ॥ ಅ.ಪ ॥**

..........................

**ಮಾಯಾಪಾಶದ ಬಲೆಯೊಳಗೆ ಸಿಲುಕಿರುವ ಕಾಯ ಪಂಚೇದ್ರಿಯಗಳು ನಿನ್ನವು**

**ಕಾಯಜಪಿತ ಕಾಗಿನೆಲೆಯಾದಿ ಕೇಶವರಾಯ ನೀನಲ್ಲದೆ ನರರು ಸ್ವತಂತ್ರರೆ ॥ ೩ ॥**

ಪಾತ್ರಧಾರಿಯ ನಡೆನುಡಿ, ಹಾವಭಾವ, ಕುಣಿತ ಮಣಿತಗಳೆಲ್ಲ ಸೂತ್ರಧಾರಿಯಾದ ನಿನ್ನ ಮರ್ಜಿಯಂತೆ. ಆದ್ದರಿಂದ ನೀನು ಆಡಿಸಿದಂತೆ ನಾವು ಆಡುತ್ತೇವೆ; ತಪ್ಪುಒಪ್ಪುಗಳೆಲ್ಲ ನಿನಗೆ ಸೇರತಕ್ಕವೇ, ನಿನಗೆ ಅರ್ಪಿತವೇ ಎಂಬ ದರ್ಶನ ಈ ಕೀರ್ತನೆಯ ನಾಡಿಮಿಡಿತವಾಗಿದೆ.

ತಾನು ಮಾಡುವ ಕರ್ಮಕ್ರಿಯೆಗಳೆಲ್ಲಾ ಭಗವಂತನಿಗೇ ಅರ್ಪಿತವಾಗಬೇಕೆಂಬ ಭಾವ ಬಸವೇಶ್ವರರ ಈ ಕೆಳಗಿನ ವಚನದಲ್ಲಿ ಸುಂದರವಾಗಿ ಮೂಡಿ ಬಂದಿದೆ[22]:

**ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ,**

**ಮನದಲ್ಲಿ ನಿಮ್ಮ ನೆನಹು ತುಂಬಿ; ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ;**

**ಕೂಡಲಸಂಗಮದೇವ, ನಿಮ್ಮ ಚರಣಕಮಲದೊಳಗಾನು ತುಂಬಿ!**

ಸರ್ವಸಮರ್ಪಣಾಭಾವಕ್ಕೆ ಕೈಗನ್ನಡಿಯಂತಿರುವ ಬಸವೇಶ್ವರರ ಮತ್ತೊಂದು ವಚನ ಹೀಗಿದೆ[23]:

**ಎನ್ನ ಕಾಯವ ದಂಡಿಗೆಯ ಮಾಡಯ್ಯ, ಎನ್ನ ಶಿರವ ಸೋರೆಯ ಮಾಡಯ್ಯ,**

**ಎನ್ನ ನರವ ತಂತಿಯ ಮಾಡಯ್ಯ, ಎನ್ನ ಬೆರಳ ಕಡ್ಡಿಯ ಮಾಡಯ್ಯ,**

**ಬತ್ತೀಸ ರಾಗವ ಹಾಡಯ್ಯ, ಉರದಲೊತ್ತಿ ಬಾರಿಸು ಕೂಡಲ ಸಂಗಮದೇವ**

ಭಕ್ತನು ಅಭ್ಯಸಿಸುವ ನಿರೋಧದಲ್ಲಿ ಸ್ವಾರ್ಥದ ಗಂಧವೂ ಇರುವುದಿಲ್ಲ. ಇಂತಹ ಕರ್ಮವನ್ನು ಭಗವದ್ಗೀತೆಯಲ್ಲಿ (3.18) ಹೀಗೆ ವಿವರಿಸಿದೆ.

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥

'ಅವನಿಗೆ ಕರ್ಮವನ್ನು ಮಾಡುವುದರಿಂದಾಗಲೀ ಮಾಡದಿರುವುದರಿಂದಾಗಲೀ ಯಾವ ಪ್ರಯೋಜನವು ಇಲ್ಲ. ಮತ್ತು ಇವನಿಗೆ ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ತನ್ನ ಪ್ರಯೋಜನಕ್ಕಾಗಿ ಆಶ್ರಯಿಸುವ ಸಂಭವವೂ ಇರುವುದಿಲ್ಲ'.
ಬಸವೇಶ್ವರರು ತಮ್ಮ ಪ್ರಸಿದ್ಧವಾದ ವಚನದಲ್ಲಿ ಕರ್ತವ್ಯವನ್ನು ಮಾಡಿಯೂ ಮಾಡದಂತಿರುವ ವಿಧಾನವನ್ನು ಹೀಗೆ ಹೇಳುತ್ತಾರೆ[24]

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ.
ಮಾಡಿದೆನೆನ್ನದಿರಾ ಲಿಂಗಕ್ಕೆ । ಮಾಡಿದೆನೆನ್ನದಿರಾ ಜಂಗಮಕ್ಕೆ ।
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿದ್ದ ನೀವ ಕೂಡಲಸಂಗಮದೇವ ॥

10 ನೇ ಹಾಗೂ 11 ನೇ ಸೂತ್ರದಲ್ಲಿ (ಅನ್ಯಾಶ್ರಯಾಣಾಂ ತ್ಯಾಗೋಽನನ್ಯತಾ ॥ ೧೦ ॥, ಲೋಕವೇದೇಷು ತದನುಕೂಲಾಚರಣಂ ತದ್ವಿರೋಧಿಷು ಉದಾಸೀನತಾ ಚ ॥ ೧೧ ॥) ನಾರದರು 'ಅನನ್ಯತೆಗೆ ವಿರುದ್ಧವಾಗಿರುವ, ಅನನ್ಯತೆಯನ್ನು ಕೆಡಿಸುವ, ವಿಷಯಗಳ ಬಗೆಗೆ ಉದಾಸೀನನಾಗಿರುವುದು'. ಎಂದು ಹೇಳಿದ್ದಾರೆ. ಎಂದರೆ, 'ಭಗವದ್‌ಭಕ್ತಿಗೆ ಅನುಕೂಲವಾಗಿರುವ ವಿಷಯಗಳ ಕಡೆಗೆ ಮನಸ್ಸನ್ನು ಹರಿಸುವುದು, ಅಂತಹ ಕರ್ಮಗಳನ್ನೇ ಆಚರಿಸುವುದು' ಎಂದು ಅಭಿಪ್ರಾಯ. ತಾವೇನೇ ಮಾಡಿದರೂ ಅದು ಹರಿಸೇವೆಯೇ ಆಗಬೇಕು ಎನ್ನುವ ಭಾವ ಪುರಂದರದಾಸರ ಈ ಉಗಾಭೋಗದಲ್ಲಿ ಹರಳುಗಟ್ಟಿದೆ'[25].

ಹಾಡಿದರೆನ್ನೊಡೆಯನ ಹಾಡುವೆ ಬೇಡಿದರೆನ್ನೊಡೆಯನ ಬೇಡುವೆ
ಒಡೆಯನಿಗೆ ಒಡಲನು ತೋರುತ ಎನ್ನಯ
ಒಡಲಿನ ಬಿನ್ನಹ ಮಾಡುವೆ ।
ಒಡೆಯ ಪುರಂದರ ವಿಠಲರಾಯನ ।
ಅಡಿಗಳನು ಸಾರಿ ಬದುಕುವೆ ಸೇರಿ ಬದುಕುವೆ ॥೪॥

ಅದೇ ರೀತಿ ಇನ್ನೊಂದು ಉಗಾಭೋಗದಲ್ಲಿ 'ಅನ್ಯಥಾ ಶರಣಂ ನಾಸ್ತಿ, ತ್ವಮೇವ ಶರಣಂ ಮಮ' ಎಂಬ ಭಾವ ಹೃದಯಂಗಮವಾಗಿ ವ್ಯಕ್ತವಾಗಿದೆ[26].

ನಿನ್ನನೆ ಪಾಡುವೆ ನಿನ್ನನೆ ಪೊಗಳುವೇ ನಿನ್ನನೆ ಬೇಸರಿಸುವೆ ।
ನಿನ್ನ ಕಾಲನು ಪಿಡಿವೆ ನಿನ್ನ ಹಾರೈಸುವೆ ।
ನಿನ್ನ ತೊಂಡರಿಗಡ ಕೈ ಕೊಡುವೆ ॥
ನಿನ್ನಂತೆ ಸಾಕಬಲ್ಲ ದೇವರಿನ್ನುಂಟೆ ।
ಘನ್ನ ಪುರಂದರವಿಠಲ ದೇವರ ದೇವ ॥೨೬॥

ಭಗವಂತನೊಂದಿಗೆ ಪುರಂದರದಾಸರಿಗೆ ಇರುವ ಸಲುಗೆ ಈ ಕೆಳಗಿನ ಉಗಾಭೋಗದಲ್ಲಿ ವ್ಯಕ್ತವಾಗಿದೆ[27]:

ಎನ್ನ ಕಡೆ ಹಾಯಿಸುವುದು ನಿನ್ನ ಭಾರ ।
ನಿನ್ನ ನೆನೆಯುತ್ತಲಿಹುದು ಎನ್ನ ವ್ಯಾಪಾರ ।
ಎನ್ನ ಸತಿಸುತರಿಗೆ ನೀನೇ ಗತಿ ।
ನಿನ್ನನೊಪ್ಪಿಸುವುದು ಎನ್ನ ನೀತಿ ।
ಎನ್ನ ಪಡಿಯಿಕ್ಕಿ ಸಲಹುವುದು ನಿನ್ನ ಧರ್ಮ ।
ನಿನ್ನ ಅಡಿಗೆರಗುವುದು ಎನ್ನ ಕರ್ಮ ।
ಎನ್ನ ತಪ್ಪುಗಳನೆಣಿಸುವುದು ನಿನ್ನದಲ್ಲ ।
ನಿನ್ನ ಮರೆತು ಬದುಕುವುದು ಎನ್ನದಲ್ಲ ।
ನೀನಲ್ಲದೆ ಇನ್ನಾರಿಗೆ ಮೊರೆಯಿಡುವೆ ಪುರಂದರವಿಠಲ ॥೨೬॥

ನಿಜ ಭಕ್ತನಲ್ಲಿ ಭಗವಂತನನ್ನು ಆಶ್ರಯಿಸುವ ತೀವ್ರತೆ ಎಂತಹದು ಎನ್ನುವುದು ಈ ಕೆಳಗಿನ ಉಗಾಭೋಗದಲ್ಲಿ ಮನದಟ್ಟಾಗುವುದು. 'ಭಕ್ತಿಯೆಂಬ ಸಂಕೋಲೆಯಿಂದ ಕಟ್ಟಿ, ಭಗವದ್ಧಾಮವಾದ ವೈಕುಂಠದುರ್ಗದಲ್ಲಿ, ಸೆರೆಯಲ್ಲಿರಿಸು' ಎಂದು ಪ್ರಾರ್ಥಿಸುತ್ತಾರೆ ಪುರಂದರದಾಸರು[28]:

ನಿನ್ನ ನಾಮ ಭಂಡಾರ ಕದ್ದ ಕಳ್ಳನು ನಾನು ।
ನಿನ್ನ ಭಕುತಿಯೆಂಬ ಸಂಕೋಲೆಯನಿಕ್ಕಿ ।
ನಿನ್ನ ದಾಸರ ಕೈಯಲ್ಲಿ ಒಪ್ಪಿಸಿಕೊಟ್ಟು ।
ನಿನ್ನ ಮುದ್ರಿಕೆಯಿಂದ ಕಾಸಿ ಒಡೆಸು ದೇವ ।
ನಿನ್ನ ವೈಕುಂಠ ದುರ್ಗದೊಳಗೆನ್ನ ಸೆರೆಯನಿಟ್ಟು
ಸಲಹೊ ಪುರಂದರವಿಠಲ ॥೪೦॥

ತಮ್ಮ ಉದ್ಗ್ರಂಥ 'ಜ್ಞಾನಸಿಂಧು'ವಿನಲ್ಲಿ ನಿಷ್ಕಾಮಕರ್ಮದ ಮಾಹಿತಿಯನ್ನು ಶ್ರೀ ಚಿದಾನಂದ ಅವಧೂತರು ಸರಳವಾಗಿ ನಿರೂಪಿಸಿರುವರು[29]:

ಕರ್ಮವದು ಬಿಡಬಾರದೈ ಆ ।ಕರ್ಮವದು ಅನಾದಿಯದರಿಂ ।
ಕರ್ಮದೊಳು ಸತ್ಕರ್ಮವುತ್ತಮವದುವೆ ಕಾರಣವು ॥
ಬ್ರಹ್ಮವನೆ ತಾವೈದಲಿಕೆ ಸಮ್ಮತದ ಮಾರ್ಗವಿದು ವರನಿ ।
ಷ್ಕರ್ಮನಾಗಿಯೆ ಮಾಡುವಗೆ ಕೇಡಿಲ್ಲ ಕೇಳೆಂದ ॥
ಕಾಮ್ಯಕರ್ಮದಿ ಸ್ವರ್ಗವಾಹದು । ಕಾಮ್ಯ ಬಿಟ್ಟಹ ಕರ್ಮದಿಂದಲಿ ।
ನಿರ್ಮಳದ ನಿಜ ಮುಕ್ತಿಯಾಹವು ಜನ್ಮಹರವಾಗಿ ॥
ಸಮ್ಮತವುಯಿದು ಸಕಲ ಶಾಸ್ತ್ರದ । ಸಮ್ಮತವು ಇದು ಪ್ರಬಲ ಶ್ರುತಿಗಳ ।
ಸಮ್ಮತವುಯಿದು ಪ್ರಬಲ ಸ್ಮೃತಿಗಳ ಸಹಜವಿದುಯೆಂದಾ ॥

ಧರ್ಮದಿಂದ ಆಚರಿಸುವ ಕಾಮ್ಯಕರ್ಮಗಳಿಂದ ಸ್ವರ್ಗಾದಿ ಉತ್ತಮ ಲೋಕಗಳು ಪ್ರಾಪ್ತವಾಗುವವು, ಆದರೆ ನಿಷ್ಕಾಮಕರ್ಮದಿಂದ ಚಿತ್ತಶುದ್ಧಿಯಾಗಿ ತನ್ಮೂಲಕ ನಿಜಮುಕ್ತಿ ಪ್ರಾಪ್ತವಾಗುವುದು ಎಂದು ಶಾಸ್ತ್ರದ ಸಾರವನ್ನು ಮೇಲಿನ ಕೀರ್ತನೆಯಲ್ಲಿ ನಿರೂಪಿಸಿದ್ದಾರೆ, ಚಿದಾನಂದ ಅವಧೂತರು. ಇದೇ ಗ್ರಂಥದ 'ಸತ್ಕರ್ಮತ್ಯಾಗ' ಎನ್ನುವ ಅಧ್ಯಾಯದಲ್ಲಿ ಸಾಧಕನು ಸಾಧನೆಯ(ಯೋಗದ) ಉತ್ತುಂಗಕ್ಕೇರಿದಾಗ ಸಹಜವಾಗಿ ಮಾಗಿದ ಹಣ್ಣು ತೊಟ್ಟು ಕಳಚಿ ಮರದಿಂದ ಬೇರ್ಪಡುವಂತೆ ಕರ್ಮವನ್ನು ತ್ಯಾಗ ಮಾಡುವನು. ಆದರೆ ಯೋಗ ಒಲಿಯದೆ ಕರ್ಮತ್ಯಾಗ ಮಾಡುವುದರಲ್ಲಿ ಹುರುಳಿಲ್ಲ ಎಂದು ಕೆಳಗಿನ ಕೀರ್ತನೆಯಲ್ಲಿ ನಿರೂಪಿಸಿದ್ದಾರೆ ಚಿದಾನಂದ ಅವಧೂತರು. (ಅದೇ, ಪುಟ 21)

**ಯೋಗ ಬಲಿದೇ ಕರ್ಮವನು ತಾ।**

**ನಾಗಿ ತ್ಯಜಿಸುವದದುವೆ ಉತ್ತಮ ।**

**ಯೋಗ ಬಲಿಯದೆ ಕರ್ಮ ತ್ಯಜಿಸುವದದುವೆ ಮಧ್ಯಮವು ।**

**ಈಗಳರಿ ಯೋಗಕ್ಕೆ ಉಪದ್ರಂ ।**

**ದಾಗ ತ್ಯಜಿಸುತ್ತಿಹರು ಕರ್ಮವ ।**

**ಆಗ ಈಗಲು ಯೇನು ಕರ್ಮತ್ಯಾಗ ಸುಖವೆಂದ ॥**

ಕರಾವಳಿ ಕರ್ನಾಟಕದ ಪ್ರಸಿದ್ಧ ಹರಿದಾಸರಾದ ಪಾವಂಜೆ ಲಕ್ಷೀನಾರ್ಣಪ್ಪಯ್ಯನವರು (1854–1924) ರಚಿಸಿದ ಸುಪ್ರಸಿದ್ಧ ಕೀರ್ತನೆಯಲ್ಲಿ ವಿಷಯಗಳೆಡೆಗೆ ಔದಾಸೀನ್ಯ ಹೆಚ್ಚಲು 'ಮನವು ನಿನ್ನಲಿ ನಿಲ್ಲಲಿ' ಎಂದು ಪ್ರಾರ್ಥಿಸುತ್ತಾರೆ.[30]

**ಮನವು ನಿನ್ನಲಿ ನಿಲ್ಲಲಿ ಅನುದಿನ ನಿನ್ನ ನೆನೆದು ।**

**ಮನವು ನಿನ್ನಲಿ ನಿಲ್ಲಲಿ ॥ಪ॥**

**ದುಃಖ ಸುಖ ಲೆಕ್ಕಿಸದೆ ಮುಖ್ಯಫಲ ಮುಂದರಿಸೆ ।**

**ಮಿಕ್ಕುತ್ತ ಸೊಕ್ಕಿ ಮೋಹಕ್ಕೆ ಸಿಕ್ಕದೆ ॥೧॥**

**ಭಕ್ತಿ ಸುವಿರಕ್ತಿಜ್ಞಾನ ಮುಕ್ತಿಗೆ ಮುಖ್ಯ ಕಾರಣ ।**

**ಚಿತ್ತದೊಳಿತ್ತೆಲ್ಲ ಹೊತ್ತು ಹೊತ್ತಿಗೆ ॥೨॥**

**ಪ್ರಿಯ ಶ್ರೀಲಕ್ಷುಮಿ ನಾರಾಯಣ ಪರಾಯಣನ ।**

**ಧೈರ್ಯದಂತರ್ಯ ಗಾಂಭೀರ್ಯ ಭಾವದಿ ॥೩॥**

ಇನ್ನು ವಚನಕಾರರ ಕೃತಿಗಳನ್ನು ಗಮನಿಸಿದರೆ **'ಕಾಯಕವೇ ಕೈಲಾಸ'** ಎಂದರು ಬಸವೇಶ್ವರರು. **ಮಾಡುವ ಕಾಯಕವು ಪರಿಶುದ್ಧವಾಗಿರಬೇಕು.ಶಿವ ಮೆಚ್ಚುವಂತಿರಬೇಕು** ಎಂಬುದು ವಚನಕಾರರ ನಿಲುವು

ಷಣ್ಮುಖಸ್ವಾಮಿಗಳು (ಅಖಂಡೇಶ್ವರರು) ಒಂದು ವಚನದಲ್ಲಿ ಹೇಳುತ್ತಾರೆ[31]:

**ಭಕ್ತನ ನಡೆ ಶುದ್ಧ ಭಕ್ತನ ಗುರಿ ಶುದ್ಧ. ಭಕ್ತನ ತನು ಶುದ್ಧ,**

**ಭಕ್ತನ ಮನ ಶುದ್ಧ, ಭಕ್ತನ ಭಾವ ಶುದ್ಧ, ಭಕ್ತನ ಸರ್ವಕ್ರಿಯೆಯೆಲ್ಲಾ ಶುದ್ಧ. ಅಖಂಡೇಶ್ವರಾ, ನೀ ಒಲಿದ ಸದ್ಭಕ್ತನ ಕಾಯಕವೇ ಕೈಲಾಸವಯ್ಯ**

ಹೀಗೆ ಪರಿಶುದ್ಧನಾದ ಭಕ್ತನಲ್ಲಿ ಕಾಮಕ್ರೋಧಾದಿಗಳಿಲ್ಲವೇ? ಎಂಬ ಪ್ರಶ್ನೆಗೆ ಚೆನ್ನಬಸವಣ್ಣ ಈ ವಚನದಲ್ಲಿ ಉತ್ತರವನ್ನು ಕೊಡುತ್ತಾನೆ[32] :

**ಶಿವಭಕ್ತಿಯುಳ್ಳವರಿಗೆ ಕಾಮ ಬೇಡ, ಕ್ರೋಧ ಬೇಡ, ಲೋಭ ಬೇಡ, ಮೋಹ ಬೇಡ, ಮದ ಬೇಡ, ಮತ್ಸರ ಬೇಡ, ಶಿವ ಭಕ್ತಿಯುಳ್ಳವರಿಗೆ ಕಾಮ ಬೇಕು, ಕ್ರೋಧ ಬೇಕು, ಲೋಭ ಬೇಕು, ಮೋಹ ಬೇಕು, ಮದ ಬೇಕು, ಮತ್ಸರ ಬೇಕು, ಬೇಕೆಂಬುದಕ್ಕಾವ ಗುಣ? ಬೇಡೆಂಬುದಕ್ಕಾವ ಗುಣ? ಕಾಮಬೇಕು ಲಿಂಗದಲ್ಲಿ, ಕ್ರೋಧ ಬೇಕು ಕರಣಂಗಳಲ್ಲಿ, ಲೋಭ ಪಾದೋದಕ ಪ್ರಸಾದದಲ್ಲಿ, ಮೋಹಬೇಕು ಗುರುಲಿಂಗಜಂಗಮದಲ್ಲಿ, ಮದಬೇಕು ಶಿವಾಚಾರ ಘನವೆಂಬಲ್ಲಿ. ಮತ್ಸರ ಬೇಕು ಹೊನ್ನು, ಹೆಣ್ಣು, ಮಣ್ಣಿನಲ್ಲಿ, ಇಂತೀ ಷಡ್ಗುಣವಿರಬೇಕು. ಬೇಡವೆಂಬುದಕ್ಕಾವ ಗುಣ? ಕಾಮಬೇಡ ಪರಸ್ತ್ರೀಯರಲ್ಲಿ, ಮದ ಬೇಡ ಶಿವಭಕ್ತರಲ್ಲಿ, ಕ್ರೋಧ ಬೇಡ ಗುರುವಿನಲ್ಲಿ, ಲೋಭ ಬೇಡ ತನುಮನದಲ್ಲಿ, ಮೋಹ ಬೇಡ ಸಂಸಾರದಲ್ಲಿ, ಮತ್ಸರ ಬೇಡ ಸಕಲ ಪ್ರಾಣಿಗಳಲ್ಲಿ ಇಂತೀ ಷಡ್ವಿಧ ಗುಣವನರಿದು ಮರೆಯಬಲ್ಲಡೆ ಆತನೆ ಸದ್ಭಕ್ತ ಕಾಣಾ ಕೂಡಲಚೆನ್ನಸಂಗಮದೇವ.**

ಮೇಲೆ ಹೇಳಿದ ಷಡ್ವಿಧವಾದ (ಬೇಕು ಬೇಡಗಳನ್ನು) ಗುಣವನ್ನು ಅರಿತು ವ್ಯವಹರಿಸುವವನೇ ಸದ್ಭಕ್ತ ಎನ್ನುತ್ತಾನೆ. ಚೆನ್ನಬಸವಣ್ಣ ತನ್ನ ಸರ್ವಸ್ವವನ್ನೂ ಭಗವಂತನಿಗೆ ಸಮರ್ಪಿಸಿಕೊಂಡ ಭಕ್ತನ ಭಾವವನ್ನು
ಕೆಳಗಿನ ವಚನದಲ್ಲಿ ವ್ಯಕ್ತಪಡಿಸುತ್ತಾರೆ ಅಖಂಡೇಶ್ವರರು[33].

**ಮಾಡುವ ತನುವು ನೀವೆ ಆದಿರಿ, ಕೊಡುವ ಮನವು ನೀವೆ ಆದಿರಿ, ನೀಡುವ ಧನವು ನೀವೆ ಆದಿರಿ. ಅಖಂಡೇಶ್ವರಾ, ನಾನೂ ಇಲ್ಲ ; ನೀವೂ ಇಲ್ಲ ; ಏನೇನೂ ಇಲ್ಲ.**

ಇನ್ನು ಬರೀ ಬಾಯ್ಮಾತಿಗೆ ತನುಮನವರ್ಪಿಸಿದೆ. ಮನವನರ್ಪಿಸಿದೆ. ಎಂದು ಬಾಯ್ಮಾತಿಗೆ ಬೊಗಳೆ ಬಿಡುವವರನ್ನು ಹಡಪದಪ್ಪಣ್ಣ ತನ್ನ ವಚನದಲ್ಲಿ ತರಾಟೆಗೆ ತೆಗೆದುಕೊಳ್ಳುತ್ತಾನೆ[34] :

**ತನುವ ಕೊಟ್ಟು ಭಕ್ತರಾದೆವೆಂಬರು. ಮನವ ಕೊಟ್ಟು ಭಕ್ತರಾದೆವೆಂಬರು, ಧನವ ಕೊಟ್ಟು ಭಕ್ತರಾದೆವೆಂಬರು. ತನುಮನಧನವನೆಂತು ಕೊಟ್ಟಿರಿ ಹೇಳಿರಣ್ಣಾ? ....................ತನುವ ಕೊಟ್ಟುದಾವುದೆಂದರೆ : ಹುಸಿ ಹೋದರೆ ಉಟ್ಟೇನು, ಕೊಟ್ಟೇನೆಂಬ ಗುಣವಳಿದರೆ, ತನುವೆ ಗುರುವಾಯಿತು. ಮನವ ಕೊಟ್ಟುದಾವುದೆಂದರೆ: ವ್ಯಾಕುಳವೆಲ್ಲಾ ಅಳಿದ ನಿರಾಕುಳವಾಗಿ ನಿಂದರೆ ಮನವೇ ಲಿಂಗವಾಯಿತು. ಧನವಕೊಟ್ಟಹೆನೆಂಬುದಾವುದೆಂದರೆ: ಇಂದಿಗೆ ನಾಳಿಗೆ ಎಂಬ ಸಂದೇಹದ ಭಾವಕ್ಕೆ ಭಯಕ್ಕೆ ಭವವಳಿದುದೇ ಜಂಗಮವಾಯಿತು.**
**ಇದನರಿಯದೇ ಏನೊಂದು ಮಾಡಿದರೂ ನೀಡಿದರೂ ಕೊಟ್ಟರೂ ಕೊಂಡರೆಯೂ ವಾಯಕ್ಕೆ ವಾಯ ಬಸವಪ್ರಿಯ ಕೂಡಲಚೆನ್ನಬಸವಣ್ಣ**

ನಿಜವಾಗಿ ತನುವನ್ನು ಅರ್ಪಣೆ ಮಾಡಿದ ಸ್ಥಿತಿ ಯಾವುದೆಂದರೆ : ತಾನು ಉಡುತ್ತೇನೆ ತೊಡುತ್ತೇನೆ ಎಂಬ ದೇಹ ಭಾವವು ಮನಸ್ಸಿನಿಂದ ಅಳಿದರೆ, ದೇಹವೇ ಗುರುವಾದ ಸ್ಥಿತಿ, ಮನವನ್ನು ಅರ್ಪಿಸಿದ ಸಂಕೇತ ಯಾವುದೆಂದರೆ :

ಮನಸ್ಸಿನ ಸಂಕಲ್ಪ ವಿಕಲ್ಪಗಳು ನಿರಾಳವಾಗಿ ಲಿಂಗರೂಪಿಯಾಗುವುದು, ಧನವನ್ನು ಅರ್ಪಿಸಿದುದರ ಕುರುಹು ಯಾವುದೆಂದರೆ ಇಂದಿಗೇನು ಮಾಡುವುದು, ನಾಳೆಗೇನು ಮಾಡುವುದು ಎಂಬ ಚಿಂತೆ, ಭಯ ಹುಟ್ಟದೇ ಇರುವ ಜಂಗಮ ಸ್ಥಿತಿ, ಇದ್ಯಾವುದೂ ಸಿದ್ಧಿಸದೆ ಅನ್ಯರನ್ನು ಮೆಚ್ಚಿಸುವುದಕ್ಕೋಸ್ಕರ, ಗಮನ ಸೆಳೆಯುವುದಕ್ಕೋಸ್ಕರ ತನುವರ್ಪಿಸಿ ಭಕ್ತನಾದೆ, ಮನವರ್ಪಿಸಿ ಭಕ್ತನಾದೆ ಎನ್ನುವುದು ಕಪಟವೆನಿಸುತ್ತದೆ ಎಂದು ಹೇಳುತ್ತಾರೆ ಮೇಲಿನ ವಚನದಲ್ಲಿ ಹಡಪದಪ್ಪಣ್ಣನವರು. ಇನ್ನು ನಾರದರು ಸೂಚಿಸಿರುವಂತಹ 'ನಿರೋಧ'ವು ಪ್ರಕೃತ ದಾಸಪರಂಪರೆಯ ಕೊಂಡಿಯೆನಿಸಿರುವ, ಸುವಿಖ್ಯಾತ ಕೀರ್ತನಕಾರರಾದ ಸಂತ ಭದ್ರಗಿರಿ ಅಚ್ಯುತದಾಸರು ಒಂದು ಕೀರ್ತನೆಯಲ್ಲಿ ಈ ರೀತಿವ್ಯಾಖ್ಯಾನಿಸಿದ್ದಾರೆ.[34]

**ಮಾಡು ಕರ್ಮವ ಯೋಗಿಯಾಗು । ಮಾಡಿ ಹರಿಗರ್ಪಿಸಿ ಚರಣಕೆ ಬಾಗು ॥ಪ॥**
**ರೂಢಿಯೊಳುತ್ತಮ ಕರ್ಮಕೆ ಫಲವು । ಕಾಡೊಳಗಿದ್ದರು ಪಡೆವೆ ನಿಶ್ಚಯವು ।**
**ಮಾಡದೆ ಮಾಡಿದ ಜ್ಞಾನಿಯಾಗು । ಮಾಡಿಯೂ ಮಾಡದೆ ಕರ್ಮವ ನೀಗು ॥೧॥**
**ದೃಢ ಮಾಡು ರಾಮನ ಧ್ಯಾನ । ಪಡೆವೆ ಮಹಾಫಲವಿಲ್ಲನುಮಾನ ।**
**ಕೊಡದಿರುವನೆ ಹರಿ ಕರುಣಾನಿಧಾನ । ಮೃಡವಂದಿತ ಶ್ರೀ ಮೂಲನಾರಾಯಣ ॥೨॥**

ನಿಷ್ಕಾಮ ಕರ್ಮವನ್ನು ಮಾಡಿದರೂ ಅದನ್ನು ಭಗವದರ್ಪಿತ ಬುದ್ಧಿಯಿಂದ ಮಾಡಿಲ್ಲವಾದರೆ ಅದು ಶೋಭಿಸಲಾರದು(ಅದು ಅಹಂಕಾರಕ್ಕೆ ಕಾರಣವಾಗಬಹುದು). ಹಾಗಾಗಿ ಕರ್ಮವನ್ನು ಮಾಡಿ ಅದನ್ನು ಹರಿಗರ್ಪಿಸಿ ಚರಣಕ್ಕೆ ಬಾಗು ಎಂದು ದಾಸರು ನಿರೂಪಿಸಿದ್ದಾರೆ. ಮೇಲಿನ ಕೀರ್ತನೆಯನ್ನು ವ್ಯಾಖ್ಯಾನಿಸುವಾಗ ಶ್ರೀ ಗೋಪಾಲದಾಸರ ಸುಳಾದಿಯನ್ನು ಉಲ್ಲೇಖಿಸಿದ್ದಾರೆ.[35] **ಹರಿಗರ್ಪಿಸದೇ ಆವ ಕರ್ಮವ ಮಾಡಿದರೂ ಹುರಿದು ಬಿತ್ತಿದ ಬೀಜ ನೀರೊಳು ಹೋಮ ಮಾಡಿದ ತೆರನಂತೆ ॥** ಎಂದು. ಶ್ರೀಮನ್ಮಧ್ವಾಚಾರ್ಯರು ದ್ವಾದಶ ಸೂತ್ರದಲ್ಲಿ 3ನೆಯ ಅಧ್ಯಾಯದಲ್ಲಿ ವಿಹಿತ ಕರ್ಮವನ್ನು ಮಾಡುವ ವಿಧಾನವನ್ನು ಹೀಗೆ ಹೇಳುತ್ತಾರೆ.[36]

**ಕುರುಭುಂಕ್ಷ ಚ ಕರ್ಮ ನಿಜಂ ನಿಯತಂ ಹರಿಪಾದ ವಿನಮ್ರಧಿಯಾ ಸತತಮ್ ।**
**ಹರಿರೇವ ಪರೋ ಹರಿರೇವ ಗುರುರ್ಹರಿರೇವ ಜಗತ್ಪಿತೃಮಾತೃಗತಿಃ ॥೧॥**

'ನಿರಂತರದಲ್ಲಿಯೂ ಶ್ರೀ ಹರಿಯ ಪಾದಗಳಲ್ಲಿ ದೃಢವಾದ ಭಕ್ತಿಯಿಂದ ಕೂಡಿದ ಮನಸ್ಸಿನಿಂದ, ಸ್ವಸ್ವಾಶ್ರಮಕ್ಕೆ ವಿಹಿತವಾದ ಕರ್ಮಗಳನ್ನು ಅವನ (ಭಗವಂತನ) ಪ್ರೀತಿಗಾಗಿ ಆಚರಿಸು.

ಕರ್ಮಗಳನ್ನು ಭಕ್ತಿಯಿಂದ ಅವನಿಗೆ ಸಮರ್ಪಣೆ ಮಾಡಿ ಅದರ ಫಲವನ್ನು ಅನುಭವಿಸು ಏಕೆಂದರೆ ಹರಿಯೇ ಪರದೇವತೆ, ಪಾಲಕ ಮತ್ತು ಹಿತೋಪದೇಶಕ ಗುರು, ಜಗತ್ತಿಗೆ ಉತ್ಪಾದಕನಾದ್ದರಿಂದ ಹರಿಯೇ ತಂದೆಯು, ಪೋಷಕನಾದ್ದರಿಂದ ತಾಯಿಯು ಹಾಗೂ ಆಶ್ರಯನಾದ್ದರಿಂದ ಗತಿಯೂ ಆಗಿದ್ದಾನೆ.' ಸಂತ ಭದ್ರಗಿರಿ ಅಚ್ಯುತದಾಸರ ಮೇಲಿನ ಕೀರ್ತನೆಯಲ್ಲಿ ಮೊದಲನೇ ಚರಣದಲ್ಲಿ

ಬರುವ ಸಾಲು '**ಮಾಡದೇ ಮಾಡಿದ ಜ್ಞಾನಿಯಾಗು । ಮಾಡಿಯೂ ಮಾಡದೆ ಕರ್ಮವ ನೀಗು**' ಈ ಸಾಲಿನ ವ್ಯಾಖ್ಯಾನವನ್ನು ಅವರು ಹೀಗೆ ಮಾಡಿದ್ದಾರೆ.

"ಇಲ್ಲಿ ಮಾಡದೇ ಮಾಡುವುದು ಎಂದರೆ ಅದು ಜ್ಞಾನಿಯ ಕರ್ಮ. ಜ್ಞಾನಿಯು ತಾನೇನನ್ನೂ ಮಾಡುವುದಿಲ್ಲ. ಆದರೆ ಆತನು ಜಗತ್ತನ್ನೇ ಕರ್ಮದಲ್ಲಿ ತೊಡಗಿಸುತ್ತಾನೆ. ಒಂದು ಯಂತ್ರದ ಚಕ್ರವು ಅತೀ ವೇಗದಲ್ಲಿ ತಿರುಗುತ್ತಾ ಇದ್ದರೆ ಅದು ಸುಮ್ಮನಿದ್ದಂತೆ ನಮಗೆ ಕಾಣಿಸುವುದು. ಆದರೆ ಅದನ್ನು ಮುಟ್ಟಿದರೆ ಆಗ ಅದರ ವೇಗ ತಿಳಿಯುತ್ತದೆ. ಜ್ಞಾನಿಯ ಕರ್ಮ ಅಂತಹದು. ರಾಮ ಮಾಡದೇ ಮಾಡಿದವ, ಭರತ ಮಾಡಿಯೂ ಮಾಡದವ. ಎಲ್ಲಾ ಕರ್ಮಗಳನ್ನು 'ಈಶ್ವರಾರಾಧನೆ' ಎಂದು ಶ್ರದ್ಧೆಯಿಂದ ಮಾಡಿ ಅದನ್ನು ಜಗದೀಶ್ವರನಿಗೆ ಅರ್ಪಿಸಿದ್ದನು,.. ಎಲ್ಲಾ ಭೋಗಗಳ ಮಧ್ಯದಲ್ಲಿದ್ದರೂ ವಿರಕ್ತನಾಗಿದ್ದ, ಹಾಗೆಯೇ ಕರ್ಮಯೋಗಿಯಾದವನು ವಿಷಯಗಳಲ್ಲಿ ಉದಾಸೀನ ಹೊಂದಿ ಕೇವಲ ಭಗವಂತನ ಸೇವೆಯೆಂಬ ಭಾವನೆಯಿಂದ ಎಲ್ಲಾ ಕರ್ಮಗಳನ್ನು ದಕ್ಷನಾಗಿ ಮಾಡಬೇಕು."[37]

ನಾವು ಮಾಡುವ ಪ್ರತಿಯೊಂದು ಕರ್ತವ್ಯ ಕರ್ಮಗಳನ್ನು ಭಗವಂತನ ಪೂಜೆ, ಅಥವಾ ಸೇವೆಯಾಗಿಸುವ ವಿಧಾನವನ್ನು ನಿರೋಧವನ್ನು ಅಭ್ಯಸಿಸುವ ವಿಧಾನವನ್ನು ಶ್ರೀ ಪುರಂದರದಾಸರು ಹೀಗೆ ಹೇಳಿದ್ದಾರೆ.[38]

**ಸಕಲವೆಲ್ಲವು ಹರಿಸೇವೆಯೆನ್ನಿ । ರುಕುಮಿಣಿ ಪತಿಯಲ್ಲದನ್ಯವಿಲ್ಲವೆನ್ನಿ ॥ಪ॥**

**ನುಡಿವುದೆಲ್ಲವು ನಾರಾಯಣನ ಕೀರ್ತನೆಯೆನ್ನಿ ।**

**ನಡೆವುದೆಲ್ಲವು ದೇವರ ಯಾತ್ರೆಯೆನ್ನಿ ॥**

**ಕೊಡುವ ದಾನವು ಕಾಮಜನಕಗರ್ಪಿತವೆನ್ನಿ ।**

**ಎಡೆಯ ಅನ್ನವು ಹರಿಯ ಪ್ರಸಾದವೆನ್ನಿ ॥೧॥**

..............................

**ಅಣುರೇಣು ತೃಣಕಾಷ್ಠ ಪರಿಪೂರ್ಣನಹುದೆನ್ನಿ ।**

**ಎಣಿಸಲಾಗದವನನಂತಮಹಿಮನೆನ್ನಿ ॥**

**ಸೆಣಸುವ ದೈತ್ಯರ ಗಂಡ ಪ್ರಚಂಡನೆನ್ನಿ ।**

**ಫಣಿಶಾಯಿ ಪುರಂದರವಿಠಲನೇ ಪರದೈವವೆನ್ನಿ ॥೫॥**

---

**ಟಿಪ್ಪಣಿಗಳು**

1. ದೇ.ನಾ.ಭ., ಪುಟ 19
2. (ಅದೇ), ಪುಟ 20
3. (ಅದೇ), ಪುಟ 22
4. (ಅದೇ), ಪುಟ 23
5. (ಅದೇ), ಪುಟ 23

6. 'Wish, desire, Affection, Love or desire of sensual enjoyments considered as one of the four ends of life (purushartha)' – the Students Sanskrit – English Dictionary. Page No. 143 V.S. Apte Motilal Banarsidaiss Delhi 1965.
7. **'ಕಾಮಸ್ತದಗ್ರೇ ಸಮವರ್ತತಾಧಿ'** – ತೈ. ಯಜುರಾರಣ್ಯಕ 1 – 23
8. **'ತಸ್ಯಾಂತರ್ಮನಸಿ ಕಾಮಸ್ಸಮ ವರ್ತತ'** – ಅದೇ
9. 'ಕಾಮ ಒಂದು ಪುರುಷಾರ್ಥ' – ಒಳ್ನುಡಿ : ಡಾ। ಆರ್ ಗಣೇಶ್ ಪುಟ xix, ಲೇ. ವಿ.ಕೆ. ಹಂಪಿಹೊಳಿ, ಅಭಿಜ್ಞಾನ, ನಂ. 7–8, ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ಆವರಣ, ಬಸವನಗುಡಿ ರಸ್ತೆ, ನರಸಿಂಹರಾಜ ಕಾಲೊನಿ, ಬೆಂಗಳೂರು – 19, 2004.
10. **ಸೋಕಾಮಯತೇ, ಬಹುಸ್ಯಾಂ ಪ್ರಜಾಯೇಯೇತಿ। ... ಇದಗ್ಂ ಸರ್ವಮಸೃಜತ ॥** ಅವನು (ಬ್ರಹ್ಮವು) ಇಚ್ಛಿಸಿದನು. ತಾನು ಬಹುವಾಗುವೆನೆಂದು... ಇವೆಲ್ಲವನ್ನೂ ಸೃಷ್ಟಿಸಿದನು. – ತೈತ್ತಿರೀಯ ಉಪನಿಷತ್ತು 2.6.
11. **ಕಾಮಸ್ತದಗ್ರೇ ಸಮವರ್ತತಾಧಿ, ಮನಸೋ ರೇತಃ ಪ್ರಥಮಂ ಯದಾಸೀತ್ ॥ ಋಗ್ವೇದ – (10–129–4)**
12. **ಅಕಾಮಸ್ಯ ಕ್ರಿಯಾ ಕಿಚಿದ್ ದೃಶ್ಯತೇ ನೇಹ ಕರ್ಹಿಚಿತ್ ।**
    **ಯದ್ ಯದ್ಧಿ ಕುರುತೇ ಕಿಂಚಿತ್ ತತ್ಕಾಮಸ್ಯ ಚೇಷ್ಟಿತಮ್ ॥ ಮನುಸ್ಮೃತಿ – (2.4)**
13. ದೇವರ್ಷಿನಾರದರ ಭಕ್ತಿಸೂತ್ರಗಳು; ಲೇ॥ ಸ್ವಾಮಿ ಹರ್ಷಾನಂದ, ರಾಮಕೃಷ್ಣಮಠ, ಬೆಂಗಳೂರು, ಪುಟ 21
14. ಬಸವಣ್ಣನವರ ವಚನಗಳು, ಪುಟ 48, ವ.ಸಂ. 40, ಸಂ: ಡಾ. ಎಲ್. ಬಸವರಾಜು, ಗೀತಾ ಬುಕ್ ಹೌಸ್, ಪ್ರ: ಮೈಸೂರು 1952.
15. ಅದೇ, ಪುಟ 48, ವ.ಸಂ. 41
16. ಕನಕ ಸಾಹಿತ್ಯ ದರ್ಶನ ಸಂಪುಟ – 4, ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು, ಸಂ.: ಸುಧಾಕರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1999, ಪುಟ 213
17. **ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
    **ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ – ಭಗವದ್ಗೀತಾ 9.27**
18. **ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ**
    **ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ।**
20. ಅದೇ, ಪುಟ 33
21. ಕನಕ ಸಾಹಿತ್ಯ ದರ್ಶನ – 4. ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು ಪುಟ 18
    **ಸ್ಮೃತ್ಯಾಂ ಶಿರಸ್ತವ ನಿವಾಸಜಗತ್ಪ್ರಣಾಮೇ**
    **ದೃಷ್ಟಿಸ್ಸತಾಂ ದರ್ಶನೇಽಸ್ತು ಭವತ್ತನೂನಾಮ್ ॥– ಶ್ರೀ ಮದ್ಭಾಗವತ 10.10.38**
19. **ನಾನಿನಗೇನು ಬೇಡುವುದಿಲ್ಲ – ಎನ್ನ**
    **ಹೃದಯಕಮಲದೊಳು ನೆಲೆಸಿರು ಹರಿಯೆ – ಶ್ರೀ ಪಾದರಾಜರ ಕೃತಿಗಳು,**ಸಂ: ಡಾ. ಜಿ. ವರದರಾಜ್‌ರಾವ್,

ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1987, ಪುಟ 30, 31
22. ಬಸವಣ್ಣನವರ ವಚನಗಳು. ಪುಟ 102, ವ.ಸಂ. : 249
23 ಅದೇ, ಪುಟ 103. ವ.ಸಂ. 293.
24. ಬಸವಣ್ಣನವರ ವಚನಗಳು ಪುಟ 74, ವ.ಸಂ 161
25. ಪುರಂದರದಾಸರ ಕೀರ್ತನೆಗಳು ಪುಟ 640, ಉಗಾಭೋಗ ಸಂಖ್ಯೆ 4
26. ಅದೇ, ಪುಟ 642, ಉಗಾಭೋಗ ಸಂಖ್ಯೆ 14
27. ಅದೇ, ಪುಟ 644. ಉ.ಸಂ : 26
28. ಅದೇ, ಪುಟ 646. ಉ.ಸಂ : 40
29. ಚಿದಾನಂದಾವಧೂತ ಮುತ್ತಿನ ಹಾರ ಮಾಲಿಕೆ ಕರ್ನಾಟಕ ಸಾಹಿತ್ಯ ಆಕಾಡೆಮಿ, ನೃಪತುಂಗ ರಸ್ತೆ ಬೆಂಗಳೂರು–1, 1998, ಪುಟ 20
30 .ಹರಿದಾಸ ಕೀರ್ತನ (ಪಾವಂಜೆ ಹರಿದಾಸರ ಕೃತಿ ಸಂಪುಟ) ಪುಟ 137 ಕೀ.ಸಂ 171, ಸಂ : ಪ್ರೋ ಹೆರಾಜೆ ಕೃಷ್ಣ ಭಟ್ಟ ಅಭಿನಂದನೆ ಸಮಿತಿ, c/o ಯಕ್ಷಗಾನ ಕಲಾರಂಗ, ಅದಮಾರು ಮಠ ಓಣಿ, ಉಡುಪಿ – 576101, 2005
31. ವಚನಸಾಹಿತ್ಯ ಸಂಗ್ರಹ ಪುಟ 264, ವ.ಸಂ 53, ಸಂ :ಸಂ.ಶಿ ಭೂಸನೂರಮಠ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ ರಸ್ತೆ, ಬೆಂಗಳೂರು – 2, 2006
32. ಅದೇ, ಪುಟ 262, ವ.ಸಂ 47
33. ಅದೇ, ಪುಟ 261, ವ.ಸಂ 44
34. ಶ್ರೀ ಹರಿಕಥಾಮೃತ ಸಿಂಧು (ರಾಮ ಕಥಾ ವಾಹಿನಿ), ಲೇ: ಸಂತ ಭದ್ರಗಿರಿ ಅಚ್ಯುತದಾಸರು, ಪ್ರ ಶ್ರೀಸುಧೀಂದ್ರ ಪಬ್ಲಿಷಿಂಗ್ ಹೌಸ್, 8 ನೇ ಅಡ್ಡ ರಸ್ತೆ ಮಲ್ಲೇಶ್ವರಂ, ಬೆಂಗಳೂರು–3, 1992, ಪುಟ 59
35. ಅದೇ, ಪುಟ 60
36. ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ ದ್ವಾದಶಸೂತ್ರಮ್ ಶ್ರೀ ವಿಶ್ವಪತಿತೀರ್ಥ ಟೀಕಾನುಸಾರಿ ಅರ್ಥ ಮತ್ತು ವಿವರಣೆ ಸಂಗ್ರಹ ಮತ್ತು ಅನುವಾದ ; ಪ್ರೊ.ಎಸ್. ವೆಂಕಟೇಶ್ ಮೂರ್ತಿ, ಪವನಜ ಪ್ರಕಾಶನ ಬನಶಂಕರಿ ಮೊದಲನೆಯ ಸ್ಟೇಜ್, ಬೆಂಗಳೂರು–50. ಪುಟ 34, 35
37. ಶ್ರೀ ಹರಿಕಥಾಮೃತ ಸಿಂಧು, ಪುಟ 64
38. ಪುರಂದರದಾಸರ ಕೀರ್ತನೆಗಳು, ಪುಟ 544, ಕೀ. ಸಂ 875

## ೪.೫ ಜ್ಞಾನ ಹಾಗೂ ಭಕ್ತಿಯ ವಿಶ್ಲೇಷಣೆ

ಶಾಸ್ತ್ರಸಂರಕ್ಷಣೆಯನ್ನು ಮಾಡಬೇಕು ಎಂಬುವುದು ಸಂತರ ಅಭಿಮತವಾಗಿದ್ದರೂ ಹೃದಯದಲ್ಲಿ ಭಕ್ತಿ ಶ್ರದ್ಧೆಯಿಲ್ಲದ ಬರೀ ಒಣ ಪಾಂಡಿತ್ಯವನ್ನು ಅವರೆಂದಿಗೂ ಸಾಕ್ಷಾತ್ಕಾರಕ್ಕೆ ಸಹಕಾರಿ ಎಂದು ಒಪ್ಪುವುದಿಲ್ಲ. ಇದನ್ನು ನಾರದರು ಮುಂದೆ 74, 75 ಹಾಗೂ 76ನೇ ಸೂತ್ರದಲ್ಲಿ ಸ್ಪಷ್ಟ ಪಡಿಸುತ್ತಾರೆ.

**ವಾದೋ ನಾವಲಂಬ್ಯಃ ॥೭೪॥** (ಭಕ್ತರು) ಚರ್ಚೆಯನ್ನು ಆಶ್ರಯಿಸಬಾರದು. [1]

**ಬಾಹುಲ್ಯಾವಕಾಶತ್ವಾದ್ ಅನಿಯತತ್ವಾಚ್ಚ ॥೭೫॥** ಏಕೆಂದರೆ (ಚರ್ಚೆಯಲ್ಲಿ) ಅನೇಕ ವಾದಗಳಿಗೆ ಅವಕಾಶವಿರುತ್ತದೆ, ಮತ್ತು (ಒಂದು ನಿರ್ಣಯಕ್ಕೆ ಬರುವುದರಲ್ಲಿ) ನಿಶ್ಚಯವಿಲ್ಲ.[2]

**ಭಕ್ತಿ ಶಾಸ್ತ್ರಾಣಿ ಮನನೀಯಾನಿ, ತದುದ್ಬೋಧಕ ಕರ್ಮಾಣಿ ಕರಣೀಯಾನಿ ॥೭೬॥**

ಭಕ್ತಿ ಶಾಸ್ತ್ರಗಳನ್ನು ಮನನ ಮಾಡಬೇಕು. ಅದನ್ನು ಎಚ್ಚರಿಸುವ ಜಾಗ್ರತಗೊಳಿಸುವ ಕರ್ಮಗಳನ್ನು ಮಾಡುತ್ತಿರಬೇಕು.[3]

ಭಕ್ತಿ ಸಾಧನೆಯ ಹಾದಿಯಲ್ಲಿರುವವರನ್ನು (ಗೌಣಭಕ್ತರನ್ನು) ಎಚ್ಚರಿಸುವಂತಹ ಸೂತ್ರಗಳಿವು. ಭಕ್ತಿ ಸಾಧನೆಯಂತಹ ಪ್ರಾಯೋಗಿಕ ವಿದ್ಯೆಗಳಲ್ಲಿ ತರ್ಕಕ್ಕೆ ವಾದಕ್ಕೆ ಸ್ಥಾನವಿಲ್ಲ. ಪರಮಾರ್ಥವು ಕೇವಲ ಅನುಭವಗಮ್ಯ, ವಚೋಗಮ್ಯವಲ್ಲ, ಬುದ್ಧಿಗಮ್ಯವಲ್ಲ. ತೈತ್ತಿರೀಯ ಉಪನಿಷತ್ತು ಹೇಳುತ್ತದೆ: '**ಯತೋವಾಚೋನಿವರ್ತಂತೇ ಅಪ್ರಾಪ್ತ ಮನಸಾ ಸಹ** – ಯಾವುದರಿಂದ ಮಾತುಗಳು ಮತ್ತು ಮನಸ್ಸು (ಅದನ್ನು) ಹೊಂದಲಾರದೆ ಹಿಂದಿರುಗುತ್ತವೆಯೋ.....'(2.4) ಹಾಗೆಯೇ ಕಠೋಪನಿಷತ್ತು ಹೇಳುತ್ತದೆ '**ನೈಷಾ ತರ್ಕೇಣ ಮತಿರಾಪನೇಯಾ**– ಈ ಆತ್ಮಜ್ಞಾನವು ತರ್ಕದಿಂದ ಪಡೆಯತಕ್ಕದ್ದಲ್ಲ'(2.9)

ರಾಗದ್ವೇಷಾದಿಗಳಿಂದ ಪ್ರೇರಿತರಾಗಿ ಪರರನ್ನು ಅಪಮಾನಿಸಲು, ಪ್ರತಿಭೆಯನ್ನು ಪ್ರದರ್ಶಿಸಿ ಕೀರ್ತಿ, ಹಣ ಸಂಪಾದಿಸಲು ಹೂಡುವ ತರ್ಕ ಪ್ರಧಾನವಾದ ವಾದಗಳನ್ನು ಆಶ್ರಯಿಸಬಾರದು ಎಂಬುವುದು ಭಕ್ತಿಸಾಧಕರಿಗೆ ನಾರದರ ಎಚ್ಚರಿಕೆಯಾಗಿದೆ (74ನೇ ಸೂತ್ರ). ವಾದವು ಬುದ್ಧಿ ಬಲವನ್ನು ಅವಲಂಬಿಸಿದೆ, ವಿಷಯವನ್ನು ಅವಲೋಕಿಸುವ ದೃಷ್ಟಿಕೋನವನ್ನು ಅವಲಂಬಿಸಿದೆ. ಒಂದೇ ವಿಷಯವನ್ನು ಹತ್ತು ಜನ ಹತ್ತು ರೀತಿಯಲ್ಲಿ ನೋಡಿ ವಿವರಿಸಲು ಸಾಧ್ಯವಿದೆ. ಇದರಿಂದಾಗಿ (ರಾಗದ್ವೇಷಾದಿಗಳಿಂದ ಕೂಡಿದವರಲ್ಲ) ತರ್ಕ, ವಾದಗಳಲ್ಲಿ ತೊಡಗಿದವರಲ್ಲಿ ಮನಸ್ತಾಪವುಂಟಾಗುತ್ತದೆ ಮತ್ತು ಮಾನವೀಯ ಸಂಬಂಧಗಳು ಕೆಡುವ ಸಾಧ್ಯತೆಗಳಿವೆ. ಸಾಧಕನ ಅಹಂಕಾರವೂ ಬೆಳೆಯುತ್ತದೆ. ತದ್ವಿರುದ್ಧವಾಗಿ ಭಗವಂತನನ್ನು ಭಕ್ತಿಯಿಂದ ಭಜಿಸಿದರೆ ಅವನೇ ನಮಗೆ ಬುದ್ಧಿಯೋಗವನ್ನು ತನ್ಮೂಲಕ ಸಾಕ್ಷಾತ್ಕಾರವನ್ನು ಕರುಣಿಸುತ್ತಾನೆ. (ಭಗವದ್ಗೀತಾ 10.10,11)

ಶ್ರೀ ಮದ್ಭಾಗವತದಲ್ಲಿ (11.18.30) ಶ್ರೀ ಕೃಷ್ಣನು ಉದ್ಧವನಿಗೆ ಹೀಗೆ ಉಪದೇಶಿಸುತ್ತಾನೆ:

**ವೇದವಾದರತೋ ನಸ್ಯಾತ್ ಪಾಖಂಡೀ ನ ಹೈತುಕಃ ।**

**ಶುಷ್ಕವಾದವಿವಾದೇ ನ ಕಂಚಿತ್ಪಕ್ಷಂ ಸಮಾಶ್ರಯೇತ್ ॥**

'(ಸರ್ವಕರ್ಮ ಸಂನ್ಯಾಸ ಮಾಡಿ ಪರಮಾತ್ಮ ಚಿಂತನೆಯಲ್ಲೇ ಮಗ್ನನಾದವನು)' ವೇದಾರ್ಥವನ್ನು ವಿವರಿಸುವ ವಾದಗಳಲ್ಲಿ ತೊಡಗಬಾರದು, ನಾಸ್ತಿಕನಾಗಬಾರದು, ಎಲ್ಲದಕ್ಕೂ ಕಾರಣವನ್ನು ಇಚ್ಛಿಸುವ ತಾರ್ಕಿಕನಾಗಬಾರದು, ವ್ಯರ್ಥವಾದ ವಾದವಿವಾದಗಳು ನಡೆಯುತ್ತಿರುವಾಗ ಯಾವ ಪಕ್ಷವನ್ನೂ ವಹಿಸಬಾರದು'.

ಹಾಗೆಂದ ಮಾತ್ರಕ್ಕೆ ಮುಮುಕ್ಷುಗಳಾದ ಭಕ್ತರು ಭಗವತ್–ತತ್ತ್ವವನ್ನರಿಯಲು, ಸಂಶಯಗಳನ್ನು ಪರಿಹರಿಸಿಕೊಳ್ಳಲು, ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಬಾರದು

ಎಂದರ್ಥವಲ್ಲ. ಅದು ಅಗತ್ಯ. ಈ ವಿಚಾರದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರ ವಚನಗಳು ಮನನೀಯ:[4]

"ಎಲ್ಲಿಯವರೆಗೆ (ಒಲೆಯ ಮೇಲಿರುವ) ಬೆಣ್ಣೆಯಲ್ಲಿ ನೀರಿರುವುದೋ ಅಲ್ಲಿಯವರೆಗೆ ಅದು ಸದ್ದು ಮಾಡುತ್ತಾ ಇರುತ್ತದೆ. ಖಾಲಿಯಾದ ಮಡಕೆಯಿಂದ ನೀರು ತುಂಬಲು ಹೋದಾಗ ಭಕ್, ಭಕ್ ಎಂದು ಸದ್ದು ಮಾಡುತ್ತದೆ. ಆದರೆ ತುಂಬಿದ ಮೇಲೆ ಕೊಡ ಶಬ್ದ ಮಾಡುವುದಿಲ್ಲ. ವಿಚಾರ ಬುದ್ಧಿ ಎಷ್ಟು ಕಾಲವಿರುತ್ತದೆ? ಎಲ್ಲಿಯವರೆಗೆ ಭಗವದಾನಂದವನ್ನು ಹೊಂದಿಲ್ಲವೋ ಅಲ್ಲಿಯವರೆಗೇ ! ಜೇನಿನ ಆನಂದವನ್ನು ಪಡೆದ ಭ್ರಮರವು ಗುಞ ಗುಞ ಶಬ್ದವನ್ನು ಮಾಡುವುದಿಲ್ಲ. ಪುಸ್ತಕಗಳನ್ನೋದಿ ಅನೇಕ ರೀತಿಯ ತರ್ಕಯುಕ್ತಿಗಳನ್ನು ಮಾಡಲು ಕಲಿತ ಮಾತ್ರಕ್ಕೆ ಏನೂ ಸಾಲದು."

ಶಾಸ್ತ್ರಧ್ಯಯನ ವಾದ–ತರ್ಕಗಳಿಗೆ ಸೀಮಿತವಾಗದೆ ಅನುಷ್ಠಾನಪರವಾಗಿದ್ದು ಧರ್ಮದ ಮಾರ್ಗದಲ್ಲಿ ಮುನ್ನಡೆಸಿದಲ್ಲಿ ಭಕ್ತಿಯ ಬೆಳವಣಿಗೆಗೆ ಸಹಕಾರಿಯಾಗಬಲ್ಲದು. ಶ್ರೀಮದ್ ವಾದಿರಾಜಯತಿಗಳು **'ಹರಿಭಜನೆ ಮಾಡೊ ನಿರಂತರ'**[5] ಎನ್ನುವ ಕೀರ್ತನೆಯಲ್ಲಿ ಹೇಳುತ್ತಾರೆ 'ವೇದ ಶಾಸ್ತ್ರಗಳನ್ನು ಓದುವುದು ಅಗತ್ಯ ಆದರೆ ಅನಿವಾರ್ಯವೇನೂ ಅಲ್ಲ, ಭಕ್ತಿಸಾಧನೆ ನಿರ್ಭರವಾಗಿರುವುದು ಭಜನೆಯ ಮೇಲೆ:

**ವೇದ ಶಾಸ್ತ್ರಗಳ ಓದಿದರೇನು। ಸಾಧನಕಿದು ನಿರ್ಧಾರ ನೋಡೊ॥**

ಪುರಂದರದಾಸರು 'ಆರು ಶಾಸ್ತ್ರಗಳನ್ನು ಓದಿದರೂ, ಮೂರಾರು ಪುರಾಣಗಳನ್ನು ಪಠಿಸಿದರೂ, ಗುರುವಿಗೆ ಶರಣಾಗದಿದ್ದರೆ ಇದ್ಯಾವುದೂ ಮುಕ್ತಿಗೆ ಸಹಕಾರಿಯಾಗಲಾರದು' ಎಂದು ಹೇಳುತ್ತಾರೆ[5]:

**ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ।**
**ಪರಿಪರಿಶಾಸ್ತ್ರವನೋದಿದರೇನು ವ್ಯರ್ಥವಾಯಿತು ಭಕುತಿ ॥ಪ॥**
**ಆರು ಶಾಸ್ತ್ರ ಓದಿದರಿಲ್ಲ । ಮೂರಾರ್ ಪುರಾಣವ ಮುಗಿಸಿದವರಿಲ್ಲ ॥**
**ಸಾರನ್ಯಾಯ ಕತೆಗಳ ಕೇಳಿದವರಿಲ್ಲ । ಧೀರನಾಗಿ ನಾ ತಿರುಗಿದರಿಲ್ಲ ॥1॥**

'ಗುರುವಿನ ಗುಲಾಮನಾಗದೇ ಇದ್ದರೆ, ಪರಿಪರಿಯ ಶಾಸ್ತ್ರವನ್ನು ಓದಿದರೂ ಆ ಸಾಧನೆ ವ್ಯರ್ಥ' ಅನ್ನುತ್ತಾರೆ ಪುರಂದರದಾಸರು.

ಶ್ವೇತಾಶ್ವತರೋಪನಿಷತ್ ಕೂಡಾ ಹೇಳುತ್ತದೆ:

'ಯಾರಿಗೆ ಪರಮಾತ್ಮನಲ್ಲಿ ಹಾಗೆಯೇ ಗುರುವಿನಲ್ಲಿ ಪರಾಭಕ್ತಿ ಇದೆಯೋ ಅಂಥಾ ಮಹಾತ್ಮರಿಗೆ ಇಲ್ಲಿ ಉಪದೇಶಿಸಿರುವ ಅರ್ಥಗಳು ಪ್ರಕಾಶಿಸುತ್ತದೆ.' (6–23)

**ಯಸ್ಯದೇವೇ ಪರಾಭಕ್ತಿಃ ಯಥಾದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾಃ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥**

ಬಸವೇಶ್ವರರು 'ವೇದವನೋದಿದ ಬ್ರಹ್ಮನ ಶಿರ ಹೋಯಿತು,' ಆದ್ದರಿಂದ **'ನಾದಪ್ರಿಯನೂ ಅಲ್ಲ ವೇದಪ್ರಿಯನೂ ಅಲ್ಲ ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ'** ಎಂದರು.[6]

ವಾದವಿವಾದಗಳನ್ನು ತ್ಯಜಿಸಬೇಕು ಎಂದು ಹೇಳಿದ ನಾರದರು ಮುಂದಿನ ಸೂತ್ರದಲ್ಲಿ **'ಭಕ್ತಿ ಶಾಸ್ತ್ರಾಣಿ ಮನನೀಯಾನಿ, ತದುದ್ಬೋಧಕ ಕರ್ಮಾಣಿ ಕರಣೀಯಾನಿ ॥೭೬॥**

ಭಕ್ತಿ ಶಾಸ್ತ್ರಗಳನ್ನು ಮನನ ಮಾಡಬೇಕು. ಅದನ್ನು(ಭಕ್ತಿಯನ್ನು) ಉದ್ದೀಪಿಸುವ ಕರ್ಮಗಳನ್ನು ಮಾಡುತ್ತಿರಬೇಕು,' ಎಂದು[7].

ಶ್ರೀ ಮದ್ಭಾಗವತವು ಹೇಳುತ್ತದೆ (11.8.10):

**ಅಣುಭ್ಯಶ್ಚ ಮಹದ್ಭ್ಯಶ್ಚ ಶಾಸ್ತ್ರೇಭ್ಯಃ ಕುಶಲೋ ನರಃ ।**

**ಸರ್ವತಃ ಸಾರಮಾದದ್ಯಾತ್ ಪುಷ್ಪೇಭ್ಯ ಇವ ಷಟ್ಪದಃ ॥**

ಕುಶಲನಾದ ಮನುಷ್ಯನು ಚಿಕ್ಕ ಮತ್ತು ದೊಡ್ಡ ಎಲ್ಲ ಶಾಸ್ತ್ರಗಳಿಂದಲೂ, ಎಲ್ಲಾ ರೀತಿಯಿಂದಲೂ ದುಂಬಿಯು ಹೂಗಳಿಂದ (ಜೇನನ್ನು) ಸಂಗ್ರಹಿಸುವಂತೆ ಸಾರವನ್ನು ಗ್ರಹಿಸಬೇಕು.'

ನಮ್ಮ ಹೃದಯದಲ್ಲಿ ಭಕ್ತಿಯನ್ನು ಹುಟ್ಟಿಸುವ, ಬೆಳೆಯಿಸುವ, ಕರ್ಮಗಳ ಸಾಧನೆಗಳ ವಿಷಯವನ್ನರಿತು ಅವನ್ನು ಆಚರಿಸುವುದಕ್ಕಾಗಿ ಭಕ್ತಿಶಾಸ್ತ್ರಗಳನ್ನು ಮನನ ಮಾಡಬೇಕು ಎಂಬುವುದು ನಾರದರ ಅಭಿಪ್ರಾಯ.

ವಿಜಯದಾಸರು ತಮ್ಮ ಒಂದು ಕೀರ್ತನೆಯಲ್ಲಿ ಹೇಳುತ್ತಾರೆ[8]:

**ಏನಾದರೇನು ಜ್ಞಾನವಿಲ್ಲದೆ ಮೋಕ್ಷವಿಲ್ಲ ॥ಪ॥**

**ವೇದವನೋದಿದರೇನು ಶಾಸ್ತ್ರವನೋದಿದರೇನು**

**ಕಾದಿ ಕಾದಾಡಿದರೇನು** ೧

**ಕಾಶಿಗೆ ತಾ ಹೋದರೇನು ಕಾನನವ ಸೇರಿದರೇನು**

**ಕಾಶಿಪೀತಾಂಬರ ಉಟ್ಟರೇನು** ೨

**ಜಪತಪವ ಮಾಡಲೇನು ಜಾಣತನದೊಳ್ ಮೆರೆದರೇನು**

**ವಿಜಯವಿಠಲನ್ನ ಸಾರಿದರೇನು** ೩

ಏನೇ ಮಾಡಿದರೂ ಜ್ಞಾನವಿಲ್ಲದೆ ಮೋಕ್ಷವಿಲ್ಲ ಎಂದು ಘಂಟಾಘೋಷವಾಗಿ ಹೇಳುತ್ತಾರೆ ವಿಜಯದಾಸರು. ವಿಜಯದಾಸರು ತಮ್ಮ ಕೀರ್ತನೆಯಲ್ಲಿ 'ಜ್ಞಾನವಿಲ್ಲದೆ ಮೋಕ್ಷವಿಲ್ಲ' ಎಂದು ಸಾರುತ್ತಾರೆ. ಅದರೆ ದಾಸರ ದೃಷ್ಟಿಯಲ್ಲಿ ಇಲ್ಲಿ ಜ್ಞಾನವೆಂದರೆ ಹರಿಯು ಬಿಂಬ, ತಾನು ಆತನ ಪ್ರತಿಬಿಂಬ ಎಂಬ ಅರಿವು. ಆ ಅರಿವಿಲ್ಲದೆ ಮೋಕ್ಷವಿಲ್ಲ ಎಂಬುದು ವಿಜಯದಾಸರ ನಿಲುವು ಆಗಿದೆ.

ಶ್ರೀ ಮನ್ನಿಜಗುಣ ಶಿವಯೋಗಿಗಳು 'ಕೈವಲ್ಯ ಪದ್ಧತಿ'ಯ ಜ್ಞಾನಪ್ರತಿಪಾದನ ಸ್ಥಳದಲ್ಲಿ **'ನಂಬು ಜ್ಞಾನವನೆ ಕರ್ಮವೆಂಬ ಜಾಲದೊಳು ಸಿಲುಕಿ, ಹಂಬಲಿಸದಿರು ಮುಕ್ತಿಯಂ ಬಯಸಿ ಮನುಜ** ನೀ ॥ಪ॥' ಎಂಬ ಕೀರ್ತನೆಯಲ್ಲಿ ಜ್ಞಾನದ ಮಹತ್ವವನ್ನು ಸಾರುತ್ತಾ ಹೇಳುತ್ತಾರೆ[9]:

**'ಆಗಮ ಪುರಾಣ ವೇದಪೂಗದೊಳು ವಿಧಿಸಿದಾ ಯಾಗ ದಾನ ಜಪ ನೀತಿ ಯೋಗ ಪೂಜಾದಿಗಳು ಈಗ ಜ್ಞಾನೋದಯ ಮಾತ್ರವಾಗದರೊಳು'** ಎಂದು.

ಇಲ್ಲಿ ಕರ್ಮಜಾಲದಲ್ಲಿ ಸಿಲುಕಿ ಮೈಮರೆಯಬೇಡ ಎಂದು ಎಚ್ಚರಿಸುತ್ತಾನೆ ನಿಜಗುಣರು. ಜ್ಞಾನ ಹಾಗೂ ಫಲರೂಪಿಯಾದ ಪರಾಭಕ್ತಿಯು ಒಂದೇ ಸ್ಥಿತಿ ಎನ್ನುವ ನೆಲೆಯಲ್ಲಿ

ವಿಚಾರ ಮಾಡಿದರೆ ನಿಜಗುಣರು ಹೇಳುತ್ತಿರುವಂತಹ ಉಪದೇಶವನ್ನು ನಾವು ಭಕ್ತಿ ಸಾಧನೆಗೂ ಅನ್ವಯಿಸಿಕೊಳ್ಳಬಹುದು. ಎರಡನೇ ಚರಣದಲ್ಲಿ ಅವರು ಹೇಳುವ ಮಾತುಗಳನ್ನು ಭಕ್ತಿಸಾಧನೆಗೂ ಅನ್ವಯಿಸಿಕೊಳ್ಳಬಹುದು:

**ತನುವ ದಂಡಿಸಬೇಡ ಮನವ ನಿಲ್ಲಿಸಬೇಡ ಧನವ ನೀಗಿರಬೇಡ ಮನೆ ಮಾರುದೊರೆದು**

**ವನವಾಸಬೇಡ ನಿನಗಿನಿತು ತತ್ತ್ವಜ್ಞಾನ ಸಂಜನಿಸಲಾದಘವೆಲ್ಲವನು ಕೆಡಿಪುದರಿಂದೆ ॥**

**ಜ್ಞಾನವೆ ಮುಕ್ತಿಗೆ ಮಾರ್ಗವೇನು ಬೇರೊಂದಿಲ್ಲವೆಂದು ಮಾನನಿಧಿಯಾದ ಶ್ರುತಿ ನಾನ್ಯಃ ಪಂಥಾಯೆನಲು**

**ನೀನಿದನು ಬಿಡದಿರನೂನ ಶಂಭುಲಿಂಗದ ಸುಜ್ಞಾನ ದೃಢಮಾಗೆ ಪರಮಾನಂದವಹುದದರಿಂದೆ ॥**

ಶ್ರೀ ಶಂಕರಭಟ್ಟ ಅಗ್ನಿಹೋತ್ರಿಯೆಂಬ ಇನ್ನೋರ್ವ ಕೀರ್ತನಕಾರರ ತಾತ್ವಿಕ ವಿಚಾರದ ಹಾಡು ಇಂತಿದೆ[10]:

**ಅಜ್ಞಾನಹೋಮದಾ ಅಗ್ನಿ ಹೋತ್ರಿಯು ತಾನು**
**ಸುಜ್ಞಾನಸ್ವರ್ಗವನು ಸೇರಿ ಸುಖಿಸಿಹನು** ಪ
**ತನುವು ಯಜ್ಞದ ಶಾಲೆ ಮನವು ಬ್ರಹ್ಮನು ಅಲ್ಲಿ**
**ಅನಿಸಿಕೆಗಳುದ್ಗಾತೃಋತ್ವಿಜರು**
**ಘನತರದ ಶ್ರದ್ಧೆಯಂಬಿನಿಯಳೊಡಗೂಡಿದಾ**
**ಚಿನುಮಯಾತ್ಮಾರಾಮ ದೀಕ್ಷಿತನು ಮರೆವ** ೧
**ಎದೆಯ ಯಜ್ಞದ ಕುಂಡ ಅದರಲ್ಲಿ ಜ್ಞಾನಾಗ್ನಿ**
**ಮುದದಿಂದ ಹೊತ್ತಿಸುತ ಕರ್ಮಕಾಷ್ಠಗಳಾ**
**ಒದಗಿಸಿ ಶಮಾದಿಗಳೆ ಸಾಮಗ್ರಿಯಾಗಿರಲು**
**ಸದಸದ್ವಿವೇಕಸಾಮವನು ಘೋಷಿಸುವಾ** ೨

ಇನ್ನು ಜ್ಞಾನದ ಕುರಿತು ಬಸವೇಶ್ವರರ ನಿಲುವು ಹೀಗಿದೆ[11]:

**ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ,**
**ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ.**

ಜ್ಞಾನಾಮೃತವೆಂಬುದು ಮಾನವನಲ್ಲಿ ಸಹಜವಾಗಿಯೇ ಇದೆ. ಆದರೆ ಅದರ ಮೇಲೆ ಸಂಸಾರವೆಂಬ ಹಾವಸೆ ಹಿಡಿದಿದೆ. ಗುರುವು ಹೇಳಿದಂತೆ ಎಡೆಬಿಡದೆ ಲಿಂಗ ಪೂಜೆಯನ್ನು ಮಾಡಿ ತನ್ನನ್ನು ತಾನು ಅರಿಯುವ ಮೂಲಕ ಹಿಡಿದಿರುವ ಹಾವಸೆಯನ್ನು ಹೊರನೂಕಬೇಕು ಎಂದರು ಬಸವಣ್ಣನವರು[12]:

**ಜ್ಞಾನಾಮೃತವೆಂಬ ಜಲಧಿಯ ಮೇಲೆ ಸಂಸಾರವೆಂಬ ಹಾವಸೆ ಮುಸುಕಿಹುದು !**
**ನೀರ ಮೊಗೆವವರು ಬಂದು ನೂಕಿದಲ್ಲದೆ ತೆರಳದು !**
**ಮರಳಿ ಮರಳಿ ಮುಸುಕುವುದು ಮಾಣದಯ್ಯ !**
**ದಿವಾರಾತ್ರಿ ಮಾಡ ಹೇಳಿದ ಲಿಂಗಪೂಜೆಯ, ತನ್ನ ನರಿಯಬೇಕೆಂದು.**

ಭಕ್ತಿಗೂ ಜ್ಞಾನಕ್ಕೂ ಇರುವ ಸಂಬಂಧವನ್ನು ಬಹಳ ಸುಂದರವಾಗಿ ನಿರೂಪಿಸಿದ್ದಾರೆ ಮಹಾರಾಷ್ಟ್ರದ ಖ್ಯಾತ ಸಂತರಾದ ಸಂತ ಏಕನಾಥ ಮಹಾರಾಜರು ಒಂದು ಅಭಂಗದಲ್ಲಿ[13]:

**ಭಕ್ತಿಚೇ ಉದರೀ ಜನ್ಮಲೇ ಜ್ಞಾನ । ಭಕ್ತೀನೇ ಜ್ಞಾನಾಸೀ ದಿಧಲೇ ಮಹಿಮಾನ ॥**

**ಭಕ್ತಿತೇ ಮೂಳ ಜ್ಞಾನತೇ ಫಳ । ವೈರಾಗ್ಯ ಕೇವಳ ತೇಥೀಚೇ ಫೂಲ ॥**
**ಫೂಲ ಫಳ ದೋನೀ ಯೇರಯೇರಾ ಪಾಠೀ । ಜ್ಞಾನವೈರಾಗ್ಯ ತೇವೀ ಭಕ್ತೀಚೇ ಪೋಟೀ ॥**
**ಭಕ್ತಿ ವಿಣ ಜ್ಞಾನ ಗಿವಸಿತೀ ವೆಡೇ । ಮೂಳ ನಾಹೀ ತೇಥೇ ಫಳ ಕೇವೀ ಜೋಡೇ ॥**
**ಭಕ್ತಿಯುತಜ್ಞಾನ ತೇಥೇ ನಾಹೀ ಪತನ । ಭಕ್ತಿ ಮಾತಾ ತಯಾಕರಿತಸೇ ಜತನ ॥**
**ಶುದ್ಧಭಕ್ತಿ ಭಾವ ತೇಥೇ ತಿಷ್ಠೇ ದೇವ । ಜ್ಞಾನಾಸೀ ತೋ ಠಾವ ಸುಖವಸ್ತೀನೀ ॥**
**ಶುದ್ಧಭಾವ ತೇಥೇ ಭಕ್ತಿಯುಕ್ತ ಜ್ಞಾನ । ತಯಾಚೇನೀ ಅಂಗೇ ಸಮಾಧೀ ಸಮಾಧಾನ ॥**
**ಏಕಾಜನಾರ್ದನೀ ಶುದ್ಧ ಭಕ್ತಿಕ್ರಿಯಾ । ಬ್ರಹ್ಮಜ್ಞಾನ ತ್ಯಾಚ್ಯಾ ಲಾಗತಸೇ ಪಾಯಾ ॥**

'ಭಕ್ತಿಯ ಉದರದಲ್ಲಿ ಜ್ಞಾನವು ಜನ್ಮ ತಾಳಿತು. ಈ ಭಕ್ತಿಯೇ ಜ್ಞಾನಕ್ಕೆ ಮಹತ್ವ ನೀಡಿತು. ಪರಮಾರ್ಥ ವೃಕ್ಷದ ಬೇರು ಭಕ್ತಿಯಾಗಿರುವುದು. ಜ್ಞಾನವು ಈ ಗಿಡದ ಫಲವಾಗಿರುವುದು. ವೈರಾಗ್ಯವು ಇದೇ ಗಿಡದ ಪುಷ್ಪವಾಗಿರುವುದು. ಪುಷ್ಪ ಫಲಗಳೆರಡೂ ಒಂದರ ಹಿಂದೆ ಒಂದು ಇರುವವು. ಅದರಂತೆ ಜ್ಞಾನ ವೈರಾಗ್ಯಗಳು ಭಕ್ತಿಯಿಂದಲೇ ಹುಟ್ಟಿರುವವು.

ಈ ಭಕ್ತಿಯನ್ನು ಬಿಟ್ಟು ಜ್ಞಾನವನ್ನು ಪಡೆಯಲು ಮೂರ್ಖರು ಹವಣಿಸುವರು. ಮೂಲವಾಗಿರುವ ಬೇರು ಇಲ್ಲದಿರುವಾಗ ಫಲವು ಹೇಗೆ ದೊರಕಬೇಕು?

ಭಕ್ತಿಯುಕ್ತ ಜ್ಞಾನಕ್ಕೆ ಯಾವಾಗಲೂ ಪತನವಿಲ್ಲ. ಏಕೆಂದರೆ ತಾಯಿಯಾದ ಭಕ್ತಿಯು ಜ್ಞಾನವನ್ನು ರಕ್ಷಿಸುತ್ತಿರುವದು, ಎಲ್ಲಿ ಶುದ್ಧಭಾವವಿರುವುದೋ ಅಲ್ಲಿ ದೇವನಿರುವನು. ಅಲ್ಲಿ ಸುಂದರ ವಸತಿಗಾಗಿ ಜ್ಞಾನಕ್ಕೆ ಸ್ಥಳ ದೊರಕುವದು. ಆದ್ದರಿಂದ ಶುದ್ಧ ಭಾವವಿದ್ದಲ್ಲಿ ಭಕ್ತಿಯುಕ್ತ ಜ್ಞಾನವಿರುವದು. ಇದನ್ನು ಪಡಕೊಂಡವರ ಅಂಗದಲ್ಲಿ ಸಮಾಧಿ ಸುಖ ಸಮಾಧಾನಗಳಿರುವವು ಕಾರಣ ಶುದ್ಧ ಭಾವ ಭಕ್ತಿಯ ಕ್ರಿಯೆಗಳ ಚರಣಗಳಿಗೆ ಬ್ರಹ್ಮಜ್ಞಾನವು ಶಿರಸಾವಂದಿಸುವದು ಎಂದು ಏಕನಾಥ ಮಹಾರಾಜರು ಹೇಳುವರು.'

ಭಕ್ತಿ ಹಾಗೂ ಜ್ಞಾನದ ಅವಿನಾಭಾವ ಸಂಬಂಧವನ್ನು ಸರಳವಾಗಿ ಸೊಗಸಾಗಿ ಮೇಲಿನ ಅಭಂಗದಲ್ಲಿ ನಿರೂಪಿಸಲಾಗಿದೆ.

## ಟಿಪ್ಪಣಿಗಳು

1. ದೇ.ನಾ.ಭ., ಪುಟ 125
2. ಅದೇ, ಪುಟ 125
3. ಅದೇ, ಪುಟ 127
4. ವಾದಿರಾಜರ ಹಾಡುಗಳು ಸಂ : ಕಾವ್ಯಪ್ರೇಮಿ ಸಮಾಜ ಪುಸ್ತಕಾಲಯ, ಧಾರವಾಢ–1, 2001, ಪುಟ 85
5. ಪು.ದಾ.ಕೀ., ಪುಟ 220, ಕೀ.ಸಂ 358
6. ಬಸವಣ್ಣನವರ ವಚನಗಳು ಸಂ.ಡಾ.ಎಲ್ ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, 2008, ಪುಟ 65, ವ.ಸಂ 122.
7. ದೇ.ನಾ.ಭ., ಪುಟ 127
8. ಹರಿದಾಸರ ಜನಪ್ರಿಯ ಹಾಡುಗಳು ಸಂ: ಡಾ.ಟಿ.ಎನ್. ನಾಗರತ್ನ, ಡಾ.ಮಂದಾಕಿನಿ. ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ 57, ಕೀ.ಸಂ 63)

9. ಜನಪ್ರಿಯ ಪ್ರಾಚೀನ ಸಾಹಿತ್ಯಮಾಲೆ. ನಿಜಗುಣರ ಸಮಗ್ರ ಕೃತಿಗಳು ಭಾಗ–1, ಸಂ:ಡಾ.ಎಸ್. ವಿದ್ಯಾಶಂಕರ್, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು–2, 1995, ಪುಟ 111, ಕೀ.ಸಂ 5

10. ಸಮಗ್ರ ದಾಸ ಸಾಹಿತ್ಯ, ಸಂಪುಟ 33, ಪುಟ 308, 309, ಕೀ.ಸಂ.358

11. ಬ.ವ., ಸಂ.ಡಾ.ಎಲ್. ಬಸವರಾಜು, ಪುಟ 145, ವ.ಸಂ 454

12. ಬ.ವ, ಪುಟ 49, ವ.ಸಂ 48

13. ಪಂಢರೀ ವಾರಕರೀ ಸಾರ್ಥ ಭಜನೀ ಮಾಲಿಕಾ, ಸಂ : ಹ.ಭ.ಪ.ಕೃಷ್ಣಾಜೀ ಡೋಂಗ್ರಪ್ಪ ಜ್ಞಾನಮೋರೆ, ಕೊಪ್ಪಳ, ಪ್ರ:ಶ್ರೀ ವಾಸಕರ ವಾರಕರೀ ಸಂಸ್ಥಾ ಟ್ರಸ್ಟ್, (ರ.ನಂ 177/75–76) ಗವಿಮಠ ರೋಡ್, ಕೊಪ್ಪಳ–583231, ಮೊ.ಮು. 2001, ಪುಟ 312, ಕೀ.ಸಂ. 574)

## ೪.೬. ಶಾಸ್ತ್ರಾಧ್ಯಯನ, ಕರ್ಮಾನುಷ್ಠಾನ ಹಾಗೂ ಭಕ್ತಿಯ ವಿಶ್ಲೇಷಣೆ

ಸೂತ್ರ ಸಂಖ್ಯೆ 12, 13, 14ರಲ್ಲಿ ಭಕ್ತನ ಜೀವನದಲ್ಲಿ ಶಾಸ್ತ್ರದ ಪಾತ್ರವನ್ನು ವಿಶ್ಲೇಷಿಸಿದ್ದಾರೆ.

**ಭವತು ನಿಶ್ಚಯದಾರ್ಢ್ಯಾದೂರ್ಧ್ವಂ ಶಾಸ್ತ್ರರಕ್ಷಣಮ್ ॥೧೨॥**

ನಿಶ್ಚಯವು ದೃಢವಾದ ನಂತರ(ವೂ) ಶಾಸ್ತ್ರವನ್ನು ರಕ್ಷಿಸಬೇಕು.

**ಅನ್ಯಥಾ ಪಾತಿತ್ಯ ಶಂಕಯಾ ॥3॥**

ಇಲ್ಲದಿದ್ದರೆ ಪತಿತನಾಗುವ ಭಯವುಂಟು.

**ಲೋಕೋಪಿತಾವದೇವ ; ಭೋಜನಾದಿ ವ್ಯಾಪಾರಸ್ತು ಅಶರೀರ ಧಾರಣಾವಧಿ ॥೧೪॥**

ಲೋಕ(ವ್ಯಾಪಾರವೂ) ಅಲ್ಲಿಯವರೆಗೇ ; ಅದರೆ ಭೋಜನಾದಿ ವ್ಯಾಪಾರವು ಶರೀರವನ್ನು ಧರಿಸುವವರೆಗೂ (ಇರುತ್ತದೆ).

ಈ ಸೂತ್ರಗಳನ್ನು ಸಾಧಕಭಕ್ತ ಮತ್ತು ಸಿದ್ಧ ಭಕ್ತ ಇವರಿಬ್ಬರಿಗೂ ಅನ್ವಯಿಸುವಂತೆ ವಿವರಿಸಬಹುದು. ಇಲ್ಲಿ ನಿಶ್ಚಯದಾರ್ಢ್ಯವೆಂದರೆ :

1. ಭಗವತ್ಸಾಕ್ಷಾತ್ಕಾರಕ್ಕೆ ಅನನ್ಯ ಭಕ್ತಿಯೇ ಅತ್ಯುತ್ತಮ ಉಪಾಯ ಎಂಬ ನಿಶ್ಚಯವು ದೃಢವಾಗುವುದು;
2. ಇಷ್ಟದೇವತೆಯಲ್ಲಿ ಭಕ್ತಿಯು ದೃಢವಾಗುವುದು;
3. ಭಗವತ್ಸಾಕ್ಷಾತ್ಕಾರದಲ್ಲಿ ದೃಢವಾಗಿ ನೆಲೆ ನಿಲ್ಲುವುದು.

'ನಿಶ್ಚಯವು ದೃಢವಾದ ನಂತರ' ಶಾಸ್ತ್ರರಕ್ಷಣೆಯನ್ನು ಮಾಡಬೇಕು ಎಂದರೆ ಅದಕ್ಕೆ ಮೊದಲು ಏನು ಮಾಡಬೇಕು? ಎಂಬ ಪ್ರಶ್ನೆಗೆ ಭಗವದ್ಗೀತೆ ಉತ್ತರಿಸುತ್ತದೆ. (16.24)

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ॥**

'ಆದುದರಿಂದ ಕಾರ್ಯ, ಅಕಾರ್ಯ–ಇವುಗಳ ನಿರ್ಧಾರಣೆಯಲ್ಲಿ ಶಾಸ್ತ್ರವೇ ನಿನಗೆ

ಪ್ರಮಾಣ. (ನೀನು)ಶಾಸ್ತ್ರವಿಧಿಯಲ್ಲಿ ಹೇಳಿರುವುದನ್ನು ಅರಿತುಕೊಂಡು ಇಲ್ಲಿ ಕರ್ಮವನ್ನು ಮಾಡಬೇಕು'.

ಆದುದರಿಂದ ಈ ಪ್ರಶ್ನೆಯನ್ನು ಎರಡು ರೀತಿಯಲ್ಲಿ ಉತ್ತರಿಸಬಹುದು:

1. ನಿಶ್ಚಯವು ದೃಢವಾದ ನಂತರವೂ ಶಾಸ್ತ್ರರಕ್ಷಣೆಯನ್ನು ಮಾಡಬೇಕು ಎಂದ ಮೇಲೆ ಅದಕ್ಕೆ ಮೊದಲೂ ಮಾಡಲೇಬೇಕೆಂದು ಅರ್ಥವಾಗುತ್ತದೆ. ಶಾಸ್ತ್ರೋಕ್ತ ಕರ್ಮಗಳನ್ನು ಶ್ರದ್ಧೆಯಿಂದ ಮಾಡುತ್ತಲಿದ್ದರೆ ಚಿತ್ತ ಶುದ್ಧಿಯಾಗಿ ಭಕ್ತಿಯೂ ವರ್ಧಿಸುತ್ತದೆ. ಹಾಗೆ ಮಾಡದೇ ಇದ್ದಲ್ಲಿ '**ಅನ್ಯಥಾ ಪಾತಿತ್ಯ ಶಂಕಯಾ ॥೧೩॥**' '(ಇಲ್ಲದಿದ್ದರೆ) ಪತಿತನಾಗುವ ಭಯವುಂಟು' ಎಂಬುದಾಗಿ ನಾರದರೇ ಮುಂದಿನ ಸೂತ್ರದಲ್ಲಿ ಹೇಳಿದ್ದಾರೆ. ಶ್ರೀಮದ್ಭಾಗವತವು (11.20.9) ಹೇಳುವಂತೆ :

**ತಾವತ್ಕರ್ಮಾಣಿ ಕುರ್ವೀತ ನಿರ್ವಿದ್ಯೇತ ಯಾವತಾ ।**

**ಮತ್ಕಥಾಶ್ರವಣಾದೌ ವಾ ಶ್ರದ್ಧಾ ಯಾವನ್ನ ಜಾಯತೇ ॥**

'ಎಲ್ಲಿಯವರೆಗೆ ವೈರಾಗ್ಯವು ಹುಟ್ಟಿರುವುದಿಲ್ಲವೋ ಅಥವಾ ನನ್ನ ಲೀಲಾಕಥಾನಾದಿಗಳನ್ನು ಕೇಳುವುದರಲ್ಲಿ ಶ್ರದ್ಧೆಯುಂಟಾಗಿರುವುದಿಲ್ಲವೋ ಅಲ್ಲಿಯವರೆಗೆ ಶಾಸ್ತ್ರೋಕ್ತ ಕರ್ಮಗಳನ್ನು ಮಾಡಬೇಕು'. ನಾರದೀಯ ಮಹಾಪುರಾಣವು ಹೇಳುತ್ತದೆ:

**ಸ ಏವಾತ್ಮ ವಿಘಾತೀ ಸ್ಯಾತ್ಪಾಪೀನಾಮಗ್ರಣೀರ್ಮುನೇ ।**

**ಕರ್ಮಭೂಮಿಂ ಸಮಾಸಾದ್ಯ ಯೋ ನ ಧರ್ಮಂ ಸಮಾಚರೇತ್ ॥64॥**

'ಯಾವ ಮನುಷ್ಯನು ಶ್ರುತಿ ಸ್ಮೃತಿಗಳಲ್ಲಿ ವಿಧಿಸಲ್ಪಟ್ಟ ಧರ್ಮಗಳನ್ನನುಷ್ಠಾನ ಮಾಡಿ ಆತ್ಮನನ್ನು (ಚಿತ್ತವನ್ನು) ಶುದ್ಧಿಗೊಳಿಸುವುದಿಲ್ಲವೋ ಅಂತಹವನು ಆತ್ಮನನ್ನು ಸಂಹರಿಸಿದ (ಆತ್ಮಹತ್ಯೆ) ಪಾಪಕ್ಕೆ ಭಾಗಿಯಾಗಿ ಪಾಪಿಶ್ರೇಷ್ಠನಾಗುತ್ತಾನೆ.'[1]

(ನಾರದೀಯ ಪುರಾಣ ಭಾಗ 1, ಅಧ್ಯಾಯ 3, ಶ್ಲೋಕ 64, ಪುಟ 51)

ಇದೇ ನಾರದೀಯ ಪುರಾಣದಲ್ಲಿ, ನಾರದರು ಹೇಳಿದ್ದಾರೆ ಎನ್ನಲಾದ ಒಂದು ಎಚ್ಚರಿಕೆಯ ಮಾತು ಇಂತಿದೆ[2] :

**ಯಃ ಸ್ವಧರ್ಮಂ ಪರಿತ್ಯಜ್ಯ ಭಕ್ತಿ ಮಾತ್ರೇಣ ಜೀವತಿ ।**

**ನ ತಸ್ಯ ತುಷ್ಯತೇ ವಿಷ್ಣುಃ ಆಚಾರೇಣೈವ ತುಷ್ಯತಿ ॥**

'ಯಾವನು ಸ್ವಧರ್ಮವನ್ನು ಬಿಟ್ಟು ಭಕ್ತಿ ಮಾತ್ರದಿಂದಲೇ ಜೀವಿಸುತ್ತಾನೆಯೋ ಅವನಿಂದ ವಿಷ್ಣುವು ತೃಪ್ತನಾಗುವುದಿಲ್ಲ: ಸ್ವಧರ್ಮಾಚರಣೆಯಿಂದಲೇ ತೃಪ್ತನಾಗುತ್ತಾನೆ.' ಆದ್ದರಿಂದ ಧರ್ಮಾನುಷ್ಠಾನವಿಲ್ಲದೆ 'ಭಕ್ತಿಯೊಂದಿದ್ದರೆ ಸಾಕು' ಎಂದು ಬಾಯ್ಮಾತಿಗೆ ಹೇಳುವುದು ಆಲಸ್ಯದ ಕುರುಹು ಎಂದು ತಿಳಿಯಬಹುದು.

2. ಶಾಸ್ತ್ರೋಕ್ತ ಕರ್ಮಗಳಲ್ಲಿ ಯಾವುವು ಸಕಾಮ ಕರ್ಮಗಳೋ, ಚಿತ್ತ ವಿಕ್ಷೇಪವನ್ನು ಉಂಟುಮಾಡುವುವೋ, ಅಂಥವನ್ನು ತ್ಯಜಿಸಿ ಅನನ್ಯ ಭಕ್ತಿ ಸಾಧನೆಗೆ ವಿರುದ್ಧವಲ್ಲದ ಇತರ ಕರ್ಮಗಳನ್ನು ಮಾತ್ರ ಮಾಡಬೇಕು.

ನಿಶ್ಚಯವು ದೃಢವಾದ ನಂತರವೂ ಶಾಸ್ತ್ರರಕ್ಷಣೆಯು ಬೇಕೇ ಬೇಕು ಅನ್ನುತ್ತಾರೆ

ನಾರದರು. 'ಊರ್ಧ್ವಂ' ಶಬ್ದದ ಮುಂದೆ 'ಅಪಿ' ಎಂಬ ಶಬ್ದವನ್ನೂ ಸೇರಿಸಿ 'ಊರ್ಧ್ವಮಪಿ' ಎಂದು ಅರ್ಥ ಮಾಡಿಕೊಳ್ಳಬೇಕು.

ನಿಶ್ಚಯವು ಅಥವಾ ಗೌಣೀ ಭಕ್ತಿಯು ದೃಢವಾದ ಮೇಲೂ ಶಾಸ್ತ್ರದ ಮಾರ್ಗದರ್ಶನ –ಗುರಿಮುಟ್ಟುವವರೆಗೆ ಬೇಕಾಗುವುದರಿಂದ ಅದನ್ನು ಕೈ ಬಿಡಬಾರದು. ಶಾಸ್ತ್ರವು ಅತೀಂದ್ರಿಯ ಅನುಭವಗಳನ್ನು ಪಡೆದಿರುವ ಋಷಿಗಳ ಉಪದೇಶವನ್ನೊಳಗೊಂಡಿದೆ. ಶ್ರುತಿಯೇ ಹೇಳುವಂತೆ 'ವೇದವು ಮನುಷ್ಯನ ನಿಃಶ್ವಾಸದಂತೆ ಸಹಜವಾಗಿ ಸೃಷ್ಟಿಯ ಜೊತೆ ಜೊತೆಗೆ ಪರಮಾತ್ಮನಿಂದಲೇ ಹೊರತೋರಿಕೊಳ್ಳುವುದೇ ಹೊರತು ಪುರುಷ ಬುದ್ಧಿಯ ಪ್ರಯತ್ನದಿಂದ ಬಂದದ್ದಲ್ಲ. **ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತತ್ ಯದೃಗ್ವೇದೋಯಜುರ್ವೇದಃ.....................'**

(ಬೃಹದಾರಣ್ಯಕ ಉಪನಿಷತ್ 2.4.10). ಸಾಧನೆಯ ಬಗ್ಗೆ ಸ್ಪಷ್ಟ ತಿಳುವಳಿಕೆಗೆ, ಆಗಾಗ ಉದ್ಭವಿಸುವ ಪ್ರಶ್ನೆಗಳಿಗೆ, ಸಂಶಯಗಳಿಗೆ, ವಿಘ್ನಗಳಿಗೆ ಪರಿಹಾರವನ್ನು ಕಂಡುಕೊಳ್ಳಬೇಕಾದರೆ ಶಾಸ್ತ್ರವನ್ನು ಆಶ್ರಯಿಸಲೇ ಬೇಕು.

ಮೇಲಿನ ಸೂತ್ರಗಳನ್ನು ವ್ಯಾಖ್ಯಾನಿಸುವಂತಹ ಪುರಂದರದಾಸರ ಕೀರ್ತನೆಗಳು ಪ್ರಸಿದ್ಧವಾಗಿವೆ. ಶಾಸ್ತ್ರವು ವಿಧಿಸುವಂತಹ ಕರ್ಮಗಳನ್ನು ಶ್ರದ್ಧೆಯಿಂದ ಆಚರಿಸುವವನನ್ನು ಧರ್ಮವೇ ರಕ್ಷಿಸುತ್ತದೆ(**ಧರ್ಮೋ ರಕ್ಷತಿ ರಕ್ಷಿತಃ**) ಎಂಬುದನ್ನು ಈ ಕೆಳಗಿನ ಕೀರ್ತನೆಯಲ್ಲಿ ಹೇಳುತ್ತಾರೆ[3]:

**ಧರ್ಮ ಏಕಃ ಸಹಾಯಃ ॥ಪ॥**

**ಪರಬ್ರಹ್ಮ ಮೂರುತಿಯ ಪಾದವ ಭಜಿಪ ಸುಜನರಿಗೆ ॥ಅ.ಪ॥**

**ಹರಿಭಕುತಿಯನು ಮಾಳ್ಪ ಪರಮಭಾಗವತರಿಗೆ ।**

**ಕರೆದು ಭೂಸುರರಿಗನ್ನವನಿತ್ತಗೆ ॥**

**ಪರಸತಿಯರನು ಕಂಡು ಮನವೆಳಸದಿದ್ದವಗೆ ।**

**ಪರರುಪದ್ರವ ಬಿಡಿಸಿ ಪೊರೆವ ಸುಜನರಿಗೆಲ್ಲ ॥೧॥**

ಶ್ರುತಿಗಳು ಲೋಕಕಲ್ಯಾಣದ ದೃಷ್ಟಿಯಿಂದ ಏನು ಮಾಡಬೇಕು, ಏನು ಮಾಡಬಾರದು ಎಂದು ವಿಧಿ, ನಿಷೇಧಗಳನ್ನು ಹೇಳುತ್ತವೆಯೋ,[4] ಅದನ್ನು ಶ್ರದ್ಧೆಯಿಂದ ಆಚರಿಸುವವನನ್ನು ಅವನ ಧರ್ಮವೇ ರಕ್ಷಿಸುತ್ತದೆ ಎನ್ನುವುದನ್ನು ಸರಳವಾಗಿ ನಿರೂಪಿಸಿದ್ದಾರೆ ಪುರಂದರದಾಸರು. ಇಂತಹ ಧರ್ಮವನ್ನು ಇಂದಲ್ಲ ನಾಳೆ ಆಚರಿಸುತ್ತೇನೆ ಎಂದು ಔದಾಸೀನ್ಯ ತೋರುವವರಿಗೆ ಪುರಂದರದಾಸರು ಹೀಗೆ ಎಚ್ಚರಿಸುತ್ತಾರೆ (**ಧರ್ಮದೊರಕೊಂಬುವುದೆ**[5] ಎಂಬ ಕೀರ್ತನೆಯಲ್ಲಿ):

**ಈಗ ಮಾಡುವ ಧರ್ಮ ನಾಳೆಯೆಂದೆನಬೇಡ ।**

**ನೀವಾರು ನಾವಾರು ಎಲೆ ಮನುಜ ॥**

**ಊಳಿಗದವರೆಂಬ ಭಟರು ಬಂದೆಳೆವಾಗ ।**

**ನಾಳೆ ಮಾಳ್ಪೆನೆನೆ ಬಿಡುವರೆ ಮನುಜ ॥**

ಯಾವ ಕ್ಷಣದಲ್ಲಿಯೂ ಮೃತ್ಯುವು ಬರಬಹುದು ಆದ್ದರಿಂದ

**ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ ॥ಪ॥**

**ಪೆರ್ಮೆಯಿಂ ದೇಹ ನಂಬಬೇಡಿ ಕಾಣಿಕೊ ॥ಅ.ಪ॥**[6]

'ಸತ್ಯಂ ವದ ಧರ್ಮಂ ಚರ', 'ಸತ್ಯವನ್ನೇ ನುಡಿ, ಧರ್ಮದಲ್ಲೇ ನಡೆ' ಎನ್ನುವ ಶ್ರುತಿಗಳ ಸಂದೇಶವನ್ನು ಬಸವೇಶ್ವರರು ಮನಸ್ಸಿಗೆ ನಾಟುವಂತೆ ಸರಳವಾಗಿ, ಸುಂದರವಾಗಿ ಹೇಳಿದರು[7]:

**ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ,**

**ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ,**

**ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,**

**ಇದೇ ಅಂತರಂಗ ಶುದ್ಧಿ ! ಇದೇ ಬಹಿರಂಗ ಶುದ್ಧಿ !**

**ಇದೇ ನಮ್ಮ ಕೂಡಲಸಂಗಯ್ಯನೊಲಿಸುವ ಪರಿ.**

ಸಾಧಕನು ಅಂತರಂಗ, ಬಹಿರಂಗದೊಳು ಶುದ್ಧನಾದಲ್ಲಿ ಪರಾಭಕ್ತಿ ಒಲಿಯುವುದರಲ್ಲಿ ಯಾವುದೇ ಸಂಶಯವಿಲ್ಲ.

ಇನ್ನೊಂದು ಪ್ರಸಿದ್ಧವಾದ ವಚನದಲ್ಲಿ ದೇವಲೋಕ ಮರ್ತ್ಯಲೋಕವೆಂಬುದು ಬೇರೆಲ್ಲೂ ಇಲ್ಲ.[8]

**ಸತ್ಯವನುಡಿವುದೇ ದೇವಲೋಕ ! ಮಿಥ್ಯವ ನುಡಿವುದೇ ಮರ್ತ್ಯಲೋಕ !**

**ಆಚಾರವೇ ಸ್ವರ್ಗ ! ಅನಾಚಾರವೇ ನರಕ !**

**ನೀವೇ ಪ್ರಮಾಣ ಕೂಡಲಸಂಗಮದೇವ.**

ಮಹಾಭಾರತದಲ್ಲಿ ವ್ಯಾಸಮಹರ್ಷಿಗಳು ಹೇಳುತ್ತಾರೆ:

**ಆಚಾರಃ ಪ್ರಥಮೋಧರ್ಮಃ ಧರ್ಮಸ್ಯ ಮುನಯೋ ಗತಿಮ್ ।**

**ಸರ್ವಸ್ಯ ತಪಸೋ ಮೂಲಮಾಚಾರಂ ಜಗೃಹುಃ ಪರಮ್ ॥**– ಮಹಾಭಾರತ, i. 108

ಆಚಾರವು ಮೊದಲ ಧರ್ಮ. ಚಿಂತಕರಾದ ಮನನ ಶೀಲ ಮುನಿಗಳೇ ಸಚ್ಚಿಂತನೆಯೇ ಎಲ್ಲ ತಪಸ್ಸಿನ ಮೂಲ, ಆದ್ದರಿಂದ ಸದಾಚಾರವೇ ಸರ್ವಶ್ರೇಷ್ಠ ಎಂದಿದ್ದಾರೆ.[9] ಬಸವೇಶ್ವರರು ಈ ಚಿಂತನೆಯನ್ನು ಮೇಲಿನ ವಚನಗಳಲ್ಲಿ ನಿರೂಪಿಸಿದ್ದಾರೆ. ಧರ್ಮನಿಷ್ಠೆ ಸುದೃಢವಾಗಿರಬೇಕು ಎಂದು ನಿರೂಪಿಸಲು ಹೇಳುತ್ತಾರೆ[10] :

**ಛಲಬೇಕು ಶರಣಂಗೆ ಪರಧನವನೊಲ್ಲೆಂಬ !**

**ಛಲಬೇಕು ಶರಣಂಗೆ ಪರಸತಿಯನೊಲ್ಲೆಂಬ !**

**ಛಲಬೇಕು ಶರಣಂಗೆ ಪರದೈವವನೊಲ್ಲೆಂಬ !**

**ಛಲಬೇಕು ಶರಣಂಗೆ ಲಿಂಗಜಂಗಮವೊಂದೆಂಬ !**

**ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ !**

**ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ.**

ಈ ಮೇಲಿನ ವಚನಗಳು ಹಾಗೂ ಕೀರ್ತನೆಗಳಲ್ಲಿ ಆಧ್ಯಾತ್ಮಿಕ ಚಿಂತನೆಯ ಜೊತೆಗೆ ಲೋಕಕಲ್ಯಾಣದ ವಿಶಾಲ ದೃಷ್ಟಿಯನ್ನೊಳಗೊಂಡ, ಸಮಾಜಮುಖಿ ಚಿಂತನೆಯನ್ನು ಗ್ರಹಿಸಬಹುದಾಗಿದೆ. ಇವು ಎಲ್ಲಾ ಮತಧರ್ಮಗಳೂ ಸಾರುವಂತಹ ಎಲ್ಲರೂ ಆಚರಿಸಲು ಯೋಗ್ಯವಾದ ತತ್ತ್ವಗಳಾಗಿವೆ. ಕ್ರೈಸ್ತ ಧರ್ಮದ ದಶಭಗವನ್ನಿಯಮಗಳ ಸಂಕ್ಷಿಪ್ತ ರೂಪ ಇಂತಿವೆ [11]:

1. **ಭಗವದ್ತ್ರೈತ ನಿಜವ್ಯಕ್ತಿಯನ್ನು ಸನ್ಮಾನಿಸು.**
2. **ಸ್ವಾಮಿ ಭಗವಂತನ ನಾಮದ ದುರುಪಯೋಗ ಮಾಡಬೇಡ.**
3. **ಸಬ್ಬತಿನ ದಿನವನ್ನು ಪವಿತ್ರವಾಗಿರಿಸು.**
4. **ಮಾತಾಪಿತರನ್ನು ಗೌರವಿಸು.**
5. **ಕೊಲ್ಲಬೇಡ.**
6. **ವ್ಯಭಿಚಾರ ಮಾಡಬೇಡ.**
7. **ಕದಿಯಬೇಡ.**
8. **ಸುಳ್ಳು ಸಾಕ್ಷಿ ಹೇಳಬೇಡ.**
9. **ನೆರೆಯವನ ಪತ್ನಿಯನ್ನು ಆಶಿಸಬೇಡ.**
10. **ನೆರೆಯವನ ವಸ್ತುಗಳನ್ನು ಆಶಿಸಬೇಡ.**

ಬ್ರಹಸ್ಪತಿ ಧರ್ಮಸೂತ್ರವು ಹೇಳುತ್ತದೆ : 'ನಾವು ಕೇವಲ ಶಾಸ್ತ್ರಗಳನ್ನೇ ಪ್ರಮಾಣಗಳನ್ನಾಗಿ ಪರಿಗಣಿಸದೆ ಯುಕ್ತಿಯನ್ನು ಧರ್ಮದ ಪ್ರಮಾಣವನ್ನಾಗಿ ಪರಿಗಣಿಸಬೇಕು–

**ಕೇವಲಂ ಶಾಸ್ತ್ರಮಾಶಿತ್ಯನ ಕರ್ತವ್ಯೋ ವಿನಿರ್ಣಯಃ ।**

**ಯುಕ್ತಿ ಹೀನೇ ವಿಚಾರೇತು ಧರ್ಮಹಾನಿಃ ಪ್ರಜಾಯತೆ ॥**

ಕೇವಲ ಶಾಸ್ತ್ರಗಳನ್ನೇ ಆಧರಿಸಿ ನಾವು ಮಾಡಬೇಕಾದ ಕರ್ತವ್ಯಗಳನ್ನು ನಿರ್ಣಯಿಸಬಾರದು. ಏಕೆಂದರೆ ಯುಕ್ತಿಯಿಲ್ಲದ ವಿಚಾರದಿಂದ ಧರ್ಮ ಹಾನಿಯುಂಟಾಗುತ್ತದೆ. ಆದ್ದರಿಂದ ಶಾಸ್ತ್ರಾರ್ಥಗಳನ್ನೂ ಸಹ ಲೋಕ ವ್ಯವಹಾರದಿಂದಲೇ ತಿಳಿಯಬೇಕು. ಲೋಕವ್ಯವಹಾರವನ್ನು ಪರಾಶರರು ಲೋಕ ಸಂಗ್ರಹ ಎಂದಿದ್ದಾರೆ. ಅಲ್ಲದೆ ಲೋಕಸಂಗ್ರಹವೆಂದರೆ ಜ್ಞಾನಿಗಳಾದ ಜನರು ನಡೆದು ತೋರಿಸಿದ ದಾರಿ ಎಂದೂ ಹೇಳಿದ್ದಾರೆ.'[12]

ಧರ್ಮದ ಮಾರ್ಗದಲ್ಲಿ ನಡೆಯುವಂತಹ ಸಂದರ್ಭದಲ್ಲಿ ಅನೇಕ ಸವಾಲುಗಳು, ಸಂದಿಗ್ಧ ಪರಿಸ್ಥಿತಿಗಳು ಎದುರಾಗುವುದು ಸಹಜ. ಅಂತಹ ಸಂದರ್ಭದಲ್ಲಿ ಶಾಸ್ತ್ರದ

ಆಧಾರ ಹಾಗೂ ಮಹಾತ್ಮರು ನಡೆದ ಹಾದಿ ಇವೆರಡನ್ನೂ ಪರಾಮರ್ಶಿಸಿ ಧರ್ಮದ ಮರ್ಮವನ್ನು ಅರಿತು ಯುಕ್ತಿಯುಕ್ತವಾದ ನಿರ್ಣಯವನ್ನು ಕೈಗೊಳ್ಳಬೇಕಾಗುತ್ತದೆ. ಎಂಬುವುದನ್ನು ಬಹಳ ಸೂಕ್ಷ್ಮವಾಗಿ ಪುರಂದರದಾಸರು ಕೆಳಗಿನ ಕೀರ್ತನೆಗಳಲ್ಲಿ ಹೇಳಿದ್ದಾರೆ.[13]:

**ಧರ್ಮವೇ ಜಯವೆಂಬ ದಿವ್ಯಮಂತ್ರ ॥ಪ॥**

**ಮರ್ಮವನ್ನರಿತು ಮಾಡಲು ಬೇಕು ತಂತ್ರ ॥ಅ.ಪ॥**

**ವಿಷವಿಕ್ಕಿದವಗೆ ಷಡ್ರಸವನುಣಿಸಲುಬೇಕು ।**

**ದ್ವೇಷಮಾಡಿದವನ ಪೋಷಿಸಲು ಬೇಕು ॥**

**ಪುಸಿಯಾಡಿ ಕೆಡಿಸುವನ ಹಾಡಿ ಹರಸಲು ಬೇಕು ।**

**ಮೋಸ ಮಾಡುವನ ಹೆಸರು ಮಗನಿಗಿಡಬೇಕು ॥೧॥**

**ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು ।**

**ಬಂಧನದೊಳಿಟ್ಟವರ ಬೆರೆಯಬೇಕು ॥**

**ಕೊಂದ ವೈರಿಯ ಮನೆಗೆ ನಡೆದು ಹೋಗಲುಬೇಕು ॥**

**ಕುಂದೆಣಿಸುವವರ ಗೆಳೆತನ ಮಾಡಬೇಕು ॥೨॥**

**ಕೊಂಡೊಯ್ದು ಬಡಿಯುವರ ಕೊಂಡಾಡುತಿರಬೇಕು ।**

**ಕಂಡು ಸಹಿಸದವರ ಕರೆಯಬೇಕು ॥**

**ಪುಂಡರೀಕಾಕ್ಷ ಶ್ರೀ ಪುರಂದರ ವಿಠಲನ ।**

**ಕೊಂಡಾಡಿ ತಾ ಧನ್ಯನಾಗಬೇಕು ॥೩॥**

ಮೇಲಿನ ಕೀರ್ತನೆಯಲ್ಲಿ ಆಧಾರಶ್ರುತಿಯಾಗಿ ಕಾಣುವಂತಹ ಧರ್ಮಲಕ್ಷಣವೆಂದರೆ ಅಹಿಂಸೆ ಹಾಗೂ ಕ್ಷಮೆ. ತನಗೆ ಕೇಡನ್ನು ಬಗೆದವರಿಗೂ ಲೇಸನ್ನೇ ಬಯಸಬೇಕು ಎನ್ನುವ ವಿಶಾಲ ಮನೋಭಾವ ಅತೀ ಆವಶ್ಯಕ. ಇದರಿಂದ ತತ್ಕ್ಷಣದಲ್ಲಿ ನಾವು ಕಷ್ಟವನ್ನು ಎದುರಿಸುವ ಸಂದರ್ಭ ಬಂದರೂ ಅಂತಿಮವಾಗಿ ಧರ್ಮಕ್ಕೇ ಜಯವಾಗುವ ಕಾರಣ ವೈಯಕ್ತಿಕವಾಗಿಯೂ, ಸಮಾಜದ ಹಿತದೃಷ್ಟಿಯಿಂದಲೂ ಇದು ಆವಶ್ಯಕವಾದ ಗುಣ ಎಂದು ಪುರಂದರದಾಸರು ಮೇಲಿನ ಕೀರ್ತನೆಯಲ್ಲಿ ನಿರೂಪಿಸುತ್ತಾರೆ. ಅಹಿಂಸೆ ಹಾಗೂ ಕ್ಷಮೆ. ಧರ್ಮದ ಪ್ರಮುಖ ಲಕ್ಷಣಗಳು (**"ಅಹಿಂಸಾ ಪರಮೋ ಧರ್ಮಃ** – ಅಹಿಂಸೆಯೇ ಶ್ರೇಷ್ಠವಾದ ಧರ್ಮ – ಮಹಾಭಾರತ, ಅನುಶಾಸನ ಪರ್ವ, 115.1" ಹಾಗೆಯೇ ಕೌಟಿಲ್ಯನ ಅರ್ಥಶಾಸ್ತ್ರವು **"ಅಹಿಂಸೆ, ಸತ್ಯ, ಶೌಚ, ಅನಸೂಯಾ, ಆನೃಶಂಸ್ಯ ಮತ್ತು ಕ್ಷಮೆಗಳನ್ನು ಎಲ್ಲರೂ ಆಚರಿಸುವುದೇ ಧರ್ಮ"**–1.3.13 ಎಂದು ತಿಳಿಸುತ್ತದೆ).

ಶಾಸ್ತ್ರ ಸಮ್ಮತವಾದ, ಧರ್ಮನಿಷ್ಠವಾದ ಬಾಳ್ವೆಯನ್ನು ನಡೆಸಬೇಕಾದರೆ ಮನಸ್ಸಿನಲ್ಲಿ ಮೂಡುವ ಸಂಕಲ್ಪಗಳಲ್ಲಿ ಸರಿತಪ್ಪುಗಳನ್ನು ನಿಶ್ಚಯಿಸುವ ಸಾಮರ್ಥ್ಯವುಳ್ಳ ಬುದ್ಧಿಯು (ನಿಶ್ಚಯಾತ್ಮಿಕಾ ಬುದ್ಧಿಃ) ಹರಿತಗೊಂಡಿಬೇಕು. ಭಗವತ್ಕೃಪೆ ಎಂಬ ಬೆಳಕಿನಿಂದ ಬೆಳಗಲ್ಪಡಬೇಕು. ಮತಿ ದಿವ್ಯಮತಿಯಾಗಬೇಕು. ಇಲ್ಲವಾದರೆ ನಾರದರು ಮೇಲಿನ ಸೂತ್ರದಲ್ಲಿ ಹೇಳುವಂತೆ '**ಅನ್ಯಥಾ ಪಾತಿತ್ಯ ಶಂಕಯಾ ||೧೩||**– ಇಲ್ಲದಿದ್ದರೆ ಪತಿತನಾಗುವ ಭಯವುಂಟು'. ಯಾರು ಅನನ್ಯ ಭಾವದಿಂದ ಭಗವಂತನಿಗೆ ಶರಣಾಗುತ್ತಾರೋ ಅವರಿಗೆ ಆ ದಿವ್ಯ ಮತಿಯನ್ನು ಕರುಣಿಸುತ್ತಾನೆ ಭಗವಂತ. ಭಗವದ್ಗೀತೆಯಲ್ಲಿ (10.10) ಇದನ್ನು ಹೇಳಲಾಗಿದೆ:

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**

**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥**

'ಹೀಗೆ ಸದಾ ನನ್ನಲ್ಲಿ ನೆಟ್ಟ ಮನಸ್ಸುಳ್ಳವರಾಗಿ ಪ್ರೀತಿಯಿಂದ ನನ್ನನ್ನು ಭಜಿಸುತ್ತಿರುವ ಅವರಿಗೆ (ಭಕ್ತರಿಗೆ) ನಾನು ಬುದ್ಧಿಯೋಗವನ್ನು ಕರುಣಿಸುತ್ತೇನೆ. ಅದರ ಮೂಲಕ ಅವರು ನನ್ನನ್ನು ಹೊಂದುತ್ತಾರೆ.'

ಈ ಸ್ಥಿತಿ ಎಂತಹುದು ಎನ್ನುವುದನ್ನು ದಿವ್ಯಮಾತೆ ಶ್ರೀ ರಮಾದೇವಿಯವರು 'Bhakthi-means and the end' ಎನ್ನುವ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ [14] :

'Normal life and God love can exist together. Only, the vision is transformed. Mundane relations are raised into a state of divine relation ............. God now holds the reins of his chariot of life. God makes him do all the duties in meticulous perfection. God solves all problems. The body and mind become instruments in God's hands. Every action reveals the perfection of God, the splendour of dharma. God becomes the prompter, the doer, the enjoyer, everything. Bliss becomes the constant experience.'

'ಸಾಧಾರಣ ಜೀವನ ಹಾಗೂ ಭಗವತ್ಪ್ರೇಮ ಜೊತೆಯಾಗಿ ಸಾಗಲು ಸಾಧ್ಯ. ದೃಷ್ಟಿಕೋನ ಬದಲಾಗಬೇಕು ಅಷ್ಟೆ. ಲೌಕಿಕವಾದ ಸಂಬಂಧಗಳು ಪಾರಮಾರ್ಥಿಕ ನೆಲೆಗೆ ಎತ್ತರಿಸಲ್ಪಡುತ್ತದೆ......... ಅವನ (ಶರಣಾದ ಭಕ್ತನ) ಜೀವನದ ರಥದ ಕಡಿವಾಣ ಭಗವಂತನೇ ಹಿಡಿಯುತ್ತಾನೆ. ಭಗವಂತ ಆ ಭಕ್ತನು ತನ್ನ ಎಲ್ಲಾ ಕರ್ತವ್ಯಗಳನ್ನು ಅನನ್ಯ ಪರಿಪೂರ್ಣತೆಯಿಂದ ನಿರ್ವಹಿಸುವಂತೆ ಮಾಡುತ್ತಾನೆ. ಅವನ ಎಲ್ಲಾ ಸಮಸ್ಯೆಗಳನ್ನು ಭಗವಂತನೇ ಬಗೆಹರಿಸುತ್ತಾನೆ. ಅವನ ದೇಹ ಮತ್ತು ಮನಸ್ಸು ಭಗವಂತನ ಕೈಯಲ್ಲಿ ಉಪಕರಣಗಳಾಗುತ್ತವೆ. ಅವನ ಪ್ರತಿಯೊಂದು ಕ್ರಿಯೆಗಳೂ ಭಗವಂತನ ಪರಿಪೂರ್ಣತೆಯನ್ನು, ಧರ್ಮದ ಮಹಿಮೆಯನ್ನು ಅನಾವರಣಗೊಳಿಸುತ್ತವೆ. ಭಗವಂತನೇ ಪ್ರೇರಕ, ಕರ್ತೃ, ಭೋಕ್ತೃ ಎಲ್ಲವೂ ಆಗುತ್ತಾನೆ. ಆನಂದವು ಅವನ

ನಿರಂತರ ಅನುಭವವಾಗುತ್ತದೆ.'

ಇಂತಹ ಸ್ಥಿತಿ ಪ್ರಾಪ್ತವಾಗಬೇಕಾದರೆ, ಮತಿ ದಿವ್ಯಮತಿಯಾಗಬೇಕು, ಬುದ್ಧಿಯು ಬೋಧಸ್ವರೂಪವಾಗಬೇಕು (ಪ್ರಜ್ಞೆಯಿಂದ ಬೆಳಗಲ್ಪಡಬೇಕು). ಇದಕ್ಕಾಗಿ ಗಾಯತ್ರೀ ಮಂತ್ರದಲ್ಲಿ ನಮ್ಮ ಪ್ರಾರ್ಥನೆ 'ನಮ್ಮ ಬುದ್ಧಿಯನ್ನು ಪ್ರಚೋದಿಸು (**ಧಿಯೋ ಯೋ ನಃ ಪ್ರಚೋದಯಾತ್**)' ಎಂಬುದಾಗಿದೆ.

ಇದೇ ಪ್ರಾರ್ಥನೆಯನ್ನು ಪುರಂದರದಾಸರು ದೇವಿ ಸರಸ್ವತಿಯಲ್ಲಿ ಮಾಡುತ್ತಾರೆ[15] :

**'ಕೊಡು ಬೇಗ ದಿವ್ಯ ಮತಿ ಸರಸ್ವತಿ । ಕೊಡು ಬೇಗ ದಿವ್ಯ ಮತಿ ॥'**

ಬೃಹಸ್ಪತಿಯು ಧರ್ಮಸೂತ್ರದಲ್ಲಿ ಹೇಳುತ್ತಾನೆ[16] :

**ಏತಾನಿ ಲೋಕಗುಪ್ತ್ಯರ್ಥಂ ಕಲೇರಾದೌ ಮಹಾತ್ಮಭಿಃ ।**

**ನಿವರ್ತಿತಾನಿ ಕರ್ಮಾಣಿ ವ್ಯವಸ್ಥಾಪೂರ್ವಕಂ ಬುಧೈಃ ॥**

**ಸಮಯಶ್ಚಾಪಿ ಸಾಧೂನಾಂ ಪ್ರಮಾಣಂ ವೇದವದ್ಭವೇತ್ ॥**

'ಮಹಾತ್ಮರಾದವರು ಜನಕಲ್ಯಾಣಕ್ಕಾಗಿ ಲೋಕಹಿತ ಆಚಾರಗಳನ್ನು ಅನುಭವ ಪೂರ್ವಕವಾಗಿ ಪಾಲಿಸಿಕೊಂಡು ಬಂದಿದ್ದಾರೆ. ಸಜ್ಜನರ ಆಚಾರ ವಿಚಾರಗಳೂ ವೇದದಷ್ಟೇ ಪ್ರಮಾಣಭೂತವಾದುವುಗಳು. ಆದ್ದರಿಂದ ಲೋಕನಿರ್ಣಯವೇ ಧರ್ಮಶಾಸ್ತ್ರದಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತದೆ.'

ಈ ಮಾತನ್ನು ಪುಷ್ಟೀಕರಿಸುವಂತೆ ಪುರಂದರದಾಸರು **'ಇರಬೇಕು ಇರದಿರಬೇಕು'** ಎನ್ನುವ ಕೀರ್ತನೆಯಲ್ಲಿ ಪ್ರಾಚೀನರಾದ ಮಹಾತ್ಮರು ಹೇಗೆ ಬಾಳಿ ಬದುಕಿದ್ದಾರೋ ಅವರಂತೆ ನಾವು ಈ ಸಂಸಾರದಲ್ಲಿ ಇರಬೇಕು ಎಂದು ಜನಕ, ದಿಧೀಚಿ ಮೊದಲಾದ ಮಹಾತ್ಮರ ಉದಾಹರಣೆಯನ್ನು ಕೊಡುತ್ತಾರೆ[17] :

**ಇರಬೇಕು ಇರದಿರಬೇಕು ॥ಪ॥ ಸಂ।**

**ಸಾರದಿ ಜನಕಾದಿ ರಾಜ ಋಷಿಗಳಂತೆ ॥ಅ.ಪ॥**

**ಮಿಥಿಲಾಪಟ್ಟಣವು ದಹಿಸಿತೆಂಬುದ ಕೇಳಿ।**

**ಮಿಥಿಲೇಶ "ಮಮ ಕಿಂಚಿನ್ನ ದಹ್ಯತೇ" ಎಂಬಂತೆ । ಇರಬೇಕು ॥೧॥**

**ದಧೀಚಿ ಋಷಿ ತನ್ನ ಅಸ್ಥಿ ಸುರರಿಗಿತ್ತು ।**

**ಮಧುವೈರಿ ವೈಕುಂಠ ಪುರವಿತ್ತ ತೆರದಂತೆ । ಇರಬೇಕು ॥೨॥**

**ಪುರಂದರವಿಠಲನ್ನ ದಾಸರ ಸಂಗಡ ।**

**ಪುತ್ರಮಿತ್ರ ಕಳತ್ರ ಬಂಧುಗಳಂತೆ । ಇರಬೇಕು ॥೩॥**

ಸಂಸಾರದಲ್ಲಿ ತಾದಾತ್ಮ್ಯವಿರಬಾರದು ಎನ್ನುವುದನ್ನು ನಿರೂಪಿಸಲು ಜನಕನ ಉದಾಹರಣೆಯನ್ನು ಕೊಡುತ್ತಾರೆ. ವೇದಾಂತ ವಿಚಾರ ಶ್ರವಣದಲ್ಲಿ ತತ್ಪರನಾಗಿದ್ದ ಮಿಥಿಲೆಯರಸನಾದ ಜನಕ ಮಹಾರಾಜನಿಗೆ ಯಾರೋ ಬಂದು ಹೇಳಿದರಂತೆ

'ಮಿಥಿಲೆಗೆ ಬೆಂಕಿ ಬಿತ್ತು' ಎಂದು ಆಗ ಜ್ಞಾನಿಯಾದ ಜನಕ ಹೇಳುತ್ತಾನೆ. 'ನನ್ನದೇನೂ ಸುಟ್ಟು ಹೋಗಲಿಲ್ಲ, ಮಮ ಕಿಂಚಿನ್ನ ದಹ್ಯತೆ' ಎಂದು ಅಂದರೆ 'ನಾನು' ಅಂದರೆ ಈ ದೇಹವಲ್ಲ, ಮನಸ್ಸಲ್ಲ, ಬುದ್ಧಿಯಲ್ಲ, ಅರಸುತನವಲ್ಲ, ಮಿಥಿಲಾಪಟ್ಟಣವೂ ಅಲ್ಲ, ತಾನು ತೋಯದ, ಕರಗದ, ಒಣಗದ, ದಹಿಸದ ನಿತ್ಯವಾದ ಸತ್ಯವಾದ ಆತ್ಮ ಎನ್ನುವ ಸತ್ಯದಲ್ಲಿ ಅವನ ಪ್ರಜ್ಞೆ ಸದಾ ಪ್ರತಿಷ್ಠಿತವಾಗಿತ್ತು. ಹಾಗಾಗಿ 'ಮಮಕಿಂಚಿನ್ನ ದಹ್ಯತೇ' 'ನನ್ನದೇನೂ ಸುಟ್ಟು ಹೋಗಲಿಲ್ಲ' ಎಂದು ನಿರುಮ್ಮಳನಾಗಿ ಹೇಳಿದ ಜನಕ. ಅವನಂತೆ ನಿರ್ಲಿಪ್ತನಾಗಿರಬೇಕು ಸಂಸಾರದಲ್ಲಿ ಎಂದು ನಿರೂಪಿಸಿದ್ದಾರೆ ಪುರಂದರದಾಸರು.

ಅಂತೆಯೇ ಮುಂದಿನ ಚರಣದಲ್ಲಿ ದಧೀಚಿ ಋಷಿಯಂತಿರಬೇಕು ಎನ್ನುತ್ತಾರೆ. 'ದೇವತೆಗಳು ಒಮ್ಮೆ ಈತನಲ್ಲಿಗೆ ಬಂದು ತಮ್ಮ ಅಸ್ತ್ರಗಳನ್ನು ನ್ಯಾಸವಾಗಿಟ್ಟು ಹೋದರು. ಕಾಲಕ್ರಮದಲ್ಲಿ ಅವು ತುಕ್ಕು ಹಿಡಿಯಲಾರಂಭಿಸಿದವು. ಎಷ್ಟು ಕಾಲವಾದರೂ ಅವರು ಬಂದು ಅವುಗಳನ್ನು ಕೊಂಡು ಹೋಗಲಿಲ್ಲ. ಈ ಕಾರಣದಿಂದ ದಧೀಚಿ ಆ ಅಸ್ತ್ರಗಳನ್ನೆಲ್ಲ ಜಲದಲ್ಲಿ ಅಭಿಮಂತ್ರಿಸಿ ಪಾನ ಮಾಡಿಬಿಟ್ಟ. ಕೆಲಕಾಲದ ಮೇಲೆ ದೇವತೆಗಳು ಬಂದು ಅಸ್ತ್ರಗಳನ್ನು ಕೇಳಿದರು. ದಧೀಚಿ ನಡೆದ ಸಮಾಚಾರವನ್ನು ಹೇಳಿದ. ಆಗ ದಧೀಚಿ "ನಿಮ್ಮ ಅಸ್ತ್ರಗಳೆಲ್ಲವೂ ನನ್ನ ಬೆನ್ನು ಮೂಳೆಯಲ್ಲಿ ಬೆರೆತುಹೋಗಿವೆ. ನಾನು ಯೋಗಬಲದಿಂದ ದೇಹತ್ಯಾಗ ಮಾಡುತ್ತೇನೆ. ನೀವು ನನ್ನ ಬೆನ್ನ ಮೂಳೆಗಳನ್ನು ತೆಗೆದುಕೊಂಡು ನಿಮಗೆ ಬೇಕಾದ ಅಸ್ತ್ರಗಳನ್ನು ಮಾಡಿಸಿಕೊಳ್ಳಿರಿ" ಎಂದು ಹೇಳಿ ದೇಹ ತ್ಯಾಗಮಾಡಿದ ಬಳಿಕ ದೇವತೆಗಳು ದಧೀಚಿಯ ಮೂಳೆಗಳನ್ನು ಸಂಗ್ರಹಿಸಿ, ತಮಗೆ ಬೇಕಾದ ಆಯುಧಗಳನ್ನು ಮಾಡಿಸಿಕೊಂಡರು.[18]

ದೇವತೆಗಳ ರಕ್ಷಣೆಗೋಸ್ಕರ ಪರೋಪಕಾರಕ್ಕಾಗಿ ತನ್ನ ದೇಹವನ್ನೇ ತ್ಯಾಗ ಮಾಡಿದ ದಧೀಚಿ ಋಷಿಯಂತೆ, ಪರೋಪಕಾರಕ್ಕಾಗಿ ದೇಹವನ್ನು ಮೀಸಲಾಗಿಡಬೇಕೆಂದು ಪುರಂದರದಾಸರು ಹೇಳುತ್ತಾರೆ. ಮೇಲಿನ ಕೀರ್ತನೆಯಲ್ಲಿ ಕೊನೆಯ ಚರಣದಲ್ಲಿ ಭಗವಂತನ ದಾನರೊಂದಿಗೆ ಪುತ್ರ, ಮಿತ್ರ ಕಳತ್ರ ಬಾಂಧವರಂತೆ ಪ್ರೇಮದಿಂದಿರಬೇಕು ಎಂದು ಹೇಳುತ್ತಾರೆ ಪುರಂದರದಾಸರು.

ಅದೇ ರೀತಿಯಲ್ಲಿ ಪುರಂದರದಾಸರ ಮತ್ತೊಂದು ಕೀರ್ತನೆ 'ಇರಬೇಕು ಇಲ್ಲದಿರಬೇಕು' ಇದರಲ್ಲಿ ಹರಿದಾಸರು ಹೇಗೆ ಬಾಳಬೇಕು ಎಂದು ನಿರೂಪಿಸುತ್ತಾರೆ.[19]

**ಮಕ್ಕಳು ಮಡಿವಂತರಾದರೆ ಮನೆಯಲ್ಲಿ ।**

**ಅಕ್ಕರದಿಂದಲಿ ಕೂಡಿರಬೇಕು ॥**

**ಚಿಕ್ಕವನ ಬುದ್ಧಿ ಭೇರುಂಡನಾದರೆ ।**

**ಧಕ್ಕನವರ ಕೂಡ ಹೊರಗಾಗಬೇಕೈ ॥೧॥**

**ಕುಲಸತಿಯಾದರೆ ಕೂಡಿರಬೇಕು ।**

**ಸುಲಭದಿಂದಲಿ ಸ್ವರ್ಗ ಸೂರಾಡಬೇಕು ॥**

**ಕಲಹಗಂಟಿ ಸತಿ ಕರ್ಕಶೆಯಾದರೆ ।**

**ಹಲವು ಪರಿಯಿಂದ ಹೊರಗಾಗಬೇಕು ॥೨॥**

**ಹೀನನ ಕಂಡರೆ ಹಿಮ್ಮೆಟ್ಟಬೇಕು ।**

**ಜ್ಞಾನಿಗಳ ಕಂಡರೆ ಕೈಮುಗಿಯಬೇಕು ॥**

**ಸ್ವಾಮಿ ಶ್ರೀಪುರಂದರವಿಠಲರಾಯನ ।**

**ನಾನಾಬಗೆಯಿಂದ ಕೊಂಡಾಡಬೇಕು ॥೩॥**

ಇನ್ನು ನಿರ್ಲಿಪ್ತತೆಯಿಂದ ಬಾಳುವ ವಿಧಾನವನ್ನು **'ಈಸಬೇಕು ಇದ್ದು । ಜೈಸಬೇಕು'** ಎನ್ನುವ ಪ್ರಸಿದ್ಧವಾದ ಕೀರ್ತನೆಯಲ್ಲಿ ಗ್ರಾಮೀಣವಾದ ದೃಷ್ಟಾಂತಗಳ ಮೂಲಕ ನಿರೂಪಿಸಿದ್ದಾರೆ[20] ಪುರಂದರದಾಸರು: 'ಪದ್ಮಪತ್ರಮಿವಾಂಭಸಾ' 'ಕೆಸರಿನಲ್ಲಿರುವ ಕಮಲದಂತೆ' ಸಂಸಾರದಲ್ಲಿದ್ದರೂ ಇಲ್ಲದಂತೆ ಬಾಳಬೇಕು. ಎನ್ನುತ್ತಾರೆ ಪುರಂದರದಾಸರು ಮುಂದಿನ ಚರಣದಲ್ಲಿ

**ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ ।**

**ಆಸೆ ಮಾಡದಂತೆ ಧೀರಕೃಷ್ಣನ ನೆನೆಯುತ ॥೨॥**

ಎನ್ನುತ್ತಾರೆ ಉಳಿದೆಲ್ಲಾ ಹಣ್ಣುಗಳಲ್ಲಿ ಬೀಜ ಹಣ್ಣಿನ ಒಳಗಿದ್ದರೆ, ಗೇರುಹಣ್ಣಿನಲ್ಲಿ ಮಾತ್ರ ಬೀಜ ಹೊರಗೆ ಇದೆ, ಇದ್ದೂ ಇಲ್ಲದಂತಿದೆ. ಹಾಗೆಯೇ ಸಂಸಾರದಲ್ಲಿ ವಿಷಯವಸ್ತುಗಳಿಗೆ ಆಸೆ ಪಡದೆ ಭಗವಂತನನ್ನು ನೆನೆಯುತ್ತಾ ಗೇರುಹಣ್ಣಿನ ಬೀಜದಂತೆ ಇದ್ದೂ ಇಲ್ಲದಂತೆ ಇರಬೇಕು. ಮುಂದಿನ ಚರಣದಲ್ಲಿ

**ಮಾಂಸದಾಶೆಗೆ ಮತ್ಸ್ಯ ಸಿಲುಕಿ ಘಾಸಿ ಪಟ್ಟ ತೆರದಲ್ಲಿ ।**

**ಮೋಸಹೋಗದಾಂಗೆ ಪುರಂದರವಿಠಲನ ನೆನೆದು ॥**

ಎರೆ ಹುಳದ ಮಾಂಸವನ್ನು ತಿನ್ನಬೇಕು ಎಂಬ ಆಸೆಯಿಂದ ಮೀನುಗಳು ಬಂದು ಗಾಳಕ್ಕೆ ಬಾಯಹಾಕುತ್ತವೆ. ಗಾಳಕ್ಕೆ ಸಿಲುಕಿ ನಾಶವಾಗುತ್ತವೆ. ಅದೇ ರೀತಿ ಮನುಷ್ಯರು ಸಹ ವಿಷಯವಸ್ತುಗಳೆಂಬ ಮಾಂಸದಾಶೆಯಿಂದ ವಿಷಯಗಳನ್ನು ನೆಚ್ಚಿಕೊಂಡು ನಾಶ ಹೊಂದುತ್ತಾರೆ. ಹಾಗಾಗದಂತೆ ಪುರಂದರ ವಿಠಲನನ್ನು ನಿರಂತರ ಸ್ಮರಿಸುತ್ತಾ ಇದ್ದಲ್ಲಿ ಈ ಸಂಸಾರಸಾಗರವನ್ನು ಈಸಿ ಜೈಸಬಹುದು ಎಂದು ನಿರೂಪಿಸುತ್ತಾರೆ ಈ ಮೇಲಿನ ಕೀರ್ತನೆಯಲ್ಲಿ

ಇನ್ನು ಅನಿತ್ಯವಾದ ಜೀವನದಲ್ಲಿ ಸ್ವಂತಹಿತಕ್ಕೇ ಗಂಟುಬೀಳದೆ ಪರಹಿತ ಸಾಧಿಸಿ ಪರಮಾತ್ಮನ ಕೃಪೆಗೆ ಪಾತ್ರರಾಗಿ ಎಂಬ ಶಾಸ್ತ್ರಗಳ ಸಾರಭೂತವಾದ ಸಂದೇಶವನ್ನು ಕನಕದಾಸರು ಕೆಳಗಿನ ಕೀರ್ತನೆಯಲ್ಲಿ[21] ವಿವರಿಸುತ್ತಿದ್ದಾರೆ:

**ಏನು ಇಲ್ಲದ ಎರಡು ದಿನದ ಸಂಸಾರ**

**ಜ್ಞಾನದಲ್ಲಿ ದಾನಧರ್ಮದ ಮಾಡಿರಯ್ಯ ॥ಪ॥**

**ಹಸಿದು ಬಂದವರಿಗೆ ಅಶನವೀಯಲು ಬೇಕು ।**

**ಶಿಶುವಿಗೆ ಪಾಲ್ಬೆಣ್ಣೆಯನುಣಿಸಬೇಕು ।**

**ಹಸನಾದ ಭೂಮಿಯನು ಧಾರೆಯೆರೆಯಲು ಬೇಕು ।**

**ಪುಸಿಯಾಡದೆ ಭಾಷೆ ನಡೆಸಲೇ ಬೇಕು ॥1॥**

**ದೊರೆತನವು ಬಂದಾಗ ಕೆಟ್ಟ ನುಡಿಯಬೇಡ ।**

**ಸಿರಿ ಬಂದ ಕಾಲಕ್ಕೆ ಬಲು ಮೆರೆಯಬೇಡ ।**

**ಸಿರಿವಂತ ಶ್ರೀ ಕಾಗಿನೆಲೆಯೊದಿ ಕೇಶವನ ।**

**ಚರಣಕಮಲವ ಸೇರಿ ಸುಖಿಯಾಗು ಮನುಜ ॥**

ಇದಕ್ಕೆ ಸಂವಾದಿಯಾದ ಮತ್ತೊಂದು ಕೀರ್ತನೆ **'ಸಾರಿದೂರಿ ಹೇಳುತ್ತೇನೆ'** ಇದರಲ್ಲಿ ಜೀವನವನ್ನು ಉಜ್ಜೀವನವಾಗಿಸಲು ಏನೇನು ಮಾಡಬಾರದು ಎಂದು ಪಟ್ಟಿ ಮಾಡುತ್ತಾರೆ. [22]

**ಕೋಪವನ್ನೆ ಮಾಡದಿರು ಪಾಪಕೆ ಗುರಿಯಾಗದಿರು**

**ಶ್ರೀಪತಿಯ ನಾಮವನು ನೀ ಪಠಿಸುತಿರು ಮನವೆ ॥೧॥**

......................

**ನಿನ್ನ ನಿಜವ ನಂಬದಿರು ಉನ್ನತಾಸೆ ಮಾಡದಿರು**

**ಚೆನ್ನಾದಿಕೇಶವನ ಪಾದವನ್ನು ನೀನು ನಂಬು ಮನವೆ ॥೫॥**

ಕೋಪತಾಪ, ಪರನಿಂದೆ ಮೊದಲಾದ ದುಷ್ಕೃತ್ಯಗಳಿಗೆ ಅಂಟಿಕೊಳ್ಳದೆ, ಸುಕೃತದ ಭಗವದ್ಭಕ್ತಿಯನ್ನು ಬೆಳೆಸಿಕೊಳ್ಳಿ ಎಂದು ತಮ್ಮ ಮನಸ್ಸಿಗೆ ಹೇಳುತ್ತಾರೆ ಕನಕದಾಸರು ಮೇಲಿನ ಕೀರ್ತನೆಯಲ್ಲಿ.

ಶಾಸ್ತ್ರ ರಕ್ಷಣೆಯ ಅಥವಾ ಶಾಸ್ತ್ರ ವಿಹಿತ ಕರ್ಮಾದಿಗಳ ಬಗ್ಗೆ ತಮ್ಮ ನಿಶ್ಚಯವನ್ನು ತಿಳಿಸಿಯಾದ ಮೇಲೆ ಲೌಕಿಕ ಕರ್ಮಗಳ ಬಗ್ಗೆ ಹೇಳುತ್ತಾ ನಾರದರು :

**'ಲೋಕೋಪಿ ತಾವದೇವ ; ಭೋಜನಾದಿ ವ್ಯಾಪಾರಸ್ತು ಅಶರೀರಧಾರಣಾವಧಿ ॥೧೪॥**

ಲೋಕ (ವ್ಯಾಪಾರವೂ) ಅಲ್ಲಿಯವರೆಗೇ ; ಆದರೆ ಭೋಜನಾದಿ ವ್ಯಾಪಾರವು ಶರೀರವನ್ನು ಧರಿಸಿರುವವರೆಗೂ (ಇರುತ್ತದೆ).'[23]

'ಲೋಕ' ಎಂಬ ಪದದಿಂದ ಎರಡು ರೀತಿಯ ಕರ್ತವ್ಯ ಕರ್ಮಗಳನ್ನು ತಿಳಿಸಿದೆ :

1. ತನ್ನ ಶರೀರದ ರಕ್ಷಣೆ, ಪಾಲನೆ ;
2. ಪ್ರಾಪಂಚಿಕ ವ್ಯವಹಾರಿಕ ಕರ್ತವ್ಯಗಳು.

ಭಕ್ತಿ ಮಾರ್ಗವನ್ನು ಅವಲಂಬಿಸಿರುವ ಸಾಧಕನು ಲೋಕದ ಕರ್ತವ್ಯವನ್ನು ತನ್ನ ಅನನ್ಯತಾ ಸಾಧನೆಗೆ ಪ್ರತಿಕೂಲವಾಗದ ರೀತಿಯಲ್ಲಿ ನಡೆಸಿಕೊಂಡು ಹೋಗುತ್ತಾನೆ. ಭಕ್ತಿಯು ದೃಢವಾದ ನಂತರ, ಸಾಕ್ಷಾತ್ಕಾರವನ್ನು ಪಡೆದ ಮೇಲೆ, ಅವನು ಲೋಕದ ಅಜ್ಞಾನಿ ಜನರ ಮಾರ್ಗದರ್ಶನಕ್ಕಾಗಿ ಮಾಡುತ್ತಾ ಇರುತ್ತಾನೆ. ಆದರೆ ಶರೀರಕ್ಕೆ

ಸಂಬಂಧಪಟ್ಟ ಭೋಜನಾದಿ ಕರ್ಮಗಳನ್ನು ಮಾತ್ರ ಅವನು ಪ್ರಾರಬ್ಧ ಕರ್ಮವಿರುವವರೆಗೆ, ಮರಣ ಬರುವವರೆಗೆ, ಮಾಡಲೇಬೇಕಾಗುತ್ತದೆ.

ಚಿದಾನಂದ ಅವಧೂತರು ಆತ್ಮಜ್ಞಾನವನ್ನು ಹೊಂದಿದ (ಪರಾಭಕ್ತಿಯನ್ನು ಹೊಂದಿದ) ಯೋಗಿಯು ಯಾವ ರೀತಿ ನಿರ್ಲಿಪ್ತನಾಗಿರುತ್ತಾನೆ ಎನ್ನುವುದನ್ನು ಹೀಗೆ ನಿರೂಪಿಸುತ್ತಾರೆ[24]:

**ಯೋಗಿಯ ಲಕ್ಷಣವಿದೆ ಯೋಗಿಯ ಲಕ್ಷಣ ತಿಳಿಯದಡೆ ಇವನಿಂತು ಬಲ್ಲ ॥ಪ॥**

**ಮಾತಾಡೆ ಮಾತಿಲ್ಲ ಯಾತರ ಗೊಡವೆಯಿಲ್ಲ**

**ಭೂತ ಹೊಡೆದಂತೆ ಸುಮ್ಮನಿಹನು**

**ಭೀತಿಯ ತಾನಿಲ್ಲ ಈ ತೆರದಲಿ ತಾನಿರುತಿಹ ಯೋಗಿ ॥೨॥**

.......................................

**ಹೊರಗಿಯ ತೋರಿಹನು ಹೃದಯದ ಪರಿಯನ್ನುಅರಿವೆನೆಂದರೆ ಅರಿಗಳವಲ್ಲವೋಟ**

**ಇರುಳು ಹಗಲು ಚಿದಾನಂದ ಮೂರುತಿಯನು ಸ್ಥಿರವೀಗ ತಾನಂದು ನಿತ್ಯ ಬೆರತಿಹನು ॥೫॥**

ಹೀಗೆ ಕನ್ನಡದ ಸಂತರ ಪ್ರಕಾರವೂ ಭಕ್ತನಾದವನು ಶಾಸ್ತ್ರವು ವಿಧಿಸುವಂತಹ ಕರ್ಮಗಳನ್ನು ಆಚರಿಸುತ್ತ ಶಾಸ್ತ್ರರಕ್ಷಣೆಯನ್ನು ಮಾಡಲೇಬೇಕಾಗಿರುತ್ತದೆ.

---

## ಟಿಪ್ಪಣಿಗಳು

1. ನಾರದೀಯ ಪುರಾಣ, ಆಕರ : ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ, ಶ್ರೀ ರಂಗ ಡಿಜಿಟಲ್ ಸಾಫ್ಟ್‌ವೇರ್ ಟೆಕ್ನಾಲಜೀಸ್ (rgveda & puranas / granthomala / puranagalu / html / djvu / naradiya / volume )
   (ಭಾಗ1, ಅಧ್ಯಾಯ 3, ಪುಟ 51, ಶ್ಲೋಕ. 64)
2. ವೇದಾಂತ ಪ್ರಬೋಧ,. ಲೇ : ಸ್ವಾಮಿ ಪರಮಾನಂದ ಭಾರತೀ, ಪ್ರ: ಜ್ಞಾನ ಸಂವರ್ಧನೀ ಪ್ರತಿಷ್ಠಾನಮ್, ಸುಮುಖ ರೆಸಿಡೆನ್ಸಿ, 302, 3ನೇ ಮಹಡಿ, ವಿ. ಸೀತರಾಮಯ್ಯ ರಸ್ತೆ, ಗವಿಪುರಂ, ಬೆಂಗಳೂರು–19, 2004 ಅಧ್ಯಾಯ 12, ಪುಟ 252
3. ಪುರಂದರದಾಸರ ಕೀರ್ತನೆಗಳು, ಪುಟ 294, ಕೀ.ಸಂ. 470.
4. **ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾ ಪ್ರಮದಃ । ಆಚಾರ್ಯಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ । ಸತ್ಯಾನ್ನ ಪ್ರಮದಿತವ್ಯಂ । ಧರ್ಮಾನ್ನ ಪ್ರಮದಿತವ್ಯಂ । ಕುಶಲಾನ್ನ ಪ್ರಮದಿತವ್ಯಂ । ಭೂತ್ಯೈನ ಪ್ರಮದಿತವ್ಯಂ । ಕುಶಲಾನ್ನ ಪ್ರಮದಿತವ್ಯಂ । ಸಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ ॥ – ತೈತ್ತಿರೀಯ ಉಪನಿಷತ್ (1–11–1)**

   "ಸತ್ಯವನ್ನೇ ನುಡಿ, ಧರ್ಮವನ್ನೇ ಆಚರಿಸು ; ವೇದಾಧ್ಯಯನದ ವಿಷಯದಲ್ಲಿ ತಪ್ಪಬೇಡ. ಆಚಾರ್ಯನಿಗೆ ಗುರುದಕ್ಷಿಣೆಯನ್ನು ಅರ್ಪಿಸಿದ ಮೇಲೆ ಗ್ರಹಸ್ಥನಾಗಿ ವಂಶದ ಎಳೆಯನ್ನು ಬೆಳೆಸು. ಸತ್ಯದ ಬಗೆಗೆ ಪ್ರಮಾದವಿಲ್ಲದಂತೆ ಇರು. ಧರ್ಮದಿಂದ ಯಾವಾಗಲೂ ಚ್ಯುತನಾಗಬೇಡ. ಆತ್ಮರಕ್ಷಣೆಯಲ್ಲಿ ಹಾಗೂ ಕುಶಲವನ್ನು ಸಾಧಿಸುವುದರಲ್ಲಿ ತಪ್ಪಬೇಡ. ವಿಹಿತವಾದ ದ್ರವ್ಯಾರ್ಜನೆಯ ವಿಷಯದಲ್ಲಿ ತಪ್ಪು ಮಾಡಬೇಡ.

ಅಧ್ಯಯನ ಮತ್ತು ಪ್ರವಚನಗಳ ಬಗೆಗೆ ಪ್ರಮಾದವೆಸಗಕೂಡದು.

**ದೇವ ಪಿತೃ ಕಾರ್ಯಾಭ್ಯಾಂ ನ ಪ್ರಮದಿತವ್ಯಂ । ಮಾತೃದೇವೋಭವ ।ಪಿತೃದೇವೋಭವ । ಆಚಾರ್ಯದೇವೋಭವ । ಅತಿಥಿ ದೇವೋಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ। ನೋ ಇತರಾಣಿ । ಯಾನ್ಯಸ್ಮಾಕಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ । ನೋ ಇತರಾಣಿ ।** – ಅದೇ. **(1–11–2)** ದೇವ ಪಿತೃ ಕಾರ್ಯಗಗಳ ವಿಷಯದಲ್ಲಿ ದೋಷಗಳಾಗಬಾರದು. ತಾಯಿಯನ್ನು ದೇವರೆಂದು ಎಣಿಸು; ತಂದೆಯನ್ನು ದೇವರೆಂದು ಎಣಿಸು; ಆಚಾರ್ಯನನ್ನು ದೇವರಿಗೆ ಸಮಾನವಾಗಿ ಎಣಿಸು. ಅತಿಥಿಯನ್ನು ದೇವರಂತೆ ಭಾವಿಸು ಯಾವ ಯಾವ ಕರ್ಮಗಳು ದೋಷಗಳಿಲ್ಲದಿರುವುವೋ ಅವುಗಳನ್ನು ನೀನು ಸೇವಿಸಬೇಕು. ಇತರ ಕ್ರಿಯೆಗಳನ್ನು ಬಿಡಬೇಕು. ನಮ್ಮ ಆಚರಣೆಗಳಲ್ಲಿ ಯಾವ ಯಾವುದು ಸುಚರಿತವಾದುವೋ ಅವುಗಳನ್ನು ಮಾತ್ರ ನೀನು ಆಚರಿಸಬೇಕು. ಇತರ ಆಚರಣೆಗಳನ್ನು ಆಚರಿಸಕೂಡದು.

5. ಪು.ದಾ.ಕೀ., ಪುಟ 294, ಕೀ.ಸಂ. 471
6. ಅದೇ, ಪುಟ 295, ಕೀ.ಸಂ. 472
7. ಬಸವಣ್ಣನವರ ವಚನಗಳು, ಸಂ : ಡಾ। ಎಲ್.ಬಸವರಾಜು. ಗೀತಾ ಬುಕ್ ಹೌಸ್, ಮೈಸೂರು, ಪ್ರಥಮ ಪ್ರಕಾಶನ 1952, ಒಂಬತ್ತನೆಯ ಮುದ್ರಣ 2008, ಪುಟ 75, ವ.ಸಂ. 164.
8. ಅದೇ ಪುಟ 75, ವ.ಸಂ. 165.
9. ಧರ್ಮಶಾಸ್ತ್ರ ಮತ್ತು ಅರ್ಥಶಾಸ್ತ್ರ, ಡಾ. ಟಿ.ವಿ.ಸತ್ಯನಾರಾಯಣ, ಯುವ ಜನರಿಗಾಗಿ ಸಂಸ್ಕೃತ ವಾಙ್ಮಯ, ಭವನದ ಗಾಂಧೀಕೇಂದ್ರ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು–1, ಪುಟ
10. ಬಸವಣ್ಣನವರ ವಚನಗಳು, ಪುಟ 124, ವ.ಸಂ. 370.
11. ಕ್ರೈಸ್ತ ತತ್ವದರ್ಶನ – ಪುಟ169
12. ಧರ್ಮ ಶಾಸ್ತ್ರ ಮತ್ತು ಅರ್ಥಶಾಸ್ತ್ರ, ಪುಟ 9.
13. ಪುರಂದರದಾಸರ ಕೀರ್ತನೆಗಳು, ಸಂ: ದಿ। ಪಾವಂಜೆ ಗುರುರಾಯರು, ಶ್ರೀ ಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ರಥಬೀದಿ ಉಡುಪಿ–1, ಪ್ರಮು : 2001, ದ್ವಿಮು : 2010, ಪುಟ 296, ಕೀ. ಸಂ. 473
14. Bhakti-means and the end. Divine Mother Rama Devi. Rama Shakthi Mission, Shakthi Nagar, Mangalore-16, 1980, Page No.28, 29.
15. ಪು.ದಾ.ಕೀ., ಪುಟ 207, ಕೀ.ಸಂ. 333
16. ಧರ್ಮಶಾಸ್ತ್ರ ಮತ್ತು ಅರ್ಥಶಾಸ್ತ್ರ, ಪುಟ 10
17. ಪು.ದಾ.ಕೀ.,ಪುಟ 71, 72, ಕೀ.ಸಂ. 111
18. ಪುರಾಣನಾಮ ಚೂಡಾಮಣಿ, ಬೆನಗಲ್ ರಾಮರಾವ್. ಪಾನ್ಯಂ ಸುಂದರಶಾಸ್ತ್ರಿ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, 2001, ಪುಟ 267

19. ಪು.ದಾ.ಕೀ.,ಪುಟ 75, ಕೀ.ಸಂ.115

20. ಪು.ದಾ.ಕೀ., ಪುಟ 85, ಕೀ.ಸಂ. 131

21. ಕ.ಸಾ.ಸಂ.-4, ಪುಟ 339, ಕೀ.ಸಂ. 175

22. ಅದೇ, ಪುಟ 338, ಕೀ.ಸಂ. 174

23. ದೇ.ನಾ.ಭ., ಪುಟ 29

24. ಸಮಗ್ರ ದಾಸ ಸಾಹಿತ್ಯ ಸಂಪುಟ :25, ಚಿದಾನಂದ ಅವಧೂತರು ಮತ್ತು ಕೆಳದಿ ವೆಂಕಣ್ಣ ಕವಿ ಕೀರ್ತನೆಗಳು, ಸಂ: ಡಾ.ಡಿ.ಆರ್.ಪಾಂಡುರಂಗ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ 167, ಕೀ.ಸಂ 195.

## ೪.೭. ಭಕ್ತಿಯ ಆಂತರಿಕ ದಾರ್ಢ್ಯದ ಬಾಹ್ಯ ಲಕ್ಷಣಗಳು

ಈ ಅಧ್ಯಾಯದಲ್ಲಿ ಸಾಧನಾ ಪಥದಲ್ಲಿ ಮುಂದುವರಿಯಬೇಕೆನ್ನುವವರಿಗೆ ಮಾರ್ಗದರ್ಶನ ನೀಡಲು ಹೃದಯದಲ್ಲಿ ಭಕ್ತಿಯು ದೃಢವಾಗಿ ಬೇರೂರಿರುವುದನ್ನು ಖಚಿತ ಪಡಿಸಿಕೊಳ್ಳಲು ದಾರ್ಢ್ಯದ ಬಾಹ್ಯ ಲಕ್ಷಣಗಳನ್ನು ತಿಳಿಯಪಡಿಸುತ್ತಾರೆ ನಾರದರು. ಸಿದ್ಧ ಪುರುಷರಿಗೆ ಸಹಜವಾಗಿರುವ ಲಕ್ಷಣಗಳು ಸಾಧಕರಿಗೆ ಸಾಧನೆಗಳಾಗುತ್ತವೆ. ಉದಾಹರಣೆಗೆ :- ಸಿದ್ಧ ಪುರುಷನಲ್ಲಿ ಕೋಪವಿಲ್ಲ. ಏಕೆಂದರೆ ಅವನು ಎಲ್ಲರಲ್ಲೂ ಒಬ್ಬನೇ ಪರಮಾತ್ಮನನ್ನು ನೋಡುತ್ತಿರುತ್ತಾನೆ. ಇದು ಅವನಿಗೆ ಸಹಜ ಲಕ್ಷಣ. ಆದರೆ ಸಾಧಕನಾದವನು ಸಿದ್ಧ ಪುರುಷನಾಗಲು ಕೋಪವನ್ನು ಗೆಲ್ಲಬೇಕು. ಇದು ಅವನಿಗೆ ಸಾಧನೆ.

ಹೀಗೆ ಆಂತರಿಕ ಸಾಧನೆಯಲ್ಲಿ ಆಗುತ್ತಿರುವಂತಹ ಬೆಳವಣಿಗೆಯ ಮೈಲುಗಲ್ಲುಗಳನ್ನು ಗುರುತಿಸಿಕೊಂಡು ಗಂತವ್ಯ ಲಕ್ಷ್ಯದ ಕಡೆಗೆ ಸಾಗಲು ಸಹಾಯಕವಾಗುವಂತೆ ಭಕ್ತಿಯು ಆಂತರಿಕ ದಾರ್ಢ್ಯದ ಬಾಹ್ಯಲಕ್ಷಣಗಳನ್ನು ವಿವಿಧ ಆಚಾರ್ಯರ ಮತಗಳಿಗನುಸಾರವಾಗಿ ತಿಳಿಸಿ, ಕಡೆಯಲ್ಲಿ ನಾರದರು ತಮ್ಮ ಮತವನ್ನು ಘೋಷಿಸುತ್ತಾರೆ.

ಆಂತರ್ಯದಲ್ಲಿ ಆಗುವ ಪರಾಭಕ್ತಿಯ ಅತೀಂದ್ರಿಯ ಅನುಭವಗಳನ್ನು ಶಬ್ಧಗಳ ಮೂಲಕ ವಿವರಿಸುವುದು ಬಹಳ ಕಷ್ಟ. ವಿವಿಧ ಆಚಾರ್ಯರು ವಿವಿಧ ನಿಲುವುಗಳಿಂದ ಈ ಲಕ್ಷಣಗಳನ್ನು ವಿವರಿಸಿದ್ದಾರೆಯೇ ಹೊರತು, ಅವರಿಗಾದ ಅನುಭವಗಳೇ ಬೇರೆ ಬೇರೆ ಎಂದು ಭಾವಿಸಲಾಗದು. ಮತಭೇದವಿದ್ದರೂ, ಅಭಿವ್ಯಕ್ತಿಯ ವಿಧಾನದಲ್ಲಿ ಭೇದವಿದ್ದರೂ, ಅನುಭವವು ಏಕರೂಪವಾದದ್ದು ಎಂದು ಅರಿಯಬೇಕು

ಮೊದಲಿಗೆ ವ್ಯಾಸರ ಮತವನ್ನು ಹೀಗೆ ಹೇಳುತ್ತಾರೆ:

**ಪೂಜಾದಿಷ್ವನುರಾಗ ಇತಿ ಪಾರಾಶರ್ಯಃ ॥೧೬॥** 'ಪೂಜಾದಿಗಳಲ್ಲಿ ಅನುರಾಗವೇ (ಭಕ್ತಿದಾರ್ಢ್ಯದ ಬಾಹ್ಯಲಕ್ಷಣ) ಎಂದು ಪರಾಶರಪುತ್ರ ವ್ಯಾಸರು (ಹೇಳುತ್ತಾರೆ).

ಆಂತರ್ಯದಲ್ಲಿ ಭಕ್ತಿಯು ದೃಢವಾದಾಗ ಅದು ಬಾಹ್ಯದಲ್ಲಿ ಪೂಜಾದಿಕರ್ಮಗಳ ಮೇಲಿನ ಅನುರಾಗದ ಮೂಲಕ ವ್ಯಕ್ತವಾಗುತ್ತದೆ ಎಂಬುದು ಪರಾಶರಪುತ್ರರಾದ ವ್ಯಾಸ ಮಹರ್ಷಿಗಳ ಮತ. ಪೂಜೆ ಅಥವಾ ಅರ್ಚನೆ ನವವಿಧ ಭಕ್ತಿಗಳಲ್ಲೊಂದು'[1].

ಪ್ರತಿಷ್ಠಾಪನೆ ಮಾಡಿದ ವಿಗ್ರಹದಲ್ಲಿ / ಲಿಂಗ / ಸಾಲಿಗ್ರಾಮಗಳಲ್ಲಿ ಅಥವಾ ಆವಾಹನೆ ಮಾಡಿದ ಪೂಜಾದ್ರವ್ಯದಲ್ಲಿ ಭಗವಂತನು ಸೂಕ್ಷ್ಮರೂಪದಿಂದ ನೆಲೆಸುತ್ತಾನೆ. ಆದುದರಿಂದ ಅದರಲ್ಲಿ ಅವನ ಪೂಜೆಯನ್ನು ಶ್ರದ್ಧಾಭಕ್ತಿಗಳಿಂದ ಮಾಡಿದರೆ ಕ್ರಮೇಣ ಆ ಭಕ್ತಿಯು ಪೂಜಾದಿಕರ್ಮಗಳಲ್ಲಿ ಅತ್ಯುತ್ತಮ ಅನುರಾಗದ ಮೂಲಕ ಅಭಿವ್ಯಕ್ತವಾಗುತ್ತದೆ. ಈ ಅಭಿವ್ಯಕ್ತಿಯನ್ನು ಬಸವಣ್ಣನವರ ಒಂದು ವಚನದಲ್ಲಿ ಈ ರೀತಿ ಗುರುತಿಸಬಹುದು[2]:

ಅಂಗೈಯೊಳಗೂ ಲಿಂಗವ ನೋಡುತ್ತ

**ಕಂಗಳು ಕಡೆಗೋಡಿವರಿವುತ್ತ ಸುರಿವುತ್ತ ಎಂದಿಪ್ಪೆನೋ?!**

**ನೋಟವೇ ಪ್ರಾಣವಾಗಿ ಎಂದಿಪ್ಪೆನೋ !**

**ಕೂಟವೇ ಪ್ರಾಣವಾಗಿ ಎಂದಿಪ್ಪೆನೋ !**

**ಎನ್ನಂಗ ವಿಕಾರದ ಸಂಗವಳಿದು**

**ಕೂಡಲ ಸಂಗಯ್ಯ ಲಿಂಗಯ್ಯ ಲಿಂಗವೆನುತ್ತ ಎಂದಿಪ್ಪೆನೋ!?**

ಭಗವಂತನ ಪೂಜೆಯಲ್ಲಿ ಮೈಮರೆಯುವ ಭಕ್ತನಿಗೆ ಪೂಜೆ ಎಂದಿಗೂ ಭಾರ ಎಂದೆನಿಸುವುದಿಲ್ಲ, ಕಾಲಹರಣ ಎಂದೆನಿಸುವುದಿಲ್ಲ. ಬಸವಣ್ಣನವರು ಮತ್ತೊಂದು ವಚನದಲ್ಲಿ ಹೀಗೆ ಹೇಳುತ್ತಾರೆ[3] :

**ಆಡಿ ಕಾಲು ದಣಿಯದು, ನೋಡಿ ಕಣ್ಣು ದಣಿಯದು, ಹಾಡಿ ನಾಲಗೆ ದಣಿಯದು, ಇನ್ನೇವೆ ನಿನ್ನೇವೆ !**

**ನಾ ನಿಮ್ಮ ಕಯ್ಯಾರೆ ಪೂಜಿಸಿ ಮನದಣಿಯಲೊಲ್ಲದು**

**ಇನ್ನೇವೆ ನಿನ್ನೇವೆ ! ಕೂಡಲ ಸಂಗಮದೇವಯ್ಯ**

**ನಿಮ್ಮ ಉದರವ ಬಗಿದಾನು ಹೊಗುವ ಭರವೆನಗೆ !**

ಭಗವಂತನನ್ನು ನೋಡಿದಷ್ಟು, ಭಗವಂತನೊಂದಿಗೆ ಆಡಿದಷ್ಟು, ಅವನನ್ನು ಹಾಡಿದಷ್ಟು, ಕೈಯ್ಯಾರೆ ಪೂಜಿಸಿದಷ್ಟು ಬೇಸರವಿಲ್ಲ, ದಣಿವೇ ಇಲ್ಲ ಭಕ್ತನಿಗೆ, ಇದು ಭಕ್ತಿಯು ದೃಢವಾದ ಲಕ್ಷಣ ಅನ್ನುತ್ತಾರೆ ಬಸವೇಶ್ವರರು.

ಇನ್ನೊಂದು ವಚನದಲ್ಲಿ ಹೇಳುತ್ತಾರೆ[4] :

**ನಿಮ್ಮ ನೋಟವನಂತ ಸುಖ, ಕೂಟ ಪರಮ ಸುಖ !**

**ಅವುಟು ಕೋಟಿ ರೋಮಗಳೂ ಕಂಗಳಾಗಿ ನೋಡುತ್ತಿದ್ದೆನು !**

ಕೂಡಲಸಂಗಮದೇವಯ್ಯ, ನಿಮ್ಮ ನೋಡಿ ನೋಡಿ ಮನದಲ್ಲಿ ರತಿ ಹುಟ್ಟಿ ನಿಮಿರ್ದುವೆನ್ನ ಕಳೆಗಳು !

ಪೂಜೆಯಲ್ಲಿ ಭಕ್ತಿಯು ಪರಾಕಾಷ್ಠೆ ಯಾವುದು ಎನ್ನುವುದನು ಅಲ್ಲಮ ಪ್ರಭುಗಳು ಸುಂದರವಾಗಿ ನಿರೂಪಿಸುತ್ತಾರೆ. ಪರವಶತೆಯೇ ಪೂಜೆಯ ಪರಮ ಪ್ರಯೋಜನ ಎಂದು ನಿರೂಪಿಸುತ್ತಾರೆ[5] :

**ಅಗ್ಘವಣಿಯ ತಂದು ಮಜ್ಜನವ ಮರೆದವನ,**

**ಪುಷ್ಪವ ತಂದು ಪೂಜೆಯ ಮರೆದವನ,**

**ಓಗರವ ತಂದು ಅರ್ಪಿತವ ಮರೆದವನ,**

ಲಿಂಗವ ಕಂಡು ತನ್ನ ಮರೆದವನ,

ಮಹಾಘನ ಒಳಕೊಂಡಿತ್ತು ಗೊಹೇಶ್ವರಾ.

ಪೂಜೆಯಲ್ಲಿ ತನ್ನನ್ನು ತಾನು ಮರೆಯುವಂತಾಗಬೇಕು. ಅದುವೇ ಭಕ್ತಿಯು ದೃಢವಾದ ಲಕ್ಷಣ. ಬಸವಣ್ಣನವರು ಹೇಳುತ್ತಾರೆ[6]:

ವಾರವೆಂದರಿಯೆ, ದಿನವೆಂದರಿಯೆ; ಏನೆಂದರಿಯೇನಯ್ಯಾ ! ಇರುಳೆಂದರಿಯೇ, ಹಗಲೆಂದರಿಯೇ;

ಏನೆಂದರಿಯೇವಯ್ಯಾ! ನಿಮ್ಮುವ ಪೂಜಿಸಿ ಎನ್ನುವ ಮರೆದೆ ಕೂಡಲ ಸಂಗಮದೇವಾ.

ಬಾಹ್ಯಪೂಜೆಯಲ್ಲಿ ಭಕ್ತಿಯು ದೃಢವಾಗಿ ಪರವಶನಾಗಬಲ್ಲವನು ಅಂತರಂಗದಲ್ಲಿ ಭಗವಂತನನ್ನು ನಿರಂತರ ಪೂಜಿಸಬಲ್ಲ ಅಂತಹ ಭಕ್ತನ ಪೂಜೆಯ ಪರಿಯನ್ನು ಪ್ರಭುದೇವರು ಹೀಗೆ ವರ್ಣಿಸುತ್ತಾರೆ[7].

ಎನ್ನ ಹೃದಯಕಮಲದಲ್ಲಿ ಮೂರ್ತಿಗೊಂಡಿಪ್ಪ ಎನ್ನ ಪ್ರಾಣೇಶ್ವರಂಗೆ

ಎನ್ನ ಕ್ಷಮೆಯೇ ಅಭಿಷೇಕ. ಎನ್ನ ಪರಮ ವೈರಾಗ್ಯವೇ ಪುಷ್ಪಮಾಲೆ.

ಎನ್ನ ಸಮಾಧಿ ಸಂಪತ್ತೇ ಗಂಧ ಎನ್ನ ನಿರಹಂಕಾರವೇ ಅಕ್ಷತೆ.

ಎನ್ನ ಸದ್ ವಿವೇಕವೇ ವಸ್ತ್ರ. ಎನ್ನ ಸತ್ಯವೇ ದಿವ್ಯಾಭರಣ.

ಎನ್ನ ವಿಶ್ವಾಸವೇ ಧೂಪ. ಎನ್ನ ದಿವ್ಯಜ್ಞಾನವೇ ದೀಪ.

ಎನ್ನ ನಿಭ್ರಾಂತಿಯೇ ನೈವೇದ್ಯ. ಎನ್ನ ನಿರ್ವಿಷಯವೇ ತಾಂಬೂಲ.

ಎನ್ನ ಮೌನವೇ ಘಂಟೆ. ಎನ್ನ ನಿರ್ವಿಕಲ್ಪನೆಯೇ ಪ್ರದಕ್ಷಿಣೆ.

ಎನ್ನ ಶುದ್ಧಿಯೇ ನಮಸ್ಕಾರ. ಎನ್ನ ಅಂತಃಕರಣದಿಂದ ಮಾಡುವ

ಸೇವೆಯೇ ಉಪಚಾರಂಗಳು. ಈ ಪರಿಯಲ್ಲಿ

ಎಮ್ಮ ಗೊಹೇಶ್ವರಲಿಂಗಕ್ಕೆ ಪ್ರಾಣಪೂಜೆಯ ಮಾಡಿ

ಬಾಹ್ಯಕ್ರಿಯ ಮೆರದೆನು ಕಾಣಾಸಂಗನ ಬಸವಣ್ಣಾ.

ಕ್ಷಮೆ, ವೈರಾಗ್ಯ, ಸಮಾಧಿ, ನಿರಹಂಕಾರ, ಸದ್ ವಿವೇಕ, ಸತ್ಯ, ವಿಶ್ವಾಸ, ದಿವ್ಯಜ್ಞಾನ, ನಿಭ್ರಾಂತಿ, ನಿರ್ವಿಷಯ, ಮೌನ, ನಿರ್ವಿಕಲ್ಪನೆ, ಅಂತಃಕರಣದ ಶುದ್ಧಿ ಹೀಗೆ ಅಂತರಂಗದ ಪೂಜಾ ಸಾಮಾಗ್ರಿಗಳನ್ನು ಅಣಿಮಾಡಿಕೊಂಡು ಆಂತರ್ಯದಲ್ಲಿ ಪೂಜಿಸಬಲ್ಲವನು ನಿಜ ಭಕ್ತ, ಅವನಲ್ಲಿ ಭಕ್ತಿಯು ದೃಢವಾಗಿದೆ ಅನ್ನಬಹುದು.

ಇನ್ನು ಹರಿದಾಸ ಸಂಸ್ಕೃತಿಯಲ್ಲಿ ಉಪಾಸನೆಗೆ ವಿಶೇಷವಾದ ಮಹತ್ವವನ್ನು ನೀಡಿರುವುದನ್ನು ನಾವು ಗಮನಿಸಬಹುದು. ಆದ್ದರಿಂದ ನಾರದ ಭಕ್ತಿ ಸೂತ್ರವು ಪ್ರತಿಪಾದಿಸುವಂತಹ ಭಕ್ತಿಸಾಧನೆಯ ಮೂಲಭೂತ ಅಂಶಗಳು ಶರಣರಲ್ಲೂ, ಹರಿದಾಸರಲ್ಲೂ ಅಡಕವಾಗಿರುವುದನ್ನು ನಾವು ಗಮನಿಸಬಹುದು. ನಾರದರು ವ್ಯಾಸರ ಮತವೆಂದು ೧೬ನೇ ಸೂತ್ರದಲ್ಲಿ ಹೇಳುತ್ತಿರುವ ಭಕ್ತಿಯ ಆಂತರಿಕ ದಾರ್ಢ್ಯದ ಲಕ್ಷಣ 'ಪೂಜಾದಿಗಳು ಅನುರಾಗ' ಇದನ್ನು ಸಮಗ್ರ ದೃಷ್ಟಿಯಿಂದ ಉಪಾಸನೆಯಲ್ಲಿ ಅನುರಾಗ ಎಂದು ಪರಿಗಣಿಸಬಹುದು. 'ದಾಸ ಸಾಹಿತ್ಯ ಮತ್ತು ಸಂಸ್ಕೃತಿ' ಎನ್ನುವ ಗ್ರಂಥದಲ್ಲಿ ಹಿರಿಯ ವಿದ್ವಾಂಸರಾದ ಪ್ರೊ.ಸಾ.ಕೃ.ರಾಮಚಂದ್ರರಾಯರು ಹರಿದಾಸ ಸಂಸ್ಕೃತಿಯಲ್ಲಿ

ಉಪಾಸನಾ ತತ್ತ್ವದ ಕುರಿತಾಗಿ ಬರೆದಿರುವಂತಹ (ಒಂದು ಅಧ್ಯಾಯ) 'ಬಿಂಬೋಪಾಸನೆ' ಇದರಲ್ಲಿ ವಿಸ್ತೃತವಾಗಿ ವಿಶ್ಲೇಷಣೆ ಮಾಡಿದ್ದಾರೆ. 17ನೇ ಸೂತ್ರದಲ್ಲಿ ನಾರದರು ಗರ್ಗಮಹರ್ಷಿಗಳ ಮತವನ್ನು ಪ್ರತಿಪಾದಿಸುತ್ತಾ 'ಕಥಾದಿಗಳಲ್ಲಿರುವ (ಅನುರಾಗವೇ) ಭಕ್ತಿಯ ಆಂತರಿಕ ದಾರ್ಢ್ಯದ ಲಕ್ಷಣ ಎಂದಿದ್ದಾರೆ[9]. ಮುಂದೆ ಶಾಂಡಿಲ್ಯರ ಮತವನ್ನು ಪ್ರತಿಪಾದಿಸುತ್ತಾ 'ಆತ್ಮರತ್ಯವಿರೋಧೇನೇತಿ' (ಪೂಜಾದಿ-ಕಥಾದಿಗಳಲ್ಲಿನ ಅನುರಾಗವು) ಆತ್ಮರತಿಗೆ ವಿರುದ್ಧವಾಗದಂತೆ (ಇರಬೇಕು) ಅನ್ನುತ್ತಾರೆ[10]. ನಮ್ಮೊಳಗೆ ಅಂತರ್ಯಾಮಿಯಾಗಿ ಕುಳಿತಿರುವ ಪರಮಾತ್ಮನೇ ನಮ್ಮ ಆತ್ಮನು. ಪರಮಾತ್ಮನಲ್ಲೇ ಮನಸ್ಸು ರಮಿಸುವುದು (ಧ್ಯಾನದಲ್ಲಿ ರತವಾಗುವುದು) ಆತ್ಮರತಿ. ಭಕ್ತನು ಪೂಜಾದಿಕರ್ಮಗಳಲ್ಲಿ ಅನುರಾಗ ಹೊಂದಿರಲಿ ಅಥವಾ ಕಥಾಶ್ರವಣಾದಿಗಳಲ್ಲಿ ಆಸಕ್ತನಾಗಿರಲಿ ಆಂತರ್ಯದ ಆತ್ಮರತಿಗೆ ಈ ಅನುರಾಗಗಳು ಅಡ್ಡಿಯಾಗದಂತಿರುವುದೇ ಭಕ್ತಿಯ ಆಂತರಿಕ ದಾರ್ಢ್ಯದ ಲಕ್ಷಣ ಎಂದು ಶಾಂಡಿಲ್ಯರು ಅಭಿಪ್ರಾಯ ಪಡುತ್ತಾರೆ. ಅನುಭವಿಗಳಾದ ದಾಸರ, ಶರಣರ, ಇತರ ಸಂತರ ಕೃತಿಗಳಲ್ಲಿಯೂ ಈ ಲಕ್ಷಣವನ್ನು ನಾವು ಗುರುತಿಸಬಹುದು. ಪ್ರೊ.ಸಾ.ಕೃ. ರಾಮಚಂದ್ರರಾಯರು 'ದಾಸ ಸಾಹಿತ್ಯ ಮತ್ತು ಸಂಸ್ಕೃತಿ' ಈ ಗ್ರಂಥದಲ್ಲಿ ಬಿಂಬೋಪಾಸನೆಯ ಬಗ್ಗೆ 12ನೆಯ ಅಧ್ಯಾಯದಲ್ಲಿ ವ್ಯಾಖ್ಯಾನಿಸಿದ್ದಾರೆ[11].

ಭಕ್ತಿಯ ಆಂತರಿಕ ದಾರ್ಢ್ಯದ ಬಾಹ್ಯ ಲಕ್ಷಣಗಳನ್ನು ವಿವಿಧ ಆಚಾರ್ಯರ ಮತಗಳಿಗನುಸಾರವಾಗಿ ತಿಳಿಸಿ ಕೊನೆಯಲ್ಲಿ ನಾರದರು ತಮ್ಮ ಸಿದ್ಧಾಂತವನ್ನು ಹೀಗೆ ಪ್ರತಿಪಾದಿಸುತ್ತಾರೆ :

**'ನಾರದಸ್ತು ತದರ್ಪಿತಾಖಿಲಾಚರತಾ, ತದ್ವಿಸ್ಮರಣೇ ಪರಮವ್ಯಾಕುಲತೇತಿ ॥೧೯॥**

ನಾರದನಾದರೋ ಆತನಲ್ಲಿ ಎಲ್ಲ ಕರ್ಮಗಳನ್ನೂ ಸಮರ್ಪಿಸುವುದು (ಮತ್ತು) ಆತನನ್ನು ಮರೆತಾಗ ಅತ್ಯಂತ ವ್ಯಾಕುಲತೆಯನ್ನು ಹೊಂದುವುದು ಇದೇ (ಭಕ್ತಿ ದಾರ್ಢ್ಯದ ಲಕ್ಷಣ ಎನ್ನುತ್ತಾನೆ)'[12] ನಾರದರ ಸಿದ್ಧಾಂತದ ಪ್ರಕಾರ ಆಂತರಿಕ ಭಕ್ತಿಯ ಬಾಹ್ಯಲಕ್ಷಣವು ಕೇವಲ ಪೂಜಾದಿ ಅಥವಾ ಕಥಾದಿ ಕರ್ಮಗಳಲ್ಲಿ ಅನುರಾಗವಿದ್ದರೆ ಸಾಲದು ಅಥವಾ ಇವನ್ನು ಆತ್ಮರತಿಗೆ ವಿರುದ್ಧವಾಗಿರದಂತೆ ಆಚರಿಸಿದರೆ ಸಾಲದು. ಭಕ್ತನು ಮಾಡತಕ್ಕ ಸಮಸ್ತ ಕಾಯಿಕ ವಾಚಿಕ ಮಾನಸಿಕ ಕರ್ಮಗಳನ್ನೂ ಭಗವಂತನಿಗೆ ಅರ್ಪಿಸುತ್ತಲೇ ಇರಬೇಕು. ಇಂತಹ ಭಕ್ತನು ಸದಾ ಭಗವಂತನನ್ನು ಸ್ಮರಿಸುತ್ತಲೇ ಇರುವುದರಿಂದ, ಅಕಸ್ಮತ್ತಾಗಿ ಕ್ಷಣಮಾತ್ರ ಅವನನ್ನು ಮರೆತರೂ ತೀವ್ರವಾದ ವೇದನೆಯನ್ನು ಅನುಭವಿಸುತ್ತಾನೆ. ಇದೇ ಭಕ್ತಿಯ ದೃಢವಾದ ಲಕ್ಷಣ.

ಶ್ರೀ ಮದ್ಭಾಗವತದಲ್ಲಿ (11.2.39) ಕವಿ ಎಂಬ ಮುನಿಯು ನಿಮಿಮಹಾರಾಜನಿಗೆ ಕೊಟ್ಟ ಉಪದೇಶ ಈ ಸೂತ್ರದ ವ್ಯಾಖ್ಯಾನದಂತಿದೆ :

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾನುಸೃತಸ್ವಭಾವಾತ್ ।**
**ಕರೋತಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯೇತ್ತತ್ ॥**

'(ಮಾನವನು) ತನ್ನ ಶರೀರದ ಮಾತಿನ ಮನಸ್ಸಿನ ಇಂದ್ರಿಯಗಳ ಬುದ್ಧಿಯ ಅಥವಾ ಆತ್ಮನ ಮೂಲಕ, ಪೂರ್ವಜನ್ಮಗಳಿಂದ ಅನುಸರಿಸಿಕೊಂಡು ಬಂದ ಸ್ವಭಾವಕ್ಕನುಗುಣವಾಗಿ, ಏನೇನನ್ನು ಮಾಡುವನೋ ಅದೆಲ್ಲವನ್ನೂ, ಪರಮ ಪುರುಷನಾದ ನಾರಾಯಣನಿಗೆ ಎಂದು ಸಮರ್ಪಿಸಬೇಕು.'

ಭಗವದ್ಗೀತೆಯಲ್ಲಿ (18.65) ಶ್ರೀ ಕೃಷ್ಣ ಪರಮಾತ್ಮನು ಅರ್ಜುನನಿಗೆ ಇಂಥದ್ದೇ ಉಪದೇಶವನ್ನು ಕೊಟ್ಟಿರುತ್ತಾನೆ :

**ಮನ್ಮನಾಭವ ಮದ್ಭಕ್ತೋ ಭವ ಮದ್ಯಾಜೀ ಮಾಂ ನಮಸ್ಕುರು ।**

**ಮಾಮೇ ವೈಷ್ಯಸಿ ಸತ್ಯಂ ತೇ ಪ್ರತಿಜನೇ ಪ್ರಿಯೋಽಸಿಮೆ ॥**

ನನ್ನಲ್ಲಿಯೇ ಮನಸ್ಸುಳ್ಳವನಾಗು, ನನ್ನ ಭಕ್ತನಾಗು, ನನ್ನನ್ನೇ ಆರಾಧಿಸುವವನಾಗು, ನನ್ನನ್ನು ನಮಸ್ಕರಿಸು, ನನ್ನನ್ನೇ ಸೇರುವೆ; ಸತ್ಯವಾಗಿ ಪ್ರತಿಜ್ಞೆ ಮಾಡುತ್ತೇನೆ; (ಏಕೆಂದರೆ ನೀನು) ನನಗೆ ಪ್ರಿಯನಾಗಿರುವೆ.'

ತಾನು ಮಾಡುವ ಸಕಲ ಕರ್ಮಗಳನ್ನು ಭಗವಂತನಿಗೆ ಸಮರ್ಪಿಸುವ ಭಾವ ಕನ್ನಡದ ಸಂತ ಕವಿಗಳಲ್ಲಿ ಓತಪ್ರೋತವಾಗಿ ಕಂಡು ಬರುತ್ತದೆ.

ಪುರಂದರದಾಸರ ಒಂದು ಸುಪ್ರಸಿದ್ಧವಾದ ಉಗಾಭೋಗ ಇಂತಿದೆ[13] :

**ಹಾಡಿದರೆ ಎನ್ನೊಡೆಯನ ಹಾಡುವೇ । ಬೇಡಿದರೆನ್ನೊಡೆಯನ ಬೇಡುವೆ ।**

**ಒಡೆಯಗೆ ಒಡಲನು ತೋರುವೆ ಎನ್ನ । ಬಡತನ ಬಿನ್ನಾಹ ಮಾಡುವೆ ।**

**ಒಡೆಯ ಪುರಂದರ ವಿಠಲರಾಯನ । ಅಡಿಗಳನು ಸಾರಿ ಬದುಕುವೆ ಸೇರಿ ಬದುಕುವೆ ॥4॥**

ಸರ್ವಕರ್ಮ ಸಮರ್ಪಣೆ ಮತ್ತು ನಿರಂತರ ಸ್ಮರಣೆಯನ್ನು ಪ್ರತಿಪಾದಿಸುವ ಮೇಲಿನ ಸೂತ್ರದ ಭಾವವು ಪುರಂದರದಾಸರ ಈ ಕೆಳಗಿನ ಉಗಾಭೋಗದಲ್ಲಿ ಹರಳುಗಟ್ಟಿದೆ[14] :

**ಎನ್ನ ಕಡೆ ಹಾಯಿಸುವುದು ನಿನ್ನ ಭಾರ । ನಿನ್ನ ನೆನೆಯುತ್ತಲಿಹುದು ಎನ್ನ ವ್ಯಾಪಾರ ।**

**ಎನ್ನ ಸತಿಸುತರಿಗೆ ನೀನೇ ಗತಿ । ನಿನ್ನನೊಪ್ಪಿಸುವುದು ಎನ್ನ ನೀತಿ ।**

**ಎನ್ನ ಪಡಿಯಿಕ್ಕಿ ಸಲಹುವುದು ನಿನ್ನ ಧರ್ಮ । ನಿನ್ನ ಅಡಿಗೆರಗುವುದು ಎನ್ನ ಕರ್ಮ ।**

**ಎನ್ನ ತಪ್ಪುಗಳ ನೆಣಿಸುವುದು ನಿನ್ನದಲ್ಲ । ನಿನ್ನ ಮರೆತು ಬದುಕುವುದು ಎನ್ನದಲ್ಲ ।**

**ನೀನಲ್ಲದೆ ಇನ್ನಾರಿಗೆ ಮೊರೆಯಿಡುವೆ ಪುರಂದರವಿಠಲ ॥೨೬॥**

ತನ್ನ ಸರ್ವಸ್ವವನ್ನೂ ಭಗವಂತನಿಗೆ ಸಮರ್ಪಿಸಿದ ಕೃತಕೃತ್ಯ ಭಾವದಿಂದ ಪುರಂದರದಾಸರು ಹಾಡಿದರು[15] :

**ನಾನೇಕೆ ಬಡವನು ನಾನೇಕೆ ಪರದೇಸಿ ಶ್ರೀನಿಧೆ ಹರಿಯೆನಗೆ ನೀನಿರುವ ತನಕ ॥**

ತನಗೆ ಎಲ್ಲವೂ ಭಗವಂತನೇ ಎನ್ನುವ ಭಾವವನ್ನು ಸೊಗಸಾಗಿ ನಿರೂಪಿಸುತ್ತಾರೆ. ಪುರಂದರದಾಸರು ಈ ಕೀರ್ತನೆಯಲ್ಲಿ ಹುಟ್ಟಿಸಿದ ತಾಯಿ ತಂದೆ, ಇಷ್ಟ ಮಿತ್ರರು, ಆಪ್ತ ಬಂಧುಗಳು, ಪೆಟ್ಟಿಗೆಯೊಳಗಿರುವ ಅಷ್ಟಾಭರಣಗಳು, ಒಡಹುಟ್ಟಿದವನು, ಒಡಲಿಗೆ ಹಾಕುವವನು, ಉಡಲು ಹೊದೆಯಲು ವಸ್ತ್ರ ಕೊಡುವವನು, ಮಡದಿ ಮಕ್ಕಳನ್ನೆಲ್ಲ ಕಡೆ ಹಾಯಿಸುವವನು, ವಿದ್ಯೆ ಹೇಳುವವನು, ಬುದ್ಧಿಕಲಿಸುವವನು, ಎಲ್ಲವೂ ನನ್ನ

ಸ್ವಾಮಿಯಾದ ಪುರಂದರವಿಠಲ ನೀನೇ ಎನ್ನುತ್ತಾ ಕೊನೆಗೆ ಹೇಳುತ್ತಾರೆ.

**ಮುದ್ದು ಸಿರಿಪುರಂದರವಿಠಲ ನಿನ್ನಡಿ ಮೇಲೆ ।**

**ಬಿದ್ದುಕೊಂಡಿರುವ ಎನಗ್ಯಾತಕೆ ಭಯವೋ ॥**

ಇದಕ್ಕೆ ಸಂವಾದಿಯಾದ ಮತ್ತೊಂದು ಕೀರ್ತನೆ[16] :

**ನಾನೇಕೆ ಪರದೇಶಿ ನಾನೇಕೆ ಬಡವನು ॥**

ಅರೆಕ್ಷಣವೂ ವಿಸ್ಮೃತಿ ಆಗದಿರಲಿ ಎಂದು ಅವನನ್ನೇ ಹೀಗೆ ಬೇಡಿಕೊಳ್ಳುತ್ತಾರೆ ಪುರಂದರದಾಸರು :

**ನಾರಾಯಣ ನಿನ್ನ ನಾಮದ ಸ್ಮರಣೆಯ ಸಾರಾಮೃತವೆನ್ನ ನಾಲಿಗೆಗೆ ಬರಲಿ ॥ಪ॥**

**ಕೊಡುವಾಗಲಿ ನಿಂತಾಡುವಾಗಲಿ ಮತ್ತೆ । ಹಾಡುವಾಗಲಿ ಹರಿದಾಡುವಾಗಲಿ ।**

**ಖೋಡಿ ವಿನೋದದಿ ನೋಡದೆ ನಾ ಬಲು । ಮಾಡಿದ ಪಾಪ ಬಿಟ್ಟೋಡಿ ಹೋಗೋ ಹಾಗೆ ॥೧॥**

**ಊರಿಗೆ ಹೋಗಲಿ ಊರೊಳಗಿರಲಿ । ಕಾರಣಾರ್ಥಂಗಳೆಲ್ಲ ಕಾದಿರಲಿ ॥**

**ವಾರಿಜನಾಭ ನರ ಸಾರಥಿಸನ್ನುತ । ಸಾರಿಸಾರಿಗೆ ನಾ ಬೇಸರದ್ದಾಗೆ ॥೨॥**

..................................

**ಸಂತತ ಹರಿ ನಿನ್ನ ಸಾಸಿರ ನಾಮವು । ಅಂತರಂಗದ ಒಳಗಿರಿಸಿ ॥**

**ಎಂತೋ ಪುರಂದರವಿಠಲರಾಯನೆ । ಅಂತ್ಯಕಾಲದಲ್ಲಿ ಚಿಂತಿಸೋ ಹಾಗೆ ॥೭॥**

(ಅದೇ ಪುಟ 323, 324, ಕೀ.ಸಂ. 520)

ಇದಕ್ಕೆ ಸಂವಾದಿಯಾದ ಮತ್ತೊಂದು ಕೀರ್ತನೆಯನ್ನು ನೋಡಬಹುದು :

**ನಾರಾಯಣ ನಿನ್ನ ನಾಮದ ಸ್ಮರಣೆಯ । ಸಾರಾಮೃತವೆನ್ನ ಬಾಯಿಗೆ ಬರಲಿ ॥**

**ಬಾ ರಂಗ ॥ಪ॥**

(ಅದೇ ಪುಟ ೩೨೪, ಕೀ.ಸಂ ೫೨೧)

ಒಂದು ಉಗಾಭೋಗದಲ್ಲಿ ನಿರಂತರ ಹರಿಯನ್ನು ಸ್ಮರಿಸುವವರಿಗೆ ಮರಣದ ಭಯವೇಕೆ ಎಂದು ಹೀಗೆ ಹೇಳುತ್ತಾರೆ :

**ಅಣಕದಿಂದಾಗಲಿ ಡಂಭದಿಂದಾಗಲಿ । ಎದ್ದಾಡಾಗಾಗಲಿ ।**

**ಬಿದ್ದಾಡಾಗಾಗಲಿ । ತಾಗಿದಾಡಾಗಲಿ ತಾಕಿಲ್ಲದಾಡಾಗಲಿ ।**

**ಮರೆದು ಮತ್ತೊಮ್ಮೆಯಾಗಲಿ ಹರಿ ಹರಿಯೆಂದವನಿಗೆ ।**

**ನರಕದ ಭಯವೇಕೆ ಯಮಪಟ್ಟಣ ಕಟ್ಟಿದರೇನು ।**

**ಯಮಪಟ್ಟಣ ಬೆಟ್ಟ ಬಯಲಾದರೇನು । ಹರಿದಾಸರಿಗೆ ಪುರಂದರವಿಠಲ ॥೬॥**

(ಅದೇ ಪುಟ ೬೫೧)

ಭಕ್ತ ಕನಕದಾಸರು 'ಹರಿಭಕ್ತಿಸಾರ'ದಲ್ಲಿ ತಾವು ಮಾಡುವ ಸಕಲ ಕರ್ಮಗಳನ್ನೂ ಭಗವಂತನಿಗೆ ಹೀಗೆ ಸಮರ್ಪಿಸುತ್ತಾರೆ:

**ನಿನ್ನ ಸೂತ್ರದೊಳಾಡುವವು**

**ತನ್ನ ಸಚರಾಚರಗಳೆಲ್ಲವು**

**ನಿನ್ನ ಸೂತ್ರವು ತಪ್ಪಿದರೆ ಮುಗ್ಗುವುವು ಹೂಹೆಗಳು**

**ಇನ್ನು ನಮಗೆ ಸ್ವತಂತ್ರವೆಲ್ಲಿಯದನ್ಯ ಕರ್ಮ ಸುಕರ್ಮವೆಲ್ಲವ**

**ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ॥೯॥**

'ಸರ್ವವಸ್ತುಗಳಲ್ಲಿಯೂ ಚೇತನ ಸ್ವರೂಪಿಯಾದ ನೀನು ಸೂತ್ರಧಾರ. ನೀನು ಸೂತ್ರವನ್ನು ಆಡಿಸಿದಂತೆ ಚರಾಚರವಸ್ತುಗಳೆಲ್ಲವೂ ತಮ್ಮ ಕೆಲಸಗಳನ್ನು ಮಾಡುತ್ತವೆ. ಹೀಗಿರುವಾಗ ನಮಗೆ ಯಾವುದರಲ್ಲಿ ಸ್ವಾತಂತ್ರ್ಯ ಉಂಟು? ಪಾಪಪುಣ್ಯಗಳೆಲ್ಲವೂ ನಿನ್ನದೆಂದು ಸಕಲ ಕರ್ಮಗಳನ್ನು ನಿನಗೆ ಒಪ್ಪಿಸಿದ್ದೇನೆ.

ನಾರದರು ಸರ್ವಕರ್ಮಗಳನ್ನು ಭಗವದರ್ಪಣೆ ಮಾಡುವುದು ಮತ್ತು ಭಗವದ್ ವಿಸ್ಮೃತಿಯಾದಾಗ ಅಪಾರವಾದ ಆಂತರಿಕ ವೇದನೆಯನ್ನು ಅನುಭವಿಸುವುದು ಇವೆರಡೂ ಭಕ್ತಿಯ ದಾರ್ಢ್ಯತೆಯ ಲಕ್ಷಣ ಎಂದು ಮೇಲಿನ ಒಂದೇ ಸೂತ್ರದಲ್ಲಿ ಹೇಳಿದ್ದಾರೆ. ಕಾಕತಾಳಿಯವೋ ಎಂಬಂತೆ ಭಕ್ತ ಕನಕದಾಸರೂ ಕೂಡಾ ಹರಿಭಕ್ತಿಸಾರದ ಮೇಲಿನ ಪದ್ಯದಲ್ಲಿ ಸರ್ವಕರ್ಮ ಸಮರ್ಪಣೆಯನ್ನು ಭಗವದರ್ಪಣೆ ಮಾಡಿದರೆ ಮುಂದಿನ ಪದ್ಯದಲ್ಲೇ ಹಿಂದೆ ಭಗವಂತನನ್ನು ನೆನೆಯದೆ ವ್ಯರ್ಥಕಾಲ ಕಳೆದೆನಲ್ಲಾ ಎಂದು ತಮ್ಮ ಆಂತರಿಕ ವೇದನೆಯನ್ನು ವ್ಯಕ್ತ ಪಡಿಸುತ್ತಾರೆ. ಇದು ಗಮನಾರ್ಹ ಸಂಗತಿಯಾಗಿದೆ.

**ಒಡೆಯ ನೀನೆಂದರಿತು ನಾ ನಿ**

**ನ್ನಡಿಯ ಭಜಿಸದೆ ದುರುಳನಾದೆನು**

**ಮಡದಿ ಮಕ್ಕಳ ಮೋಹದಲಿ ಮನಸಿಲುಕುತಡಿಗಡಿಗೆ**

**ಮಡದಿ ಯಾರೀ ಮಕ್ಕಳ್ಯಾರೀ**

**ಒಡಲಿಗೊಡೆಯನು ನೀನು ನೀ ಕೈ**

**ವಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ ॥೨೦॥**

'ನೀನು ಒಡೆಯನೆಂಬುದನ್ನು ಅರಿತಿದ್ದರೂ ನಿನ್ನನ್ನು ಭಜಿಸದೆ ದುರುಳನಾದೆನು. ಹೆಜ್ಜೆಹೆಜ್ಜೆಗೂ ಮಡದಿ ಮಕ್ಕಳ ವ್ಯಮೋಹದಲ್ಲಿ ಮನಸ್ಸು ಸಿಕ್ಕಿಕೊಂಡಿತು. ವಿಚಾರಿಸಿ ನೋಡಿದಾಗ ಈ ಮಡದಿ ಯಾರು, ಮಕ್ಕಳು ಯಾರು? ಅವರಿಂದ ನನಗೇನಾದೀತು? ಈ ದೇಹದ ಒಡೆಯ ನೀನು. ನನ್ನ ಕೈ ಹಿಡಿದು ವಾತ್ಸಲ್ಯದಿಂದ ದಾರಿ ತೋರಿಸಿ ರಕ್ಷಿಸು.[17]'

ಶ್ರೀ ಮದ್ವಾದಿರಾಜ ಯತಿಗಳು ತಮ್ಮ ಒಂದು ಉಗಾಭೋಗದಲ್ಲಿ ಶರಣಾಗತಿ ಭಾವವನ್ನು ಹೀಗೆ ವ್ಯಕ್ತಪಡಿಸಿದ್ದಾರೆ :

**ನಿನ್ನ ನಂಬಿದೆ ಕೃಷ್ಣ ಅನ್ಯರೊಬ್ಬರ ಕಾಣೆ ಆ**

**ಪನ್ನ ರಕ್ಷಕನೆ ಬಾರೊ ಇರುಳು ಹಗಲು**

**ನಿನ್ನ ಚರಣಕ್ಕೆ ಮರೆಹೊಕ್ಕೆ**

**ನಿನ್ನ ನಂಬಿದೆ ಸರಿಯಾರು ಈರೇಳು ಜಗದೊಳು ಹಯವದನ**

ಮುಂದೆ ನಾರದರು ಮಾಯೆಯ ಪಾಶದಿಂದ ಪಾರಾಗಲು ಸಾಧಕನು ಏನು ಮಾಡಬೇಕು ಎಂದು ತಿಳಿಸುವ ಸಂದರ್ಭದಲ್ಲಿ ೪೮ನೇ ಸೂತ್ರದಲ್ಲಿ ಹೇಳುತ್ತಾರೆ : **'ಯಃ ಕರ್ಮಫಲಂ ತ್ಯಜತಿ ಕರ್ಮಾಣಿ ಸಂನ್ಯಸ್ಯತಿ ತತೋ ನಿರ್ದ್ವಂದ್ವೋ ಭವತಿ ॥೪೮॥** ಯಾವನು ಕರ್ಮಫಲವನ್ನು ತ್ಯಜಿಸುತ್ತಾನೋ, ಕರ್ಮಗಳನ್ನು ಬಿಡುತ್ತಾನೋ ಅದರಿಂದ ದ್ವಂದ್ವಗಳನ್ನು ಮೀರುತ್ತಾನೆ. (ಅವನು ಮಾಯೆಯನ್ನು ದಾಟುತ್ತಾನೆ)[18]. ಇಲ್ಲಿ ಕರ್ಮಫಲವನ್ನು ಬಿಡಬೇಕು ಮತ್ತು ಕರ್ಮಸಂನ್ಯಾಸವನ್ನು ಮಾಡಬೇಕು.

ಎಂದು ಹೇಳಿರುವುದು ಪರಸ್ಪರ ವಿರೋಧಾಭ್ಯಾಸಕ್ಕೆಡೆ ಮಾಡುವುದಿಲ್ಲವೇ? ವ್ಯಾಖ್ಯಾನಕಾರರು ಇಲ್ಲ ಅನ್ನುತ್ತಾರೆ. ಸಂನ್ಯಾಸ ಶಬ್ದಕ್ಕೆ ಬಿಡುವುದು, ಸಮರ್ಪಣ ಮಾಡುವುದು ಎಂಬ ಎರಡು ಅರ್ಥಗಳಿವೆ. ಈ ಎರಡೂ ಅರ್ಥಗಳನ್ನು ಈ ಸೂತ್ರದಲ್ಲಿ ಸಮನ್ವಯ ಮಾಡಿಕೊಳ್ಳಬಹುದು, ನಿಷಿದ್ಧವಾದ ಪಾಪಕರ್ಮಗಳನ್ನು ಬಿಡುವುದು. ಮಾಡಲೇಬೇಕಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು, ಕರ್ತವ್ಯ ಕರ್ಮಗಳನ್ನು ಸಮರ್ಪಣಾಭಾವದಿಂದ ಮಾಡಿ ಬಂದ ಫಲಗಳನ್ನು ಭಗವಂತನಿಗೆ ಸಮರ್ಪಿಸುವುದು. ಹೀಗೆ ಸಮರ್ಪ

ಣಾಭಾವದಿಂದ ಕರ್ಮಗಳನ್ನು ಮಾಡಿದರೆ ಭಗವಂತನು ಅಂತಹವರನ್ನು ಮೃತ್ಯು ಸಂಸಾರಸಾಗರದಿಂದ ಪಾರು ಮಾಡುತ್ತಾನೆ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನು ಹೇಳುತ್ತಾನೆ:

**ಯೇತು ಸರ್ವಾಣಿ ಕರ್ಮಾಣಿ ಮಯಿಸಂನ್ಯಸ್ಯ ಮತ್ಪರಾಃ ।**

**ಅನನ್ಯೇನೈವ ಯೋಗೇನ ಮಾಲಧ್ಯಾಯಂತ ಉಪಾಸತೇ ॥**

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರ ಸಾಗರಾತ್ ।**

**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತ ಚೇತಸಾಮ್ ॥**

"ಎಲೈ ಅರ್ಜುನ, ಆದರೆ ಯಾರು ಸಮಸ್ತ ಕರ್ಮಗಳನ್ನೂ ನನ್ನಲ್ಲಿ ಅರ್ಪಿಸಿ, ಮತ್ಪರರಾಗಿ, ಅನನ್ಯವಾದ ಯೋಗದಿಂದಲೇ ನನ್ನನ್ನು ಧ್ಯಾನಿಸುತ್ತಾ ಉಪಾಸನೆ ಮಾಡುತ್ತಾರೆಯೋ, ನನ್ನಲ್ಲಿ ಮನಸ್ಸುಳ್ಳ ಅಂತಹವರನ್ನು ನಾನು ಮೃತ್ಯುವಿನಿಂದ ಕೂಡಿದ ಈ ಸಂಸಾರಸಾಗರದಿಂದ ಶೀಘ್ರವಾಗಿ ಉದ್ಧಾರಮಾಡುತ್ತೇನೆ.' (ಭಗವದ್ಗೀತಾ ೧೨, ೬, ೭)

'ಕರ್ಮಗಳನ್ನು ಬಿಡುತ್ತಾನೆ' ಎಂಬುದನ್ನು ಮತ್ತೊಂದು ರೀತಿಯಲ್ಲಿಯು ವ್ಯಾಖ್ಯಾನಿಸಬಹುದು. ದೇಹೇಂದ್ರಿಯಾದಿಗಳು ಕರ್ಮವನ್ನು ಮಾಡುತ್ತಿವೆ. ನಿರ್ವಿಕಾರಿ ನಿರ್ಲಿಪ್ತ ಆತ್ಮಚೈತನ್ಯವಾದ ನಾನು ಅಲ್ಲಿ ಎಂಬ ಜ್ಞಾನವಿದ್ದರೆ ಕರ್ಮಫಲವು

ಅಂಟಲಾರದು. ಇದು ಕರ್ಮಗಳನ್ನು ತ್ಯಾಗಮಾಡಿದಂತೆಯೇ ಸರಿ. ಇದನ್ನೇ ಭಗವದ್ಗೀತೆಯಲ್ಲಿ ಹೀಗೆ ಹೇಳಲಾಗಿದೆ:

**ಕರ್ಮಣ್ಯ ಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮಯಃ ॥**

**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥**

'ಕರ್ಮದಲ್ಲಿ ಅಕರ್ಮವನ್ನೂ, ಅಕರ್ಮದಲ್ಲಿ ಕರ್ಮವನ್ನೂ ಯಾವನು ನೋಡುತ್ತಾನೆಯೋ ಅವನು ಮನುಷ್ಯರಲ್ಲಿ ಬುದ್ಧಿವಂತನು; ಅವನೇ ಯೋಗಿಯು ಮತ್ತು ಎಲ್ಲ ಕರ್ಮಗಳನ್ನೂ ಮಾಡಿದವನು'(೪.೧೮)

ದೇಹವು ಕರ್ಮವನ್ನು ಮಾಡುತ್ತಿದ್ದರೂ ಅ ಸಂಗ ಆತ್ಮನಾದ ತಾನು ಏನೂ ಮಾಡುತ್ತಿಲ್ಲ ಅಜ್ಞಾನಿಯು ಕರ್ಮಮಾಡದೆ ಸುಮ್ಮನೆ ಕುಳಿತಿದ್ದರೂ ಅವನ ಮನಸ್ಸು ಸಂಸ್ಕಾರ ಪ್ರೇರಿತವಾಗಿ ಕರ್ಮಮಾಡುತ್ತಲೇ ಇರುತ್ತದೆ. ಇದು ಈ ಶ್ಲೋಕದ ಅಭಿಪ್ರಾಯ. ಬಸವೇಶ್ವರರು ಈ ಕರ್ಮದಲ್ಲಿ ಅಕರ್ಮವನ್ನು ಸಾಧಿಸುವ ಪರಿಯನ್ನು ತಮ್ಮ ವಚನದಲ್ಲಿ ಹೀಗೆ ನಿರೂಪಿಸಿದ್ದಾರೆ[19]:

**ಮಾಡುವಂತಿರಬೇಕು ಮಾಡದಂತಿರಬೇಕು !**

**ಮಾಡುವ ಮಾಟದೊಳಗೆ ತಾನಿಲ್ಲದಿರಬೇಕು !**

**ನೋಡುವಂತಿರಬೇಕು, ನೋಡದಂತಿರಬೇಕು !**

**ನೋಡುವ ನೋಟದೊಳಗೆ ತಾನಿಲ್ಲದಿರಬೇಕು !**

**ನಮ್ಮ ಕೂಡಲಸಂಗಮದೇವರ**

**ನೆನೆವುತ್ತ ನೆನೆವುತ್ತ ನೆನೆಯದಂತಿರಬೇಕು !**

ಮಾನವನ ಆಧ್ಯಾತ್ಮಿಕ ಮುನ್ನಡೆಯಲ್ಲಿ ಕಾಯಕದ ಪಾತ್ರವನ್ನು ಬಸವಣ್ಣ ಹೀಗೆ ನಿರೂಪಿಸುತ್ತಾರೆ:

**ನಾನು ಆರಂಬವ ಮಾಡುವೆನಯ್ಯ ಗುರುಪೂಜೆಗೆಂದು**

**ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು**

**ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು ನಾನಾವಾದ ಕರ್ಮಂಗಳ ಮಾಡಿದಡೆಯೂ, ಆಕರ್ಮಫಲಭೋಗವ ನೀ ಕೊಡುವೆಯೆಂಬುದ ನಾನು ಬಲ್ಲೆನು ನೀ ಕೊಟ್ಟ ದ್ರವ್ಯದ ನಿಮಗಲ್ಲದೆ ಮತ್ತೊಂದಕ್ಕೆ ಮೀಡೆನು ನಿಮ್ಮ ಸೊಮ್ಮ ನಿಮಗೆ ಸಲ್ಲಿಸುವೆನು**

**ನಿಮ್ಮಾಣೆ ಕೂಡಲಸಂಗಮದೇವಾ**

ಮಾಡುವ ಕಾಯಕವನ್ನು ಯೋಗವಾಗಿಸುವ ಮಾರ್ಗವನ್ನು ಸೂಚಿಸುತ್ತಾರೆ. ಬಸವಣ್ಣನವರು ಈ ವಚನದಲ್ಲಿ ಡಾ। ಸಿದ್ಧಯ್ಯ ಪುರಾಣಿಕರು 'ವಚನ ಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳು' ಎಂಬ ಗ್ರಂಥದಲ್ಲಿ ಈ ವಚನವನ್ನು ವಿಶ್ಲೇಷಿಸುತ್ತಾ ಹೀಗೆ ಹೇಳುತ್ತಾರೆ:

"ಇಲ್ಲಿ 'ನಿಮ್ಮ ಸೊಮ್ಮ' ಅಂದರೆ 'ನಿಮ್ಮ ಆಸ್ತಿ' ಈ ರೀತಿ ಅದನ್ನು ಅವಲೋಕಿಸಿದರೆ ಕಾಯಕದಿಂದ ಸಂಪಾದಿಸಿದ ಯಾವುದೇ ವಸ್ತು ಪರಮಾತ್ಮನ ಆಸ್ತಿಯಾಗುವುದು. ಗಾಂಧೀಜಿ ಧರ್ಮದರ್ಶತ್ವದ ಪರಿಕಲ್ಪನೆಯನ್ನು ಕೊಟ್ಟರು. ಎಲ್ಲಾ ಭೂಮಿಯೂ ಗೋಪಾಲನ ಭೂಮಿ (ಸಾರೇ ಜಮೀನ್ ಗೋಪಾಲ್‌ಕಿ) ಎಂಬ ಕರೆಯನ್ನು ವಿನೋಬಾಜಿ ಕೊಟ್ಟರು ಮತ್ತು ಎಲ್ಲಾ ಸ್ವತ್ತು ದೇವರ ಸ್ವತ್ತು ಎಂದು ಬಸವಣ್ಣ ಘೋಷಿಸಿದರು. ಅದನ್ನು ದೇವರ ಹೆಸರಿನಲ್ಲಿ ದೇವರ ಸೃಷ್ಟಿ ಕ್ರಿಯೆಗಾಗಿ ಉಪಯೋಗಿಸಬೇಕು. ಅದು ವ್ಯಕ್ತಿಗಳ ಅಗತ್ಯವನ್ನು ತೃಪ್ತಿಪಡಿಸಲು ಮತ್ತು ಸಾಮೂಹಿಕ ಕಾರ್ಯಗಳಿಗಾಗಿ ಸಮುದಾಯಕ್ಕೆ ಸಂಪೂರ್ಣವಾಗಿ ಸೇರಿದುದಾಗಿದೆ...... ಕೆಲಸವನ್ನು ದೈವಿಕಗೊಳಿಸಲು ಮತ್ತು ಸ್ವತ್ತು ಹಾಗೂ ಸಂಪತ್ತುಗಳನ್ನು ಆರಾಧನೆ ಎಂದು ಮಾಡುವುದಕ್ಕಾಗಿ ಈ ಭಾವನೆ ಅಗತ್ಯ."

(ವಚನ ಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳು, ಮೂಲ ಇಂಗ್ಲೀಷ್: ಡಾ। ಸಿದ್ಧಯ್ಯ ಪುರಾಣಿಕ, ಅನುವಾದ: ಪ್ರೊ.ಎ.ಎಸ್.ನಂಜುಂಡಸ್ವಾಮಿ. ಭವನದ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧಿಕೇಂದ್ರ, ಭಾರತೀಯ ವಿದ್ಯ ಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು-1, ಪುಟ 23,24)

ಡಾ । ಸಿದ್ಧಯ್ಯ ಪುರಾಣಿಕರ ಪ್ರಕಾರ ವಚನಕಾರರಲ್ಲಿ ಅನೇಕರು ತಮ್ಮ ಆಂತರಿಕ ಸಾಧನೆಗೆ ಅನುರೂಪವಾಗಿ ಅದರ ಬಾಹ್ಯ ಅಭಿವ್ಯಕ್ತಿಯನ್ನು ವಿವರಿಸುವುದರ ಮೂಲಕ ಕಾಯಕಕ್ಕೆ ಆಧ್ಯಾತ್ಮಿಕ ಅರ್ಥವನ್ನು ಕೊಟ್ಟಿದ್ದಾರೆ.

ಇನ್ನು ನಿರಂತರ ಪರಮಾತ್ಮನ ಸ್ಮರಣೆಯ ಕುರಿತಾಗಿ ಬಸವಣ್ಣನವರು ತಮ್ಮ ಅನುಭವವನ್ನು ಉಪಮೆಗಳೊಂದಿಗೆ ಹೀಗೆ ಹೇಳಿದ್ದಾರೆ :

**ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ,**

**ಅಂಬುಜಕ್ಕೆ ಭಾನುವಿನ ಉದಯದ ಚಿಂತೆ,**

**ಭ್ರಮರಕ್ಕೆ ಪರಿಮಳದ ಬಂಡುಂಬ ಚಿಂತೆ, ಬಂಡುಂಬ=ಜೇನನ್ನು ಕುಡಿಯುವ**

**ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೇ ಚಿಂತೆ.**

(ಬ.ವ. ಡಾ । ಎಲ್.ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, ಪ್ರ.ಮು 1952, ಪುಟ 87, ವ.ಸಂ 224)

**ಅಕ್ಕಮಹಾದೇವಿಯು ತನ್ನ ವಚನದಲ್ಲಿ ಹೇಳುತ್ತಾರೆ:**

**ಹಗಲೆನ್ನ, ಇರುಳೆನ್ನ ! ಉದಯವೆನ್ನೆ, ಅಸ್ತಮಾನವೆನ್ನೆ !**

**ಹಿಂದೆನ್ನೆ ಮುಂದೆನ್ನೆ ! ನೀನಲ್ಲದೆ ಪೆರತೊಂದಹುದೆನ್ನೆ !**

ಹೀಗೆ ಶರಣರ ಹಾಗೂ ಹರಿದಾಸರ ಕೃತಿಗಳಲ್ಲಿ ಸರ್ವವನ್ನೂ ಭಗವಂತನಿಗೆ ಅರ್ಪಿಸುವ ಮನೋಭಾವ ಹಾಗೂ ಭಗವಂತನ ಸ್ಮರಣೆಯ ಕುರಿತಾದ ಆಳವಾದ ಒಲವು ಇವೆರಡನ್ನೂ ನಾವು ಗುರುತಿಸಲು ಸಾಧ್ಯ.

ಭಕ್ತಿಯ ದಾರ್ಢ್ಯತೆಯ ಲಕ್ಷಣಗಳ ಕುರಿತಾಗಿ ತನ್ನ ಮತವನ್ನು ನಿರೂಪಿಸಿದ ಬಳಿಕ ನಾರದರು ಮುಂದಿನ ಸೂತ್ರದಲ್ಲಿ ಅಸ್ತ್ಯೇವಮೇವಮ್ ॥೨೦॥

ಇದು ಹೀಗೆಯೇ ಸರಿ ಅಂದರೆ ತಾವು ಹೇಳಿರುವುದೇ ಪರಿಪೂರ್ಣವಾದ ಲಕ್ಷಣ

ಎಂದು ಮತ್ತೆ ಒತ್ತಿ ಹೇಳುತ್ತಾರೆ. ಇಲ್ಲಿ 'ಏವಮೇವಮ್' ಎಂಬ ದ್ವಿರುಕ್ತಿಯು ಭಕ್ತಿ ಲಕ್ಷಣಗಳ ಬಗೆಗಿನ ಪ್ರಕರಣವು ಮುಗಿಯಿತೆಂಬುವುದನ್ನು ಸೂಚಿಸುತ್ತದೆ.

ನಾರದರು ನೀಡಿರುವಂತಹ ಭಕ್ತಿಯು ದಾರ್ಢ್ಯತೆಯ ಲಕ್ಷಣವನ್ನು ನಿರೂಪಿಸಲು ಅವರು ವ್ರಜಗೋಪಿಯರ ದೃಷ್ಟಾಂತವನ್ನು ನೀಡುತ್ತಾರೆ 'ಯಥಾ ವ್ರಜಗೋಪಿಕಾನಾಮ್ ॥೨೧॥ ವ್ರಜಗೋಪಿಕೆಯರ (ಭಕ್ತಿ)ಯಂತೆ (ದೇ.ನಾ.ಭ ಪುಟ 37)

ವ್ರಜಗೋಪಿಕೆಯರ ಭಕ್ತಿಯ ಬಗ್ಗೆ ಹರಿದಾಸ ಸಾಹಿತ್ಯದಲ್ಲಿಯೂ ನೂರಾರು ಕೀರ್ತನೆಗಳು ಲಭ್ಯವಿದೆ. ಈಗಾಗಲೇ ಪುರಂದರದಾಸರು ರಚಿಸಿರುವ ಆ ರೀತಿಯ ಕೀರ್ತನೆಗಳಪಟ್ಟಿಯನ್ನು ನೀಡಲಾಗಿದೆ. (ಪುಟ 91 )

ಮುಂದಿನ ಸೂತ್ರದಲ್ಲಿ ಗೋಪಿಯರ ಪ್ರೇಮದ ಬಗ್ಗೆ ಲೋಕ ರೂಢಿಯಲ್ಲಿರುವಂತಹ ಸಂಶಯವನ್ನು ನಿವಾರಣೆ ಮಾಡುತ್ತಾರೆ. ನಾರದರು ಹೇಳುತ್ತಾರೆ.

**'ತತ್ರಾಪಿ ನ ಮಾಹಾತ್ಮ್ಯ ಜ್ಞಾನ ವಿಸ್ಮೃತ್ಯಪವಾದಃ ॥೨೨॥**

ಅಲ್ಲಿಯೂ ಕೂಡ (ಶ್ರೀ ಕೃಷ್ಣನ) ಮಹಾತ್ಮ್ಯದ ಜ್ಞಾನವು ಅವರಿಗಿರಲಿಲ್ಲ ಎಂಬ ಅಪವಾದವು ಸರಿಯಿಲ್ಲ. (ದೇ.ನಾ.ಭ ಪುಟ 39)

ಶಾಂಡಿಲ್ಯ ಭಕ್ತಿ ಸೂತ್ರಗಳಲ್ಲಿ (ಸೂ.ಸಂ ೨೧) ಹೀಗೆ ಹೇಳಲಾಗಿದೆ:

**ಹೇಯಾ ರಾಗತ್ವಾದಿತಿ ಚೇನ್ನಃ ಉತ್ತಮಾಸ್ಪದತ್ವಾತ್, ಸಂಗವತ್,**

'(ಭಕ್ತಿಯು) ರಾಗ ರೂಪವಾದುದರಿಂದ ತ್ಯಾಜ್ಯವು ಎಂದು (ಹೇಳಿದರೆ ಅದು) ಸರಿಯಿಲ್ಲ; ಏಕೆಂದರೆ (ಅದು) ಉತ್ತಮವಾದ (ಪರಮೇಶ್ವರನನ್ನು) ಆಶ್ರಯಿಸಿರುತ್ತದೆ. ಸಂಗದ ವಿಷಯದಲ್ಲಿರುವಂತೆ (ಇಲ್ಲಿಯೂ ಅರಿಯಬೇಕು). (ಶಾಂ.ಭ. ಸ್ವಾಮಿಹರ್ಷಾನಂದ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು-20, 2000, ಪುಟ 16)

ಸಂಗವು ಕೆಟ್ಟದ್ದೂ ಅಲ್ಲ, ಒಳ್ಳೆಯದೂ ಅಲ್ಲ, ಸತ್ಪುರುಷರ ಸಂಗ ಉತ್ತಮವಾದುದು; ಆದರೆ ದುಸ್ಸಂಗವು ಸರ್ವಥಾ ತ್ಯಾಜ್ಯ (ದುಸ್ಸಂಗಃ ಸರ್ವಥೈವ ತ್ಯಾಜ್ಯಃ ॥೪೩॥ ದೇ.ನಾ.ಭ ಪುಟ ೬೯) ಲೋಕರೂಢಿಯಲ್ಲಿ ಪ್ರಚಲಿತವಾಗಿರುವಂತೆ, ಒಂದು ವೇಳೆ ಗೋಪಿಯರಿಗೆ ಶ್ರೀ ಕೃಷ್ಣನ ಮೇಲೆ ಆರಂಭದಲ್ಲಿ ಇದ್ದದ್ದು ಕೇವಲ ಲೌಕಿಕವಾದ ಆಕರ್ಷಣೆಯೇ ಆದರೂ ಆ ಆಕರ್ಷಣೆಯ ಕೇಂದ್ರ, ಲಕ್ಷ್ಯವು ಪರಮಾತ್ಮನೇ ಆಗಿದ್ದುದರಿಂದ ಅವನ ಮಹಾತ್ಮ್ಯದ ಅರಿವುಂಟಾಗಿ ಆ ಆಕರ್ಷಣೆ ಬಹುಬೇಗನೇ ಪರಿಶುದ್ಧ ಪ್ರೇಮವಾಗಿ ಪರಿವರ್ತನೆ ಹೊಂದಿತ್ತು. ಅವರನ್ನು ಬಂಧನಗಳಿಂದ ಬಿಡಿಸಿತು. ಇದನ್ನು ಶ್ರೀ ಮದ್ಭಾಗವತದಲ್ಲಿ ಅವರ ಮುಖದಿಂದ ಹೊರಹೊಮ್ಮಿದ ಶ್ಲೋಕಗಳಲ್ಲಿ ಸ್ಪಷ್ಟವಾಗಿ ಕಾಣಬಹುದು:

**ನ ಖಲು ಗೋಪಿಕಾನಂದನೋ ಭವಾನ್ । ಅಖಿಲದೇಹಿನಾಮಂತರಾತ್ಮದೃಕ್ ।**

**ವಿಖಿನಸಾರ್ಥಿತೋ ವಿಶ್ವಗುಪ್ತಯೇ ಸಖ ಉದೇಯಿವಾನ್ ಸಾತ್ವತಾಂ ಕುಲೇ ॥**

ಸಖನೆ ! ನೀನು ನಿಜವಾಗಿ ಗೋಪಿಕಾನಂದನದಲ್ಲಿ ನೀನು ಎಲ್ಲ ಜೀವಿಗಳ ಹೃದಯವನ್ನು ನೋಡುತ್ತಿರುವ ಅಂತರ್ಯಾಮಿ ! ಜಗದ್ರಕ್ಷಣೆಗಾಗಿ ಚತುರ್ಮುಖ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟು ಸಾತ್ವತರ (ಯಾದವರ) ವಂಶದಲ್ಲಿ ಹುಟ್ಟಿರುತ್ತೀಯೆ !"
(ಶ್ರೀ ಮದ್ಭಾಗವತ 10.31.4)

**ವಿರಚಿತಾಭಯಂ ವೃಷ್ಣಿಧುರ್ಯ ತೇ ಚರಣ ಮೀಯುಷಾಂ ಸಂಸೃತೇರ್ಭಯಾತ್ ।**

**ಕರಸರೋರುಹಂ ಕಾಂತಕಾಮದಂ ಶಿರಸಿ ದೇಹಿ ನಃ ಶ್ರೀಕರಗ್ರಹಮ್ ॥**

'ಹೇ ಯದುಶ್ರೇಷ್ಠ ! ಸಂಸಾದ ಭಯದಿಂದ ನಿನ್ನ ಚರಣವನ್ನು ಶರಣು ಹೊಂದಿರುವ ನಮ್ಮ ತಲೆಯ ಮೇಲೆ ಹೇ ಪ್ರಿಯ, ಲಕ್ಷ್ಮಿಯ ಕೈಯನ್ನು ಹಿಡಿದಿರುವ, ಎಲ್ಲ ಕಾಮನೆಗಳನ್ನು ಕೊಡಬಲ್ಲ, ಅಭಯವನ್ನೀಯಬಲ್ಲ, ನಿನ್ನ ಕರಪದ್ಮವನ್ನಿಡು ! (ಅದೇ ೧೦.೩೧.೫)

ವಿಷ್ಣು ಪುರಾಣದ ಈ ವಿವರಣೆಯೂ ಸಂಗತವಾಗುತ್ತದೆ:

**ಗೋಪೀನಾಂ ತತ್ಪತೀನಾಂ ಚ ಸರ್ವೇಷಾಮೇವ ದೇಹಿನಾಮ್ ।**

**ಯೋಽಂತಶ್ಚರತಿ ಸೋಽಧ್ಯಕ್ಷಃ ಕ್ರೀಡನೇನೇಹ ದೇಹಭಾಕ್ ॥**

'ಗೋಪಿಯರ ಅವರ ಪತಿಗಳ ಮತ್ತು ಸರ್ವದೇಹಧಾರಿಗಳ ಹೃದಯದಲ್ಲಿ ಯಾರು ಸಾಕ್ಷಿಯಾಗಿ ಚಲಿಸುತ್ತಿರುವನೋ ಅವನೇ ಇಹಲೋಕದಲ್ಲಿ ಆಟಕ್ಕಾಗಿ ದೇಹವನ್ನು ಧರಿಸಿ ಬಂದಿದ್ದಾನೆ.' (ವಿಷ್ಣು ಪುರಾಣ 10.33.36)

ಗೋಪಿಯರಿಗೆ ಶ್ರೀ ಕೃಷ್ಣನ ಮೇಲೆ ಬಗ್ಗೆ ಇದ್ದ ಆಕರ್ಷಣೆಯು ಮಹಾತ್ಮ್ಯ ಜ್ಞಾನದಿಂದ ಕೂಡಿದ ಪರಿಶುದ್ಧ ಪ್ರೇಮವಾಗಿ ಪರಿವರ್ತನೆ ಹೊಂದಿದ ನಿರೂಪಣೆಯು ದಾಸಸಾಹಿತ್ಯದಲ್ಲಿ ದೊರೆಯುತ್ತದೆ. ಸಂತಭದ್ರಗಿರಿ ಅಚ್ಯುತದಾಸರು. ದಾಸಸಾಹಿತ್ಯವನ್ನು ಆಧರಿಸಿ ಶ್ರೀ ಮದ್ಭಾಗವತದ ಕುರಿತಾಗಿ ಬರೆದಿರುವಂತಹ ಗ್ರಂಥ 'ಶ್ರೀ ಹರಿಕಥಾಮೃತಸಿಂಧು' ಶ್ರೀ ಕೃಷ್ಣಕಥಾವಾಹಿನಿ ಇದರಲ್ಲಿ ಈ ರೀತಿಯ ನಿರೂಪಣೆಯನ್ನು ನಾವು ಕಾಣಬಹುದು. ಅದರಿಂದ ಆಯ್ದ ಒಂದು ಭಾಗವು ಇಂತದೇ ಪರಮ ಸಾತ್ವಿಕರಾದ ಸುಜೀವಿಗಳಾದ ಕೆಲವು ಗೊಲ್ಲತಿಯರು ಯಶೋಧೆಯ ಬಳಿಗೆ ಬಂದು, ಹೇ ಯಶೋದೆ ! ನಿನ್ನ ಮಗು ಎಷ್ಟು ಸುಂದರನೇ ! ಅವನು ಕೇವಲ ನಿನ್ನ ಗರ್ಭಸಂಭೂತನೆಂದು ತಿಳಿಯಬೇಡಾ. ಅವನು ಪ್ರಾಕೃತ ಶಿಶುವಲ್ಲ. ನಿನ್ನ ಕೃಷ್ಣನು ಸಾಕ್ಷಾತ್ ಜಗತ್ಪತಿ. ನಾವು ಹಸುಗಳನ್ನು ಹಿಂಡುವಾಗ ನಮಗೆ ನಾನಾ ರೂಪಗಳನ್ನು ತೋರಿಸುತ್ತಾನೆ. ನಮಗೆ ಹಸುವಿನಲ್ಲಿ, ಕರುವಿನಲ್ಲಿ, ಕೆಚ್ಚಲಲ್ಲಿ, ಗೋದೋಹನ ಕ್ರಿಯೆಯಲ್ಲಿ ಹಗ್ಗದಲ್ಲಿ ಶ್ರೀ ಕೃಷ್ಣನ ಸನ್ನಿಧಾನವೇ ಕಾಣಿಸುತ್ತದೆ ಎನ್ನುತ್ತಾರೆ.

'ಈಶಾವಾಸ್ಯ ಮಿದಂ ಸರ್ವಂ' ಉಪನಿಷದ್ವಾಕ್ಯವನ್ನು ಹೋಲುವ ಮಾತಿದು. ಆ ಗೋಪಿ ಶ್ರೀ ಕೃಷ್ಣನ ಚಿಂತನೆಯಲ್ಲಿ ತನ್ಮಯಳಾಗಿದ್ದಾಳೆಂದು ಆ ವಾಕ್ಯದ ಅರ್ಥ. ಗೋಪಿಯರ ಈ ಅನುಭವವನ್ನು ಅನುಭಾವಿಗಳಾದ ಪುರಂದರದಾಸರು ಹೀಗೆ ಹಾಡಿದ್ದಾರೆ[20]:

ಯಶೋದೆ ನಿನ್ನ ಕಂದಗೆ ಏಸು ರೂಪವೆ ।
ಶಿಶುವಲ್ಲ ನಿನ್ನ ಮಗ ಕೃಷ್ಣ ಜಗತ್ಪತಿಯೇ ॥ಪ॥
ಹಸುಗಳ ಕರೆವಲ್ಲಿ ಹಲವು ರೂಪ ತೋರುವ । ಬಿಸಿಯ ಹಾಲಿಡುವಲ್ಲಿ ಬೆನ್ನ ಹಿಂದೆ ಇರುವಾ ।
ಮೊಸರ ಕಡೆವಲ್ಲಿ ಮುಂದೆ ನಿಂದಿರುವ । ಹಸನಾಗಿ ಮೋಸಮಾಡಿ ಬೆಣ್ಣೆ ಕದ್ದು ಮೆಲುವಾ ॥
ಒಬ್ಬರ ಮನೆಯಲಿ ಮಲಗಿ ತಾನಿರುವ । ಒಬ್ಬರ ಮನೆಯಲಿ ಪುಟಚಂಡನಾಡುವ ॥
ಒಬ್ಬರ ಮನೆಯಲಿ ರತಿ ಕ್ರೀಡೆಯಾಡುವ । ಒಬ್ಬರ ಮನೆಯಲಿ ಬೆಣ್ಣೆ ಕದ್ದು ಮೆಲುವ ॥
ಹಿಂದೆ ನಿಂದಿರುವ ಮುಂದೆ ಪೋಗುತಿರುವ । ಇಂದು ಮುಖಿಯರ ಕೂಡೆ ಸರಸವನಾಡುವ ।
ಬಂದು ನೋಡೆ ಯಶೋದೆ ಬಣ್ಣದದ ಮಾತಲ್ಲ । ನಂದಗೋಪನ ಕಂದ ಪುರಂದರವಿಠಲಾ ॥

ಬಾಲಕೃಷ್ಣನು ಬಂದು ಕುದಿಯುವ ಹಾಲಿಗೆ ಕೈ ಹಾಕಿಯಾನೆಂದು ಯಾರಿಗೂ ತಿಳಿಯದ ಒಂದು ಗುಟ್ಟಿನ ಸ್ಥಳದಲ್ಲಿ ನಾನು ಹಾಲನ್ನು ಇರಿಸುವೆನೆಂದು ಹೋದರೆ ಅವನು ನನ್ನ ಬೆನ್ನ ಹಿಂದೆ ಕಾಣಿಸಿದನಮ್ಮಾ ! ಅಂದರೆ ನಮಗೆ ನಿನ್ನ ಮಗನಿಂದಾಗಿ 'ಏಕಾಂತ'ವೆಂಬುವುದೇ ಇಲ್ಲವಾಯ್ತು ಎನ್ನುತ್ತಾಳೆ.

ನನ್ನ ಕೈಗೆ ಎರಡೆರಡು ಬಳೆಗಳಿದ್ದವು. ಮೊಸರು ಕಡೆಯುವಾಗ ಅವುಗಳು ಸದ್ದು ಮಾಡಿದರೆ ನಿನ್ನ ಕೃಷ್ಣನಿಗೆ ತಿಳಿದೀತೆಂದು ನಾನು ಒಂದೊಂದು ಕೈಗೆ ಒಂದೋದೇ ಬಳೆ ಹಾಕಿಕೊಂಡು ಮೊಸರು ಕಡೆಯುತ್ತಿದ್ದೆ. ಕ್ಷಣದಲ್ಲೇ ನನ್ನ ಕಣ್ಣ ಮುಂದೆ ಧುತ್ತೆಂದು ಮೂಡಿತು ನಿನ್ನ ಕೃಷ್ಣನ ರೂಪ ! ಮೃದುವಾಗಿ ಮಾತನಾಡಿ ನನ್ನ ಕಣ್ಣ ಮುಂದೆಯೇ ಬೆಣ್ಣೆ ಕದ್ದು ತಿಂದ (ನಮ್ಮೊಳಗೆ ಇದ್ದೇ ನಮಗೆ ತಿಳಿಯದಂತೇ ಕೃತಿ ಮಾಡಿಸುತ್ತಾನೆ, ಮಾಡುತ್ತಾನೆ.)

ಶ್ರೀ ಕೃಷ್ಣನು ಏಕಕಾಲದಲ್ಲಿ ಎಲ್ಲಾ ಮನೆಗಳಲ್ಲೂ ಕಾಣಿಸಿಕೊಳ್ಳುತ್ತಾನೆ. ಏಕಕಾಲದಲ್ಲಿ ಒಂದು ಮನೆಯಲ್ಲಿ ಮಲಗಿದ್ದರೆ ಇನ್ನೊಂದೆಡೆ ಚೆಂಡನ್ನು ಆಡುತ್ತಿರುತ್ತಾನೆ. ಇನ್ನೊಂದು ಮನೆಯಲ್ಲಿ ಬೆಣ್ಣೆ ಕದಿಯುತ್ತಾನೆ. ಸತಿಪತಿಯರ ಏಕಾಂತದಲ್ಲೂ ಅವನೇ ಕಾಣಿಸುತ್ತಾನೆ.

ಒಬ್ಬರ ಮನೆಯಲಿ ಮಲಗಿ ತಾನಿರುವ । ಒಬ್ಬರ ಮನೆಯಲಿ ಪುಟಚೆಂಡನಾಡುವ ।
ಒಬ್ಬರ ಮನೆಯಲಿ ರತಿಕ್ರೀಡೆಯಾಡುವ । ಒಬ್ಬರ ಮನೆಯಲ್ಲಿ ಬೆಣ್ಣೆ ಕದ್ದು ಮೆಲುವ ॥೨॥
ಹಿಂದೆ ನಿಂದಿರುವ ಮುಂದೆ ಪೋಗುತಿರುವ । ಇಂದು ಮುಖಿಯರ ಕೂಡೆ ಸರಸವನಾಡುವ ।
ಬಂದು ನೋಡೆ ಯಶೋದೆ ಬಣ್ಣದ ಮಾತಲ್ಲಾ । ನಂದಗೋಪಾಲನ ಕಂದ ಪುರಂದರ ವಿಠಲಾ ॥೩॥

ನಮ್ಮ ಹಿಂದೆ ಮುಂದೆ ಅವನೇ ಇದ್ದಾನೆ. ಅದೇ ಸಂದರ್ಭದಲ್ಲಿ ಇನ್ನೊಬ್ಬಳೊಡನೆ ಸರಸವಾಡುತ್ತಾನೆ. 'ಹೇ ಯಶೋದೆ ! ನಿನಗೆ ಸಂದೇಹವಿದ್ದರೆ ನೀನೇ ಬಂದು ನೋಡು !' ಎಂದು ಗೋಪಿಯರ ಅನುಭವವನ್ನು ಪುರಂದರದಾಸರ ಕೀರ್ತನೆಯ ಮೂಲಕ ನಿರೂಪಿಸುತ್ತಾರೆ ಸಂತ ಭದ್ರಗಿರಿ ಅಚ್ಯುತದಾಸರು. (ಪುಟ 225)

ಹೀಗೆಯೇ ಮತ್ತೊಬ್ಬಾಕೆ ಗೋಪಿಯ ಅನುಭವವನ್ನು ಪುರಂದರದಾಸರ ಇನ್ನೊಂದು ಕೀರ್ತನೆಯನ್ನು ಬಳಸಿ ನಿರೂಪಿಸುತ್ತಾರೆ:

'ಆಕೆ ವೈಷ್ಣವಳು ಬಹಳ ಮಡಿವಂತೆ. ಎಷ್ಟು ಮಡಿ ಎಂದರೆ, ಮೊದಲು ನೀರನ್ನು ತೊಳೆದು ಆಮೇಲೆ ಸ್ನಾನ ಮಾಡುವವಳು, ಮಡಿ ಉಟ್ಟ ಮೇಲೆ ಕಿಡಿಕಿಡಿಯಾಗುವ ಆಕೆ, ಯಶೋದೆಯ ಬಳಿಗೆ ಬಂದು, ನೋಡಮ್ಮಾ ಯಶೋದೆ, ನೀವು ವೈಷ್ಣವರು. ಶ್ರೀ ದೇವರಿಗೆ ನೈವೇದ್ಯ ಮಾಡದೇ ನಾವು ಉಣ್ಣುವುದು, ತಿನ್ನುವುದು ಮಾಡುವುದಿಲ್ಲ. ಮಡಿಮಡಿಯಾಗಿ ನಾನು ಅಡುಗೆ ಮಾಡಿಟ್ಟು ನೈವೇದ್ಯಕ್ಕೆ ಅಂಗಾರ ತರಲು ಹೋದಾಗ ನಿನ್ನ ಮಗ ಬಂದು,

**ಅಟ್ಟಡುಗೆಯನ್ನೆಲ್ಲಾ । ಉಚ್ಛಿಷ್ಟವನು ಮಾಡಿ ।**

**ಅಷ್ಟೂ ತಾ ಬಳಿದುಂಡನೇ ।**

**ವಿಷ್ಣು ದೇವರ ನೈವೇದ್ಯವೆಂದರೆ ನಿನ್ನಿಷ್ಟದೇವರು ತೃಪ್ತನಾದನೆಂಬನೇ ॥**

(ಪುರಂದರದಾಸರು)

.........ಒಬ್ಬ ತುಂಬಾ ವಯಸ್ಸಾದ ಮುದುಕಿ ಕೋಲೂರಿಕೊಂಡು ನಡುಗುತ್ತಾ ಬರುತ್ತಾಳೆ. ಅವಳನ್ನು ನೋಡುತ್ತಲೇ ಯಶೋದೆಗೆ ಬಹಳ ಕರುಣೆ ಉಂಟಾಗಿ ಕರೆದು ಸತ್ಕರಿಸಿ ಕುಶಲವನ್ನು ಕೇಳಿ ಬಂದ ಕಾರಣವನ್ನು ಕೇಳಲು, 'ಅಮ್ಮಾ ಯಶೋದೆ ! ನಾನು ನನ್ನ ಮನೆಯಲ್ಲಿ ನಾನೊಬ್ಬಳೇ ವಾಸಿಸುತ್ತೇನೆ.

'ಮನೆಯು ಗಂಡಸರೆಲ್ಲಾ ಕಾಲವಾಗಿ ಪ್ರಾರಬ್ಧಜೀವಿ ನಾನೊಬ್ಬಳೇ ಉಳಿದುಕೊಂಡಿದ್ದೇನೆ. ನಿನ್ನ ಮುದ್ದುಕೃಷ್ಣನು ನಮ್ಮ ಮನೆಗೆ ಬಂದಿದ್ದ, ನಾನು ಬಾ ಕಂದಾ ! ಎಂದು ಸ್ವಾಗತಿಸಿದಾಕ್ಷಣ ನೇರವಾಗಿ ಒಳಕ್ಕೆ ಬಂದವ ನಮ್ಮ ದೇವರ ಕೋಣೆಗೆ ನುಗ್ಗಿದ. ಬೇಡವೋ ಕೃಷ್ಣ ! ಕಂದ ಒಳಗೆ ಹೋಗಬೇಡಾ ! ಅದು ಬಹಳ ಮಡಿಯ ದೇವರಪ್ಪಾ ! ನಾವೇ ಒಳಗೆ ಹೋಗದೆ ಇಪ್ಪತ್ತೈದು ವರ್ಷ ಆಗಿದೆ ! ಹೋಗಬೇಡವೆಂದೂ ನಾನೆಷ್ಟು ಹೇಳಿದರೂ ಕೇಳದೇ, ಮೈಲಿಗೆಯಲ್ಲಿ ಒಳಗೆ ನುಗ್ಗಿ,

**ದೇವರ ಪೆಟ್ಟಿಗೆ ತೆಗೆದು ಸಾಲಿಗ್ರಾಮ । ಸಾವಿರ ನುಂಗವನೆ ॥**

**ಭಾವಜನಯ್ಯ ಇದೇನೆಂದರೆ ನಿಮ್ಮ । ಕಾದ ದೇವರು ನಾನು ಕೇಳಿಕೋ ಎಂಬನೆ ॥**

**ಅಗ್ರೋದಕ ತಂದು ಜಗುಲಿ ಮೇಲಿಟ್ಟರೆ । ವೆಗ್ಗಳದಲಿ ಕುಡಿವ ॥**

**ಮಂಗಳ ಮಹಿಮನ ಮೀಸಲೆಂದರೆ ನಿಮ್ಮ ।**

**ಮಂಗಳಮಹಿಮನ ಅಪ್ಪನಾನೆಂಬುವ ॥**

ಈ ನಿರೂಪಣೆಗಳಿಂದ ಗೋಪಿಯರು ಆರಂಭದಲ್ಲಿ ಬಾಲಕೃಷ್ಣನನ್ನು ಸಾಮಾನ್ಯ ಲೌಕಿಕ ದೃಷ್ಟಿಯಿಂದ ಕಂಡರೂ ಅವನ ಲೀಲೆಗಳನ್ನು ಕಂಡು ಅವನ ದಿವ್ಯವಾದ ಮಹಾತ್ಮ್ಯವನ್ನು ಅರಿತುಕೊಂಡಿದ್ದು ವಿದಿತವಾಗುತ್ತದೆ. ಅವನ ಮಹಾತ್ಮ್ಯವು ಅವರ ಅನುಭವಕ್ಕೆ ಬಂದ ಬಳಿಕ ಅವನನ್ನು ಪ್ರೇಮಿಸದೆ ಗತ್ಯಂತರವಿರಲಿಲ್ಲ. ಅವರ ಹೃದಯ ಪರಿಶುದ್ಧಥತೆಯಿಂದ ಪರಿಪಕ್ವಗೊಂಡ ಆ ಪ್ರೇಮವು ಪರಾಭಕ್ತಿಯಾಗಿ ಪರಿವರ್ತನೆ ಹೊಂದಿತು ಅನ್ನಬಹುದು. ಅವರಿಗೊದಗಿದ ಈ ದಿವ್ಯ ಪ್ರೇಮದ ಸ್ಥಿತಿಯ ಹೊಳಹನ್ನು ಗೋಪಾಲದಾಸರ ಒಂದು ಉಗಾಭೋಗದಲ್ಲಿ ಗುರುತಿಸಬಹುದು.

ಬಾಡದೊನಮಾಲೆ ಧರಿಸಿ ಕೊರಳಲ್ಲಿ
ನೋಡಿ ನೋಡದ ಹಾಗೆ ಪೋದನವ್ವಾ
ಆಡುವ ಧ್ವನಿ ಕೇಳಿ ಪಾಡುವ ಪೊಗಳುವ
ನಾಡೊಳಗೆ ಪ್ರತಿ ಪುರುಷನವ್ವ
ನೋಡಿದ ಮ್ಯಾಲಿವನ ಮನಸು ಅನ್ಯತ್ತರವು
ನೋಡದೆ ಎಚ್ಚರಿಕೆ ಏಕವವ್ವಾ
ಮಾಡಬಲ್ಲವು ಒಂದು ಕರ್ಮವು ಕಣಂಗಳು ಅಡಗವಲ್ಲವು
ಆಡುವ ವಚನಗಳ ಕೇಳಲೊಲ್ಲವು ಕರ್ಣ
ನೋಡಿ ಬೆರಗಾಗುತಿವೆ ಏನವ್ವ
ರೂಢಿಯೊಳಗತಿ ಚೆಲುವನೀತನವ್ವ
ನೋಡಿದರೆ ಮನದ ಅಘವಡಗಿತವ್ವ
ಗಾಡಿಕಾರ ಚೆಲುವ ಗೋಪಾಲವಿಠಲ
ಆಡ ಬಂದಿದ್ದೆನ್ನ ಅಂಗಳದೊಳಗೆ

ಗೋಪಿ ಹೇಳುತ್ತಾಳೆ 'ಅವನ ದಿವ್ಯ ವದನವನ್ನು ನೋಡಿದ ಮೇಲೆ ಮನಸ್ಸು ಅನ್ಯವಿಷಯಕ್ಕೆ ಎರಗುವುದೇ ಇಲ್ಲ.' ಅವನ ಮಧುರ ಮಾತು ಕೇಳಿದ ಕಿವಿ ಬೇರೇನೂ ಕೇಳಲಿಚ್ಛಿಸವು. ಅವನನ್ನು ಕಂಡಾಗ ಎಲ್ಲಾ ಇಂದ್ರೀಯಗಳು ಸ್ತಬ್ಧವಾಗುವವು. ಜಗದಲ್ಲೇ ಅತ್ಯಂತ ಸುಂದರವಾದ ನಿನ್ನ ಕೃಷ್ಣನನ್ನು ಕಂಡರೆ ಎಲ್ಲಾ ಪಾಪಗಳೂ ಪರಿಹಾರವಾಗುವವು.'

(ಶ್ರೀ ಗೋಪಾಲದಾಸರ ಕೃತಿಗಳು ಸಂ:ಡಾ.ಟಿ.ಎನ್ ನಾಗರತ್ನ. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ-12, 1987, ಅನುಬಂಧ 2, ಪುಟ286)

ಪುರಂದರದಾಸರೂ ಕೂಡಾ 'ಎಂಥ ಪುಣ್ಯವೆ ನಿನ್ನದೆಂಥ ಭಾಗ್ಯವೆ ಗೋಪಿ' ಎನ್ನುವ ಕೀರ್ತನೆಯಲ್ಲಿ ಓರ್ವ ಗೋಪಿಯು ಬಂದು ಯಶೋದೆಗೆ ಹೇಳುವ ಮಾತಿನಮೂಲಕ ಆಕೆಯ ಪ್ರೇಮಾನುಭೂತಿಯನ್ನು ಶಬ್ದಗಳಲ್ಲಿ ಕೆತ್ತಿದ್ದಾರೆ:

ಸರಸಿಜನಾಭನ ಸುಮ್ಮನೆ ಕೊಂಡಾಡೆ । ದುರಿತವೆಲ್ಲವು ಪೋಪುದೆ ॥
ಸರಸದಿಂದಲಿ ಒಮ್ಮೆ ಸವಿ ಮಾತನಾಡಿದರೆ । ಪರಿತೋಷ ಕೈಗೊಡುವುದೇ ಯಶೋದೆ ॥
ನಿನ್ನ ಮಗನ ಕರೆಯೆ ಎನ್ನ ಪ್ರಾಣದೊಡೆಯ । ಪುಣ್ಯದ ಫಲವು ಕಾಣೆ ॥
ಚೆನ್ನ ಶ್ರೀ ಪುರಂದರವಿಠಲರಾಯನ । ನಿನ್ನಾಣೆ ಬಿಡಲಾರದೆ ಪುಸಿಯಲ್ಲವೆ ॥

(ಪು.ದಾ.ಕೀ., ಶ್ರೀ.ಮ.ಗ್ರಂ. ಪುಟ 97, ಕೀ.ಸಂ 150)

ಮುಂದಿನ ಸೂತ್ರದಲ್ಲಿ ನಾರದರು ಗೋಪಿಯರ ಪ್ರೇಮವು ಮಹಾತ್ಮ್ಯಜ್ಞಾನದಿಂದ ಕೂಡಿತ್ತು ಎನ್ನುವುದನ್ನು ಸ್ಪಷ್ಟ ಪಡಿಸಲು ಹೇಳುತ್ತಾರೆ:

**'ತದ್ವಿಹೀನಂ ಜಾರಾಣಾಮಿವ ॥೨೩॥** ಅದಿಲ್ಲದಿದ್ದರೆ (ಮಹಾತ್ಮ್ಯ ಜ್ಞಾನವಿಲ್ಲದೇ ಇದ್ದಿದ್ದರೆ) ಜಾರರ (ಪ್ರೇಮ) ದಂತೆ (ಆಗುತ್ತಿತ್ತು).' ಎಂದು (ಪುಟ ೪೧) ಅಂತಹ ಪ್ರೇಮವು ಹೀನವಾದದ್ದು ಏಕೆಂದರೆ 'ನಾಸ್ತ್ಯೇವ ತಸ್ಮಿಂಸ್ತತ್ಸುಖ ಸುಖಿತ್ವಮ್ ॥೨೪॥

ಆ (ಜಾರರ) ಪ್ರೇಮದಲ್ಲಿ ಇತರರ ಸುಖದಲ್ಲಿ ತಾವು ಸುಖವನ್ನು ಕಾಣುವುದೆಂಬುದು

ಇರುವುದೇ ಇಲ್ಲ. (ಪುಟ ೪೨) ಪ್ರಾಸಂಗಿಕವಾಗಿ ನೈಜ ಪ್ರೇಮದ ಲಕ್ಷಣವನ್ನು ಇಲ್ಲಿ ವಿವರಿಸಲಾಗಿದೆ. ಒಬ್ಬ ವ್ಯಕ್ತಿಯು ಮತ್ತೊಬ್ಬ ವ್ಯಕ್ತಿಯನ್ನು ನಿಜವಾಗಿ ಪ್ರೀತಿಸುತ್ತಿದ್ದರೆ ಎರಡನೆಯ (ಪ್ರೀತಿಸಲ್ಪಡುವ ಸುಖದಲ್ಲಿ ತನ್ನ ಸುಖವನ್ನು ಕಂಡುಕೊಳ್ಳಬೇಕು; ಮತ್ತು ಅದಕ್ಕಾಗಿ ಸರ್ವತ್ಯಾಗಕ್ಕೂ ಸಿದ್ಧವಾಗಿರಬೇಕು.

---

## ಟಿಪ್ಪಣಿಗಳು

1. **ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।**
   **ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮ ನಿವೇದನಂ ॥**
   –ಶ್ರೀ ಮದ್ಭಾಗವತ 7–5–23
2. ಬಸವಣ್ಣನವರ ವಚನಗಳು ಸಂ : ಡಾ.ಎಲ್. ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, 2008, ಪುಟ 101, ವ.ಸಂ 283
3. ಬಸವಣ್ಣನವರ ವಚನಗಳು, ಪುಟ 101, ವ.ಸಂ 285
4. ಬಸವಣ್ಣನವರ ವಚನಗಳು ಪುಟ 102, ವ.ಸಂ 288
5. ವಚನ ಸುವರ್ಣ ಸಾಹಿತ್ಯ ಗ್ರಂಥಮಾಲೆ, ವಚನ ಸಾಹಿತ್ಯ ಸಂಗ್ರಹ, ಸಂ : ಸಂ.ಶಿ.ಭೂಸನೂರ ಮಠ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, 2006, ಪುಟ 125, ವ.ಸಂ 65
6. ಬಸವಣ್ಣನವರ ವಚನಗಳು ಪುಟ 102, ವ.ಸಂ 287
7. ಮೂಲ : ವಚನ ಸಾಹಿತ್ಯ ಸಂಪುಟ. ಪುಟ 151, ವ.ಸಂ 58 ವಚನ ಸಾಹಿತ್ಯ ಸಂಗ್ರಹ. ಸಂ : ಸಂ.ಶಿ. ಭೂಸನೂರ ಮಠ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, 2006, ಪುಟ IXVI, IXVII
8. ದಾಸ ಸಾಹಿತ್ಯ ಮತ್ತು ಸಂಸ್ಕೃತಿ. ಸಾ.ಕೃ.ರಾಮಚಂದ್ರರಾವ್. ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು. 2003
9. ದೇ.ನಾ.ಭ
10. ದೇ.ನಾ.ಭ
11. ದಾ.ಸಾ.ಸಂ ಅಧ್ಯಾಯ 12, ಪುಟ 324
12. ದೇ.ನಾ.ಭ. ಪುಟ 35
13. ಪು.ದಾ.ಕೀ., ಶ್ರೀ.ಮ.ಗ್ರಂ, ಪ್ರ.ಮು.2001, ಪುಟ 639, 640
14. ಪು.ದಾ.ಕೀ. ಶ್ರೀ.ಮ.ಗ್ರಂ. ಪ್ರ.ಮು.2001, ಪುಟ 644)
15. ಪು.ದಾ.ಕೀ., ಶ್ರೀ.ಮ.ಗ್ರಂ., ಪ್ರ.ಮು.2001, ಪುಟ 318, ಕೀ.ಸಂ 509
16. ಅದೇ, ಪುಟ 317, ಕೀ.ಸಂ 508
17. ಕನಕದಾಸ ವಿರಚಿತ ಹರಿಭಕ್ತಿಸಾರ, ಗದ್ಯಾನುವಾದ ವಿದ್ವಾನ್ ಎನ್.ರಂಗನಾಥ ಶರ್ಮಾ, ಕನ್ನಡ ಸಾಹಿತ್ಯ ಪರಿಷತ್ತು ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18, 2009, ಪುಟ 28,29
18. ದೇ.ನಾ.ಭ. ಪುಟ 78
19. ಬ.ವ. ಸಂ:ಡಾ.ಎಲ್. ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, ಪ್ರಮು 1952, ಪುಟ 74, ಪ.ಸಂ 162
20. ಪು.ದಾ.ಕೀ.ಶ್ರೀ.ಮ.ಗ್ರಂ. ಪುಟ 473, ಕೀ.ಸಂ 765

### ೪.೮ ಭಕ್ತಿಸಾಧನೆ

ಸೂತ್ರ ಸಂಖ್ಯೆ ೨೫ರಿಂದ ೨೭ರವರೆಗೆ ನಾರದರು ಭಕ್ತಿಯು, ಭಕ್ತಿ ಮಾರ್ಗವು ಇತರ ಸಾಧನಗಳಿಗಿಂತ ಹೇಗೆ ಶ್ರೇಷ್ಠ ಎಂಬುವುದನ್ನು ಸಾಧಿಸಲು ಪ್ರಯತ್ನಿಸಿದ್ದಾರೆ.

**'ಸಾ ತು ಕರ್ಮಜ್ಞಾನ ಯೋಗೇಭ್ಯೋಽಪ್ಯಧಿಕತರಾ ॥೨೫॥**

ಆ (ಭಕ್ತಿಯಾದರೋ) ಕರ್ಮ ಜ್ಞಾನ ಯೋಗ ಇವುಗಳಿಗಿಂತ ಅಧಿಕವಾದದ್ದು (ಪುಟ ೪೩)

**ಫಲರೂಪತ್ವಾತ್ ॥೨೬॥** (ಭಕ್ತಿಯು) ಫಲರೂಪವಾಗಿರುವುದರಿಂದಲೂ (ಪುಟ ೪೬)

ಈಶ್ವರಸ್ಯಾಪ್ಯಭಿಮಾನ **ದ್ವೇಷಿತ್ವಾದ್ ದೈನ್ಯಪ್ರಿಯತ್ವಾಚ್ಚ ॥೨೭॥**

ಈಶ್ವರನಿಗೆ ಅಭಿಮಾನವು ಹಿಡಿಸದಿರುವುದರಿಂದಲೂ ಮತ್ತು ದೈನ್ಯವು ಪ್ರಿಯವಾದುದರಿಂದಲೂ (ಭಕ್ತಿಯು ಇತರ ಸಾಧನಗಳಿಗಿಂತ ಅಧಿಕ)(ಪುಟ ೪೬) ಶಾಂಡಿಲ್ಯ ಮಹರ್ಷಿಗಳೂ ಈ ವಾದವನ್ನು ಸಮರ್ಥಿಸುತ್ತಾರೆ: **'ಸಾ ಮುಖ್ಯಾ ಇತರಾಪೇಕ್ಷಿತತ್ವಾತ್** ಆ ಭಕ್ತಿಯೇ ಮುಖ್ಯ; ಇತರ (ಸಾಧನಗಳು ಇದನ್ನು) ಅಪೇಕ್ಷಿಸುತ್ತದೆ' –(ಶಾಂಡಿಲ್ಯ ಭಕ್ತಿ ಸೂತ್ರಗಳು ೧೦, ಪುಟ ೯)

ಮುಂದೆ ಪ್ರಾಸ್ತಾವಿಕವಾಗಿ ಈ ಭಕ್ತಿಮಾರ್ಗದಲ್ಲಿ ಜ್ಞಾನದ ಅವಶ್ಯಕತೆಯಿದೆಯೇ ಅಥವಾ ಜ್ಞಾನ ಮತ್ತು ಗೌಣಭಕ್ತಿ ಎರಡನ್ನೂ ಒಟ್ಟೊಟ್ಟಿಗೆ ಅಭ್ಯಾಸಮಾಡಬೇಕೇಎಂಬ ವಿಷಯವನ್ನು ಚರ್ಚಿಸುತ್ತಾರೆ. ಪೂರ್ವಭಾವಿಯಾಗಿ ಕೆಲವು ಆಚಾರ್ಯರ ಮತವನ್ನು ಪ್ರಾಸ್ತಾಪಿಸುತ್ತಾರೆ. **'ತಸ್ಯಾ ಜ್ಞಾನಮೇವ ಸಾಧನಮಿತ್ಯೇಕೇ ॥೨೮॥** ಆ (ಭಕ್ತಿಗೆ) ಜ್ಞಾನವೇ ಸಾಧನವೆಂದು ಕೆಲವರು (ಹೇಳುತ್ತಾರೆ). ನಾವು ಒಬ್ಬ ವ್ಯಕ್ತಿಯ ವಿಷಯವನ್ನು ಕೇಳಿಯೋ ಓದಿಯೋ ಸ್ವಲ್ಪವಾದರೂ ಅರಿತಿದ್ದರೆ ಮಾತ್ರ ಆತನನ್ನು ಪ್ರೀತಿಸಲು ಸಾಧ್ಯ. ನಾವು ಎಲ್ಲೂ ಕಂಡಿಲ್ಲದ ಕೇಳಿಲ್ಲದ ವ್ಯಕ್ತಿಯನ್ನು ಪ್ರೀತಿಸಲು ಹೇಗೆ ತಾನೇ ಸಾಧ್ಯ? ಭಗವದ್ಗೀತೆಯೂ (೧೦.೮) ಇದನ್ನೇ ಸಮರ್ಥಿಸುತ್ತದೆ:

**ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ ।**

**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥**

"'ನಾನು ಸಮಸ್ತ ಜಗತ್ತಿನ ಉತ್ಪತ್ತಿಸ್ಥಾನ, ನನ್ನಿಂದಲೇ ಎಲ್ಲವೂ ಕಾರ್ಯದಲ್ಲಿ ತೊಡಗಿರುವುದು" ಎಂದು ಅರಿತುಕೊಂಡು ಜ್ಞಾನಿಗಳು ಭಾವಪರವಶರಾಗಿ ನನ್ನನ್ನು ಭಜಿಸುತ್ತಾರೆ.'

ಮುಂದೆ ಹೇಳುತ್ತಾರೆ : **'ಅನ್ಯೋನ್ಯಾಶ್ರಯತ್ವ ಮಿತ್ಯನ್ಯೇ ॥೨೯॥**

(ಜ್ಞಾನ ಭಕ್ತಿಗಳು) ಒಂದನ್ನೊಂದು ಅವಲಂಬಿಸಿಕೊಂಡಿವೆ ಎಂದು (ಇತರರ ಮತ). ಭಕ್ತಿಯಿಂದ ಜ್ಞಾನವುಂಟಾಗಬಹುದೆಂಬ ಮತಕ್ಕೂ ಭಗವದ್ಗೀತೆಯೇ (೧೦.೧೦, ೧೧) ಆಧಾರ :

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿ ಪೂರ್ವಕಮ್ ।**

**ದಿದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ**

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**

**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥**

'ನಿತ್ಯಯುಕ್ತರೂ ಪ್ರೀತಿಪೂರ್ವಕವಾಗಿ ಭಜಿಸುತ್ತಿರುವವರೂ ಆದ ಅವರಿಗೆ ಆ ಬುದ್ಧಿಯೋಗವನ್ನು ಕರುಣಿಸುತ್ತೇನೆ ; ಅದರಿಂದ ಅವರು ನನ್ನನ್ನು ಹೊಂದುವರು. ಅವರಿಗೆ ಅನುಕಂಪವನ್ನು ತೋರಿಸಬೇಕೆಂದು ನಾನು ಅವರ ಬುದ್ಧಿಯಲ್ಲಿ ನೆಲೆಸಿ, ಪ್ರಕಾಶಿಸುತ್ತಿರುವ ಜ್ಞಾನದೀಪದಿಂದ (ಅವರ) ಅಜ್ಞಾನಜನ್ಯ ಕತ್ತಲೆಯನ್ನು ಹೋಗಲಾಡಿಸುತ್ತೇನೆ.'

ಬೇರೆ ಬೇರೆ ಆಚಾರ್ಯರ ವಿಭಿನ್ನವಾದ ಮತವನ್ನು ವ್ಯಕ್ತಪಡಿಸಿದ ಬಳಿಕ ನಾರದರು ತಮ್ಮ ಮತವನ್ನು ಪ್ರಕಟಪಡಿಸುತ್ತಾರೆ. **ಸ್ವಯಂ ಫಲರೂಪತೇತಿ ಬ್ರಹ್ಮಕುಮಾರಃ ॥೩೦॥**
(ಆ ಭಕ್ತಿಗೆ) ಸ್ವಯಂ ಫಲರೂಪತ್ವವಿರುತ್ತದೆ ಎಂದು ಬ್ರಹ್ಮಕುಮಾರನಾದ (ನಾರದನ) (ಅಭಿಪ್ರಾಯ). (ಪುಟ ೪೯)

ದೇವರ್ಷಿ ನಾರದರು ಬ್ರಹ್ಮನ ಮಾನಸಪುತ್ರರು. ಆದುದರಿಂದ 'ಬ್ರಹ್ಮ ಕುಮಾರಃ' ಎಂದು ಹೇಳಿದೆ. 'ಬ್ರಹ್ಮಕುಮಾರಾಃ' (ಬ್ರಹ್ಮಕುಮಾರರು) ಎಂಬ ಪಾಠಾಂತರವೂ ಉಂಟು. ಆಗ ಬ್ರಹ್ಮಕುಮಾರರಾದ ಸನಕ, ಸನಂದನ, ಸನತ್ಕುಮಾರ ಮತ್ತು ಸನತ್ಸುಜಾತ ಎಂಬ ನಾಲ್ಕೂ ಕುಮಾರ–ಋಷಿಗಳನ್ನು ಹೇಳಿದೆ ಎಂದು ತಿಳಿಯಬೇಕು. ನಾರದರು ಸನತ್ಕುಮಾರರ ಶಿಷ್ಯರು, ಅವರ ಸಂಪ್ರದಾಯಕ್ಕೆ ಸೇರಿದವರು. ಆದುದರಿಂದ ಗುರುಗಳನ್ನೂಅವರ ಸಹೋದರರನ್ನೂ ಹೆಸರಿಸಿದ್ದಾರೆ. ಅವರ ಮತವೇ ನಾರದರ ಮತ.

ಪ್ರಾಪಂಚಿಕ ವಿಷಯವಾಸನೆಗಳೆಂಬ ರೋಗದಿಂದ ನರಳುತ್ತಿರುವವರಿಗೆ ನಾಮಜಪದಿರೂಪದ ಭಕ್ತಿಯೇ ಪರಮೌಷಧ. ಮೊದಮೊದಲು ಅದು ರುಚಿಸದು. ಆದರೆ ಕರ್ತವ್ಯವೆಂದೋ ಗುರುವಾಜ್ಞೆಯೆಂದೋ ಅದನ್ನು ಬಲವಂತದಿಂದ ಮಾಡುತ್ತಾ ಹೋದಂತೆ ವಿಷಯವಾಸನೆಯ ಮಾಲಿನ್ಯವು ಕಡಿಮೆಯಾಗುತ್ತಾ ಭಕ್ತಿಯ ರುಚಿಯು ಹೆಚ್ಚುತ್ತಾ ಹೋಗುತ್ತದೆ. ಹೀಗೆ ಭಕ್ತಿಯೇ ಸಾಧನ, ಭಕ್ತಿಯೇ ಫಲ; ಕೊನೆಗೆ ಅದೇ ಪರಾಭಕ್ತಿಯಾಗಿ ಪರಿಣಮಿಸುತ್ತದೆ. ಅದಕ್ಕೆ ಜ್ಞಾನಾದಿ ಇತರ ಸಾಧನೆಗಳ ಅವಶ್ಯಕತೆಯಿಲ್ಲ. ಇದು ನಾರದರ ಸಿದ್ಧಾಂತ.

**'ರಾಜಗೃಹ ಭೋಜನಾದಿಷು ತಥೈವ ದೃಷ್ಟತ್ವಾತ್ ॥೩೧॥**

ಏಕೆಂದರೆ ಅರಮನೆ, ಭೋಜನ ಮೊದಲಾದುವುಗಳಲ್ಲಿ ಹಾಗೆಯೇ ಕಂಡು ಬಂದಿರುತ್ತದೆ.

**ನ ತೇನ ರಾಜಪರಿತೋಷಃ ಕ್ಷುಧಾಶಾಂತಿರ್ವಾ ॥೩೨॥** ಅದರಿಂದ ರಾಜನಿಗೆ ಸಂತೋಷವಾಗಲಿ ಹಸಿವು ಅಡಗುವುದಾಗಲೀ ಇಲ್ಲ.' (ಪುಟ ೫೦)

ಗೌಣಜ್ಞಾನ, ಗೌಣ ಭಕ್ತಿ ಇವುಗಳಲ್ಲಿ ಪರಾಭಕ್ತಿಯ ಅನುಭವಕ್ಕೆ ಕೊಂಡೊಯ್ಯುವುದು ಭಕ್ತಿಯೇ ಹೊರತು ಜ್ಞಾನವಲ್ಲ ಎಂಬುದನ್ನು ಈ ಎರಡು ಸೂತ್ರಗಳಲ್ಲಿ ಲೌಕಿಕ ದೃಷ್ಟಾಂತಗಳಿಂದ ಸಮರ್ಥಿಸುತ್ತಿದ್ದಾರೆ.

ಒಬ್ಬ ಮನುಷ್ಯನಿಗೆ ರಾಜನ ಅರಮನೆಯ ವೈಭವ, ಆ ಅರಮನೆಯಲ್ಲಿರುವ ಅಸಂಖ್ಯ ಅಮೂಲ್ಯ ವಸ್ತುಗಳ ಮಾಹಿತಿ ಮೊದಲಾದ ಅನೇಕ ವಿಷಯಗಳು ತಿಳಿದಿರಬಹುದು. ಈ ಜ್ಞಾನದಿಂದ ಅವನಿಗೇನೂ ಪ್ರಯೋಜನವಾಗದು. ಆದರೆ ಅವನು ರಾಜನ ಬಳಿಸಾರಿ, ಅವನ ಸೇವೆಯ ಮೂಲಕ ಅವನನ್ನು ಮೆಚ್ಚಿಸಿದರೆ, ಆಗ ರಾಜನು ಅವನಿಗೆ ಬೇಕಾದ ವಸ್ತುಗಳನ್ನು ಅವನು ಬೇಡುವುದಕ್ಕಿಂತ ಹೆಚ್ಚಾಗಿಯೇ ಕೊಡಬಹುದು ಅಥವಾ ಬೇಡದೆಯೂ ನೀಡಬಹುದು. ಹೀಗೆ ನಿಜವಾದ ಪ್ರಯೋಜನವು ಜ್ಞಾನದಲ್ಲಿಲ್ಲ. ಪ್ರೀತಿಯ ಸೇವೆಯಲ್ಲಿದೆ.

ಹಾಗೆಯೇ ಭೋಜ್ಯ ವಸ್ತುಗಳ ಬಗೆಗೆ, ಅವನ್ನು ತಯಾರಿಸುವ ಬಗೆಗೆ, ಅವುಗಳ ರುಚಿ, ಮೌಲ್ಯಗಳ ಬಗೆಗೆ ಎಷ್ಟು ಜ್ಞಾನವಿದ್ದರೂ ಅದರಿಂದ ಹಸಿವು ಅಡಗದು, ತೃಪ್ತಿಯುಂಟಾಗದು. ತೃಪ್ತಿಯು ಭೋಜನ ಮಾಡಿದರೆ ಮಾತ್ರ ದೊರಕುವಂಥಾದ್ದು. ಅದೇ ರೀತಿ ಶಾಸ್ತ್ರಜ್ಞಾನದಿಂದ ಬ್ರಹ್ಮದ ಮಹಾತ್ಮ್ಯಜ್ಞಾನದಿಂದ ಏನೂ ಪ್ರಯೋಜನವಾಗದು. ಭಕ್ತಿ ಸಾಧನೆಯಿಂದ ಭಗವಂತನನ್ನೊಲಿಸಿಕೊಂಡಾಗ ಅವನೇ ನಮಗೆ ಎಲ್ಲವನ್ನೂ ಕೊಟ್ಟು, ತೃಪ್ತಿ ಆನಂದಗಳನ್ನು ಕರುಣಿಸುತ್ತಾನೆ.

**ಹೀಗೆಂದು ತಮ್ಮ ಸಿದ್ಧಾಂತವನ್ನು ಮಂಡಿಸಿ ನಾರದರು 'ತಸ್ಮಾತ್ಸೈವ ಗ್ರಾಹ್ಯಾ ಮುಮುಕ್ಷುಭಿಃ ॥೩೩॥** ಆದುದರಿಂದ ಮುಮುಕ್ಷುಗಳು ಅದನ್ನೇ ಸ್ವೀಕರಿಸಬೇಕು' ಎಂದು ಆದೇಶಿಸುತ್ತಾರೆ (ಪುಟ ೫೨). ಇದನ್ನು

ಕನ್ನಡದಲ್ಲಿ ಚಿದಾನಂದ ಅವಧೂತರು ಈ ಎರಡು ಕೀರ್ತನೆಗಳಲ್ಲಿ ವಿಶದೀಕರಿಸುತ್ತಾರೆ:

**ಬೇಗ ಮಾಡೋ ಭಕುತಿ ಆಗುವುದು ಮುಕುತಿ**

**ಆಗ ಈಗ ಎನ್ನದಿರು ಇದೆ ನಿನಗೆ ಮುಕುತಿ ॥ಪ॥**

..................................

**ಬೋಧವನ್ನೇ ಹಿಡಿಯೋ ಬೋಧ ತುರೀಯ ಪಡೆಯೋ**

**ಬೋಧವೆನಿಪ ಚಿದಾನಂದ ಬೋಧ ಗುರಿವಿಡಿಯೋ ॥**

(ಸ.ದಾ.ಸಾ. ಸಂಪುಟ ೨೫, ಚಿದಾನಂದ ಅವಧೂತರು ಮತ್ತು ಕೆಳದಿವೆಂಕಣ್ಣ ಕವಿ

ಕೀರ್ತನೆಗಳು, ಪುಟ ೨೪೫, ಕೀ.ಸಂ ೨೯೦)

ಮತ್ತೊಂದು ಕೀರ್ತನೆಯಲ್ಲಿ ಹೇಳುತ್ತಾರೆ:

ಭಕ್ತಿಯು ಸುಲಭ ತಾನಲ್ಲ ನಿಜ ಭಕ್ತಿ ದೊರಕಲವಗಾಗುವುದು ಎಲ್ಲ ॥ಪ॥

ಎಲ್ಲ ಸಂಗವ ಬಿಡಬೇಕು ತಾನು ಬಲ್ಲ ಗುರುವ ಸೇವೆ ಮಾಡಬೇಕು ।

ಎಲ್ಲಕೆ ತಾಸಿರಬೇಕು ಭಕ್ತಿ ಬಲ್ಲವನಿಂದ ನಿತ್ಯದಿ ಹೆಚ್ಚಬೇಕು ॥

ಹೇಳಿದಲ್ಲಿಗೆ ಹೋಗಬೇಕು ಮನ ಕೇಳದಿರಲು ಬುದ್ಧಿಯ ಹೇಳಬೇಕು

ಕಾಳರಾತ್ರೆಯೆನ್ನದಿರಬೇಕು ನಿತ್ಯ ಬಾಲಕನಂತೆ ತೋರುತಲಿರಬೇಕು ॥

ಹಸಿವು ತೃಷೆಯ ಬಿಡಬೇಕು ತಾನು ಎಸಗಿ ಗುರುಸೇವೆ ಮಾಡಬೇಕು ।

ಬಿಸಿಲು ಮಳೆ ಎನ್ನದಿರಬೇಕು ಧೈರ್ಯವೆಸಗಿ ಭಯಕೆ ಬೆಚ್ಚದಲಿರಬೇಕು ॥

ಗುರುವಿನ ನಡೆ ನೋಡಬೇಕು ಆ ಗುರುವಿನ ನಡೆಯ ಕಂಡಂತಿರಬೇಕು ।

ಕರಣ ವಿಷಯ ಹೋಗಬೇಕು ನಿತ್ಯ ಭರಿತವಾನಂದವಾಗಿರಬೆಕು ॥

ಇಂತು ಎಲ್ಲ ಕಾಂಬವನು ಗುರುಚಿಂತಾಯಕನು ಚಿದಾನಂದನು ತಾನು ಸಂತೈಸಿ ಕರವ ನೀಡುವನು

ಏನೆಂತು ಪೇಳಲಿ ತನ್ನೊಳೆರಕ ಮಾಡುವನು ॥

(ಅದೇ, ಪುಟ ೨೪೯, ಕೀ.ಸಂ ೨೯೫)

ಭಕ್ತಿ ಸಾಧನೆಯ ಸಾರವನ್ನು ಮೇಲಿನ ಕೀರ್ತನೆಯಲ್ಲಿ ನಿರೂಪಿಸಿದ್ದಾರೆ ಚಿದಾನಂದ ಅವಧೂತರು.

ಜ್ಞಾನಿಗಳಾದ ನಿಜಗುಣ ಶಿವ ಯೋಗಿಗಳು 'ಜ್ಞಾನವೇ ಮುಕ್ತಿಗೆ ಮಾರ್ಗ' ಎಂದು ಕೆಳಗಿನ ಕೀರ್ತನೆಯಲ್ಲಿ ಹೇಳುತ್ತಾರೆ:

ನಂಬು ಜ್ಞಾನವನೆ ಕರ್ಮವೆಂಬ ಜಾಲದೊಳು ಸಿಲ್ಕಿ ಹಂಬಲಿಸದಿರು ಮುಕ್ತಿಯಂ ಬಯಸಿ ಮನುಜ ನೀ ॥ಪ॥

ಇಲ್ಲಿ ಕರ್ಮಜಾಲದಲ್ಲಿ ಸಿಲುಕಿ ಮೈಮರೆಯಬೇಡ ಎಂದು ಎಚ್ಚರಿಸುತ್ತಾನೆ ನಿಜಗುಣರು. ಜ್ಞಾನ ಹಾಗೂ ಫಲರೂಪಿಯಾದ ಪರಾಭಕ್ತಿಯು ಒಂದೇ ಸ್ಥಿತಿ ಎಂದು ಹಿಂದಿನ ಸೂತ್ರಗಳಲ್ಲಿ ನಾವು ಮನಗಂಡಿದ್ದೇವೆ. ಆ ನೆಲೆಯಲ್ಲಿ ವಿಚಾರ ಮಾಡಿದರೆ ನಿಜಗುಣರು ಹೇಳುತ್ತಿರುವಂತಹ ಉಪದೇಶವನ್ನು ನಾವು ಭಕ್ತಿ ಸಾಧನೆಗೂ ಅನ್ವಯಿಸಿಕೊಳ್ಳಬಹುದು. ಎರಡನೇ ಚರಣದಲ್ಲಿರುವ ಮಾತುಗಳನ್ನು ಭಕ್ತಿಸಾಧನೆಗೂ ಅನ್ವಯಿಸಿಕೊಳ್ಳಬಹುದು:

ತನುವ ದಂಡಿಸಬೇಡ ಮನವ ನಿಲ್ಲಿಸಬೇಡ ಧನವ ನೀಗಿರಬೇಡ ಮನೆ ಮಾರದೊರೆದು

ವನವಾಸಬೇಡ ನಿನಗಿನಿತು ತತ್ತ್ವಜ್ಞಾನ ಸಂಜನಿಸಲಾದಫವೆಲ್ಲವನ್ನ ಕಡಿಪುದರಿಂದೆ ॥

ಜ್ಞಾನವೆ ಮುಕ್ತಿಗೆ ಮಾರ್ಗವೇನು ಬೇರೊಂದಿಲ್ಲವೆಂದು

ಮಾನವನಿಧಿಯಾದ ಶ್ರುತಿ ನಾನ್ಯಃ ಪಂಥಾಯೆನಲು

ನೀನಿದನು ಬಿಡದಿರನೂನ ಶಂಭುಲಿಂಗದ ಸುಜ್ಞಾನ ದೃಢಮಾಗೆ ಪರಮಾನಂದ ವಹುದದರಿಂದೆ ॥

ಇನ್ನು ಸಂತ ಶಿಶುನಾಳ ಶರೀಫರು ಭಕ್ತಿಸಾಧನೆಯನ್ನು ಗುಡುಗುಡಿಯನ್ನು ಸೇದುವುದಕ್ಕೆ ಹೋಲಿಸುತ್ತಾರೆ. ಮನಸ್ಸೆಂಬ ಚಂಚಿಯನ್ನು ಬಿಚ್ಚಿ (ಚಂಚಿ=ವೀಳ್ಯದೆಲೆ, ಅಡಿಕೆ, ತಂಬಾಕು, ಸುಣ್ಣದ ಡಬ್ಬಿ ಸಂಗ್ರಹಿಸಿಡುವ ಬಟ್ಟೆಯ ಚಿಕ್ಕ ಚೀಲ) ಪಾತಕವೆಂಬ ಬಂಗಿಯನ್ನು ಕೊಚ್ಚಿ ಸ್ಮರಣೆ (ನಾಮಸ್ಮರಣೆ) ಯೆಂಬ ಚಿಲುಮೆಗೆ ಹಚ್ಚಿ ಬುದ್ಧಿಯೆನ್ನುವ ಬೆಂಕಿಯ ಮೇಲೆ ಮುಚ್ಚಿ ಗುಡುಗುಡಿಯನ್ನು ಸೇದಿ ನೋಡು ಎಂದು ಹೇಳುತ್ತಾರೆ. ಈ ರೀತಿ ಗುಡುಗುಡಿಯನ್ನು ಸೇದಿದರೆ ಶುದ್ಧಜ್ಞಾನದ ಅಮಲು ಏರುವುದು ಎಂದು ಹೇಳುತ್ತಾರೆ:

ಗುಡುಗುಡಿಯ ಸೇದಿನೋಡು ನಿನ್ನ ಒಡಲೊಳಗಿನ ರೋಗ ತೆಗೆದು ಈಡ್ಯಾಡು ॥ಪ॥

ಮನಸೆಂಬ ಚಂಚಿಯ ಬಿಚ್ಚಿ ದಿನ ದಿನಸುಪಾತಕಬೆಂಬ ಬಂಗಿಯ ಕೊಚ್ಚಿ

ನೆನವೆಂಬ ಚಿಲುಮೆಗೆ ಹಚ್ಚಿ ಬುದ್ಧಿಯೆನುವಂಥ ಬೆಂಕಿಯ ಮೇಲೆ ನೀ ಮುಚ್ಚಿ ॥೧॥

ಬುರುಡೆಯೆಂಬುವದು ಶರೀರ ಇದು ಮರೆತು ಸುಕೃತ ಬಿಟ್ಟು ಕೊಳವೆಯಾಕಾರ

ವರನಾರಾಯಣನೆಂಬುವ ನೀರು ತುಂಬಿ ಅರಿವೆಂಬ ಹೊಚ್ಚು ಮೋಜುಗಾರ ॥೨॥

ಶುದ್ಧ ಜ್ಞಾನದ ಮೆಲೇರುವುದು ದಾರಿದ್ರ್ಯ ದೇಹವು ಸುಟ್ಟು ಹೊಗೆಯು ಹಾರುವದು

ಬುದ್ಧಿವಂತರಿಗೆ ತಿಳಿಯುವದು ನಮ್ಮ ಮುದ್ದು ಶಿಶುನಾಳಧೀಶನ ಪಾದಕ್ಹೊಂದುವದು ॥೩॥ [1]

ವಿಜಯದಾಸರು ತಮ್ಮ ಒಂದು ಕೀರ್ತನೆಯಲ್ಲಿ ಹೇಳುತ್ತಾರೆ:

ಏನಾದರೇನು ಜ್ಞಾನವಿಲ್ಲದೆ ಮೋಕ್ಷವಿಲ್ಲ ॥ಪ॥

ಏನೇ ಮಾಡಿದರೂ ಜ್ಞಾನವಿಲ್ಲದೆ ಮೋಕ್ಷವಿಲ್ಲ ಎಂದು ಘಂಟಾಘೋಷವಾಗಿ ಹೇಳುತ್ತಾರೆ ವಿಜಯದಾಸರು.2

ಜಗನ್ನಾಥದಾಸರು ಶ್ರೀನಿಕೇತನ ಪಾಲಯಮಾಂ ಎನ್ನುವ ಸುಪ್ರಸಿದ್ಧ ಕೀರ್ತನೆಯಲ್ಲಿ 'ಜ್ಞಾನಗಮ್ಯ ಕರುಣಾನಿಧೆ ನಿನ್ನಡಿ ಗಾನಮಿಸುವೆ ಪೊರೆ ದೀನ ದಯಾಳೂ' ಅಂದಿದ್ದಾರೆ. ಜ್ಞಾನದಿಂದ ಹೊಂದಲು ನಾದ್ಯನಾದವನ್ನು ಎಂಬ ಅಭಿಪ್ರಾಯ ಇಲ್ಲಿ ಅಡಕವಾಗಿದೆ[3]. ವಿಜಯದಾಸರು 'ಸದಾ ಎನ್ನ ಹೃದಯದಲ್ಲಿ ವಾಸಮಾಡೋ ಶ್ರೀಹರಿ' ಎನ್ನುವ

ಸುಪ್ರಸಿದ್ಧ ಕೀರ್ತನೆಯಲ್ಲಿ ಉಪಾಸನೆಯಲ್ಲಿ ಭಕ್ತಿ ಹಾಗೂ ಜ್ಞಾನ ಇವೆರಡರ ಸ್ಥಾನವೇನು ಎನ್ನುವುದನ್ನು ನಿರೂಪಿಸುತ್ತಾರೆ. ಮೊದಲನೆಯ ಚರಣದಲ್ಲಿ ಹೇಳುತ್ತಾರೆ:

**ಜ್ಞಾನವೆಂಬೊ ನವರತ್ನದ ಮಂಟಪದ ಮಧ್ಯದಲ್ಲಿ**

**ಗಾನಲೋಲನ ಕುಳ್ಳಿರಿಸಿ ಧ್ಯಾನದಿಂದ ಭಜಿಸುವೆನು ॥೧॥**

ಪ್ರೊ.ಸಾ.ಕೃ.ರಾಮಚಂದ್ರರಾಯರು 'ದಾಸಸಾಹಿತ್ಯ ಮತ್ತು ಸಂಸ್ಕೃತಿ' ಈ ಗ್ರಂಥದಲ್ಲಿ (ಪುಟ ೩೨೫) 'ಬಿಂಬೋಪಾಸನೆ' ಎನ್ನುವ ಹನ್ನೆರಡನೆಯ ಅಧ್ಯಾಯದಲ್ಲಿ ಮಧ್ವಾಚಾರ್ಯರು ಹೇಳಿರುವ ಉಪಾಸನೆಯ ಎರಡು ಬಗೆಗಳನ್ನು ತಿಳಿಯಹೇಳಿದ್ದಾರೆ.

**'ಸೋಪಾಸಾ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಣೀ ।**

**ಧ್ಯಾನರೂಪಾ ಪರಾ ಚೈವ ತದಂಗಂ ಧಾರಣಾದಿಕಂ ॥**

ಮೊದಲನೆಯದು ಶ್ರವಣ ಮನನರೂಪವಾದುದು, ಶಾಸ್ತ್ರಾವಮರ್ಶನ, ಶಾಸ್ತ್ರಾಭ್ಯಾಸ, ಸಾಮಾನ್ಯ ಪಂಡಿತರು ಹಿಡಿಯುವ ದಾರಿ. ಎರಡನೆಯದು ಧ್ಯಾನ ('ಧ್ಯಾನಂ ಹರೇಃ') ಇದಕ್ಕೆ ಯಮ, ನಿಯಮ, ಆಸನ, ಪ್ರಾಣಾಯಾಮ ಇವು ನಾಲ್ಕು ಅಂಗಗಳು.'

ಇಲ್ಲಿ ವಿಜಯದಾಸರು ಉಪಾಸನೆಯ ಮೊದಲನೆಯ ಅಂಗವಾದ ಶ್ರವಣ ಮನನಾದಿಗಳನ್ನು ಮೊದಲ ಚರಣದ ಮೊದಲನೆಯ ಸಾಲಿನಲ್ಲಿ 'ಜ್ಞಾನವೆಂಬೊ ನವರತ್ನದ ಮಂಟಪ' ಎಂದು ಹೋಲಿಸಿದ್ದಾರೆ. ಎರಡನೇಯ ಅಂಗವಾದ ಧ್ಯಾನವನ್ನು ಎರಡನೇಯ ಸಾಲಿನಲ್ಲಿ 'ಧ್ಯಾನದಿಂದ ಭಜಿಸುವೆ' ಎಂದು ನಿರೂಪಿಸಿದ್ದಾರೆ. ಎರಡನೇಯ ಚರಣದಲ್ಲಿ ಹೇಳುತ್ತಾರೆ:

**ಭಕ್ತಿರಸವೆಂಬ ಮುತ್ತು ಮಾಣಿಕ್ಯದ ಹರಿವಾಣದಿ ಮುಕ್ತನಾಗಬೇಕುಯೆಂದು ಮುತ್ತಿನಾರತಿ ಎತ್ತುವೆನು ॥೨॥**

'ದಾಸ ಸಾಹಿತ್ಯ ಮತ್ತು ಸಂಸ್ಕೃತಿ' ಈ ಗ್ರಂಥದಲ್ಲಿ ಪ್ರೊ.ಸಾ.ಕೃ.ರಾಮಚಂದ್ರರಾಯರು ಬಿಂಬೋಪಾಸನೆ ಅಧ್ಯಾಯದಲ್ಲಿ (ಪುಟ ೩೨೬) ಹೇಳುತ್ತಾರೆ "ಸೂಕ್ಷ್ಮಪೂಜೆಯಾದರೋ ಮಾನಸವಾದುದು. ಎಲ್ಲ ಪ್ರಾಣಿಗಳಲ್ಲೂ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಸಾಧಕನು ತನ್ನ ಹೃದಯದಲ್ಲೇ ಬಿಂಬರೂಪಿಯಾಗಿ ಭಾವಿಸಿಕೊಂಡು, ಮನಸ್ಸಿನಲ್ಲೇ ಎಲ್ಲ ಉಪಚಾರಗಳನ್ನೂ ಸಮರ್ಪಿಸುವುದು. ಎಂದರೆ ಯಾವುದೇ ಬಗೆಯ ಪೂಜೆಯಾಗಲೀ, ಧ್ಯಾನದಲ್ಲಿ ಪರ್ಯವಸಾನ ಹೊಂದಬೇಕು.'

ವಿಜಯದಾಸರ ಈ ಕೀರ್ತನೆಯಲ್ಲಿ ಮಾನಸಪೂಜೆಯ ಹಂತಗಳ ಚಿತ್ರಣವನ್ನು ಕಾಣುತ್ತೇವೆ. ಎರಡನೆಯ ಚರಣದಲ್ಲಿ ಆರತಿ ಎತ್ತುವ ಪ್ರಕ್ರಿಯೆಯನ್ನು 'ಭಕ್ತಿರಸವೆಂಬ ಮುತ್ತು ಮಾಣಿಕ್ಯದ ಹರಿವಾಣವಾದ ಮಾಡುತ್ತೇನೆ.' ಎನ್ನುತ್ತಾರೆ ವಿಜಯದಾಸರು. ಬಾಹ್ಯ ಪರಿಕರಗಳಿಂದ ಮಾಡುವ ಪೂಜೆಗಿಂತಲೂ ಆಂತರಿಕವಾಗಿ ಈ ಭಾವನೆಯಿಂದ ಅರ್ಪಿಸಿದ ಪೂಜೆಯು ಧ್ಯಾನಕ್ಕೆ ಬಹಳಷ್ಟು ಸಹಕಾರಿಯಾಗಿದೆ. ಮಧ್ವಾಚಾರ್ಯರು ಶಾಸ್ತ್ರಾವಮರ್ಶನವನ್ನು ಎಡೆಬಿಡದೆ ಮಾಡುತ್ತಿದ್ದರೆ 'ಪರಮ ಸ್ನೇಹ ಸಂಯುಕ್ತವಾದ ಯಥಾರ್ಥಜ್ಞಾನ' ಪೂರ್ವಕವಾದ ಸ್ನೇಹರೂಪ ಭಕ್ತಿಯು ಒದಗಿ ಬರುವುದೆಂದು ಹೇಳಿದರು. (ಅದೇ) ಈ ಚಿಂತನೆಯನ್ನು ಕೀರ್ತನಾರೂಪದಲ್ಲಿ ಸುಂದರವಾಗಿ ಮೇಲಿನ ಕೃತಿಯಲ್ಲಿ ಪೋಣಿಸಿದ್ದಾರೆ ವಿಜಯದಾಸರು.

ಮಾನಸ ಪೂಜೆಯ ಮಹತ್ವವನ್ನು ನಾವು ವಚನಕಾರರಲ್ಲೂ ಗಮನಿಸಬಹುದು. ಅಖಂಡೇಶ್ವರರು (ಷಣ್ಮುಖ ಸ್ವಾಮಿ) ತಮ್ಮ ವಚನದಲ್ಲಿ ಹೇಳುತ್ತಾರೆ.

**ಘನ ಮಹಾಲಿಂಗಕ್ಕೆ ಮನವೆ ಪೀಠವಾಗಿ, ತನುವೆ ಶಿವಾಲಯವಾಗಿ, ನೆನಹೆ ಪೂಜೆಯಾಗಿ, ಧ್ಯಾನವೆ ತೃಪ್ತಿಯಾಗಿ, ಅಂಬುಧಿಯೊಳಗೆ ಮುಳುಗಿದ ಪೂರ್ಣ ಕುಂಭದಂತೆ, ನಿಮ್ಮ ಅವಿರಳ ದಿವ್ಯ ಮಹಾ ಬೆಳಗಿನೊಳಗೆ ಮುಳುಗಿ, ನಾನು ನೀನೆಂಬುಭಯದ ಕುರುಹ ಮರೆದು, ಏನೇನೋ ಅರಿಯದಿರ್ದೆನಯ್ಯಾ ಅಖಂಡೇಶ್ವರಾ.**[4]

ಮಾನಸ ಪೂಜೆಯು ಧ್ಯಾನದಲ್ಲಿ ಪರ್ಯವಸಾನಗೊಳ್ಳುವ ಪರಿಯನ್ನು ಮೇಲಿನ ವಚನದಲ್ಲಿಯೂ ಗಮನಿಸಬಹುದು.

**ಅಲ್ಲಮ ಪ್ರಭುಗಳು ಇನ್ನೂ ನೇರವಾಗಿ ಹೇಳಿದರು: 'ತಾನು ಲಿಂಗ, ತನ್ನ ಮನವೆ ಪುಷ್ಪ, ಪೂಜೆಯ ಪೂಜಿಸುವಾತನೆ ಸದ್ಭಕ್ತನು ಗೋಹೇಶ್ವರ.'**[5]

ಇನ್ನು ಜ್ಞಾನದ ಕುರಿತು ಬಸವೇಶ್ವರರ ನಿಲುವು ಹೀಗಿದೆ:

**ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ,**
**ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ.**[6]

ಜ್ಞಾನಾಮೃತವೆಂಬುದು ಮಾನವನಲ್ಲಿ ಸಹಜವಾಗಿಯೇ ಇದೆ. ಆದರೆ ಅದರ ಮೇಲೆ ಸಂಸಾರವೆಂಬ ಹಾವಸೆ ಹಿಡಿದಿದೆ. ಗುರುವು ಹೇಳಿದಂತೆ ಎಡೆಬಿಡದೆ ಲಿಂಗ ಪೂಜೆಯನ್ನು ಮಾಡಿ ತನ್ನನ್ನು ತಾನು ಅರಿಯುವ ಮೂಲಕ ಹಿಡಿದಿರುವ ಹಾವಸೆಯನ್ನು ಹೊರನೂಕಬೇಕು ಎನ್ನುತ್ತಾರೆ ಬಸವಣ್ಣನವರು.

**ಜ್ಞಾನಾಮೃತವೆಂಬ ಜಲಧಿಯ ಮೇಲೆ ಸಂಸಾರವೆಂಬ ಹಾವಸೆ ಮುಸುಕಿಹುದು !**

**ನೀರ ಮೊಗೆವವರು ಬಂದು ನೂಕಿದಲ್ಲದೆ ತೆರಳದು !**

**ಮರಳಿ ಮರಳಿ ಮುಸುಕುವುದು ಮಾಣದಯ್ಯ !**

...........................................................................

**ದಿವಾರಾತ್ರಿ ಮಾಡ ಹೇಳಿದ ಲಿಂಗಪೂಜೆಯ, ತನ್ನ ನರಿಯಬೇಕೆಂದು.**[7]

ಸೂತ್ರ ಸಂಖ್ಯೆ ೩೪ ರಿಂದ ೪೫ ರವರೆಗೆ ನಾರದರು ಭಕ್ತಿಯ ಸಾಧನೆಗಳನ್ನು ವಿವರವಾಗಿ ತಿಳಿಸುತ್ತಾರೆ. ಈ ಭಾಗವು ಸಾಧಕ ಮುಮುಕ್ಷುಗಳ ದೃಷ್ಟಿಯಿಂದ ಅತೀ ಮುಖ್ಯ ಮತ್ತು ಉಪಯುಕ್ತ ಆ ಸೂತ್ರಗಳು ಇಂತಿವೆ:

**ತಸ್ಯಾಃ ಸಾಧನಾನಿ ಗಾಯಂತ್ಯಾಚಾರ್ಯಾಃ ॥೩೪॥** ಆ ಭಕ್ತಿಯ ಸಾಧನೆಗಳನ್ನು ಆಚಾರ್ಯರು (ಹೀಗೆ) ವಿವರಿಸುತ್ತಾರೆ. (ಪುಟ ೫೨)

**ತತ್ತು ವಿಷಯತ್ಯಾಗಾತ್ ಸಂಗತ್ಯಾಗಾಚ್ಚ ॥೩೫॥** ಅದಾದರೋ (ಭಕ್ತಿಯಾದರೋ) ವಿಷಯ ತ್ಯಾಗದಿಂದಲೂ ಸಂಗತ್ಯಾಗದಿಂದಲೂ (ದೊರಕುತ್ತದೆ). (ಪುಟ ೫೩)

**ಅವ್ಯಾವೃತ್ತ ಭಜನಾತ್ ॥೩೬॥** ಎಡೆಬಿಡದೆ ಮಾಡಿದ ಭಜನೆಯಿಂದ (ಭಕ್ತಿಯು ದೊರಕುತ್ತದೆ) (ಪುಟ ೫೫)

**ಲೋಕೇಽಪಿ ಭಗವದ್ಗುಣ ಶ್ರವಣಕೀರ್ತನಾತ್ ॥೩೭॥** ಲೌಕಿಕಕರ್ಮಗಳಲ್ಲಿ (ತೊಡಗಿರುವಾಗಲೂ) ಭಗವಂತನ ಗುಣಗಳನ್ನು ಕೇಳುವುದರ ಹಾಡುವುದರ ಮೂಲಕ (ಅವ್ಯಾವೃತ್ತ ಭಜನೆಯೂ ತನ್ಮೂಲಕ ಭಕ್ತಿ ಪ್ರಾಪ್ತಿಯೂ ಸಾಧ್ಯವಾಗುತ್ತದೆ). (ಪುಟ ೫೭)

**ಮುಖ್ಯತಸ್ತು ಮಹತ್ಕೃಪಯೈವ ಭಗವತ್ಕೃಪಾಲೇಶಾದ್ವಾ ॥೩೮॥**

ಆದರೆ ಮುಖ್ಯವಾಗಿ ಮಹಾಪುರುಷರ ಕೃಪೆಯಿಂದಲೇ ಅಥವಾ ಭಗವಂತನ ಕೃಪಾಲೇಶದಿಂದಲಾದರೂ (ಭಕ್ತಿಯು ದೊರಕುತ್ತದೆ). (ಪುಟ ೬೧)

**ಮಹತ್ಸಂಗಸ್ತು ದುರ್ಲಭೋಽಗಮ್ಯೋಽಮೋಘಶ್ಚ ॥೩೯॥**

ಮಹಾಪುರುಷರ ಸಂಗವಾದರೋ ದೊರಕುವುದು ಕಷ್ಟ. (ದೊರೆತರೂ ಅದನ್ನು) ಅರ್ಥಮಾಡಿಕೊಳ್ಳುವುದು ಕಷ್ಟ (ಆದರೆ, ಒಂದು ಸಲ ದೊರೆತರೆ, ಅದು) ವ್ಯರ್ಥವಾಗದು (ಪುಟ ೬೪)

**ಲಭ್ಯತೇಽಪಿ ತತ್ಕೃಪಯೈವ ॥೪೦॥** ಹೀಗಿದ್ದರೂ ಅವನ (ಭಗವಂತನ) ಕೃಪೆಯಿಂದಲೇ (ಅದು) ದೊರಕುತ್ತದೆ. (ಪುಟ ೬೬)

**ತಸ್ಮಿಂಸ್ತಜ್ಜನೇ ಭೇದಾಭಾವಾತ್ ॥೪೧॥** ಏಕೆಂದರೆ ಅವನ (ಮತ್ತು) ಅವನ ಭಕ್ತನ (ನಡುವೆ) ಭೇದವಿರುವುದಿಲ್ಲ (ಪುಟ ೬೭)

**ತದೇವ ಸಾಧ್ಯತಾಂ ತದೇವ ಸಾಧ್ಯತಾಮ್ ॥೪೨॥**

ಅದನ್ನೇ ಸಾಧಿಸಿಕೊಳ್ಳಬೇಕು ಅದನ್ನೇ (ಇದುವರೆಗೆ ಚರ್ಚಿಸಿದ ಮಹತ್ಸಂಗವನ್ನು ಅಥವಾ ಭಗವತ್ಪ್ರೇಮವನ್ನಾಗಲೀ ಸಾಧಿಸಿಕೊಳ್ಳಬೇಕು).

**ದುಸ್ಸಂಗಃ ಸರ್ವಥೈವ ತ್ಯಾಜ್ಯಃ ॥೪೩॥**

ದುಸ್ಸಂಗವನ್ನು ಎಲ್ಲ ರೀತಿಯಿಂದಲೂ ತ್ಯಜಿಸಬೇಕು (ಪುಟ ೬೯)

**ಕಾಮ–ಕ್ರೋಧ–ಮೋಹ–ಸ್ಮೃತಿಭ್ರಂಶ–ಬುದ್ಧಿನಾಶ–ಸರ್ವನಾಶ–ಕಾರಣತ್ವಾತ್ ॥೪೪॥** ಏಕೆಂದರೆ (ಅದು) ಕಾಮ–ಕ್ರೋಧ–ಮೋಹ–ಸ್ಮೃತಿಭ್ರಂಶ–ಬುದ್ಧಿನಾಶ–ಸರ್ವನಾಶಗಳಿಗೆ ಕಾರಣವಾಗಿರುತ್ತದೆ. (ಪುಟ ೭೦)

**ತರಂಗಾಯಿತಾ ಅಪೀಮೇ ಸಂಗಾತ್ ಸಮುದ್ರಾಯಂತೇ ॥೪೫॥**

ಇವು ಸಣ್ಣ ಅಲೆಗಳಂತಿದ್ದರೂ (ದುಷ್ಟರ) ಸಂಗದಿಂದ ಸಮುದ್ರದ ಅಲೆಗಳಂತೆಯೇ ಆಗಿಬಿಡುತ್ತವೆ.

ಭಕ್ತಿ ಸಾಧನೆಗಳ ಕುರಿತಾದ ಮೇಲಿನ ಸೂತ್ರಗಳಿಂದ ಈ ಕೆಲವು ಅಂಶಗಳನ್ನು ವಿಶ್ಲೇಷಿಸಬಹುದು:

ಅ. ಭಕ್ತಿಯು ವಿಷಯ ತ್ಯಾಗದಿಂದಲೂ, ಸಂಗತ್ಯಾಗದಿಂದಲೂ ಲಭಿಸುತ್ತದೆ.

ಆ. ನಿರಂತರ ಕೀರ್ತನೆಯಿಂದ, ಭಜನೆಯಿಂದ ಭಕ್ತಿಯು ಲಭಿಸುತ್ತದೆ.

ಇ. ಲೌಕಿಕ ಕರ್ತವ್ಯ ಕರ್ಮಗಳಲ್ಲಿ ತೊಡಗಿರುವಾಗಲೂ, ಭಗವಂತನ ಗುಣಮಹಿಮೆಗಳನ್ನು ಶ್ರವಣಮಾಡುವುದರಿಂದ, ಕೀರ್ತಿಸುವುದರಿಂದ ಅದು ಪ್ರಾಪ್ತವಾಗುತ್ತದೆ.

ಈ. ಇವೆಲ್ಲಕ್ಕಿಂತಲೂ ಮುಖ್ಯವಾಗಿ ಭಕ್ತಿ ಪ್ರಾಪ್ತಿಗೆ ಅವಶ್ಯವಾದುದು ಮಹಾಪುರುಷರ ಅಥವಾ ಭಗವಂತನ ಕೃಪೆ.

ಉ. ಮಹಾಪುರುಷರ ಸಂಗವು ದೊರಕುವುದು ದುರ್ಲಭ. ಅದು ಪ್ರಾಪ್ತವಾಗಬೇಕಾದರೆ ಭಗವತ್ಕೃಪೆ ಅಗತ್ಯ.

ಊ. ಭಗವಂತನಿಗೂ ಭಗವಂತನ ನಿಜಭಕ್ತರಿಗೂ ಯಾವುದೇ ಭೇದವಿಲ್ಲ. ಆದ್ದರಿಂದ ಹೇಗಾದರೂ ಮಾಡಿ ಸತ್ಸಂಗವನ್ನು ಸಾಧಿಸಿಕೊಳ್ಳಬೇಕು.

ದುಸ್ಸಂಗವನ್ನು ತ್ಯಜಿಸಬೇಕು. ದುಸ್ಸಂಗದಿಂದ ಕಾಮ-ಕ್ರೋಧಾದಿಗಳು ವರ್ಧಿಸಿ ವಿನಾಶಕ್ಕೆ ಕಾರಣವಾಗುತ್ತದೆ. ದುರ್ಗುಣಗಳು, ದುಷ್ಟ ಸಂಸ್ಕಾರಗಳು ದುಸ್ಸಂಗದಿಂದ ಮತ್ತಷ್ಟು ವರ್ಧಿಸುತ್ತವೆ. ಈ ಎಲ್ಲ ಅಂಶಗಳ ಸಾರವನ್ನು ಪುರಂದರದಾಸರ ಪ್ರಸಿದ್ಧವಾದ ಕೀರ್ತನೆ **'ಸುಮ್ಮನೆ ಬರುವುದೆ ಮುಕುತಿ'** ಇದರಲ್ಲಿ ಕಾಣಬಹುದು:

**ಸುಮ್ಮನೆ ಬರುವುದೆ ಮುಕುತಿ ॥ಪ॥ ನಮ್ಮ ಅಚ್ಯುತಾನಂತನ ನೆನೆಯದೆ ಭಕ್ತಿ ।**

**ಮನದಲ್ಲಿ ದೃಢವಿರಬೇಕು । ಪಾಪಿ । ಜನರ ಸಂಸರ್ಗವ ನೀಗಲುಬೇಕು ।**

**ಅನುಮಾನವನು ಬಿಡಬೇಕು । ತನ್ನ । ತನುಮನಧನವನೊಪ್ಪಿಸಿಕೊಡಬೇಕು ॥೧॥**

..............................

**ವ್ಯಾಪಾರವನು ಬಿಡಬೇಕು । ನಮ್ಮ ಶ್ರೀಪತಿ ಪುರಂದರ ವಿಠಲನ್ನೆಬೇಕು ॥**

**ಪಾಪರಹಿತನಾಗಬೇಕು । ಜ್ಞಾನ । ದೀಪದ ಬೆಳಕಲಿ ಓಡಾಡಬೇಕು ॥೫॥**[8]

(ಇದಕ್ಕೆ ಸಂವಾದಿಯಾದ ಒಂದು ಕೀರ್ತನೆ 'ಹರಿದಾಸರ ಜನಪ್ರಿಯ ಹಾಡುಗಳು' ಈ ಗ್ರಂಥದಲ್ಲಿ ನೀಡಲಾಗಿದೆ[9] – **ಸುಮ್ಮನೆ ಬರುವುದೆ ಮುಕುತಿ ॥ಪ॥ ಗುರು ಧರ್ಮ ಭಿಕ್ಷವ ಬೇಡಿದವಗೆ ಸುಕೀರ್ತಿ** )

ಮೇಲಿನ ಕೀರ್ತನೆಯಲ್ಲಿ ಸತ್ಸಂಗದ ಮೂಲಕ ನಿಸ್ಸಂಗತ್ವವನ್ನು ಸಾಧಿಸುವ ಉದ್ದೇಶದಿಂದ ಪಾಪಿ ಜನರ ಸಂಸರ್ಗವ ನೀಗಲುಬೇಕು, ಸಂದಣಿಗಳ ಬಿಡಬೇಕು, ದೇಹಬಾಂಧವರ ಸ್ನೇಹವ ಬಿಡಬೇಕು, ಎಂದೆಲ್ಲಾ ಹೇಳಿದ್ದಾರೆ ಪುರಂದರದಾಸರು. ಇದರರ್ಥ ಅವರನ್ನು ದ್ವೇಷಿಸಬೇಕು ನಿಂದಿಸಬೇಕು ಎಂದಲ್ಲ. ಅವರ ಕುರಿತಾಗಿ, ಅವರ ಒಡನಾಟದಲ್ಲಿರುವಾಗ ನಮ್ಮ ಮನಸ್ಸಿನ ಮೇಲೆ ಯಾವುದೇ ದುಷ್ಟ ಸಂಸ್ಕಾರವೂ ಆಗದೇ ಇರುವಂತೆ ಜಾಗರೂಕತೆ ವಹಿಸಬೇಕು ಎಂಬುವುದು ಪುಗಂದರ ದಾಸರ ಆಶಯವಾಗಿದೆ.

ಮೇಲಿನ ಸೂತ್ರಗಳಲ್ಲಿ ಅಡಕವಾಗಿರುವ ಭಕ್ತಿ ಸಾಧನೆಯಲ್ಲಿ 'ಸಂಗ'ದ ಪಾತ್ರವನ್ನು ಭಗವದ್ಗೀತೆಯ ಈ ಶ್ಲೋಕಗಳು (೨.೬೨, ೬೩) ಅದ್ಭುತವಾಗಿ ವ್ಯಾಖ್ಯಾನಿಸುತ್ತಿರುವಂತಿವೆ:

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**

**ಸಂಗಾತ್ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥**

**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।**

**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥**

ವಿಷಯ ವಸ್ತುಗಳನ್ನು ಕುರಿತು ಧ್ಯಾನಿಸುತ್ತಿರುವವನಿಗೆ ಅವುಗಳಲ್ಲಿ ಆಸಕ್ತಿಯು ಹುಟ್ಟುತ್ತದೆ. ಆಸಕ್ತಿಯಿಂದ ಕಾಮವುಂಟಾಗುತ್ತದೆ; ಕಾಮದಿಂದ ಕ್ರೋಧವು ಹುಟ್ಟುತ್ತದೆ; ಕ್ರೋಧದಿಂದ ಸಂಮೋಹವುಂಟಾಗುತ್ತದೆ;

ಸಂಮೋಹದಿಂದ ಸ್ಮೃತಿಯ ಭ್ರಮೆಯುಂಟಾಗುತ್ತದೆ; ಸ್ಮೃತಿಭ್ರಮೆಯಿಂದ ಬುದ್ಧಿನಾಶವಾಗುತ್ತದೆ; ಬುದ್ಧಿನಾಶದಿಂದ (ಪುರುಷನು) ನಾಶವಾಗುತ್ತಾನೆ.'

ಈ ಕಾರಣದಿಂದಾಗಿ ಪ್ರತಿಯೊಬ್ಬ ಸಂತರೂ ಸತ್ಸಂಗಕ್ಕೆ ವಿಶೇಷವಾದ ಮಹತ್ವವನ್ನು ಕೊಡುತ್ತಾರೆ. ಪುರಂದರದಾಸರು 'ಸಾಧು ಸಂಗವಾಗದ ಬಾಳು ಬಾಳು ಆಗದಯ್ಯಾ' ಎಂದು ಹೇಳಿದರು (ಪು.ದಾ.ಕೀ. ಶ್ರೀ.ಮ.ಗ್ರಂ. ಪುಟ ೫೫೭, ಕೀ.ಸಂ.೮೯೫), ಎಂದು ಹೇಳಿದರು. ಅಷ್ಟೇ ಅಲ್ಲ 'ಸಾಧು ಸಜ್ಜನರೊಳಗಿರುವುದೇ ಹಬ್ಬ' (ಅದೇ ಪುಟ ೫೫೬, ಕೀ.ಸಂ ೮೯೩) ವ್ಯಾಸತೀರ್ಥರಿಂದ ತಮಗೆ ಹರಿದಾಸ ದೀಕ್ಷೆಯ ಉಪದೇಶ ದೊರೆತ ಸಂದರ್ಭದಲ್ಲಿ ಆನಂದಾತಿಶಯದಿಂದ ಪುರಂದರದಾಸರು ಹಾಡಿದರೆನ್ನಲಾದ ಕೀರ್ತನೆಯು ಸತ್ಸಂಗದ ಮಹಿಮೆಯನ್ನು ಸಾರುವ ಸುಪ್ರಸಿದ್ಧ ಕೀರ್ತನೆಯಾಗಿದೆ:

**ಹರಿದಾಸರ ಸಂಗ ದೊರಕಿತು ಎನಗೀಗ । ಇನ್ನೇನಿನ್ನೇನು ॥**

**ವರಗುರು ಉಪದೇಶ ನೆರವಾಯ್ತು ಎನಗೆ । ಇನ್ನೇನಿನ್ನೇನು ॥**

**ಮಾಯದ ಸಂಸಾರ ಮಮಕಾರ ತಗ್ಗಿತು । ಇನ್ನೇನಿನ್ನೇನು ॥**

**ತೋಯಜಾಕ್ಷನ ನಾಮ ಜಿಹ್ವೆಯೊಳ್ ನೆಲಸಿತು ।ಇನ್ನೇ ನಿನ್ನೇನು ॥೧॥**

**ಏನೆಂದು ಹೇಳಲಿ ಆನಂದ ಸಂಭ್ರಮ । ಇನ್ನೇನಿನ್ನೇನು ॥**

**ಆ ನಂದ ಗೋಪನ ಕಂದನ ಮಹಿಮೆಯ । ಇನ್ನೇನಿನ್ನೇನು ॥೪॥**

**ಎನ್ನ ವಂಶಗಳೆಲ್ಲ ಪಾವನವಾದವು । ಇನ್ನೇನಿನ್ನೇನು ॥**

**ಚಿನ್ಮಯ ಪುರಂದರ ವಿಠಲಯ್ಯ ದೊರಕಿದ । ಇನ್ನೇನಿನ್ನೇನು ॥೫॥** [10]

**ಮೇಲಿನ ಕೀರ್ತನೆಯು ನಾರದ ಭಕ್ತಿ ಸೂತ್ರದ ೫೦ನೇ ಸೂತ್ರದ 'ಸ ತರತಿ, ಸ ತರತಿ, ಸ ಲೋಕಾಂಸ್ತಾರಯತಿ** ॥೫೦॥ ಅವನು ದಾಟುತ್ತಾನೆ, ಅವನು ದಾಟುತ್ತಾನೆ, ಅವನು (ಇತರ) ಜನರನ್ನೂ

ದಾಟಿಸುತ್ತಾನೆ' (ಪುಟ ೮೨) ಎನ್ನುವ ಸಿದ್ಧಾಂತಕ್ಕೆ ದೃಷ್ಟಾಂತವಾಗಿದೆ. ಪುರಂದರದಾಸರು ತಾನು ಮಾತ್ರ ಉದ್ಧಾರವಾಗಿದ್ದಲ್ಲದೆ, ತನ್ನ ವಂಶವೇ ಪಾವನವಾಯಿತು, 'ಸಾಸಿರ ಕುಲಕೋಟಿ ಪಾವನವಾಯಿತು' ಎಂದು ಹೇಳುವ ಮೂಲಕ ಮಹಾತ್ಮರ ಸಂಗದ ಮಹತ್ವವನ್ನು ಲೋಕಕ್ಕೇ ಸಾರುತ್ತಾರೆ.

ಶ್ರೀ ಪಾದರಾಜರು ಯಾವ ಕಾರಣಕ್ಕಾಗಿ ಉತ್ತಮರ ಸಂಗವು ಆವಶ್ಯಕ ಎನ್ನುವುದನ್ನು ಈ ಕೀರ್ತನೆಯಲ್ಲಿ ನಿರೂಪಿಸುತ್ತಾರೆ:

**ಉತ್ತಮರ ಸಂಗಯೆನಗಿತ್ತು ಸಲಹೋ ॥ಪ॥**

**ಚಿತ್ತಜಜನಕ ಸರ್ವೋತ್ತಮ ಮುಕುಂದ ॥ಅ.ಪ॥**

**ತಿರುತಿರುಗಿ ಪುಟ್ಟಲಾರೆ ಪರರ ಬಾಧಿಸಲಾರೆ ।**

**ಪರಿಪರಿಯ ಪಾಪಗಳ ಮಾಡಲಾರೆ ।**

**ಮರಣ ಜನನಗಳೆರಡು ಪರಿಹರವ ಮಾಡಯ್ಯ ।**

**ಕರುಣಾಸಮುದ್ರ ಮುರವೈರಿ ಶ್ರೀ ಕೃಷ್ಣ ॥೧॥**

ಈ ಕೀರ್ತನೆಯ ಅನುಪಲ್ಲವಿಯಲ್ಲಿ 'ಚಿತ್ತಜಜನಕ' ಎಂಬ ವಿಶೇಷ ಪದಪ್ರಯೋಗ ಮಾಡಿದ್ದಾರೆ ಶ್ರೀಪಾದರಾಜರು. ಚಿತ್ತಜಜನಕ ಅಂದರೆ ಮನ್ಮಥನ ಪಿತನಾದ ಶ್ರೀ ಹರಿ ಎನ್ನುವುದು ಸಾಮಾನ್ಯ ಅರ್ಥ. ಚಿತ್ತಜ ಅಂದರೆ ಚಿತ್ತದಲ್ಲಿ ಹುಟ್ಟುವಂತಹ ಸಂಕಲ್ಪ, ವಿಕಲ್ಪ, ರಾಗದ್ವೇಷಾದಿಗಳು. ಇವೆಲ್ಲವುಗಳು ಜನಿಸಲು ಕಾರಣನಾದವನು ಚಿತ್ತದಲ್ಲಿ ಚೈತನ್ಯರೂಪಿಯಾಗಿ ನೆಲೆಸಿರುವಂತಹ ಪರಮಾತ್ಮ ಶ್ರೀ ಹರಿಯೇ. ಆದ್ದರಿಂದ ಅವನನ್ನೇ ಬೇಡಿಕೊಳ್ಳುತ್ತಾರೆ ಮನಸ್ಸಿನಲ್ಲಿ ವಿಷಯಾಸಕ್ತಿ ಜನಿಸದಂತೆ ಉತ್ತಮರ ಸಂಗವನ್ನೇ ಕೊಡು ಎಂದು. ದುಸ್ಸಂಗದಿಂದಾಗಿ ವಿಷಯಾಸಕ್ತಿಯು ವರ್ಧಿಸಿ, ಕರ್ಮಬಂಧನವುಂಟಾಗಿ ಪುನರ್ಜನ್ಮಕ್ಕೆ ಕಾರಣವಾಗುತ್ತದೆ. ಆದ್ದರಿಂದ ಜನನಮರಣಗಳಕರ್ಮ ಸಂಕೋಲೆಯಿಂದ ಪಾರು ಮಾಡಲು ಉತ್ತಮರ ಸಂಗವನ್ನು ಕೊಡು ಎಂದು ಬೇಡಿಕೊಳ್ಳುತ್ತಾರೆ ಶ್ರೀಪಾದರಾಜರು. ಮುಂದಿನ ಚರಣದಲ್ಲಿ ದುರ್ಜನರ ಸಹವಾಸ ಎಂತಹದು ಎಂಬುದನ್ನು ಹೀಗೆ ಹೇಳುತ್ತಾರೆ[11]:

**ಹೀನ ಜನರೊಡನಾಟ ಶ್ವಾನಾದಿಗಳ ಕೂಟ**

**ಜ್ಞಾನವಂತನ ಮಾಡೊ ಜಾನಕೀರಮಣ ॥**

ಕಲಿಯುಗದಲ್ಲಿ ಕೀರ್ತನದ ಮಹತ್ವವನ್ನು ಸಾರುವ ಶ್ರೀ ಪಾದರಾಜರ ಉಗಾಭೋಗ ಇಂತಿದೆ[12]:

ಧ್ಯಾನವು ಕೃತಯುಗದಿ ಯಜನ ಯಜ್ಞವು ತ್ರೇತಾಯುಗದಿ

ದಾನವಾಂತಕನ ದೇವತಾರ್ಚನೆ ದ್ವಾಪರಯುಗದಿ

ಆ ಮಾನವರಿಗೆಷ್ಟು ಫಲವೊ ಅಷ್ಟು ಫಲವು ಕಲಿಯುಗದಿ

ಗಾನದಲಿ ಕೇಶವಯೆನಲು ಕೈಗೊಡುವನು ರಂಗವಿಠಲ

ಭಕ್ತಿಸಾಧನೆಯ ಮೂಲಕ ಮುಕ್ತಿ ಗಳಿಸಲು ಅಗತ್ಯವಾದ ಸಾಮಾಗ್ರಿ ಸಲಕರಣೆಗಳನ್ನು ಪಟ್ಟಿ ಮಾಡುತ್ತಾರೆ ಶ್ರೀ ಪಾದರಾಜರು ಈ ಕೆಳಗಿನ ಕೀರ್ತನೆಯಲ್ಲಿ:

ಭಕ್ತಿ ಬೇಕು ವಿರಕ್ತಿ ಬೇಕು ಸರ್ವ ಶಕ್ತಿ ಬೇಕು ಮುಂದೆ ಮುಕ್ತಿಯ ಬಯಸುವಗೆ ॥ಪ॥

ಸತಿ ಅನುಕೂಲಳು ಬೇಕು ಸುತನಲ್ಲಿ ಗುಣಬೇಕು

ಮತಿವಂತನಾಗಬೇಕು ಮತ ಒಂದಾಗಿರಬೇಕು ॥೧॥

.............................

ಸುಸಂಗ ಹಿಡಿಯಲಿಬೇಕು ದುಸ್ಸಂಗ ಬಿಡಲಿಬೇಕು

ರಂಗವಿಠಲನ್ನ ಬಿಡದೆ ನೆರೆ ನಂಬಿರಬೇಕು ॥೩॥

ಭಕ್ತಿಸಾಧನೆಗೆ ಬಸವಣ್ಣನವರು ಈ ರೀತಿ ನಿರ್ದೇಶನವನ್ನಿತ್ತಿದ್ದಾರೆ.

ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತವಹ ವಚನವ ನುಡಿಯಬೇಕು.

ಲಿಂಗ ಜಂಗಮದಲ್ಲಿ ನಿಂದೆಯಿಲ್ಲದಿರಬೇಕು.

ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು.

ತನು-ಮನ-ಧನವ ಗುರು-ಲಿಂಗ-ಜಂಗಮಕ್ಕೆ ಸವೆಸಬೇಕು.

ಅಪಾತ್ರ ದಾನವಂ ಗೈಯ್ಯದಿರಬೇಕು. ಸಕಲೇಂದ್ರಿಯಂಗಳೂ ತನ್ನ ವಶಗತವಾಗಿರಬೇಕು.

ಇದೇ ಮೊದಲಲ್ಲಿ ಬೇಹ ಶೌಚ ನೋಡಾ !

ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ

ಎನಗಿದೇ ಸಾಧನ ಕೂಡಲಸಂಗಮದೇವ ।[13]

'ಅನುಭಾವವೇ ಭಕ್ತಿಗೆ ಆಧಾರ' ಎಂದರು ದೇವರದಾಸಿಮಯ್ಯ

**ಅನುಭಾವವಿಲ್ಲದವರ ಭಕ್ತಿ ತಲೆಕೆಳಗಪ್ಪುದಯ್ಯ ! ಅನುಭಾವವೇ ಭಕ್ತಿಗಾಧಾರ.**

**ಅನುಭಾವವೇ ಭಕ್ತಿಗೆ ನೆಲೆವನೆ, ಅನುಭಾವವುಳ್ಳವರ ಕಂಡರೆ ತೂರ್ಯಾತೂರ್ಯಾ**

**ಸಂಭಾಷಣೆಯ ಮಾಡದಿರ್ದರೆ ನರಕದಲಿಕ್ಕಯ್ಯ ರಾಮನಾಥ.**[15]

ಅಖಂಡೇಶ್ವರರು (ಷಣ್ಮುಖ ಸ್ವಾಮಿಗಳು) ಹೇಳಿದರು :

**ತನುವಸವೆಸದೆ, ಮನವ ದಂಡಿಸದೆ, ಧನವ ಸಮರ್ಪಿಸದೆ ಮಿಥ್ಯಾ ಸಂಸಾರದಲ್ಲಿ**

**ನಿಲ್ಕಿ ಹೊತ್ತುಗಳೆದು ಹೊಡೆದಾಡಿ ಸತ್ತು ಹೋಗುವ ವ್ಯರ್ಥ ಜೀವಿಗಳಿಗೆ ಇನ್ನೆತ್ತಣ ಕೈಲಾಸವಯ್ಯ**

**ಅಖಂಡೇಶ್ವರಾ ।**

**ಸಂಗದ ಮಹಿಮೆ ಅಕ್ಕಮಹದೇವಿಯ ವಚನದಲ್ಲಿ ಹೀಗೆ ಹೊರಹೊಮ್ಮಿದೆ;**

**ಸಂಗದಿಂದಲ್ಲದೆ ಅಗ್ನಿ ಹುಟ್ಟದು, ಸಂಗದಿಂದಲ್ಲದೆ ಬೀಜ ಮೊಳೆದೋರದು!**

**ಸಂಗದಿಂದಲ್ಲದೆ ದೇಹವಾಗದು! ಸಂಗದಿಂದಲ್ಲದೆ ಸರ್ವಸುಖದೋರದು**

**ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣರ ಅನುಭವ ಸುಖದಿಂದಾನು ಪರಮಸುಖಿಯಯ್ಯ.**

**'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ,ದುರ್ಜನರ ಸಂಗವದು ಬಚ್ಚಲರೊಚ್ಚಿನಂತಿಹುದು ಸರ್ವಜ್ಞ'**

ಎಂಬ ಸರ್ವಜ್ಞನ ವಚನವಂತೂ ಎಲ್ಲೆಡೆ ಮನೆಮಾತಾಗಿದೆ.(ವಚನ ಸಾಹಿತ್ಯ ಮೂಲಕ, ಸರ್ವಜ್ಞಸಾರ, ಸಂ.ಕಾವ್ಯಪೇಮಿ, ಸಮಾಜ ಪುಸ್ತಕಾಲಯ ಧಾರವಾಡ, ಪುಟ 43, ವ.ಸಂ. 143)

ನಾರದರು 'ದುಸ್ಸಂಗಃ ಸರ್ವಥೈವ ರ್‍ಯಾಜ್ಯಃ'ಎಂದಂತೆ, ಪುರಂದರದಾಸರು ಅದಕ್ಕೆ ಕಾರಣ ಕೊಡುತ್ತಾರೆ.

**ಜಾಲಿಯ ಮರದಂತೆ। ಧರೆಯೊಳು ದುರ್ಜನರು। ಜಾಲಿಯ ಮರದಂತೆ॥ಪ॥ ಮೂಲಾಗ್ರ ಪರಿಯಂತೆ। ಮುಳ್ಳು ಕೂಡಿಪ್ಪಂಥ॥**[16]

ಅಡಿಯಿಂದ ಮುಡಿಯವರಗೆ ಕೆಡುಕನ್ನುಂಟುಮಾಡಬಲ್ಲ ದುರ್ಗುಣಗಳೆಂಬ ಮುಳ್ಳುಳ್ಳವರು ದುರ್ಜನರು ಎನ್ನುತ್ತಾರೆ ಪುರಂದರದಾಸರು. ದುರ್ಜನರ ಸಂಗ ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ ಅಡ್ಡಿಯಾಗುವುದು ಮಾತ್ರವಲ್ಲದೆ ಸಮಾಜದ ಅವನತಿಗೂ ಕಾರಣವಾಗುತ್ತದೆ ಎಂಬ ಭಾವನೆಯಿಂದಲೇ ಕನಕದಾಸರು ದುರ್ಜನರ ಯಾದಿಯೊಂದನ್ನು ಈ ಕೆಳಗಿನ ಕೀರ್ತನೆಯಲ್ಲಿ ಅಡಕಗೊಳಿಸಿ, ಇಂಥ ಸಂಗದಿಂದ ಆಗುವ ಭಂಗವನ್ನು ತಪ್ಪಿಸು ಎಂದು ಭಗವಂತನಲ್ಲಿ ವಿನಂತಿಸಿದ್ದಾರೆ;

**ದುರ್ಜನರ ಸಂಗ ಎಂದಿಗೂ ಒಲ್ಲೆನು ಇಂಥ,**

**ಸಜ್ಜನರ ಸಂಗದೊಳಗಿರಿಸೆನ್ನ ರಂಗ ॥ಪ॥**

**ಉಂಡಮನೆಗೆರಡನು ಎಣಿಸುವಾತನ ಸಂಗ**

**ಕೊಂಡೆಯವ ಪೇಳಿ ಕಾದಿಸುವನ ಸಂಗ**

**ತಂದೆತಾಯನು ಬೈದು ಬಾಧಿಸುವವನ ಸಂಗ**

**ನಿಂದಕರ ಸಂಗ ಬಹು ಭಂಗ ರಂಗ॥**

**ನಂಬಿದ ಕಾವಿನಲಿ ಕೇಡನೆಣಿಪನ ಸಂಗ**

**ಸಂಭ್ರಮದಿ ಜಗಳ ಕಾಯುವನ ಸಂಗ**

**ರಾಗದ್ವೇಷಾದಿಯಲಿ ಮುಳುಗೇಳುವನ ಸಂಗ**

**ಕಾಗಿನೆಲೆಯಾದಿ ಕೇಶವ ಬಿಡಿಸು ಈ ಭಂಗ॥**[17] (ಕೊಂಡೆಯ = ಚಾಡಿ)

ದುರ್ಜನ ಸಂಗದಿಂದ ಮುಕ್ತಿ, ಮತ್ತು ಸಜ್ಜನಸಂಗ ಪ್ರಾಪ್ತಿ ಇವೆರಡಕ್ಕೂ ಭಗವತ್ಕೃಪೆ ಅವಶ್ಯಕ.

ಶಂಕರಾಚಾರ್ಯರು ವಿವೇಕ ಚೂಡಾಮಣಿಯಲ್ಲಿ ಹೇಳುತ್ತಾರೆ :

**ದುರ್ಲಭಂ ತ್ರಯಮೇವೈತದ್ದೈವಾನುಗ್ರಹ ಹೇತುಕಮ್।**

**ಮನುಷ್ಯತ್ವಂ ಮುಮುಕ್ಷತ್ವಂ ಮಹಾಪುರುಷ ಸಂಶ್ರಯಃ ॥(3)**

ಭಗವಂತನ ಅನುಗ್ರಹವೇ ಕಾರಣವಾಗಿರುವ ಈ ಮೂರು ಕಷ್ಟ ಸಾಧ್ಯವೇ: ಮನುಷ್ಯ ಜನ್ಮ, ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆ ಮತ್ತು ಮಹಾತ್ಮರ ಸಂಗ (ಆಶ್ರಯ).[18]

ಈ ಕಾರಣದಿಂದ ಪ್ರತಿಯೊಬ್ಬ ಸಂತರೂ ಸತ್ಸಂಗ ಪ್ರಾಪ್ತಿಗಾಗಿ ಭಗವಂತನನ್ನೇ ಪ್ರಾರ್ಥಿಸುವುದನ್ನು ಗಮನಿಸಬಹುದು.

ನಿಜ ಭಕ್ತರಾದ, ಆತ್ಮಜ್ಞಾನಿಗಳಾದ ಮಹಾತ್ಮರಿಗೂ ಭಗವಂತನಲ್ಲೂ ಯಾವುದೇ ಭೇದವಿಲ್ಲ (ತಸ್ಮಿಂಸ್ತಜ್ಜನೇ ಭೇದಾಭಾವಾತ್) ಎಂಬ ನಾರದರ ಅಭಿಮತವನ್ನು ಶರಣರ ಅನೇಕ ವಚನಗಳಲ್ಲಿ ನಾವು ಕಾಣಬಹುದು.

ಬಸವಣ್ಣನವರು ಹೇಳುತ್ತಾರೆ :

**ಅಯ್ಯಾ ನಿಮ್ಮ ಶರಣರ ನಿಲವ ಸ್ವರ್ಗ ಮರ್ತ್ಯ ಪಾತಾಳದೊಳಗೆ ಬಲ್ಲವರಿಲ್ಲವಯ್ಯಾ!**

**ಅಘಟಿತ ಘಟಿತರು, ಅಖಂಡ ಮಹಿಮರು, ನಿಜದಲ್ಲಿ ನಿರ್ಲೇಪ ಭಾವುಕರು!**

**ಕೂಡಲಸಂಗಮದೇವಾ, ನಿಮ್ಮ ಶರಣರ ನಿಲವನರಿವಡೆ ನಾನೇತರವನಯ್ಯಾ?**[19]

ಅಖಂಡೇಶ್ವರರು 'ಶರಣ ಗಮನಿಯಾದಡೆ'ಎಂಬ ವಚನದಲ್ಲಿ ನಿಜಭಕ್ತನಾದ ಶರಣನು

**'ಆವಾವ ಕ್ರಿಯೆಯಲ್ಲಿರ್ದಡೇನು? ಆವಾವ ಆಚಾರದಲ್ಲಿರ್ದಡೇನು?**

**ಆವಾವ ಭೋಗದಲ್ಲಿರ್ದಡೇನು ? ಕುಂದುಕೊರತೆಯಿಲ್ಲ, ಹಿಂದೆ ಶಂಕೆಯಿಲ್ಲ. ಮುಂದೆ ಜನ್ಮವಿಲ್ಲ,ಆ ಶರಣನು ಎಂತಿರ್ದಂತೆ ಪರಬ್ರಹ್ಮವೆ ಆಗಿರ್ಪನು ನೋಡಿರೋ ನಮ್ಮ ಅಖಂಡೇಶ್ವರಲಿಂಗದಲ್ಲಿ!'**[20]

ಶಂಕರಾಚಾರ್ಯರು ಮೋಹಮುದ್ಗರಲ್ಲಿ ಹೇಳಿರುವಂತೆ ಅಂತಹ ನಂತರ ಸಂಗದಿಂದ ನಿಸ್ಸಂಗತ್ವವನ್ನು ಸಾಧಿಸಿ, ನಿಸ್ಸಂಗತ್ವದಿಂದ ಜೀವನ್ಮುಕ್ತಿಯನ್ನು ಸಾಧಿಸಲು ಸಾಧ್ಯ.

**ಸತ್ಸಂಗತ್ವೇ ನಿಃಸಂಗತ್ವಂ ನಿಃಸಂಗತ್ವೇ ನಿರ್ಮೋಹತ್ವಮ್ ।**

**ನಿರ್ಮೋಹತ್ವೇ ನಿಶ್ಚಲತತ್ತ್ವಂ ನಿಶ್ಚಲತತ್ತ್ವೇ ಜೀವನ್ಮುಕ್ತಿಃ ॥(9)**[21]

---

**ಟಿಪ್ಪಣಿಗಳು**

1. (ಶಿಶುನಾಳ ಶರೀಫ್ ಗೀತೆಗಳು, ಸಂ : ಡಾ. ಶಿವಾನಂದ ಗುಬ್ಬಣ್ಣವರ, ಅಕ್ಷಯ ಪ್ರಕಾಶನ, ಧಾರವಾಡ-580007, ಐದನೆಯ ಆವೃತ್ತಿ 2002, ಪುಟ 161, ಗೀತೆ ಸಂಖ್ಯೆ 198)
2. (ಹರಿದಾಸರ ಜನಪ್ರಿಯ ಹಾಡುಗಳು, ಸಂ: ಡಾ.ಟಿ.ಎನ್. ನಾಗರತ್ನ, ಡಾ.ಮಂದಾಕಿನಿ. ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ 57, ಕೀ.ಸಂ 63)
3. (ಅದೇ ಪುಟ 258, ಕೀ.ಸಂ 272)
4. ವ.ಸಾ.ಸಂ., ಸಂ: ಸಂ.ಶಿ.ಭೂಸನೂರಮಠ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ 2006, ಪುಟ 404, ವ.ಸಂ 148
5. ಅದೇ ಪುಟ 406, ವ.ಸಂ 157
6. ಬ.ವ. ಸಂ.ಡಾ.ಎಲ್. ಬಸವರಾಜು, ಪುಟ 145, ವ.ಸಂ 454
7. ಅದೇ ಪುಟ 49, ವ.ಸಂ 48
8. ಪು.ದಾ.ಕೀ. ಶ್ರೀ.ಮ.ಗ್ರಂ. ಪುಟ 566, ಕೀ.ಸಂ 909
9. ಹರಿದಾಸರ ಜನಪ್ರಿಯ ಹಾಡುಗಳು, ಪುಟ 268, ಕೀ.ಸಂ 284)

10 ಪು.ದಾ.ಕೀ – ಅದೇ ಪುಟ 587, ಕೀ.ಸಂ 946)

11. ಶ್ರೀ ಪಾದರಾಜರ ಕೃತಿಗಳು, ಸಂ : ಡಾ। ಜಿ.ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1987, ಪುಟ 1, ಕೀ.ಸಂ 8)
12. ಅದೇ ಪುಟ 30, ಕೀ.ಸಂ 25)

13. ಬ.ವ. ಸಂ: ಡಾ.ಎಲ್ ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, ಪುಟ 75, ವ.ಸಂ.163

14. ಬ.ವ, ಸಂ: ಡಾ.ಎಲ್. ಬಸವರಾಜು, ಗೀತಾಬುಕ್ ಹೌಸ್, ಮೈಸೂರು, ಪುಟ75, ವ.ಸಂ.163

**15. ವ.ಸಾ.ಸಂ. ಸಂ: ಸಂ.ಶಿ.ಭೂಸನೂರ ಮಠ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-2,**

ಪುಟ 258, ವ.ಸಂ.33)

16. ಪು.ದಾ.ಕೀ., ಶ್ರೀ.ಮ.ಗ್ರಂ., ಉಡುಪಿ,ಪುಟ 250, ಕೀ.ಸಂ.401

17. (ಕನಕ ಸಾಹಿತ್ಯ ದರ್ಶನ ಸಂಪುಟ -4, ಸಂ:ಸುಧಾಕರ ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
ಮೊದಲ ಮುದ್ರಣ : 1999, ಪುಟ 362, ಕೀ.ಸಂ - 189 )

18. ಶ್ರೀ ಶಂಕರ ಭಗವತ್ಪಾದ ಪ್ರಣೀತ ವಿವೇಕ ಚೂಡಮಣಿ, ಸ್ವಾಮಿ ಆದಿದೇವಾನಂದ, ಶ್ರೀ ರಾಮಕೃಷ್ಣಾಶ್ರಮ, ಮೈಸೂರು. ಪುಟ - 2, ಶ್ಲೋಕ - 3.

19. ವ.ಸಾ.ಸಂ, ಪುಟ 415, ವ.ಸಂ. 192

20. ವ.ಸಾ.ಸಂ. ಪುಟ 413,414, ವ.ಸಂ.188

21. ಶ್ರೀ ಮಾಧವೀಯ ಶ್ರೀಮಚ್ಛಂಕರ ದಿಗ್ವಿಜಯಃ (ಶ್ರೀ ವಿದ್ಯಾರಣ್ಯ ಪ್ರಣೀತಃ) ಭಾಗ - 2, ಕನ್ನಡ ಅನುವಾದ: ವಿದ್ವಾನ್ ಎನ್.ರಂಗನಾಥ ಶರ್ಮಾ, ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಮ್ ದಕ್ಷಿಣಾಮ್ನಾಯ ಶಾರದಾ ಪೀಠ ಶೃಂಗೇರಿ

## ೪.೯ ಭಕ್ತಿಯ ಪ್ರಭೇದಗಳು

ನಾರದ ಭಕ್ತಿ ಸೂತ್ರ ಗ್ರಂಥದ ಪ್ರಾರಂಭದಲ್ಲಿ 'ಪರಮಪ್ರೇಮರೂಪ' ಮತ್ತು 'ಅಮೃತ ಸ್ವರೂಪಾ' ಎಂಬ ನಿರ್ವಚನದ ಮೂಲಕ ಪರಾಭಕ್ತಿಯನ್ನು ವಿವರಿಸಲಾಗಿದೆ. 'ಪರಾಭಕ್ತಿಯಾದರೋ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನ ಸಾಕ್ಷಾತ್ಕಾರದ ನಂತರ ಸ್ವಾಭಾವಿಕವಾಗಿಯೇ ಒಳಗಿನಿಂದ ಹೊಮ್ಮಿಬರುವ ಆನಂದದ ಅಭಿವ್ಯಕ್ತಿ. ಆದುದರಿಂದ ಅದು ಫಲರೂಪವಾದ ಭಕ್ತಿ. ಅದೇ ಪರಮಜ್ಞಾನ, ಭಗವತ್ಸಾಕ್ಷಾತ್ಕಾರ, ಮೋಕ್ಷಾನುಭವ ಮೊದಲಾದ ಹೆಸರುಗಳಿಂದ ಕರೆಯಿಸಿಕೊಳ್ಳುವ ಅವಸ್ಥಾ ವಿಶೇಷವೂ ಹೌದು. ಅದನ್ನುಳಿದ ಸಾಧನಾವಸ್ಥೆಯ ಭಕ್ತಿಗೆ ಅಪರಾ ಭಕ್ತಿಯೆಂದು ಹೆಸರು. ಈ ಅಪರಾಭಕ್ತಿಯನ್ನೇ ಗೌಣೀಭಕ್ತಿಯೆಂದು ಕರೆಯುವರು.

ಇಲ್ಲಿ ಅಪರಾ ಭಕ್ತಿಯನ್ನು ಮತ್ತೆ ಎರಡು ವಿಭಾಗ ಮಾಡಿ, ಪರಾಭಕ್ತಿಯ ಉಪಾಂತಿಮ ಹಂತದ, ಅತಿ ತೀವ್ರವಾದ, ಭಕ್ತಿಯನ್ನು 'ಪ್ರೇಮಾಭಕ್ತಿ' ಎಂತಲೂ, ಅದಕ್ಕಿಂತ ಕೆಳಗಿನ, ಸಾಮಾನ್ಯ ಸಾಧಕರಲ್ಲಿ ಕಂಡು ಬರುವ, ಪ್ರಾರಂಭಿಕ ಭಕ್ತಿಯನ್ನು 'ಗೌಣೀ ಭಕ್ತಿ' ಎಂತಲೂ ಕರೆದಿದೆ.(ದೇ.ನಾ.ಭ., ಪುಟ ೮೪)




ಸೂತ್ರ ಸಂಖ್ಯೆ 51 ರಿಂದ 55ರವರೆಗೆ ಪ್ರೇಮಾಭಕ್ತಿಯನ್ನೂ, 56 ರಿಂದ 60ನೆಯ ಸೂತ್ರದವರೆಗೆ ಗೌಣೀಭಕ್ತಿಯನ್ನು ವಿವರಿಸಲಾಗಿದೆ.

ಗೌಣೀಭಕ್ತಿಯ ವರ್ಗೀಕರಣವನ್ನು ವಿವಿಧ ನೆಲೆಯಲ್ಲಿ ಮಾಡಲಾಗಿದೆ.

ಅ) ಮೊದಲನೆಯದು ತ್ರಿಗುಣಗಳನ್ನು ಅನುಸರಿಸಿದ ವರ್ಗೀಕರಣ.

(1) ಸಾತ್ವಿಕ (2) ರಾಜಸಿಕ (3) ತಾಮಸಿಕ.

ಪುರಾಣಗಳಲ್ಲಿ ಈ ಮೂರು ವಿಧದ ಭಕ್ತಿಗಳಿಗೆ ದೃಷ್ಟಾಂತವನ್ನು ಕಾಣುತ್ತೇವೆ:

ಸಾತ್ವಿಕ – ಪ್ರಹ್ಲಾದ, ಉದ್ಧವ, ನಾರದ.

ರಾಜಸ – ರಾವಣ, ಬಾಣಾಸುರ.

ತಾಮಸ – ಭಸ್ಮಾಸುರ, ಬೇಡರಕಣ್ಣಪ್ಪ.

ಆ) ಎರಡನೇಯ ವರ್ಗೀಕರಣಕ್ಕೆ ಆಧಾರ ಭಗವದ್ಗೀತೆ (7,16,17) ಇದರ ಆಧಾರದಲ್ಲಿ (1)ಆರ್ತ (2) ಅರ್ಥಾರ್ಥಿ (3) ಜಿಜ್ಞಾಸು (4) ಜ್ಞಾನಿ

ಇದರಲ್ಲಿ ಕಷ್ಟಕ್ಕೆ ಸಿಕ್ಕಿ ದೀನನಾಗಿರುವವನೇ ಆರ್ತ. ಧನವೇ ಮೊದಲಾದ ಪ್ರಾಪಂಚಿಕ ವಸ್ತುಗಳನ್ನು ಬಯಸುವವನು ಅರ್ಥಾರ್ಥಿ.

ಜ್ಞಾನವನ್ನು ಬಯಸುತ್ತಿರುವವನು ಜಿಜ್ಞಾಸು ಅದನ್ನರಿತವನೇ ಜ್ಞಾನಿ. ಜ್ಞಾನಿಯು ಜೀವನ್ಮುಕ್ತ, ಪರಾಭಕ್ತಿ ಸಂಪನ್ನ, ಆದುದರಿಂದ ಅವನು ಗೌಣಭಕ್ತರ ಗುಂಪಿಗೆ ಸೇರಿದವನಲ್ಲ. ಅವನನ್ನು ಬಿಟ್ಟರೆ ಉಳಿದವರು ಮೂರೇ ಜನ. ಆ ಭಕ್ತಿಗೆ ದೃಷ್ಟಾಂತವು ಇಂತಿವೆ.

1. ಆರ್ತಭಕ್ತಿ–ಗಜೇಂದ್ರ, ದ್ರೌಪದಿ
2. ಅರ್ಥಾರ್ಥಿ–ಧ್ರುವ
3. ಜಿಜ್ಞಾಸು–ಉದ್ಧವ

ಇ. ಮೂರನೆಯ ವರ್ಗೀಕರಣಕ್ಕೆ ಆಧಾರ ಶ್ರೀ ಮದ್ಭಾಗವತ. ಇದನ್ನು 'ನವವಿಧ ಭಕ್ತಿ' ಎಂದು ಕರೆಯಲಾಗಿದೆ. ಶ್ರೀ ಮದ್ಭಾಗವತದಲ್ಲಿ (4.5.23) ಅದನ್ನು ಈ ರೀತಿ ವಿವರಿಸಲಾಗಿದೆ:

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**

**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಮ್ ॥**

'ಶ್ರವಣ, ಕೀತನ, ವಿಷ್ಣುವಿನ ಸ್ಮರಣ ಮತ್ತು ಪಾದಸೇವನ, ಅರ್ಚನ, ವಂದನ, ದಾಸ್ಯಭವ, ಸಖ್ಯಭಾವ ಮತ್ತು ಆತ್ಮ ನಿವೇದನ'–ಹೀಗೆ ಒಂಭತ್ತು ವಿಧವಾಗಿರುವ ಭಕ್ತಿಯನ್ನು ಹೇಳಲಾಗಿದೆ.

82 ನೇ ಸೂತ್ರದಲ್ಲಿ ನಾರದರು ಏಕಾದಶ ಭಕ್ತಿಗಳನ್ನು (ಹನ್ನೊಂದು ವಿಧವಾದ) ಹೇಳಿದ್ದಾರೆ. ಆ ಸೂತ್ರವು ಇಂತಿದೆ.

**ಗುಣ ಮಹಾತ್ಮ್ಯಾಸಕ್ತಿ–ರೂಪಾಸಕ್ತಿ–ಪೂಜಾಸಕ್ತಿ–ಸ್ಮರಣಾಸಕ್ತಿ–ದಾಸ್ಯಾಸಕ್ತಿ–ಸಖ್ಯಾಸಕ್ತಿ–ವಾತ್ಸಲ್ಯಾಸಕ್ತಿ–ಕಾಂತಾಸಕ್ತಿ–ಆತ್ಮನಿವೇದನಾಸಕ್ತಿ–ತನ್ಮಯತಾಸಕ್ತಿ–ಪರಮವಿರಹಾಸಕ್ತಿ–ರೂಪಾ ಏಕಧಾಪಿ ಏಕಾದಶಧಾ ಭವತಿ ॥82॥**

(ಭಕ್ತಿಯು) ಒಂದೇ ಆದರೂ ಗುಣಮಾಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ವಾತ್ಸಲ್ಯಾಸಕ್ತಿ, ಕಾಂತಾಸಕ್ತಿ, ಆತ್ಮ ನಿವೇದನಾಸಕ್ತಿ, ತನ್ಮಯತಾಸಕ್ತಿ (ಮತ್ತು) ಪರಮವಿರಹಾಸಕ್ತಿ ಎಂಬೀ ರೂಪದಿಂದ ಹನ್ನೊಂದು ಬಗೆಯಾಗಿರುತ್ತದೆ. (ಪುಟ 141)

ಭಗವಂತನ ಅನಂತ ಕಲ್ಯಾಣ ಗುಣಗಳಿಂದ ಅದ್ಭುತ ಮಾಹಾತ್ಮ್ಯದಿಂದ ಆಕರ್ಷಿತವಾಗಿ

ಉಂಟಾಗುವ ಭಕ್ತಿಯೇ ಮೊದಲನೆಯದು- ಗುಣಮಾಹಾತ್ಮ್ಯಾಸಕ್ತ, ಇಂತಹ ಭಕ್ತಿಯುಳ್ಳವರು ಅವನ ಗುಣಗಳನ್ನು ಮಾಹಾತ್ಮ್ಯವನ್ನು ಶ್ರವಣ ಮಾಡಲು ಕೀರ್ತಿಸಲು ಪರಸ್ಪರ ಸಂಭಾಷಿಸಲು ಇಷ್ಟಪಡುತ್ತಾರೆ. ಉದಾಹರಣೆಗೆ : ವಾಲ್ಮೀಕಿ, ವ್ಯಾಸ, ಶುಕ, ನಾರದ.

ಭಗವಂತನ ಭುವನ ಮೋಹನ ರೂಪದಿಂದ ಆಕರ್ಷಿತವಾಗಿ ಉಂಟಾಗುವ ಭಕ್ತಿಯೇ ರೂಪಾಸಕ್ತಿ, ಉದಾಹರಣೆಗೆ: ದಂಡಕಾರಣ್ಯದ ಋಷಿಗಳು, ಬೃಂದಾವನದ ಗೋಪಿಯರು.

ಸದಾ ಅವನ ಪೂಜೆಯಲ್ಲಿ ನಿರತನಾಗಿ ಅದರಲ್ಲಿಯೇ ಆನಂದವನ್ನು ಪಡೆಯುವುದು ಪೂಜಾಸಕ್ತಿ. ಉದಾಹರಣೆಗೆ : ಅಂಬರೀಷ.

ಪರಮಾತ್ಮನನ್ನು ಸದಾ ಸ್ಮರಿಸುತ್ತಾ ಅದರಲ್ಲಿಯೇ ಆನಂದವನ್ನು ಪಡೆಯುವುದೇ ಸ್ಮರಣಾಸಕ್ತಿ. ಇಂತಹ ಭಕ್ತಿಯುಳ್ಳವರು ಅವನನ್ನು ಎಂದಿಗೂ ಮರೆಯರು.

ಉದಾಹರಣೆಗೆ : ಪ್ರಹ್ಲಾದ

ದಾಸ್ಯಾ ಸಕ್ತಿಯೆಂದರೆ ದಾಸ್ಯಭಾವ. ಉದಾಹರಣೆ : ಹನುಮಂತ, ಗರುಡ, ನಂದಿ. (ಹರಿದಾಸರೆಲ್ಲರೂ ಈ ಭಾವದ ಸಾಧನೆಯಲ್ಲಿ ನಿರತರಾದವರೇ ಆಗಿದ್ದಾರೆ)

ಅರ್ಜುನ, ಉದ್ಧವ, ಕುಚೇಲ ಮತ್ತು ಇತರ ಗೋಪ ಬಾಲಕರು ಪರಮೇಶ್ವರನನ್ನು ತಮ್ಮ ಅತ್ಯಂತ ಪ್ರಿಯ ಸಖನನ್ನಾಗಿ ಮಾಡಿಕೊಂಡರು. ಅವರದ್ದು ಸಖ್ಯಾಸಕ್ತಿ.

ವಾತ್ಸಲ್ಯಾಸಕ್ತಿಯೆಂದರೆ ಭಗವಂತನನ್ನು ತಮ್ಮ ಮಗುವಾಗಿ ಮಾಡಿಕೊಳ್ಳುವುದು.

ದೃಷ್ಟಾಂತ : ದಶರಥ-ಕೌಸಲ್ಯೆಯರು, ವಾಸುದೇವ-ದೇವಕಿಯರು, ನಂದ-ಯಶೋದೆಯರು.

ಕಾಂತಾ ಸಕ್ತಿಯೆಂದರೆ ಪರಮಾತ್ಮನನ್ನು ಪತಿಯಂತೆ ಪ್ರೀತಿಸುವುದು. ಸೀತೆ, ರುಕ್ಮಿಣಿ, ಸತ್ಯಭಾಮಾ ಮತ್ತು ಇತರ ಕೃಷ್ಣ ಪತ್ನಿಯರೇ ಇದಕ್ಕೆ ದೃಷ್ಟಾಂತ. (ಭಕ್ತ ಮೀರಾ, ಅಕ್ಕಮಹಾದೇವಿ ಇವರೂ ಕೂಡಾ ಈ ಭಾವವನ್ನು ಸಾಧನೆಮಾಡಿದವರೇ ಆಗಿದ್ದಾರೆ).

ಸಂಪೂರ್ಣವಾಗಿ ಆತ್ಮಸಮರ್ಪಣೆಯನ್ನು ಮಾಡಿಕೊಳ್ಳುವುದೇ ಆತ್ಮನಿವೇದನಾಸಕ್ತಿ. ಉದಾಹರಣೆ : ವಿಭೀಷಣ, ಬಲಿ.

ಧ್ಯಾನದಿಂದ ಭಗವಂತನಲ್ಲಿ ಒಂದಾಗುವಂತೆ ಮಾಡುವ ಭಕ್ತಿಯೇ ತನ್ಮಯತಾಸಕ್ತಿ. ಸನತ್ಕುಮರಾದಿ ಋಷಿಗಳೇ ಇದಕ್ಕೆ ದೃಷ್ಟಾಂತ.

ಪರಮವಿರಹಾಸಕ್ತಿ ಎಂದರೆ ಭಗವಂತನ ಅಗಲಿಕೆಯಿಂದ ಆಗುವ ಯಾತನೆ, ವ್ಯಾಕುಲತೆ. ಎಲ್ಲರಲ್ಲೂ ಇರಬಹುದಾದ ಭಕ್ತಿಯಿದು. ಇದು ವಿಶೇಷವಾಗಿ ವ್ರಜಗೋಪಿಯರಲ್ಲಿತ್ತು.

ಈ ರೀತಿಯಲ್ಲಿ ನಾರದ ಭಕ್ತಿ ಸೂತ್ರವು ನಮಗೆ ಹನ್ನೊಂದು ವಿಧವಾದ ಭಕ್ತರ ಪರಿಚಯ ಮಾಡಿಕೊಡುತ್ತದೆ. 'ಹರಿದಾಸರ ಭಕ್ತಿಸ್ವರೂಪ' ಈ ಗ್ರಂಥದಲ್ಲಿ ಡಾ.ಟಿ.ಎನ್ ನಾಗರತ್ನರವರು ಭಕ್ತಿಯ ಈ ವಿವಿಧ ಪ್ರಕಾರಗಳ ಕುರಿತು ವಿವಿಧ ವಿದ್ವಾಂಸರ ಅಭಿಪ್ರಾಯಗಳನ್ನು ಹೀಗೆ ದಾಖಲಿಸಿದ್ದಾರೆ:

ಈ (ನವವಿಧ ಭಕ್ತಿಯ) ಒಂಬತ್ತು ಲಕ್ಷಣಗಳಲ್ಲಿ ಒಂದು ಮುಂದಿನ ಲಕ್ಷಣಕ್ಕೆ ಉಪಾದಕವೂ ಸಾಧಕವೂ ಆಗುತ್ತದೆ."[2] ಪಂಚಮುಖಿ ಆರ್.ಎಸ್.

"ಭಕ್ತಿ ಭಗವಂತನ ನಡುವಿನ ಸಂಪರ್ಕ ಸಲಿಗೆಗಳು ಗಾಢವಾಗುತ್ತಾ ಬರುವುದನ್ನು ಈ ಹಂತಗಳಲ್ಲಿ ಕಾಣಬಹುದು"[3] ಕೆ.ಸಿ ವರದಾಚಾರಿ.

ಅಲ್ಲದೆ ಭಕ್ತಿಯ ಶ್ರವಣ, ಕೀರ್ತನ, ಪಾದಸೇವನ, ಅರ್ಚನ, ವಂದನ, ಆತ್ಮನಿವೇದನ, ತನ್ಮಯತ್ವ ಈ ಏಳು ಹಂತಗಳನ್ನು ಕುರಿತು ಕೆ.ಸಿ ವರದಾಚಾರಿಯವರು "ಇದು ಪೂರ್ಣ ಭಕ್ತಿಯ ಏಳು ಹಂತಗಳು" ಎಂದು ಹೇಳಿ "ಇವುಗಳಲ್ಲಿ ದಾಸ್ಯ, ಸಖ್ಯ ಹಾಗೂ ಮಧುರ ಭಕ್ತಿಗಳು ಭಕ್ತಿಯ ಬೆಳವಣಿಗೆಯನ್ನು ಸುಲಭ ಮಾಡುತ್ತದೆ."[4] ಕೆ.ಸಿ ವರದಾಚಾರಿ.

"ಭಕ್ತನ ಭಾವ ಪರಿಶುದ್ಧಗೊಂಡು ಆ ವಿಶ್ವ ಶಕ್ತಿಯ ಕರಿವನಗಳನ್ನು ಆಕರ್ಷಿಸಿ ಅದಕ್ಕೆ ತಕ್ಕಂತೆ ಮಿಡಿಯಬಲ್ಲ ಶಕ್ತಿಯನ್ನು ಪಡೆಯಬೇಕಾದರೆ ಈ ಎಲ್ಲ ಸಾಧನೆಗಳೂ ಆವಶ್ಯಕ."[5] ಡಾ.ಎಚ್.ತಿಪ್ಪೇರುದ್ರಸ್ವಾಮಿ.

ನಾರದ ಭಕ್ತಿಸೂತ್ರದ ಹನ್ನೊಂದು ಆಸಕ್ತಿಗಳನ್ನು ಶ್ರೀ ಮದ್ಭಾಗವತದಲ್ಲಿ ಉಲ್ಲೇಖಿಸಿದ ನವವಿಧ ಭಕ್ತಿಗಳ ಚೌಕಟ್ಟಿನಲ್ಲಿಯೇ ಅಳವಡಿಸಬಹುದು ಎಂಬುದು ಡಾ। ಟಿ.ಎನ್. ನಾಗರತ್ನ ಅವರ ಅಭಿಪ್ರಾಯ (ಹ.ಭ.ಪುಟ 56)

ಅದಕ್ಕೆ ಅವರು ನೀಡುವ ಸಮರ್ಥನೆ ಹೀಗಿದೆ:

"ಭಕ್ತಿಸೂತ್ರದ ಗುಣಮಾಹಾತ್ಮ್ಯ ಸಕ್ತಿ, ರೂಪಾಸಕ್ತಿಗಳನ್ನು ಭಾಗವತದ ಶ್ರವಣ, ಕೀರ್ತನ ಭಕ್ತಿಗಳಲ್ಲಿ ಅಡಕಗೊಳಿಸಬಹುದು. ಭಗವಂತನ ಅನಂತ ಗುಣಗಡಣಗಳಲ್ಲಿ ಹಾಗೂ ಅವನ ಮನಮೋಹಕ ಸೌಂದರ್ಯದಲ್ಲಿ ಆಸಕ್ತಿಯುಳ್ಳವನು ಮಾತ್ರ ಅವುಗಳಿಗೆ ಕಿವಿಗೊಡಬಲ್ಲ ಹಾಗೂ ತಾನು ಸ್ತುತಿಸಿ ಹಾಡಬಲ್ಲ. ವಾತ್ಸಲ್ಯಾಸಕ್ತಿ ಮತ್ತು ಕಾಂತಾಸಕ್ತಿಗಳನ್ನು ಪಾದಸೇವನ ಹಾಗೂ ವಂದನಭಕ್ತಿಗಳೊಂದಿಗೇ ಸೇರಿಸಬಹುದು. ಭಕ್ತನು ವಾತ್ಸಲ್ಯ ಭಾವದಿಂದಲಾದರೂ ಭಗವಂತನಿಗೆ ಪಾದಸೇವನ ಹಾಗೂ ವಂದನ ಭಕ್ತಿಗಳನ್ನು ಸಲ್ಲಿಸಬಹುದು ಅಥವಾ ಮಧುರ ಭಾವದಿಂದಲಾದರೂ ಸಲ್ಲಿಸಬಹುದು ಅಥವಾ ಇವೆರಡನ್ನೂ ಬಿಟ್ಟು ಉಳಿದ ಯಾವುದೇ ಭಾವದಿಂದ ಸಲ್ಲಿಸಿದರೂ ನಡೆಯುತ್ತದೆ....

ತನ್ಮಯಾಸಕ್ತಿಯನ್ನು ಅತ್ಮನಿವೇದನೆಯ ಫಲವೆಂದು ಕರೆದು ಬಿಡಬಹುದು, ವಿರಹಾಸಕ್ತಿಯು ಸ್ಮರಣ, ವಂದನ, ದಾಸ್ಯ– ಈ ಯಾವ ಭಕ್ತಿಯಲ್ಲಿ ಬೇಕಾದರೂ ಮೂಡಿಬರಬಲ್ಲುದು. ಆ ವಿರಹ ಭಾವವನ್ನೇ ಪ್ರತ್ಯೇಕವಾಗಿರಿಸಿ 'ವಿರಹಾಸಕ್ತಿ' ಎಂದು ಹೆಸರಿಸಬೇಕಾಗಿಲ್ಲವೆನಿಸುತ್ತದೆ. ಆದುದರಿಂದ ನಾರದರ ಭಕ್ತಿಸೂತ್ರದ ಹನ್ನೊಂದು ಆಸಕ್ತಿಗಳನ್ನು ಒಂಬತ್ತು ರೀತಿಯ ಭಕ್ತಿಗಳಾಗಿ ಹೆಸರಿಸಬಹುದು"

ಈ ಒಂಬತ್ತು ವಿಧವಾದ ಭಕ್ತಿಗಳಲ್ಲಿ ಶ್ರವಣ, ಕೀರ್ತನ, ಸ್ಮರಣ, ಅರ್ಚನ, ಇವುಗಳನ್ನು ಈ ಹಿಂದಿನ ಸೂತ್ರಗಳಲ್ಲಿ ವಿಶ್ಲೇಷಿಸಿಯಾಗಿದೆ. ಬೇಲೂರು ಕೇಶವದಾಸರು ತಮ್ಮ 'ಶ್ರೀ ಹರಿದಾಸ ಸಾಹಿತ್ಯ ಒಂದು ಅಧ್ಯಯನ' ಎಂಬ ಗ್ರಂಥದಲ್ಲಿ (ಭಾರತೀ ಪ್ರಕಾಶನ, ಸರಸ್ವತಿಪುರಂ, ಮೈಸೂರು–570009, ಪುಟ 89 ರಿಂದ 115ರವರೆಗೆ) ದಾಸಸಾಹಿತ್ಯದಲ್ಲಿ ನಿರೂಪಿತವಾಗಿರುವ ನವವಿಧ ಭಕ್ತಿಯನ್ನು ವಿಸ್ತ್ರತವಾಗಿ ವಿಶ್ಲೇಷಿಸಿದ್ದಾರೆ. ಹಾಗೆಯೇ ಡಾ। ಟಿ.ಎನ್ ನಾಗರತ್ನರವರು 'ಹರಿದಾಸರ ಭಕ್ತಿ ಸ್ವರೂಪ' ಈ ಗ್ರಂಥದಲ್ಲಿಯೂ

'ನವವಿಧ ಭಕ್ತಿ ಪ್ರತಿಪಾದನೆ' ಎಂಬ 5ನೇಯ ಅಧ್ಯಾಯದಲ್ಲಿಯೂ (ಪುಟ 53 ರಿಂದ 77ರವರೆಗೆ) ದಾಸಸಾಹಿತ್ಯದಲ್ಲಿ ನಿರೂಪಿತವಾಗಿರುವ ನವವಿಧ ಭಕ್ತಿಗಳನ್ನು ಉದಾಹರಣೆ ಸಹಿತ ವಿಶ್ಲೇಷಿಸಿದ್ದಾರೆ.

ಪುರಂದರದಾಸರ ಕರುಣಿಸೋ ರಂಗ ಕರುಣಿಸೋ ಎಂಬ ಕೀರ್ತನೆಯಲ್ಲಿ ನಾರದ ಭಕ್ತಿಸೂತ್ರದಲ್ಲಿ ನಿರೂಪಿಸಲ್ಪಟ್ಟ ಏಕಾದಶ ಭಕ್ತಿಯ ನಿರೂಪಣೆಯನ್ನು ದೃಷ್ಟಾಂತ ಸಹಿತ ಮಾಡಿದ್ದಾರೆ.[6]

**ಕರುಣಿಸೋ ರಂಗ ಕರುಣಿಸೋ ॥ ಇರುಳು ಹಗಲು ನಿನ್ನ ಸ್ಮರಣೆ ಒದಗುವಂತೆ ॥ಅ.ಪ॥**

**ರುಕುಮಾಂಗದನಂತೆ ವ್ರತವನಾನರಿಯೆ । –ಪೂಜಾಸಕ್ತಿ**

**ಶುಕಮುನಿಯಂತೆ ಸ್ತುತಿಸಲು ಅರಿಯೆ । –ಗುಣಮಹಾತ್ಮ್ಯಾಸಕ್ತಿ / ಕೀರ್ತನಾಸಕ್ತಿ**

**ಬಕವೈರಿಯಂತೆ[7] ಧ್ಯಾನವ ಮಾಡಲರಿಯೆ । –ತನ್ಮಯತಾಸಕ್ತಿ**

**ದೇವಕಿಯಂತೆ ಮುದ್ದಿಸಲರಿಯೆನೋ ಕೃಷ್ಣಾ ॥1॥ –ವಾತ್ಸಲ್ಯಾಸಕ್ತಿ**

**ಗರುಡನಂತೆ ಪೊತ್ತು ತಿರುಗಲರಿಯೆನೋ । –ದಾಸ್ಯಾಸಕ್ತಿ**

**ಕರೆಯಲರಿಯೆ ಕರಿರಾಜನಂತೆ । –ಸ್ಮರಣಾಸಕ್ತಿ**

**ವರಕಪಿಯಂತೆ[8] ಸೇವೆಯ ಮಾಡಲರಿಯೆನೊ – ದಾಸ್ಯಸಕ್ತಿ**

**ಸಿರಿಯಂತೆ ನೆರೆದು ಮೋಹಿಸಲರಿಯೆನೊ ಕೃಷ್ಣಾ ॥2॥ ಕಾಂತಾಸಕ್ತಿ, ರೂಪಾಸಕ್ತಿ**

**ಬಲಿಯಂತೆ ದಾನವ ಕೊಡಲರಿಯೆನೊ । –ಆತ್ಮನಿವೇದನಾಸಕ್ತಿ**

**ಭಕ್ತಿ ಛಲವನರಿಯೆ ಪ್ರಹ್ಲಾದನಂತೆ । –ಪರಮವಿರಹಾಸಕ್ತಿ, ಸ್ಮರಣಾಸಕ್ತಿ**

**ಒಲಿಸಲರಿಯೆ ಅರ್ಜುನನಂತೆ ಸಖನಾಗಿ । –ಸಖ್ಯಾಸಕ್ತಿ**

**ಸಲಹಿಕೊಳ್ಳಯ್ಯ ಶ್ರೀ ಪುರಂದರ ವಿಠಲ ॥**

ಹಾಗೆಯೇ ಶ್ರೀ ಪಾದರಾಜರ ಕೃತಿ ಎನ್ನಲಾದ ನಾನಿನ್ನೊಳೇನನ್ನು ಬೇಡುವುದಿಲ್ಲ' ಈ ಕೀರ್ತನೆಯಲ್ಲೂ (ಇದೇ ಕೀರ್ತನೆ ಪುರಂದರದಾಸರ ಅಂಕಿತದೊಂದಿಗೂ ಲಭ್ಯವಿದೆ) ಭಕ್ತಿ ಪ್ರಕಾರವನ್ನು ನಿರೂಪಣೆಯನ್ನು ಕಾಣಬಹುದು:[9]

**ನಾ ನಿನಗೇನು ಬೇಡುವುದಿಲ್ಲ – ಎನ್ನ**

**ಹೃದಯಕಮಲದೊಳು ನೆಲಸಿರು ಹರಿಯೆ ॥ಪ॥**

**ಶಿರ ನಿನ್ನ ಚರಣಕ್ಕೆರಗಲಿ – ವಂದನ / ಪೂಜಾಸಕ್ತಿ**

**ಚಕ್ಷು ಎರಕದಿಂದಲಿ ನಿನ್ನ ನೋಡಲಿ ಹರಿಯೆ – ರೂಪಾಸಕ್ತಿ**

**ಕರಣ ಗೀತಂಗಳ ಕೇಳಲಿ – ಗುಣ ಮಹಾತ್ಮ್ಯಾಸಕ್ತಿ / ಶ್ರವಣ**

**ನಾಸಿಕ ನಿರುಮಾಲ್ಯಾನುದಿನ ಘ್ರಾಣಿಸಲಿ ಹರಿಯೆ – ವಾತ್ಸಲ್ಯಾಸಕ್ತಿ**

**ನಾಲಿಗೆ ನಿನ್ನ ಕೊಂಡಾಡಲಿ – ಕೀರ್ತನ / ಗುಣಮಹಾತ್ಮ್ಯಾಸಕ್ತಿ**

**ತೋಳುಕರಂಗಳ ಮುಗಿಯಲಿ ಹರಿಯೆ – ವಂದನ / ಪೂಜಾಸಕ್ತಿ**

**ಕಾಲುತೀರ್ಥಯಾತ್ರೆಗೆ ಪೋಗಲಿ –**

**ಮನ (ಬಲ್ಪು)[10]ನಿಂದ (ಲಿ) ನಿನ್ನ ಸ್ಮರಿಸಲಿ ಹರಿಯೆ ॥ – ಸ್ಮರಣಾಸಕ್ತಿ, / ಧ್ಯಾನಾಸಕ್ತಿ**

**ಚಿತ್ತ ನಿನ್ನೊಳು ಮುಳುಗಾಡಲಿ । –ಧ್ಯಾನಾಸಕ್ತಿ / ಆತ್ಮನಿವೇದನಾ ಸಕ್ತಿ**

**ನಿನ್ನ ಭಕ್ತ ಜನರ ಸಂಗ ದೊರಕಲಿ ಹರಿಯೆ । –ದಾಸ್ಯಾಸಕ್ತಿ / ಗುಣಮಹಾತ್ಮ್ಯಾಸಕ್ತಿ**
**ವೃತ್ತಿ ತತ್ವಯೋಗಾಭ್ಯಾಸಕ್ಕಾಗಲಿ – ರಂಗ**
**ವಿಠಲ ನಿನ್ನ ದಯವಾಗಲಿ ಹರಿಯೆ ॥**

ಒಟ್ಟಾರೆಯಾಗಿ ಆತ್ಮನಿವೇದನಾಸಕ್ತಿ ಮತ್ತು ದಾಸ್ಯಾಸಕ್ತಿ ಈ ಕೀರ್ತನೆಯ ಆಧಾರಶ್ರುತಿಯಾಗಿದೆ.

ಭಕ್ತಿಯ ಪ್ರಕಾರಗಳನ್ನು ವಚನಕಾರರ ವಚನಗಳಲ್ಲೂ ಗುರುತಿಸಬಹುದು.

**ಅಖಂಡೇಶ್ವರರ ಒಂದು ವಚನ ಇಂತಿದೆ:**[11]

**ನಿಮ್ಮ ನೋಡಿ ನೋಡಿ ಎನ್ನ ಕಂಗಳು ದಣಿಯವಯ್ಯ –ರೂಪಾಸಕ್ತಿ**
**ನಿಮ್ಮ ಹಾಡಿ ಹಾಡಿ ಎನ್ನ ಜಿಹ್ವೆ ದಣಿಯವಯ್ಯ – ಗುಣಮಹಾತ್ಮ್ಯಾಸಕ್ತಿ**
**ನಿಮ್ಮ ಪೂಜೆಯ ಮಾಡಿ ಮಾಡಿ ಎನ್ನ ಕೈಗಳು ದಣಿಯವಯ್ಯ – ಪೂಜಾಸಕ್ತಿ**
**ನಿಮ್ಮ ನೆನೆನೆನೆದು ಎನ್ನ ಮನವು ದಣಿಯದಯ್ಯ ಅಖಂಡೇಶ್ವರಾ – ಸ್ಮರಣಾಸಕ್ತಿ.**

ಬಸವಣ್ಣನವರ ಒಂದು ಸುಪ್ರಸಿದ್ಧ ವಚನ ಭಕ್ತಿಯ ವಿವಿಧ ಪ್ರಕಾರಗಳ ಪರಾಕಾಷ್ಠೆಯನ್ನು ಬಿಂಬಿಸುತ್ತದೆ:[12]

**ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ – ಪರಮ ವಿರಹಾಸಕ್ತಿ**
**ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ – ರೂಪಾಸಕ್ತಿ**
**ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ – ಗುಣಮಾಹಾತ್ಮ್ಯಾಸಕ್ತಿ**
**ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವ – ಧ್ಯಾನಾಸಕ್ತಿ.**

ಸಂತರ ಒಂದೇ ಕೃತಿಯಲ್ಲಿ ನಾರದ ಭಕ್ತಿ ಸೂತ್ರದಲ್ಲಿ ನಿರೂಪಿತವಾದ ಭಕ್ತಿಯ ಎಲ್ಲಾ ಪ್ರಭೇದಗಳು ಕಂಡು ಬರುವುದು ವಿರಳವಾದರೂ, ಹನ್ನೊಂದು ಪ್ರಭೇದಗಳಲ್ಲಿ ಕೆಲವಾದರೂ ಪ್ರಭೇದಗಳ ನಿರೂಪಣೆಯನ್ನೊಳಗೊಂಡ ಹಲವಾರು ಕೃತಿಗಳನ್ನು ನಾವು ಕಾಣಬಹುದು.

ನಿಜಗುಣ ಶಿವಯೋಗಿಗಳು ನಿಷ್ಕಾಮನಾ ರೂಪವಾದ ಭಕ್ತಿಯಲ್ಲಿಯೂ ಎರಡು ಪ್ರಕಾರವನ್ನು ನಿರೂಪಿಸಿರುತ್ತಾರೆ.

ಒಂದು ಜ್ಞಾನ ಪೂರ್ವಭಕ್ತಿ, ಒಂದು ಜ್ಞಾನೋತ್ತರ ಭಕ್ತಿ, ಜ್ಞಾನಪೂರ್ವ ಭಕ್ತಿಯು ಜ್ಞಾನಕ್ಕೆ ಸಾಧನವಾಗಿರುತ್ತದೆ.

ಜ್ಞಾನೋತ್ತರ ಭಕ್ತಿಯು ಜ್ಞಾನದ ಫಲವಾಗಿರುತ್ತದೆ. ಈ ಜ್ಞಾನೋತ್ತರ ಭಕ್ತಿ ಯಾವುದು ಅಂದರೆ, ಇದಕ್ಕೆ ನಿಜಗುಣರು ಲಕ್ಷಣ ಕೊಟ್ಟಿದ್ದಾರೆ.

**'ಸರ್ವವೆಲ್ಲವನು ಚಿದಾತ್ಮ ಭಾವನೆ ಗಂಡು ।**
**ಸರ್ವ ಸಮತ್ವದಿಂದಿರೆ ಭಕ್ತಿ' ॥**

ಅಂದರೆ ಸಕಲ ಜಡ ಚೇತನಾತ್ಮಕ ಪ್ರಪಂಚದ ನಾನಾ ರೂಪಗಳನ್ನು ಭಾವಿಸಿ, ಅಸ್ತಿ ಭಾತಿ ಪ್ರಿಯರೂಪ ಆತ್ಮಾನುಸಂಧಾನವನ್ನು ಮಾಡುವುದೆ ಭಕ್ತಿಯೆಂದು ಹೇಳಿದ್ದಾರೆ.[13]

## ಟಿಪ್ಪಣಿಗಳು

1. ಹರಿದಾಸರ ಭಕ್ತಿ ಸ್ವರೂಪ-ಡಾ.ಟಿ.ಎನ್ ನಾಗರತ್ನ, ಪ್ರ: ಶ್ರೀ ಸುಶಮೀಂದ್ರ ಸೇವಾ ಪ್ರತಿಷ್ಠಾನ, ನಂಜನಗೂಡು, ದ್ವಿಮು:2010, ಪುಟ 55,56.
2. ಪಂಚಮುಖಿ ಆರ್.ಎಸ್ ಕರ್ನಾಟಕದ ಹರಿದಾಸ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, 1952, ಪುಟ 83
3. We are here in the presence of increasing grades of intimacy between the seeker after liberation and love and Godhead. K.C Varadachari, Aspects of Bhakti, Page.40.
4. These are the seven stages of perfect devotion-

   "Dasya Bhava, Sakhya Bhava and Madhura Bhava facilitate the growth of Bhakti in these seven stages"- Aspects of Bhakti". Page 40.

8. ವರಕಪಿ=ಹನುಮಂತ.
9. ಶ್ರೀ ಪಾದರಾಜರ ಕೃತಿಗಳು ಸಂ: ಡಾ.ಜಿ.ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1987, ಪುಟ 30, ಕೀ.ಸಂ 27.
10. ಅದೇ ಪುಟ 151, ಬಲ್ಪು-ಬಲವಾಗಿ, 'ಇಲ್ಲಿ ಖ್ಯಾಲಿನಿಂದಲೆ' ಎಂಬ ಪಾಠಾಂತರವಿದೆ. ಕೆಲವು ಸಂದರ್ಭಗಳಲ್ಲಿ ಇದಕ್ಕೆ ಧ್ಯಾನ ಎಂಬ ಅರ್ಥವೂ ಇದೆ.
11. ವ.ಸಾ.ಸಂ ಪುಟ 240, ವ.ಸಂ 15
12. ಬ.ವ.,ಪುಟ 48, ವ.ಸಂ. 41
13. (ಶ್ರೀಮನ್ನಿಜಗುಣ ಶಿವಯೋಗಿಗಳಿಂದ ವಿರಚಿತ **'ಕೈವಲ್ಯ ಪದ್ಧತಿ'**, ಶ್ರೀ ಚಿಕ್ಕರಾಮಾರೂಢಸ್ವಾಮಿ, ಶ್ರೀರಾಮಾರೂಢಸ್ವಾಮಿ ಬ್ರಹ್ಮವಿದ್ಯಾಶ್ರಮ, ಮಲ್ಲಾಪೂರ, ಬಾಗಲಕೋಟ, 1984, ಪುಟ 351)

## ೪.೧೦. ಮಾಯೆ ಹಾಗೂ ಅದನ್ನು ದಾಟುವ ಉಪಾಯ.

ಸೂತ್ರಸಂಖ್ಯೆ 46ರಿಂದ 50ರವರೆಗೆ ನಾರದರು ಮಾಯೆಯನ್ನು ದಾಟುವ ಉಪಾಯವನ್ನು ಸೂಚಿಸುತ್ತಾರೆ. ಸಾಧಕನು ಮಾಯೆಯ ಪಾಶದಿಂದ ಪಾರಾಗಬೇಕಾದರೆ ಏನು ಮಾಡಬೇಕು ಎನ್ನುವುದನ್ನು ಸೂಚಿಸುತ್ತಾರೆ.

**ಕಸ್ತರತಿ ಕಸ್ತರತಿ ಮಾಯಾಮ್? ಯಸ್ಸಂಗಂ ತ್ಯಜತಿ, ಯೋ ಮಹಾನುಭಾವಂ ಸೇವತೇ, ನಿರ್ಮಮೋ ಭವತಿ ॥46॥**

ಮಾಯೆಯನ್ನು ಯಾವನು ದಾಟುತ್ತಾನೆ? ಯಾವನು ದಾಟುತ್ತಾನೆ? ಯಾವನು ಸಂಗವನ್ನು ಬಿಡುತ್ತಾನೋ, ಮಹಾನುಭಾವನನ್ನು (ಮಹಾತ್ಮರನ್ನು) ಸೇವಿಸುತ್ತಾನೋ, ಮಮಕಾರವಿಲ್ಲದವನಾಗುತ್ತಾನೋ (ಅವನು ದಾಟುತ್ತಾನೆ). (ದೇ.ನಾ.ಭ., ಪುಟ 73)

**ಯೋ ವಿವಿಕ್ತಸ್ಥಾನಂ ಸೇವತೇ, ಯೋ ಲೋಕಬಂಧನಮುನ್ಮೂಲಯತಿ,**
**ಯೋ ನಿಸ್ತ್ರೈಗುಣ್ಯೋಭವತಿ, ಯೋ ಯೋಗಕ್ಷೇಮಂ ತ್ಯಜತಿ ॥೪೭॥**

ಯಾವನು ಏಕಾಂತ ಸ್ಥಾನಕ್ಕೆ ಹೋಗುವನೋ, ಯಾವನು ಲೋಕಬಂಧನವನ್ನು ಬೇರು ಸಹಿತ ಕಿತ್ತೆಸೆಯುವನೋ, ಯಾವನು ತ್ರಿಗುಣಗಳನ್ನು ಮೀರಿ ಹೋಗಿರುವನೋ (ಮತ್ತು) ಯಾವನು ಯೋಗಕ್ಷೇಮವನ್ನು ತ್ಯಜಿಸಿರುವನೋ (ಅವನು ಮಾಯೆಯನ್ನು ದಾಟುತ್ತಾನೆ). (ದೇ.ನಾ.ಭ., ಪುಟ 75)

**ಯಃ ಕರ್ಮಫಲಂ ತ್ಯಜತಿ, ಕರ್ಮಾಣಿ ಸಂನ್ಯಸ್ಯತಿ,**
**ತತೋ ನಿರ್ದ್ವಂದ್ವೋ ಭವತಿ ॥೪೮॥**

ಯಾವನು ಕರ್ಮಫಲವನ್ನು ಬಿಡುತ್ತಾನೋ, ಕರ್ಮಗಳನ್ನು ಬಿಡುತ್ತಾನೋ, ಅದರಿಂದ ದ್ವಂದ್ವಗಳನ್ನು ಮೀರಿ ಹೋಗುತ್ತಾನೋ (ಅವನು ಮಾಯೆಯನ್ನು ದಾಟುತ್ತಾನೆ) (ದೇ.ನಾ.ಭ., ಪುಟ 78)

**ಯೋ ವೇದಾನಪಿ ಸಂನ್ಯಸ್ಯತಿ, ಕೇವಲಮ್ ಅವಿಚ್ಛಿನ್ನಾನುರಾಗಂಲಭತೇ ॥49॥**

ಯಾವನು ವೇದಗಳನ್ನೂ ತ್ಯಜಿಸುವನೋ ಕೇವಲ ಅಖಂಡ ಪ್ರೇಮವನ್ನು ಪಡೆಯುತ್ತಾನೆಯೋ (ಅವನು ಮಾಯೆಯನ್ನು ದಾಟುತ್ತಾನೆ). (ದೇ.ನಾ.ಭ., ಪುಟ 81)

**ಸ ತರತಿ, ಸ  ಲೋಕಾಂಸ್ತಾರಯತಿ ॥50॥**

ಅವನು ದಾಟುತ್ತಾನೆ, ಅವನು ದಾಟುತ್ತಾನೆ, ಅವನು (ಇತರ) ಜನರನ್ನೂ ದಾಟಿಸುತ್ತಾನೆ! (ಪುಟ 82)

ಈಶ್ವರನನ್ನು ಪಡೆಯುವುದೆಂಬ ಜೀವನದ ಮುಖ್ಯ ಧ್ಯೇಯವನ್ನೇ ನಾವೆಲ್ಲಾ ಮರೆತಿರಲು ಕಾರಣ ಮಾಯೆ. ಭಗವದ್ಗೀತೆಯಲ್ಲಿ (7.14) ಶ್ರೀ ಕೃಷ್ಣನು ನೀಡಿರುವ ನಿರ್ವಚನ ವಿವರಣೆ ಇಂತಿದೆ:

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥**

'ಈ ತ್ರಿಗುಣಮಯವಾದ ನನ್ನ ದೈವೀ ಮಾಯೆಯನ್ನು ದಾಟಲು ತುಂಬಾ ಕಷ್ಟ. ಆದರೆ ಯಾರು ನನ್ನನ್ನೇ ಆಶ್ರಯಿಸುತ್ತಾರೋ ಅವರು ಈ ಮಾಯೆಯನ್ನು ದಾಟುತ್ತಾರೆ.' ಸತ್ವ ರಜಸ್ಸು ಮತ್ತು ತಮಸ್ಸು ಎಂಬ ಮೂರು ಮೂಲಭೂತ ಗುಣಗಳಿಂದ ಆದ ಮಾಯೆಯು ಭಗವಂತನ ವಿಶೇಷ ಶಕ್ತಿ, ಮಾಂತ್ರಿಕನ ಮಂತ್ರ ವಿದ್ಯಾಶಕ್ತಿ ಅಥವಾ ಐಂದ್ರಜಾಲಿಕ ಶಕ್ತಿ ಇದ್ದ ಹಾಗೆ ಈ ಜಗತ್ತು ಇದರಲ್ಲಿರುವ ಆಕರ್ಷಕ ಸಮ್ಮೋಹಕ

ವಸ್ತುಗಳು –ಇವೆಲ್ಲವೂ ಆ ಮಾಯೆಯ ವಿವಿಧ ಪ್ರಕಾರಗಳು, ರೂಪಗಳು. ಬಸವಣ್ಣನವರು ಒಂದು ವಚನದಲ್ಲಿ ಮತ್ತು ಪುರಂದರದಾಸರು ಒಂದು ಉಗಾಭೋಗದಲ್ಲಿ[2] ಇದನ್ನು **'ಜಗವಸುತ್ತಿಪ್ಪುದು ನಿನ್ನ ಮಾಯೆಯಯ್ಯ, ನಿನ್ನ ಸುತ್ತಿಪ್ಪುದು ಎನ್ನ ಮನವಯ್ಯಾ'** ಎಂದು ಹೇಳಿದ್ದಾರೆ.

ಈ ಅನಿರ್ವಚನೀಯಗಳನ್ನು ಕನಕದಾಸರು ಸುಂದರವಾಗಿ ನಿರೂಪಣೆ ಮಾಡಿದ್ದಾರೆ. 'ನೀಮಾಯೆಯೊಳಗೊ' ಎಂಬ ಪ್ರಸಿದ್ಧವಾದ ಕೀರ್ತನೆಯಲ್ಲಿ.

ಶಂಕರಾಚಾರ್ಯರು ಪ್ರಶ್ನೋಪನಿಷತ್ ಭಾಷ್ಯದಲ್ಲಿ (1.16) **'ಮಾಯಾ ನಾಮ ಬಹಿರನ್ಯಥಾ ಆತ್ಮಾನು ಪ್ರಕಾಶ್ಯ ಅನ್ಯಥೈವ ಕಾರ್ಯಂ ಕರೋತಿ ಸಾ ಮಾಯಾ'**, ತನ್ನನ್ನೇ ಇನ್ನೊಂದು ರೀತಿಯಲ್ಲಿ ತೋರಿಸಿಕೊಂಡು. ಕಾರ್ಯವನ್ನು ಮಾಡುವ ಒಂದು ವಿಚಿತ್ರ ಬ್ರಹ್ಮಶಕ್ತಿಯನ್ನೇ ಮಾಯಾ ಎನ್ನುತ್ತಾರೆ'.[3] ಎಂದಿದ್ದಾರೆ.

ಹಾಗೆಯೇ ಬ್ರಹ್ಮಸೂತ್ರ ಭಾಷ್ಯದಲ್ಲಿ (ಸೂ 1.4.3) **'ಅವ್ಯಕ್ತಾಹಿ ಸಾ ಮಾಯಾ । ತತ್ತ್ವಾನ್ಯತ್ವ ನಿರೂಪಣಸ್ಯ ಅಶಕ್ಯತ್ವಾತ್** –ಬ್ರಹ್ಮವೇ ಎಂದೋ ಅದಕ್ಕಿಂತ ಬೇರೆಯೆಂದೋ ನಿರೂಪಿಸಲು ಅಶಕ್ಯವಾದ್ದರಿಂದ ಈ ಮಾಯೆಯು ಅವ್ಯಕ್ತವೇ'[4] ಎಂದಿದ್ದಾರೆ. ಇದು ಅವ್ಯಕ್ತವಾಗಿರುವ ಕಾರಣ ಇದು ಬ್ರಹ್ಮವೋ ಅದಕ್ಕಿಂತ ಬೇರೆಯೋ ಎಂದು ನಿರ್ದಿಷ್ಟವಾಗಿ ಹೇಳಲಾಗದಿರುವ ಕಾರಣ ಇದನ್ನು ಅನಿರ್ವಚನೀಯ (ನಿರ್ದಿಷ್ಟವಾಗಿ ಹೇಳಲು ಆಗದಿರುವಂಥಾದ್ದು) ಎಂದಿದ್ದಾರೆ.[5]

'ಎಲ್ಲರನ್ನೂ ಸಿಕ್ಕಿನೊಳಗಿಕ್ಕಿ, ತಾನು ಮಾತ್ರ ಸಿಕ್ಕಿನೊಳಗಿದ್ದೂ ಸಿಕ್ಕದ ಹಕ್ಕಿಯಂತೆ ಅನಂತತೆಯಲ್ಲಿ ಹಾರಾಡುವ ಪರಾತ್ಪರ ವಸ್ತುವಿನ ಅಪ್ರಮೇಯ ಸಾಮರ್ಥ್ಯದ ಗುಣಗಾನವೆನ್ನಬಹುದು ಈ ಕೀರ್ತನೆ'[6]

ಚಿದಾನಂದ ಅವಧೂತರು ತಮ್ಮ 'ಶ್ರೀ ದೇವೀ ಮಹಾತ್ಮೆ' ಗ್ರಂಥದ ಪ್ರಥಮ ಅಧ್ಯಾಯದಲ್ಲಿ ಮಾಯೆಯ ನಿರೂಪಣೆಯನ್ನು ಹೀಗೆ ಮಾಡುತ್ತಾರೆ:

**ವೃಷಭ ಕೇಳಗ್ನಿಯೊಳಗುರಿ ಹೊಗೇ ಪಸರಿಸಿದ ತೆರನಂತೆ ಬ್ರಹ್ಮದಿ ।**

**ಮಿಸುಕಿದವು ಚಿಚ್ಛಕ್ತಿ ಮಾಯೆಗಳೆರಡು ತೋರುತಲೀ ॥**

**ವಿಷಮ ಹೊಗೆಯದು ಮಾಯೆ ಉರಿಯದು । ಅಸಮ ಚಿಚ್ಛಕ್ತಿಯದುವೆ ಶುದ್ಧವು ।**

**ಎಸೆಯುತಿಹವಿವು ಸಕಲಕೆಲ್ಲಕನಾದಿ ಕೇಳೆಂದಾ ॥೩.೨॥**

'ಬಸವೇಶನೇ ಕೇಳು, ಅಗ್ನಿಯಲ್ಲಿ ಉರಿ, ಹೊಗೆ ಹಚ್ಚಿದಂತೆ ಬ್ರಹ್ಮದಲ್ಲಿ ಚಿಚ್ಛಕ್ತಿ ಮಾಯೆಗಳೆರಡು ಪ್ರಕಟವಾಗಿ ತೋರಿದವು.

ಉರಿಯದು ಚಿಚ್ಛಕ್ತಿಯು, ಅದು ಶುದ್ಧವಿರುವದು. ಹೊಗೆಯು ಮಾಯೆಯು ಇವು ತಮಗೆ ಉತ್ಪತ್ತಿಯಿಲ್ಲದೆ ಸರ್ವವಸ್ತುಗಳಿಗೆಲ್ಲ ಮೂಲ ಕಾರಣವಾಗಿ ಶೋಭಿಸುತ್ತಿರುವವು.

ಬ್ರಹ್ಮವೆಂದರೆ ಶುದ್ಧ ಅರಿವಿನ, ಅವ್ಯಕ್ತ, ಅಕ್ರಿಯ, ನಿರಾಕಾರ ಭಾವರಹಿತ ಸ್ವರೂಪವು. ಶಕ್ತಿಯೆಂದರೆ ಶುದ್ಧ ಅರಿವಿನ ವ್ಯಕ್ತ (ಪ್ರಕಟ) ಸಕ್ರಿಯ ಸಾಕಾರ, ಭಾವರಹಿತ ಸ್ವರೂಪವು. ಬ್ರಹ್ಮನು ಕರಗಿದ ತುಪ್ಪದಂತೆ ನಿರಾಕಾರ ಸದ್ಗುಣ ಸ್ವರೂಪನು. ಶಕ್ತಿಯು ಹೆತ್ತುಪ್ಪದಂತೆ ಸಾಕಾರ ಸಗುಣ ಸ್ವರೂಪ. ಕರಗಿದ ತುಪ್ಪ ಹೆತ್ತುಪ್ಪಗಳಲ್ಲಿ ಭೇದವಿಲ್ಲದಂತೆ ಶಿವಶಕ್ತಿಯರಲ್ಲಿ ಸ್ವರೂಪದಿಂದ ಎಂದೂ ಭೇದವಿಲ್ಲ. ವಿಶ್ವವೆಲ್ಲ ಲೀಲಾ ಮಾತ್ರದಿಂದ ಯಾವುದರಿಂದ ಹುಟ್ಟುತ್ತದೆಯೋ ಪ್ರಳಯದಲ್ಲಿ ಯಾವುದರಲ್ಲಿ ಲಯವಾಗುತ್ತದೋ ಅದು ಮಾಯೆಯು[7].'

**ಎರಡು ಆದದು ಮಾಯೆ ತಾನೆಯು । ಹಿರಿದು ಮಹಾವಿದ್ಯೆ ಯೆನಿಸುತ ।**
**ಬರಿಯ ಬಿಳಿ ಹೊಗೆ ವಿಂಗಡಿಸಿ ವಿದ್ಯೆಯೆನಿಸಿಕೊಂಡಿಹುದೂ ॥**
**ಅರಿಯೆ ಕರಿ ಹೊಗೆ ವಿಂಗಡಿಸುತೀ । ತೆರದ ವಿದ್ಯೆಯೆನಿಸಿಕೊಂಡಿತು ।**
**ಎರಡರಲಿ ಜೀವೇಶರೆಂಬರು ತೋರುತಿಹರೆಂದಾ ॥೩೪॥**

ಮಾಯೆಯು ವಿದ್ಯಾ ಅವಿದ್ಯಾ ಎಂದು ಎರಡು ವಿಧವಾಗಿರುವುದು. ಬರಿಯ ಬಿಳಿಹೊಗೆಯಂತೆ ಬೇರೆಯಾಗಿ ಶುದ್ಧ ಸತ್ವಗುಣ ಪ್ರಧಾನವಾದದ್ದು ವಿದ್ಯೆಯು, ಇದು ದೃಶ್ಯ ರೂಪದಿಂದ ಅನೇಕ ವಿಧವಾಗಿರುವುದು. ವಿದ್ಯಾ ಉಪಾಧಿಯಿಂದ ಈಶನು, ಅವಿದ್ಯೆಯ ಉಪಾಧಿಯಿಂದ ಜೀವ ತೋರುತ್ತಿರುವರು. ವಿದ್ಯಾ ಅಂದರೆ ಜ್ಞಾನವು ಅವಿದ್ಯೆ ಅಂದರೆ ಅಜ್ಞಾನ."[8]

ಮಾಯೆಯ ಪಾಶದಿಂದ ಪಾರಾಗಲು ಮಾಯೆಯೊಡೆಯನಾದ ಪರಮಾತ್ಮನನ್ನೇ ಪ್ರಾರ್ಥಿಸುತ್ತಾರೆ ಪುರಂದರದಾಸರು:

**ಮಾಯೆ ಎನ್ನ ಕಾಯವನ್ನು ಪಾಯದಿಂದ ನೋಯಿಸಿ ।**
**ಬಾಯಿ ಮುಚ್ಚಿ ಕೊಲ್ಲುತಾಳೆ ಕಾಯೊ ಲಕ್ಷ್ಮಿಯರಸನೆ ॥**

...........................................................

**ಇರುವೆ ಮೊದಲು ಮಾಡಿ ಆನೆ ಕಡೆಯ ಮಾಡಿ ಬಸಿರಿನಲ್ಲಿ ।**
**ಮರಳಿ ಮರಳಿ ಹುಟ್ಟಿ ಹೊಂದಿ ತೊಳಲಿ ಬಳಲಿ ಮುಂದೆ ನಾ ॥**
**ಇರುಸು ಗಾಳಿಯೊಳಗೆ ಬಿದ್ದ ತರಗೆಲೆಯ ಅಂದವಾಯ್ತು ।**
**ಮರಳಿ ಮರಳಿ ಹುಟ್ಟು ಹೊಂದಲಾರೆ ಲಕ್ಷ್ಮಿಯರಸನೆ ॥4॥**

ಮಾಯೆ ಪಾಶಕ್ಕೆ ಸಿಲುಕಿ, ಮತ್ತೆ ಮತ್ತೆ ಹುಟ್ಟಲಾರೆ, ನೀನೇ ನನ್ನನ್ನು ಪಾರು ಮಾಡಬೇಕು ಎಂದು ನಾರಾಯಣನನ್ನೇ ಪ್ರಾರ್ಥಿಸುತ್ತಾರೆ ಪುರಂದರದಾಸರು. 'ಮತ್ತೆ ಮತ್ತೆ ಹುಟ್ಟಿಬರುವಂತೆ ಮಾಡುವ ಭವರೋಗಕ್ಕೆ ನೀನೇ ಮದ್ದು ಮಾಡಬೇಕು'

ಎಂದು ಮಾಯಾದೇವಿಯನ್ನೇ ಪ್ರಾರ್ಥಿಸಿಕೊಳ್ಳುತ್ತಾರೆ ಪುರಂದರದಾಸರು ಈ ಕೀರ್ತನೆಯಲ್ಲಿ. ನಾರದರು ಮಾಯೆಯನ್ನು ದಾಟಲು ಹೇಳಿರುವ ಉಪಾಯಗಳ ಕೆಲವು ಅಂಶಗಳನ್ನು ಈ ಕೀರ್ತನೆಯಲ್ಲಿ ನಾವು ಗಮನಿಸಬಹುದು:

**ಮಾಡಬಾರದೆ ಮದ್ದು ಮಾಯಾದೇವಿ । ಮಾಡಬಾರದೆ ॥ಪ॥**

**ಕರಗಳಿಂದ ಹರಿಯ ಮಂದಿರದ ಕಸವ ತೆಗೆಯೋದಕ್ಕೆ ।**

**ನಿರತದಲ್ಲಿ ಬೇಸರದೆ । ಹರುಷಪುಟ್ಟೋ ಹಾಗೆ ॥**

ಅಂದರೆ ಭಗವಂತನ ಪೂಜೆ, ಸೇವೆಯಲ್ಲಿನ್ನು ಬೇಸರಿಸದೆ, ಶ್ರದ್ಧೆ ಉತ್ಸಾಹಗಳಿಂದ ಮಾಡುವಂತೆ,

**ಶ್ರುತಿ ರಾಮಾಯಣ ಶ್ರೀ ಭಾಗವತ ಪಂಚರಾತ್ರಾಗಮದಿ ।**

**ಕಥೆಗಳಲಿ ಬಹಳ । ರತಿಯು ಪುಟ್ಟೋ ಹಾಗೆ ॥**

ಅಂದರೆ ಭಗವಂತನ ಮಹಿಮೆಯನ್ನು ಸಾರುವ, ಭಕ್ತಿ ಶಾಸ್ತ್ರಗಳೆನಿಸಿದ ಶ್ರೀ ಮದ್ಭಾಗವತ, ಪಂಚರಾತ್ರಾಗಮ, ರಾಮಾಯಣದ ಕಥೆಗಳಲ್ಲಿ ಬಹಳ ಪ್ರೀತಿಯು ಹುಟ್ಟುವ ಹಾಗೆ.

**ದೇಹವು ಅನಿತ್ಯವೆಂದು । ಮೋಹದಿಂದಲಿ ಪೋಷಿಸದಲೆ ।**

**ಮಹೇಂದ್ರಾವರಜನ ಅಹ । ರಹ ಭಜಿಸೋ ಹಾಗೆ ॥**

**ನರರ ಸ್ತವನ ಹೇಯವೆಂದು । ಅರೆಗಳಿಗೆ ಅಗಲದೆ ।**

**ನರಹರಿಯ ಸ್ಮರಣೆಯನು । ನಿರತ ಮಾಳ್ಪ ಹಾಗೆ ।**

ಭಗವಂತನ ಸ್ಮರಣೆಯನ್ನು ನಿರತ ಮಾಡುವ ಹಾಗೆ, ನಿರತ ಮಾಡಬೇಕಾದರೆ ಏಕಾಂತವೂ ಅಗತ್ಯ, ಹಾಗಾಗಿ ಲೌಕಿಕ ಭೋಗದ ಆಸೆಯಿಂದ ಲೌಕಿಕರೊಂದಿಗೆ ಬೆರೆಯುತ್ತಾ, ಅವರ ಗುಣಗಾನದಲ್ಲಿ ಹೊತ್ತು ವ್ಯರ್ಥಮಾಡದೆ ನಿರತ ಹರಿಯನ್ನು ಸ್ಮರಿಸುವಂತೆ,

**ಸಂತೆ ನೆರೆದಂತೆ ಸ್ತ್ರೀಪುತ್ರರೆಂಬೋರು ಅರಿತು ।**

**ಕಂತು ಪಿತನ ಚರಣ ಸ್ವಾಂತದಿ ಸ್ಮರಿಸೋ ಹಾಗೆ ॥**

ಮಾಯಾ ಸಂಸಾರವೆಂದರೆ ಸಂತೆ ನೆರೆದಂತೆ, ಸಂತೆ ಶಾಶ್ವತವಲ್ಲ. ಒಟ್ಟ ಬಯಲಲ್ಲಿ ಬೆಳಿಗ್ಗೆ ನೆರೆದ ಸಂತೆ ಕತ್ತಲಾಗುತ್ತಿದ್ದಂತೆ ಮತ್ತೆ ಬಯಲಾಗುವಂತೆ, ಸ್ತ್ರೀಪುತ್ರ ಸಂಬಂಧಿಗಳು ಶಾಶ್ವತರಲ್ಲ ಎಂದು ಅರಿತು ಏಕಾಂತದಿ ಹರಿಯನ್ನು ಭಜಿಸುವ ಹಾಗೆ,

**ಮನೋ ವಾಕ್ಕಾಯಗಳಿಂದಲಿ ಸದ್ಗುಣದಿ ಪುರಂದರವಿಠಲನ ।**

**ಅನುರಾಗದಿ ಪಾಡಿ । ಕುಣಿದು ದಣಿಯೋ ಹಾಗೆ ॥**

ಮಾಯಾದೇವಿಯನ್ನೇ ಪ್ರಾರ್ಥಿಸುತ್ತಾರೆ ಪುರಂದರದಾಸರು.

ಮೇಲಿನ ಸೂತ್ರಗಳಲಿ ನಿಸ್ಸಂಗತ್ವ ಮತ್ತು ಏಕಾಂತ ಸಾಧನೆಗೆ ನಾರದರು ಮಹತ್ವವನ್ನು ಕೊಟ್ಟಿದ್ದಾರೆ. ಪ್ರಭುದೇವರು ಕೂಡಾ ನಿಸ್ಸಂಗತ್ವದ ಮಹಿಮೆಯನ್ನು ಹಾಡಿಹೊಗಳಿದ್ದಾರೆ ತಮ್ಮ ವಚನದಲ್ಲಿ :[10]

**ಮಠವೇಕೋ ಪರ್ವತವೇಕೋ, ಜನವೇಕೋ ನಿರ್ಜನವೇಕೋ ಚಿತ್ತ ಸಮಾಧಾನವುಳ್ಳ ಶರಣಂಗೆ?** ನಿಜ ಸಾಧಕನ ಚಿತ್ತ ಸಮಾಧಾನವನ್ನು ಬಾಹ್ಯ ಪರಿಸ್ಥಿತಿಗಳು ಬದಲಾಯಿಸಲಾರವು. ಜನಜಂಗುಳಿಯ ಮಧ್ಯದಲ್ಲಿಯೂ ಅವನು ಏಕಾಂತದ ಶಾಂತಿಯನ್ನು ಅನುಭವಿಸಬಲ್ಲ.

ಮಾಯೆಯನ್ನು ದಾಟಲು ಮಹಾತ್ಮರಿಗೆ ಶರಣಾಗುವುದರ ಮಹಿಮೆಯನ್ನು ಬಸವಣ್ಣನವರು ಹೀಗೆ ಹೇಳುತ್ತಾರೆ :

**ಮಡಕೆಯ ಮಾಡುವರೆ ಮಣ್ಣೇ ಮೊದಲು; ತೊಡುಗೆಯ ಮಾಡುವರೆ ಹೊನ್ನೇ ಮೊದಲು; ಶಿವಪಥವನರಿವರೆ ಗುರುಪಥವೆ ಮೊದಲು; ಕೂಡಲಸಂಗಮದೇವನರಿವರೆ ಶರಣರ ಸಂಗವೇ ಮೊದಲು**[11]

ಅಕ್ಕನು ತನ್ನ ವಚನದಲ್ಲಿ **'ಬಲ್ಲವರೊಡನೆ ಸಂಗವ ಮಾಡಿಹರೆ, ಹೊಸೆದು ಬೆಣ್ಣೆಯ ಕೊಂಬಂತೆ' 'ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರಸಂಗ ಕರ್ಪೂರ ಗಿರಿಯ ಉರಿ ಕೊಂಡಂತೆ'** ಎನ್ನುತ್ತಾಳೆ ಅಂದರೆ, ಮಹಾತ್ಮರ ಸಂಗದಿಂದ ನಮ್ಮಲ್ಲಿರುವ ದೋಷರಾಶಿಗಳೆಲ್ಲಾ ಸುಟ್ಟು ಭಸ್ಮವಾಗುವವು ಅನ್ನುತ್ತಾಳೆ ಅಕ್ಕಮಹಾದೇವಿ.[12]

---

## ಟಿಪ್ಪಣಿಗಳು

1. ಬ.ವ. ಸಂ : ಡಾ.ಎಲ್ ಬಸವರಾಜು, ಗೀತಾಬುಕ್ ಹೌಸ್, ಮೈಸೂರು, 2008, ಪುಟ 154, ವ.ಸಂ 486.
2. ಪುರಂದರದಾಸರ ಹಾಡುಗಳು, ಸಂ : ಡಾ। ಅರಳು ಮಲ್ಲಿಗೆ ಪಾರ್ಥಸಾರಥಿ, ಹರಿದಾಸ ಅಕಾಡೆಮಿ, 194-ಲಕ್ಷ್ಮೀನಿಲಯ, ರಾಘವೇಂದ್ರ ಕಾಲೋನಿ, ಚಾಮರಾಜಪೇಟೆ, ಬೆಂಗಳೂರು-18, ಪುಟ 502, ಉಗಾಭೋಗ ಸಂಖ್ಯೆ : 1307
3. ವೇದಾಂತ ಪ್ರಬೋಧ, ಸ್ವಾಮಿ ಪರಮಾನಂದ ಭಾರತೀ, ಜ್ಞಾನ ಸಂವರ್ಧಿನೀ ಪ್ರತಿಷ್ಠಾನಮ್, 'ಸುಮುಖ ರೆಸಿಡೆನ್ಸಿ', 302, 3ನೇ ಮಹಡಿ, 33, ಎಮ್.ವಿ ಸೀತಾರಾಮಯ್ಯ ರಸ್ತೆ, ಗವಿಪುರಂ, ಬೆಂಗಳೂರು-19, 2004, ಪುಟ 59
4. ಅದೇ, ಪುಟ 69
5. ಅದೇ, ಪುಟ 70
6. ಕನಕ ಸಾಹಿತ್ಯ ದರ್ಶನ ಸಂಪುಟ-4, ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1999, ಪುಟ 255
7. ಸಟೀಕಾ ಶ್ರೀ ದೇವೀ ಮಹಾತ್ಮೆ ಮೂಲ: ಶ್ರೀ ಚಿದಾನಂದ ಅವಧೂತರು. ಟೀಕೆ ಮತ್ತು ಪ್ರಕಾಶಕರು: ಶ್ರೀಮತಿ ವಿಶಾಲಾಕ್ಷಾಂಬಾತಾಯಿ, ಪಂ.ದೇ. ತೋಟಪ್ಪಯ್ಯ ಶಾಸ್ತ್ರಿಗಳು ಹಿರೇಮಠ ಗದಗ, ಪುಟ 89, 90
8. ಅದೇ, ಪುಟ 9
9. ಪು.ದಾ.ಕೀ., ಪುಟ 447, ಕೀ.ಸಂ 720
10. ವ.ಸಾ.ಸಂ ಪುಟ 414, ವ.ಸಂ 189
11. ವ.ಸಾ.ಸಂ., ಪುಟ 193, ವ.ಸಂ 1)
12. ಅದೇ, ಪುಟ 195, ವ.ಸಂ 6)

## ೪.೧೧. ಮುಕ್ತರಾದ ಭಕ್ತರ ಲಕ್ಷಣಗಳು

ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಬಹಳಷ್ಟು ಅಂಶಗಳನ್ನು ಭಕ್ತಿಯ ಸ್ವರೂಪ ನಿರೂಪಿಸುವಂತಹ ಸೂತ್ರಗಳು (ಸೂ.ಸಂ. ೨,೩) ಹಾಗೂ ಭಕ್ತಿಯ ಫಲನಿರ್ದೇಶನ ಮಾಡುವಂತಹ ಸೂತ್ರಗಳ (ಸೂ.ಸಂ. ೪,೫,೬ ) ವಿಶ್ಲೇಷಣೆಯ ಸಂದರ್ಭದಲ್ಲಿ ಈಗಾಗಲೇ ವಿವೇಚಿಸಲಾಗಿದೆ. ಹಾಗಾಗಿ ಇಂದಿನ ಸಂದರ್ಭಕ್ಕೆ ಅನ್ವಯವಾಗುವಂತಹ ಎರಡೇ ಸೂತ್ರಗಳನ್ನು ವಿಶ್ಲೇಷಣೆಗೆ ಆಯ್ದುಕೊಂಡಿರುತ್ತೇನೆ.

**ನಾಸ್ತಿ ತೇಷು ಜಾತಿ ವಿದ್ಯಾ ರೂಪ ಕುಲಧನ ಕ್ರಿಯಾದಿಭೇದಃ ॥೭೨॥**

ಅವರಲ್ಲಿ ಜಾತಿ ವಿದ್ಯೆ ರೂಪ ಕುಲ ಧನ ಕ್ರಿಯೆ ಮೊದಲಾದ ಭೇದವಿಲ್ಲ. (ದೇ.ನಾ.ಭ, ಪುಟ ೧೨೨ )

**ಯತಸ್ತದೀಯಾಃ ॥೭೩॥**

ಏಕೆಂದರೆ (ಅವರು)ಅವನವರು.

ಭಕ್ತರು ಭಗವಂತನಿಗೆ ಸೇರಿದವರೇ ಆದುದರಿಂದ ಅವನು ಅವರಲ್ಲಿ ಜಾತ್ಯಾದಿ ಭೇದವನ್ನು ಎಂದಿಗೂ ಮಾಡನು. ಭಗವಂತನ ಈ ಅಪಾರ ಕೃಪೆಯನ್ನು ವರ್ಣಿಸುವ ಒಂದು ಶ್ಲೋಕ ಶ್ರೀ ಮದ್ಭಾಗವತದಲ್ಲಿದೆ (೭.೯):

**ವ್ಯಾಧಸ್ಯಾಚರಣಂ ಧ್ರುವಸ್ಯ ಚವಯಃ ವಿದ್ಯಾಗಜೇಂದ್ರಸ್ಯ ಕಾ**

**ಕಾ ಜಾತಿರ್ವಿದುರಸ್ಯ ಯಾದವಪತೇರುಗ್ರಸ್ಯ ಕಿಂಪೌರುಷಮ್ ।**

**ಕುಬ್ಜಾಯಾಃ ಕಮನೀಯ ರೂಪಮಧಿಕಂ ಕಿಂ ತತ್ಸುಧಾಮ್ನೋಧನಂ**

**ಭಕ್ತ್ಯಾ ರಕ್ಷತಿ ಕೇವಲಂ ನ ತು ಗುಣೈರ್ಭಕ್ತಿಪ್ರಿಯಃ ಶ್ರೀ ಹರಿಃ ॥**

'ಧರ್ಮವ್ಯಾಧನಿಗೆ ಏನು ಆಚಾರವಿತ್ತು? ಧ್ರುವನಿಗೇನು ವಯಸ್ಸಾಗಿತ್ತು? ಗಜೇಂದ್ರನಿಗೆ ಯಾವ ವಿದ್ಯೆಯಿತ್ತು? ವಿದುರನ ಜಾತಿಯೆಂಥದ್ದು? ಯಾದವರ ರಾಜ ಉಗ್ರಸೇನನಿಗೆ ಯಾವ ಪೌರುಷವಿತ್ತು? ಕುಬ್ಜೆಗೆ ಅತ್ಯಧಿಕ ಸೌಂದರ್ಯವಿತ್ತೇನು? ಇನ್ನು ಆ ಸುಧಾಮನಿಗಿದ್ದ ಧನ? ಭಕ್ತಿ ಪ್ರಿಯನಾದ ಶ್ರೀ ಹರಿಯು ಕೇವಲ ಭಕ್ತಿಯಿಂದ ಒಲಿದು ರಕ್ಷಿಸುತ್ತಾನೆಯೇ ಹೊರತು ಗುಣಗಳಿಗೆ ಒಲಿದು ಅಲ್ಲ!"

ಇನ್ನು ಭಕ್ತರೆಲ್ಲರೂ ಭಗವಂತನಿಗೇ ಸೇರಿದವರಾದುದರಿಂದ, ಇಡೀ ಜಗತ್ತನ್ನು ಭಗವನ್ಮಯವಾಗಿ ಕಾಣುವುದರಿಂದ, ತಮ್ಮ ತಮ್ಮಲ್ಲಿ ಆಗಲೀ, ಜಗತ್ತಿನ ಜನರ ಬಗ್ಗೆ ಆಗಲೀ ಎಂದಿಗೂ ಭೇದವನ್ನೆಣಿಸಲಾರರು.

ಭಗವದ್ಗೀತೆಯಲ್ಲಿ (೫.೧೮) ಘಂಟಾ ಘೋಷವಾಗಿ ಹೇಳಲಾಗಿದೆ;

**ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ ।**

**ಶುನಿ ಚೈವ ಶ್ವಪಾಕೇ ಚ ಪಂಡಿತಾ ಸ್ಸಮದರ್ಶಿನಃ ॥**

'ವಿದ್ಯೆ ವಿನಯಗಳಿಂದ ಕೂಡಿದ ಬ್ರಾಹ್ಮಣ, ಹಸು, ಆನೆ, ನಾಯಿ ಮತ್ತು ನಾಯಿಯ ಮಾಂಸವನ್ನು ತಿನ್ನುವವನು ಇವರೆಲ್ಲರಲ್ಲಿಯೂ ಜ್ಞಾನಿಗಳು ಸಮದರ್ಶಿಗಳಾಗಿರುವರು.'

ಬಸವಣ್ಣನವರ ಪ್ರಸಿದ್ಧ ವಚನಗಳು ಇದೇ ಭಾವವನ್ನು ವ್ಯಕ್ತ ಪಡಿಸುತ್ತವೆ':

ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯ
ಇವ ನಮ್ಮವ. ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯ
ಕೂಡಲಸಂಗಮದೇವಯ್ಯ ನಿಮ್ಮ ಮನೆಯ ಮಗನೆಂದೆನಿಸಯ್ಯ
ಆವನಾದರೇನು ಶ್ರೀ ಮಹಾದೇವನ ನೆನೆವವನ ಬಾಯಿ ತಂಬೂಲ ಮೆಲುವೆ, ಬೀಳುಡಿಗೆಯ ಹೊದೆವೆ,
ಪಾದರಕ್ಷೆಯ ಕಾಯ್ದು ಬದುಕುವೆ ಕೂಡಲಸಂಗಮದೇವಾ. [2]

ದಾಸೀಪುತ್ರನಾಗಲಿ, ವೇಶ್ಯಾ ಪುತ್ರನಾಗಲಿ, ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೆ ಯೋಗ್ಯ, ಹೀಗಲ್ಲದೆ ಉದಾಸೀನವ ಮಾಡಿ ಬಿಡುವವರಿಗೆ ಪಂಚ ಮಹಾಪಾತಕ, ನರಕಕಾಣಾ ಕೂಡಲಸಂಗಮದೇವಾ.[3]

ಕೊಲುವನೇ ಮಾದಿಗ, ಹೊಲಸ ತಿಂಬವನೇ ಹೊಲೆಯ !
ಕುಲವನೋ, ಆವಂದಿರ ಕುಲವನೊ ! ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ
ಶರಣರೇ ಕುಲಜರು[4]

'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯಾ' ಎಂದು ಬೇಡುತ್ತಾರೆ ಬಸವಣ್ಣನವರು.[5]

ಮೌನೇಶ್ವರರು ತಮ್ಮ ವಚನಗಳಲ್ಲಿ ಸಮಾನತೆಯ ತತ್ವವನ್ನು ಹೀಗೆ ಬಿಂಬಿಸಿದ್ದಾರೆ:[6]
ಮುತ್ತು ಚಿಪ್ಪಿನೊಳು ಪುಟ್ಟುವದು ರತ್ನ ಪಾಷಾಣದೊಳು ಪುಟ್ಟುವದು, ಉತ್ತಮ ಶರಣರು
ಹೊಲೆಯಲ್ಲಿ ಹುಟ್ಟಿದ ಮೇಲೆ ನನ್ನ ಕುಲ ತನ್ನ ಕುಲ ಹೆಚ್ಚೆನ್ನಬಹುದೆ ಬಸವಣ್ಣ.

ಹಿಂದು ತುರುಕರಿಗೆ ಚಂದ್ರಮನೊಬ್ಬನೆ ನಿಂದಿಸಿದವನೇ ಅಧಮನು, ಕಾಣದ ಅಂಧಕರಿಗೇಕೆ
ದರ್ಪಣವು, ಸಕಲವು ಒಂದೇ ಎಂದು ಕಂಡ ಗುರು ಬೇರೆ.[7]

ಯಾರು ಸ್ವಮತಪ್ರತಿಷ್ಠೆಯ ಭ್ರಾಂತಿಯಿಂದ ಕುರುಡರಾಗಿದ್ದಾರೋ ಅಮಥವರಿಗೆ ಸ್ವಸ್ವರೂಪದ ದರ್ಶನ ಮಾಡಿಸುವಂತಹ ಧರ್ಮವೇತಕ್ಕೆ? ಎಂದು ಪ್ರಶ್ನಿಸುತ್ತಾರೆ ಮೌನೇಶ್ವರರು. ಮತ್ತೊಂದು ವಚನದಲ್ಲಿ ಸಮಾನತೆಯನ್ನು ಹೀಗೆ ಪ್ರತಿಪಾದಿಸುತ್ತಾರೆ ಅವರು:

ಸಾವು ಮರಣಗಳೊಂದೆ ದಾರಿಯೆಲ್ಲಾ ಒಂದೆ,
ಜನಿತಗಳು ಒಂದೆ, ಸಕಲರ ಕುಲವೆಲ್ಲ ಒಂದೆ ಬಸವಣ್ಣ[8]
ಇದರೊಳಗೆ ಆವಕುಲ ಹಿರಿದು ಕಿರಿದು ಎನಬಹುದು.

ನಾರದ ಭಕ್ತಿ ಸೂತ್ರದಲ್ಲಿ ಪರಮಾತ್ಮನ ನೈಜ ಭಕ್ತರ ಲಕ್ಷಣವನ್ನು ನಿರೂಪಿಸುವ ಒಂದು ಸೂತ್ರ :

ನಾಸ್ತಿ ತೇಷು ಜಾತಿ ವಿದ್ಯಾ ರೂಪ ಕುಲ ಧನ ಕ್ರಿಯಾದಿ ಭೇದಃ ॥೭೨॥ ಪರಮಾತ್ಮನ ಭಕ್ತರಲ್ಲಿ ಜಾತಿ, ವಿದ್ಯೆ, ರೂಪ, ಕುಲ, ಧನ, ಕ್ರಿಯೆ ಇವುಗಳ ಕುರಿತಾಗಿ ಯಾವುದೇ

ಭೇದಭಾವವಿರುವುದಿಲ್ಲ.

ಇದೇ ಧ್ವನಿಯುಳ್ಳಂತಹ ಪುರಂದರದಾಸರ ಒಂದು ಪ್ರಸಿದ್ಧ ಕೀರ್ತನೆಯನ್ನು ಅವಲೋಕಿಸಬಹುದು.[9]

**ಕೊಟ್ಟವರು ಸರಿಯೇ ಕೊಡದೆ ಬಿಟ್ಟವರು ಸರಿಯೆ ॥ಪ॥ ಇಕ್ಕಿದವರಿಗುಂಟು ಮದದಲಿ, ಸೊಕ್ಕಿದರೇನುಂಟು ॥**

**ರಕ್ಕಸಾಂತಕ ನಮ್ಮ ಲಕುಪತಿಯ ಮರೆಪೊಕ್ಕವರಾದ ಭಜಿಪರಿಗೆ ॥1॥ ಅರಸನಾದರು ಸರಿಯೇ ನಮಗೆ ತಿರುಕನಾದರು ಸರಿಯೇ । ಸರಸ ವಿರಸದಿಂ ನುಡಿದರೇನು ನರ । ಹರಿ ಪದಕಮಲವ ನಿರತ ಭಜಿಪರಿಗೆ ॥2॥**

ಇದೇ ಭಾವವನ್ನು ಸೂಸುವ ಅವರ ಮತ್ತೆ ಕೆಲವು ಕೀರ್ತನೆಗಳು,

**ಆರು ಮುನಿದರೇನು ನಮಗಿನ್ನಾರು ಒಲಿದರೇನು**[10]

**ಆವ ಕುಲವಾದರೇನು ಆವನಾದರೇನು ಆತ್ಮಭಾವವರಿತ ಮೇಲೆ**[11]

ಈ ಕೀರ್ತನೆಗಳಲ್ಲೂ ಮೇಲೆ ಹೇಳಿದ ಸೂತ್ರವನ್ನು ಪುಷ್ಟೀಕರಿಸುವ ನಿರೂಪಣೆಯನ್ನು ಕಾಣಬಹುದು.

ಕೇವಲ ಪುರಂದರದಾಸರಷ್ಟೇ ಅಲ್ಲ, ಇನ್ನೂ ಆನೇಕ ದಾಸರ, ಶರಣರ ಕೃತಿಗಳಲ್ಲಿ ಈ ಭಾವವನ್ನು ಕಾಣಬಹುದು.

ಉದಾ: ಕನಕದಾಸರ ಕೀರ್ತನೆ **'ನಾನು ನೀನು ಎನ್ನದಿರೋ ಹೀನ ಮಾನವ'**,[12]

**'ಎಲ್ಲಿ ನೋಡಿದರಲ್ಲಿ ರಾಮ ಇದ । ಬಲ್ಲ ಜಾಣರ ದೇಹದೊಳಗೆ ನೋಡಣ್ಣಾ' ॥**[13]

**'ಕುಲಕುಲವೆಂದು ಹೊಡೆದಾಡದಿರಿ'**।[14]

ಜಗನ್ನಾಥ ದಾಸರ **'ಯಾತರ ಭಯ ಶ್ರೀನಾಥನ ಪರಮ ಪ್ರೀತಿಯಪಡೆದವಗೆ'**, **'ದಾಸರಿಗುಂಟೆ ಭಯಶೋಕ ವಾಸುದೇವನ ಸದಾ ಸ್ಮರಿಸುವ'**, ಈ ಕೀರ್ತನೆಗಳಲ್ಲಿ ಮೇಲೆ ಹೇಳಿದ ಸೂತ್ರದಲ್ಲಿ ಅಡಕವಾಗಿರುವ ತತ್ತ್ವವನ್ನು ಗ್ರಹಿಸಬಹುದು.

**ಕುಲಕುಲ ಕುಲವೆನ್ನುತಿಹರೊ**
**ಕುಲವಾವುದು ಸತ್ಯ ಸುಜನರಿಗೆ**
**ಕೆಸರೊಳು ತಾವರೆ ಪುಟ್ಟಲು ಅದತಂದು**
**ಕುಸುಮನಾಭನಿಗೆ ಅರ್ಪಿಸರೇನಯ್ಯ**
**ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ**
**ವಸುಧೆಯೊಳಗೆ ಭೂಸುರರುಣ್ಣರೇನಯ್ಯ** **॥ 1 ॥**

**ಆತ್ಮನಾವಕುಲ ಜೀವನಾವಕುಲ**
**ತತ್ತ್ವೇಂದ್ರಿಯಗಳ ಕುಲ ಪೇಳಿಯ್ಯ**
**ಆತ್ಮನು ಕಾಗಿನೆಲೆಯಾದಿಕೇಶವನೊಲಿದ**
**ಭಕ್ತರಿಗೆ ಕುಲವಾವುದು ಹೇಳಿರಯ್ಯ** **॥ 3 ॥**

ಆತ್ಮನಿಗೂ ಜೀವನಿಗೂ ಪಂಚೇಂದ್ರಿಯಗಳಿಗೂ ಕುಲವಿಲ್ಲಾ ಭಗವಂತನನ್ನು ಒಲಿಸಿಕೊಂಡ

ಭಕ್ತರಿಗೆ ಯಾವ ಕುಲ ಎಂದು ಪ್ರಶ್ನಿಸುತಾರೆ. ಕನಕದಾಸರು ಅವರ ಮತ್ತೊಂದು ಪ್ರಸಿದ್ಧವಾದ ಕೀರ್ತನೆ :

ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರಾ ॥ ಪ ॥

ಕನಕದಾಸರ ಮೇಲಿನ ಕೃತಿಗಳಲ್ಲಿ ಸಮಾಜದಲ್ಲಿ ರೂಢವಾಗಿದ್ದ ಜಾತಿ ಭೇದವನ್ನು ಖಂಡಿಸುವ ಪ್ರವೃತ್ತಿಯನ್ನು ಕಾಣುತ್ತೇವೆ.

## ಟಿಪ್ಪಣಿಗಳು

1 .(ಬ.ವ., ಪುಟ 48, ವ.ಸಂ 43)
2 (ಬ.ವ. ಪುಟ 98, ವ.ಸಂ 271)
3 . (ವ.ಸಾ.ಸಂ., ಪುಟ 296, ವ.ಸಂ. 81)
4. (ಅದೇ, ಪುಟ 299, ವ.ಸಂ 93)
5. (ಅದೇ, ಪುಟ 299, ವ.ಸಂ 92)
6. (ಶ್ರೀ ಮೌನೇಶ್ವರ ವಚನಸಂಗ್ರಹ, ಸಂ : ಜೀವಣ್ಣ ಮಸಳಿ, ವಿಶ್ವದರ್ಶನ ಪ್ರಕಾಶನ, ಬಾಗಲಕೋಟ, 1987, ಪುಟ 88, ವ.ಸಂ. 309)
7. (ಅದೇ, ಪುಟ 89, ವ.ಸಂ. 310)
8. (ಅದೇ, ಪುಟ 90. ವ.ಸಂ. 319)
9 . (ಪುರಂದರ ಸಂಪುಟ–1, ಪುಟ 171)
10. (ಸಾವಿರಾರು ಕೀರ್ತನೆಗಳು, ಪುಟ 199)
11. (ಸಾವಿರಾರು ಕೀರ್ತನೆಗಳು, ಪುಟ 201)
12. (ಸಾವಿರಾರು ಕೀರ್ತನೆಗಳು, ಪುಟ 460),
13. (ಸಾವಿರಾರು ಕೀರ್ತನೆಗಳು, ಪುಟ 414),
14. (ಸಾವಿರಾರು ಕೀರ್ತನೆಗಳು ಪುಟ 434)

## ೪.೧೨. ಅವತಾರ-ಲಕ್ಷಣ ಹಾಗೂ ಮಹಿಮೆ

ಈ ಅಧ್ಯಾಯವನ್ನು ಶಾಂಡಿಲ್ಯ ಭಕ್ತಿಸೂತ್ರಗಳ ಆಧಾರದಲ್ಲಿ ರೂಪಿಸಲಾಗಿದೆ. ಶಾಂಡಿಲ್ಯರು 44ನೆಯ ಸೂತ್ರದಲ್ಲಿ ಭಕ್ತಿಯ ಲಕ್ಷಣಗಳನ್ನು ಹೇಳಿ 46ನೇಯ ಸೂತ್ರದಲ್ಲಿ ಹೇಳುತ್ತಾರೆ:

**ತದ್ವಾಕ್ಯಶೇಷಾತ್ ಪ್ರಾದುರ್ಭಾವೇಷ್ವಪಿ ಸಾ ॥46॥** (ಶಾಂ.ಭ.ಸೂ ಪುಟ 32)
(ಪರಮಾತ್ಮನ) ಪ್ರಾದುರ್ಭಾವಗಳಲ್ಲಿ ಮಾಡುವ ಭಕ್ತಿಯೂ) ಅದೇ : ಏಕೆಂದರೆ ಆವಾಕ್ಯಶೇಷವಿರುತ್ತದೆ.

ಹಿಂದೆ 44ನೆಯ ಶಾಂಡಿಲ್ಯ ಭಕ್ತಿಸೂತ್ರದಲ್ಲಿ ಕೊಟ್ಟಿರುವ ಲಕ್ಷಣಗಳೆಲ್ಲಾ (ಇವನ್ನು ನಾರದ ಭಕ್ತಿಸೂತ್ರಗಳಲ್ಲಿ ಹೇಳಿರುವ ಭಕ್ತಿಲಕ್ಷಣಗಳಿಗೂ ಅನ್ವಯ ಮಾಡಿಕೊಳ್ಳಬಹುದು) ಪರಮಾತ್ಮನ ಪ್ರಾದುರ್ಭಾವಗಳಲ್ಲಿ (ಅವತಾರಗಳಲ್ಲಿ) ಮಾಡುವ ಭಕ್ತಿಯೂ ಪರಮಾತ್ಮನನ್ನು ಕುರಿತ ಭಕ್ತಿಯೇ ಎಂದು ನಿರೂಪಿಸುವುದು ಈ ಸೂತ್ರದ ಉದ್ದೇಶ. ಇವನ್ನು ವಾಕ್ಯ ಶೇಷದಿಂದ, ಎಂದರೆ ಈ ವಿಷಯಕವಾದ ಗೀತಾವಾಕ್ಯದ ಕೊನೆಯ ಭಾಗದಿಂದ ತಿಳಿಯಬಹುದು.

ಭಗವದ್ಗೀತೆಯ ಉಲ್ಲೇಖ ಹೀಗಿದೆ(7.23) : **'ದೇವಾನ್ ದೇವಯಜೋ ಯಾಂತಿ, ಮದ್ಭಕ್ತಾ ಯಾಂತಿ ಮಾಮಪಿ,'** ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಸೇರುತ್ತಾರೆ. ನನ್ನ ಭಕ್ತರೂ ಕೂಡ ನನ್ನನ್ನು ಸೇರುತ್ತಾರೆ.' ಇದರ ಕಡೆಯ ಭಾಗದಲ್ಲಿರುವ ಮಾತುಗಳು, ಅವತಾರಗಳಲ್ಲಿ ಮಾಡುವ ಭಕ್ತಿಯೂ ಪರಮೇಶ್ವರನನ್ನೇ ಸೇರುವಂತೆ ಮಾಡುತ್ತದೆ ಎಂಬುವುದನ್ನು ಸಮರ್ಥಿಸುತ್ತದೆ.

ಮುಂದಿನ ಸೂತ್ರದಲ್ಲಿ ಹೇಳುತ್ತಾರೆ:

**ಜನ್ಮ ಕರ್ಮವಿದಶ್ಚ ಅಜನ್ಮ ಶಬ್ದಾತ್ ॥47॥** (ಶಾಂ.ಭ.ಸೂ 32) ಮತ್ತು (ಪರಮೇಶ್ವರನ) ಜನ್ಮ-ಕರ್ಮಗಳನ್ನು ಅರಿತವನಿಗೆ ಪುನರ್ಜನ್ಮವಿಲ್ಲವೆಂಬ ಶ್ರುತಿಯಿರುವುದರಿಂದಲೂ (ಹೀಗರಿಯಬೇಕು.)

ಭಗವದ್ಗೀತೆಯಲ್ಲಿ (4.9) ಶ್ರೀ ಕೃಷ್ಣನು ಹೀಗೆ ಹೇಳುತ್ತಾನೆ:

**'ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ಎಲೈ ಅರ್ಜುನ,**

ಯಾವನು ಹೀಗೆ ನನ್ನ ಅಲೌಕಿಕವಾದ ಅವತಾರವನ್ನು ಕರ್ಮವನ್ನೂ ಯಥಾರ್ಥವಾಗಿ ಅರಿಯುತ್ತಾನೆಯೋ ಅವನು ದೇಹತ್ಯಾಗವಾದ ಮೇಲೆ ಪುನರ್ಜನ್ಮವನ್ನು ಹೊಂದುವುದಿಲ್ಲ! ಅವತಾರದ ಜನ್ಮ-ಕರ್ಮಗಳ ರಹಸ್ಯವನ್ನರಿತವನಿಗೆ ಪುನರ್ಜನ್ಮವಿಲ್ಲ ಎಂಬ ಈ ಗೀತಾವಾಕ್ಯದ ಆಧಾರದಿಂದ ಅವತಾರಗಳಲ್ಲಿಡುವ ಭಕ್ತಿಯು ಪರಮೇಶ್ವರ ಭಕ್ತಿಯೇ, ಪರಾಭಕ್ತಿಯೇ ಎಂಬುದು ಸಿದ್ಧವಾಗುತ್ತದೆ. ಆದರೆ ಜನ್ಮಕರ್ಮಗಳ

ಜ್ಞಾನದಿಂದ ಮೋಕ್ಷವುಂಟಾಗುತ್ತದೆ ಎಂದರಿಯಬಹುದು. ಈ ಜ್ಞಾನವು ಮನೋಮಾಲಿನ್ಯವನ್ನು ಹೋಗಲಾಡಿಸಿ ವರಭಕ್ತಿಯನ್ನುಂಟು ಮಾಡುವುದರ ಮೂಲಕ ಮೋಕ್ಷವನ್ನು ಕೊಡುತ್ತದೆ.

ಮುಂದಿನ ಸೂತ್ರದಲ್ಲಿ ಶಾಂಡಿಲ್ಯರು ಹೇಳುತ್ತಾರ:

**ತಚ್ಚ ದಿವ್ಯಂ ಸ್ವಶಕ್ತಿ ಮಾತ್ರೋದ್ಭವಾತ್ ॥48॥** (ಶಾಂ.ಭ.ಸೂ., ಪುಟ 33) ಮತ್ತು ಆ ಜನ್ಮವು ದಿವ್ಯವಾದುದು; ಏಕೆಂದರೆ ತನ್ನ ಶಕ್ತಿಯಿಂದ ಮಾತ್ರ ಉಂಟಾಗಿರುತ್ತದೆ.

ಅವತಾರ ರೂಪದಲ್ಲಾಗುವ ಪರಮಾತ್ಮನ ಜನ್ಮವನ್ನು 'ದಿವ್ಯ'ವೆಂದು ಕರೆದಿರುತ್ತದೆ. ಧರ್ಮಾಧರ್ಮ ರೂಪದ ಅದೃಷ್ಟವು ಅಥವಾ ಪ್ರಾರಬ್ಧ ಕರ್ಮವು ಪರಮಾತ್ಮನಿಗಿಲ್ಲದ್ದರಿಂದ ಅವನ ಜನ್ಮವು ಜೀವಾತ್ಮರ ಜನ್ಮದಂತೆ ಸಾಮಾನ್ಯವಾದುದಲ್ಲ ದಿವ್ಯವಾದುದು. ದೇವಲೋಕದ ಶರೀರವೆಂದು ಅರ್ಥವಲ್ಲ. ಏಕೆಂದರೆ ಅದು ಮನುಷ್ಯ ಲೋಕದಲ್ಲಾಗಿರುತ್ತದೆ. ಆದ್ದರಿಂದ ಅವತಾರ–ಶರೀರಕ್ಕೆ ಪಂಚಭೂತಗಳು ಉಪಾದಾನ ಕಾರಣವಲ್ಲವೆಂತಲೂ ಅರಿಯಬೇಕು. ಇದನ್ನೇ ಮಹಾಭಾರತ, ಶಾಂತಿಪರ್ವದಲ್ಲಿ (339.45.46) **'ಮಾಯ್ಯೆಷಾ ಹಿ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ.'** 'ಯಾವ ನನ್ನ ಶರೀರವನ್ನು ನೋಡುತ್ತಿರುವೆಯೋ, ಎಲೈ ನಾರದನೆ, ಅದು ನನ್ನಿಂದ ಸೃಷ್ಟಿಸಲ್ಪಟ್ಟಿರುವ ಮಾಯೆ.' ಭಗವದ್ಗೀತೆಯಲ್ಲಿಯೂ ಶ್ರೀ ಕೃಷ್ಣನು ಹೇಳುತ್ತಾನೆ.:

**'ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ ॥'**

'ನೀನು ಜನ್ಮರಹಿತನೂ, ಅವ್ಯಯ ಸ್ವಭಾವವುಳ್ಳವನೂ ಪ್ರಾಣಿಗಳಿಗೆ ನಿಯಾಮಕನೂ ಆಗಿದ್ದರೂ ನನ್ನ ಪ್ರಕೃತಿಯನ್ನು ಆಶ್ರಯಿಸಿ ನನ್ನ ಮಾಯೆಯ ಮೂಲಕ ಅವತಾರ ಮಾಡುತ್ತೇನೆ.'

ಚಿದಾನಂದ ಅವಧೂತರು ಶ್ರೀ ದೇವೀ ಮಹಾತ್ಮೆಯಲ್ಲಿ ಇದನ್ನು ಸ್ಪಷ್ಟಪಡಿಸುತ್ತಾರೆ:[2]

**ಮಗನೆ ಕೇಳ್ಬಸವೇಶ ಅಗ್ನಿಯೊಳೊಗೆದ ಉರಿಯದು ಅಗ್ನಿಯಂಶವು ।**
**ಮಗುಳೆ ಅಗ್ನಿಯು ಅಹುದು ಹೊಗೆಯದು ಅಗ್ನಿಯಂಶಲ್ಲಾ ।**
**ಸೊಗಸಿಲಿಹ ಚಿಚ್ಛಕ್ಕರುತಿ ತಾನದು । ಸಗುಣ ಬ್ರಹ್ಮವು ಮಾಯೆಯೆಂಬುದು ।**
**ನಿಗಮದಲಿ ತಿಳಿದೃಶ್ಯ ಬ್ರಹ್ಮಕುಪಾಧಿಯಹುದೆಂದಾ ॥35॥**

ಮಗನೇ ಬಸವೇಶ ಕೇಳು, ಅಗ್ನಿಯಲ್ಲಿ ಹುಟ್ಟಿದ ಉರಿಯು ಅಗ್ನಿಯ ಅಂಶವೇ ಆಗಿರುವುದರಿಂದ ಪುನಃ ಅಗ್ನಿಯೇ ಆಗಿರುವುದು. ಅಂತೆಯೇ ಬ್ರಹ್ಮದಲ್ಲಿ ಪ್ರಕಟವಾದ ಚಿಚ್ಛಕ್ತಿಯು (ಇಲ್ಲಿ ನಾವು ಅವತಾರಗಳೆಂದು ಪರಿಗಣಿಸಬಹುದು) ಕಡೆಗೆ ಬ್ರಹ್ಮವೇ ಆಗುವದು. ಪ್ರಕಾಶಿಸುತ್ತಿರುವ ಚಿಚ್ಛಕ್ತಿಯು ಸಗುಣ ಬ್ರಹ್ಮವು ಮಾಯೆಯೆಂಬುದು ವೇದದಲ್ಲಿ ದೃಶ್ಯ ಬ್ರಹ್ಮನ ಉಪಾಧಿಯು ಎಂದು ಹೇಳಿದ್ದನ್ನು ತಿಳಿಯುವನಾಗು'.

**ವಿದ್ಯೆಯೆಂಬುವುಪಾಧಿಯದು ತಾ । ನಿದ್ದಿರಲುಯೆದುರಾಗಿ ಬ್ರಹ್ಮಕೆ ।**

**ಹೊದ್ದಿಹೊಳೆ ಚಿಚ್ಛಕ್ತಿ ಈಶ್ವರರುದಯ ಮುಖವಾಯ್ತೂ ॥**

**ಇದ್ದಿರಲ್ಕೆಯ ವಿದ್ಯುಪಾದಿಲಿ ಶುದ್ಧ ಚಿಚ್ಛಕ್ತ್ಯದುವೆ ಹೊಳೆಯಲು ।**

**ಬದ್ಧ ಜೀವಿಗಳಾದರೈ ಗಾಢಾಂಧಕಾರದಲಿ ॥36॥**

ವಿದ್ಯಾ ಉಪಾಧಿಯಿಂದ ಕೂಡಿದ ಚಿಚ್ಛಕ್ತಿಯು ಈಶ್ವರನೆನಿಸುವುದು, ಸ್ವಚ್ಛ ಕನ್ನಡಿಯಂತೆ ವಿದ್ಯೆಯು ಪ್ರಕಾಶ ಸ್ವರೂಪವಾಗಿರುವುದರಿಂದ ಈಶ್ವರನಿಗೆ ಸ್ವರೂಪದ ಮರವೆಯಿಲ್ಲ ಮತ್ತು ಸರ್ವಜ್ಞತ್ವಾದಿ ಉತ್ತಮೋತ್ತಮ ಗುಣವುಳ್ಳವನಾಗಿ ಪೂಜ್ಯನೆನಿಸುವನು ಹಾಗೂ ಜಗತ್ತಿಗೆ ಒಡೆಯನಾಗಿರುವನು. ಅವಿದ್ಯೆಯಿಂದ ಕೂಡಿದ ಚಿಚ್ಛಕ್ತಿಯು ಜೀವನೆನಿಸುವುದು. ಅವಿದ್ಯೆಯು ಮಲಿನ ಕನ್ನಡಿಯಂತಿದ್ದುದರಿಂದ ಅದನ್ನೊಡಗೂಡಿದ ಜೀವರು ತಮ್ಮ ಸ್ವರೂಪ ತಿಳಿಯದೆ ಕಿಂಚಿಜ್ಞತ್ವಾದಿ ಅಲ್ಪಗುಣಗಳುಳ್ಳವರಾಗಿ ಸಂಚಾರಿ ಜೀವರೆನಿಸುವರು. (ಸಟೀಕಾ ಶ್ರೀ ದೇವಿ ಮಹಾತ್ಮೆ, ಪುಟ 92)

ಪರಬ್ರಹ್ಮನು ಮಾಯೆಯೆಂಬ ಉಪಾಧಿಯನ್ನು ಧರಿಸಿ ಏನೂ ಆಗಬಲ್ಲ.

ಪುರಂದರದಾಸರು ತಮ್ಮ ಒಂದು ಉಗಾಭೋಗದಲ್ಲಿ ಹೀಗೆ ಹೇಳುತ್ತಾರೆ:

**ಅಣುವಾಗಬಲ್ಲ ಮಹತ್ತಾಗಬಲ್ಲ । ಅಣುಮಹತ್ತೆರಡೊಂದಾಗಬಲ್ಲ ॥**

**ರೂಪನಾಗಬಲ್ಲ ಅರೂಪನಾಗಬಲ್ಲ । ರೂಪ ಅರೂಪ ಎರಡೊಂದಾಗಬಲ್ಲ ॥**

**ಸಗುಣನಾಗಬಲ್ಲ ನಿರ್ಗುಣನಾಗಬಲ್ಲ । ಸುಗುಣ ನಿರ್ಗುಣ ಎರಡೊಂದಾಗಬಲ್ಲ ॥**

**ವ್ಯಕ್ತನಾಗಬಲ್ಲ ಅವ್ಯಕ್ತನಾಗಬಲ್ಲ । ವ್ಯಕ್ತ ಅವ್ಯಕ್ತ ಎರಡೊಂದಾಗಬಲ್ಲ ॥**

**ಅಘಟಿತಾಘಟಿತಾಚಿಂತ್ಯಾದುಭುತ । ಸ್ವಗತಸ್ವರೂಪ ನಮ್ಮ ಪುರಂದರವಿಠಲ ॥**[3]

ಭಗವಂತನ ರೂಪಗಳು ಬದಲಾಗಬಹುದು, ನಾಮಗಳು ಬದಲಾಗಬಹುದು, ಅವತಾರಗಳು ಬದಲಾಗಬಹುದು ಆದರೆ ನಿಜಭಕ್ತನ ಭಕ್ತಿಯಲ್ಲಿ ಯಾವುದೇ ಬದಲಾವಣೆಯಾಗಲು ಸಾಧ್ಯವಿಲ್ಲ. ಎಲ್ಲಾ ರೂಪದಲ್ಲೂ, ಎಲ್ಲಾ ನಾಮದಲ್ಲೂ ತನ್ನ ಆಂತರ್ಯದ ಪ್ರಭುವನ್ನೇ ಕಾಣುತ್ತಾನೆ ಭಕ್ತ.

ಭಗವಂತ ನಾನಾ ಅವತಾರವೆತ್ತಲು ಕಾರಣವೇನು? ಶಾಂಡಿಲ್ಯರು ಮುಂದಿನ ಸೂತ್ರದಲ್ಲಿ ಹೇಳುತ್ತಾರೆ:

**ಮುಖ್ಯಂ ತಸ್ಯ ಹಿ ಕಾರುಣ್ಯಮ್ ॥49॥** ಅವನ ಕರುಣೆಯೇ (ಅವನ ಜನ್ಮವಿತ್ತಲು) ಮುಖ್ಯವಾದ (ಕಾರಣ). (ಶಾಂ.ಭ.ಸೂ. ಪುಟ 34) ಜೀವಿಗಳ ದುಃಖವನ್ನು ಪರಿಹರಿಸಬೇಕೆಂಬ ಏಕಮಾತ್ರ ಕಾರಣದಿಂದ ಜನ್ಮವೆತ್ತುವ (ಅವತರಿಸುವ) ಭಗವಂತನ ಕರುಣೆ ಅನನ್ಯವಾದುದು, ಅತ್ಯುತ್ಕೃಷ್ಟವಾದುದು.

ತನಗೆ ಯಾವ ರೀತಿಯ ಕರ್ತವ್ಯಗಳು ಇಲ್ಲದೇ ಹೋದರೂ (ಭಗವದ್ಗೀತಾ 3.22), ತಾನು ಕರ್ತವ್ಯದ ದಾರಿಯನ್ನು ತೋರದಿದ್ದರೆ ಜನರು ದಾರಿ ತಪ್ಪ ಬಹುದಾದ್ದರಿಂದ (ಭಗವದ್ಗೀತೆ 3.23) ಇದರಿಂದ ಲೋಕಕ್ಕೆ ಹಾನಿಯಾಗುವುದರಿಂದ (ಭಗವದ್ಗೀತೆ 3.24) ಪರಮಾತ್ಮನು ಕೇವಲ ಕರುಣೆಯಿಂದ ಜನ್ಮವೆತ್ತಿ ಕರ್ಮಗಳನ್ನು ಆಚರಿಸುತ್ತಿದ್ದಾನೆ.

ಭಗವಂತನ ದಶಾವತಾರಗಳನ್ನು ಹೆಳವನಕಟ್ಟೆ ಗಿರಿಯಮ್ಮ 'ಪಾಹಿ ಪರಮಾನಂದ ಪಾಹಿಮುನಿಜನವಂದ್ಯ' ಎಂಬ ಈ ಕೆಳಗಿನ ಕೀರ್ತನೆಯಲ್ಲಿ ನಿರೂಪಿಸುತ್ತಾಳೆ.[4]

**ಮತ್ಸ್ಯ ರೂಪಿಲಿಬಂದು ಬಂದ ದೈತ್ಯನ ಕೊಂದೆ**
**ಬೆಚ್ಚರದೆ ಬಹುಗಿರಿಯ ಬೆನ್ನಲ್ಲಿ ತಾಳ್ದೆ ।**
**ಬಚ್ಚಿಟ್ಟ ಧರಣಿಯನ್ನು ಬಲುಮೆಯಿಂದಲಿ ತಂದೆ**
**ಅರ್ಚಿಸಿದ ಪ್ರಹ್ಲಾದಗೆ ಒಲಿದೆ ನರಸಿಂಹ ॥1॥**

........................

**ತುರುಹಿಂಡ ಕಾಯ್ದು ತಪವಳಿದು ಪತಿವ್ರತೆಯರ**
**ಭರದಿ ವಾಜಿಯನೇರಿ ಚರಿಸುತ್ತ ಬಂದೆ**
**ಕರುಣಾಳು ಶ್ರೀ ಹೆಳವನಕಟ್ಟೆ ರಂಗಯ್ಯ ಪಿಳ್ಳಂ**
**ಗಿರಿವಾಸ ಶ್ರೀ ವೆಂಕಟೇಶ ॥3॥**

ಕಾರುಣ್ಯನಿಧಿಯಾದ ಭಗವಂತ, ಭಕ್ತರ ಉದ್ಧಾರವನ್ನು ಬೇರೆ ಬೇರೆ ಅವತಾರಗಳಲ್ಲಿ ಹೇಗೆ ಮಾಡಿದ ಎನ್ನುವುದನ್ನು ಪುರಂದರದಾಸರು ಹೀಗೆ ನಿರೂಪಿಸುತ್ತಾರೆ.[5]

**ಯಾರಿದ್ದರೇನಯ್ಯ ನೀನಲ್ಲದೆನಗಿಲ್ಲ । ಕಾರುಣ್ಯನಿಧಿ ಹರಿಯೆ ಕೈಯ ಬಿಡಬೇಡ ॥ಪ॥**
**ದುರುಳ ಕೌರವನನುಜ ದ್ರುಪದಜೆಯ ಸೀರೆಯನು । ಕರದಿಂದ ಸೆಳೆಯುತಿರೆ ಪತಿಗಳೆಲ್ಲ ॥**
**ಗರಹೊಯ್ದಂತಿರ್ದರಲ್ಲದೇ ನರಹರಿಯೆ । ಕರುಣದಿಂ ನೀನಲ್ಲದಿನ್ನಾರು ಕಾಯ್ದವರು ॥1॥**

ಕನಕದಾಸರ ಒಂದು ಕೀರ್ತನೆ :

**ಮುತ್ತು ಬಂದಿದೆ ಕೇರಿಗೆ. ಜನರು ಕೇಳಿ ॥**
**ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ ॥ಅ॥**
**ಥಳಥಳಿಸುವ ಮುತ್ತು ಕಮಲ ನೇತ್ರದ ಮುತ್ತು ।**
**ಕಲುಷ ಪರ್ವತಕ್ಕಿದು ಕುಲಿಶವಾಗಿಹ ಮುತ್ತು ।**
**ಹಲಧರಾನುಜನೆಂಬ ಪವಿತ್ರ ನಾಮದ ಮುತ್ತು ।**
**ಒಲಿದು ಭಜಿಪರ ಭವವ ತರಿದು ಕಾಯುವ ಮುತ್ತು ॥**

ನಿರ್ಗುಣ ನಿರಾಕಾರ ನಿತ್ಯ ನಿರಾಮಯವಾದ ಪರಬ್ರಹ್ಮನು ಸಗುಣಕಾರದಿಂದ ಅವತರಿಸಿ ಬಂದಾಗ ಆಗುವ ಸಂಭ್ರಮವನ್ನು ತೋರುವ ಲೀಲೆಯನ್ನು ಈ ಕೀರ್ತನೆಯಲ್ಲಿ ಸುಂದರವಾಗಿ ವರ್ಣಿಸಿದ್ದಾರೆ ಭಕ್ತ ಕನಕದಾಸರು.[6]

ಎಲ್ಲವನ್ನೂ ಬೆಳಗುವಂತಹ ಒಂದು ಶಕ್ತಿ, ಚೇತನ ಇದೆ. ಅದೇ ಭಗವಂತ. ಆದ್ದರಿಂದ ಭಗವಂತನು ಥಳಥಳಿಸುವ ಮುತ್ತು. ಭಗವಂತನನ್ನು ಶಾಸ್ತ್ರಗಳಲ್ಲಿ ಒಂದು ಜೇಡರ ಹುಳಕ್ಕೆ ಹೋಲಿಸಲಾಗಿದೆ.[7] ಜೇಡರ ಹುಳು ತಾನು ತನ್ನ ದೇಹದಿಂದ ಸೂಸುವಂತಹ ಒಂದು ದ್ರವದಿಂದ ಜೇಡರ ಬಲೆಯನ್ನು ಹೆಣೆದು ಆ ಜೇಡರ ಬಲೆಯಲ್ಲೇ ಅಡಕವಾಗಿರುತ್ತದೆ. ಸಮುದ್ರದಲ್ಲಿರುವ ಕಪ್ಪೆ ಚಿಪ್ಪಿನ ಹುಳ ತನ್ನ ಕಣ್ಣಿಂದ ಸೂಸುವ

ದ್ರವದಿಂದಲೇ ಮುತ್ತಿನ ಆಕೃತಿಯನ್ನು ತಳೆದು ಅದರೊಳಗೆ ಅಡಕವಾಗಿರುತ್ತದೆ. ಜೇಡರ ಬಲೆಯ ಸೃಷ್ಟಿಗೆ ಜೇಡರ ಹುಳವೇ ನಿಮಿತ್ತಕಾರಣವೂ ಆಗಿದೆ. ಉಪಾದಾನ ಕಾರಣವೂ ಆಗಿದೆ. ಸಮುದ್ರದ ಮುತ್ತಿನ ಸೃಷ್ಟಿಗೆ ಕಪ್ಪೆ ಚಿಪ್ಪಿನ ಹುಳವೇ ನಿಮಿತ್ತ ಕಾರಣವೂ ಆಗಿದೆ. ಉಪಾದಾನ ಕಾರಣವೂ ಆಗಿದೆ. ಹಾಗೆಯೇ ಈ ಜಗತ್ತಿನ ಸೃಷ್ಟಿಗೆ ಭಗವಂತನೇ ನಿಮಿತ್ತ ಕಾರಣವೂ ಆಗಿದ್ದಾನೆ, ಉಪಾದಾನ ಕಾರಣವೂ ಆಗಿದ್ದಾನೆ. ಜಗತ್ತನ್ನು ಸೃಷ್ಟಿಸಿ. ಜಗತ್ತಿನ ಎಲ್ಲಾ ಚರಾಚರ ಜೀವಿಗಳಲ್ಲಿ ವ್ಯಾಪಕನಾಗಿದ್ದು, ಜಗತ್ತಿನಲ್ಲಿ ಧರ್ಮರಕ್ಷಣೆಗೆ ತಾನೇ ಚರಾಚರ ಅವತಾರವೆತ್ತಿ ಬರುತ್ತಾನೆ. ಆದ್ದರಿಂದ ಇಲ್ಲಿ ಕನಕದಾಸರು ಭಗವಂತನನ್ನು ಮುತ್ತಿಗೆ ಹೋಲಿಸಿದ್ದಾರೆ.

ಕನಕದಾಸರು ಮತ್ತೊಂದು ಕೀರ್ತನೆಯಲ್ಲಿ ಭಗವಂತನನ್ನು ಗಂಡಭೇರುಂಡಪಕ್ಷಿಗೆ ಕೇರಿಗೆ ಹೋಲಿಸಿದ್ದಾರೆ. ಹೋಲಿಸಿ ವರ್ಣನೆ ಮಾಡುತ್ತಾರೆ.[9]

**ಪಕ್ಷಿ ಬಂದಿದೆ ಗಂಡಭೇರುಂಡ– ತನ್ನ ಕುಕ್ಷಿಯೊಳು ಈರೇಳು ಜಗವ ನಿಂಬಿಟ್ಟಂಥ ॥**
**ಜಾತಿ ಸೂತಕವೆಂಬ ತ್ರಿಮಲಕ್ಕೆ ಶೂಲದಂತಿಹ ಪರವಸ್ತು ॥**

ತನ್ನ ಕುಕ್ಷಿಯೊಳಗೆ ಅಂದರೆ ಒಡಲೊಳಗೆ ಏಳು ಲೋಕಗಳನ್ನೇ ಧರಿಸಿರುವಂತಹ ಭಗವಂತ ಜಗತ್ತಿಗೆ ಬಂದಿದ್ದಾನೆ. ಜಗದ ಜನರನ್ನು ಬಾಧಿಸುವಂತಹ ಜಾತಿ, ಸೂತಕ ಎಂಬ ದೋಷಗಳನ್ನು ಹರಣ ಮಾಡುವ ನಿರ್ದೋಷ ಭಗವಂತನನ್ನು ಗಂಡಭೇರುಂಡ ಪಕ್ಷಿಗೆ ಹೋಲಿಸುತ್ತಾರೆ ಕನಕದಾಸರು. ಏಕಮೇವಾದ್ವಿತೀಯವಾದ ಚೈತನ್ಯವು ಈಶ್ವರನಾಗಿ ಹಾಗೂ ಜೀವನಾಗಿ ಜಗತಿನಲ್ಲಿ ತೋರುವ ಲೀಲೆಯ ತಾತ್ವಿಕ ಹಿನ್ನಲೆಯನ್ನು ಚಿದಾನಂದ ಅವಧೂತರು ಕನ್ನಡ ಶ್ರೀ ದೇವೀ ಮಹಾತ್ಮೆಯಲ್ಲಿ ಹೀಗೆ ನಿರೂಪಿಸಿದ್ದಾರೆ:[10]

ವಿದ್ಯಾ ಉಪಾಧಿಯಿಂದ ಕೂಡಿದ ಚಿಚ್ಛಕ್ತಿಯು ಈಶ್ವರವೆನಿಸುವುದು. (ಚಿಚ್ಛಕ್ತಿ – ಲೀಲೆಯನ್ನು ತೋರುವ ಪರಬ್ರಹ್ಮವಸ್ತುವಿನಿಂದ ಹೊರಟ ಮಹಾಜ್ಞಾನಶಕ್ತಿ, ಚಿಚ್ಛಕ್ತಿ = ಚಿತ್+ಶಕ್ತಿ, ಚಿತ್ = ಜ್ಞಾನ. ಶಕ್ತಿ = ಶುದ್ಧಅರಿವಿನ ವ್ಯಕ್ತ ಸಕ್ರಿಯ, ಸಾಕಾರ, ಭಾವರಹಿತ ಸ್ವರೂಪವು). ಸ್ವಚ್ಛ ಕನ್ನಡಿಯಂತೆ ವಿದ್ಯೆಯು ಪ್ರಕಾಶ ಸ್ವರೂಪವಾದುದರಿಂದ ಈಶ್ವರನಿಗೆ ಸ್ವರೂಪದ ಮರೆವುಯಿಲ್ಲ. ಮತ್ತು ಸರ್ವಜ್ಞಾತ್ವಾದಿ ಶ್ರೇಷ್ಠ ಗುಣಗಳುಳ್ಳವನಾಗಿ ಪೂಜ್ಯನೆನಿಸುವನು ಹಾಗೂ ಜಗತ್ತಿಗೆ ಒಡೆಯನಾಗಿರುವನು. ಅವಿದ್ಯಾ ಉಪಾಧಿಯಿಂದ ಕೂಡಿದ ಚಿಚ್ಛಕ್ತಿಯ ಜೀವನೆನಿಸುವನು. ಅವಿದ್ಯೆಯು ಮಲಿನ ಕನ್ನಡಿಯಂತಿರುವುದರಿಂದ ಅದರಿಂದೊಡಗೂಡಿದ ಜೀವರು ತಮ್ಮ ಸ್ವರೂಪದ ವಿಸ್ಮ ತಿಯುಳ್ಳವರಾಗಿ, ಕಿಂಚಿಜ್ಞತ್ವಾದಿ ಅಲ್ಪಗುಣಗಳುಳ್ಳವರಾಗಿ ಅಜ್ಞಾನದ ಅಂಧಕಾರದಲ್ಲಿ ಪ್ರಕೃತಿಯಿಂದ ಬದ್ಧರಾಗಿರುವರು. ನೀರೇ ತೆರೆಗಳಾವಂತೆ, ನೂಲೇ ಬkಟ್ಟೆಗಳಾದಂತೆ ಚಿಚ್ಛಕ್ತಿಯೇ ಅವಿದ್ಯೆಯ ಉಪಾಧಿಯಿಂದಾಗಿ ಜಗತ್ತು ಮತ್ತು ಜೀವರಾಗಿ ತೋರುತ್ತದೆ. ಶ್ರೀರಾಮಕೃಷರು ಹೇಳುವಂತೆ ﾞಜೀವ ಸಚಿದಾನಂದನೆ, ಅಲ್ಲದೆ ಇನ್ನು ಬೇರೆ ಏನೂ ಅಲ್ಲ. ಆದರೆ ಈ ಮಾಯೆ, ಎಂದರೆ ಅಹಂಕಾರ ಅನೇಕ ಉಪಾಧಿಗಳನ್ನು ಸೃಷ್ಟಿಸಿರುವುದರಿಂದ ಆತ ತನ್ನ ನಿಜಸ್ವರೂಪವನ್ನು ಮರೆತು ≥ı ͅದ್ದಾನೆ.Σ[13]

ವಿದ್ಯೆಯೆಂಬ ಉಪಾಧಿಯದುತಾ । ನಿದ್ದಿರಲು ಯೆದುರಾಗಿ ಬ್ರಹ್ಮಕೆ ।
ಹೊದ್ದಿ ಹೊಳೆ ಚಿಚ್ಛಕ್ತಿ ಈಶ್ವರರುದಯ ಮುಖವಾಯ್ತೂ ॥
ಇದ್ದಿರಲ್ಕೆಯವಿದ್ಯುಪಾಧಿಲಿ ಶುದ್ಧ ಚಿಚ್ಛಕ್ತ್ಯದುವೆ ಹೊಳೆಯಲು ।
ಬದ್ಧ ಜೀವರು ಆದರೈ ಗಾಢಾಂಧಕಾರದಲೀ ॥
ಯಾವುದರ ಸಂಯೋಗದಿಂದ ವಸ್ತುವಿನ ಸ್ವರೂಪವು ವಿಶೇಷ ಮತ್ತು ವಿಪರೀತವಾಗಿ ತೋರುವುದೋ ಅದು ಆ ವಸ್ತುವಿಗೆ ಉಪಾಧಿ.

ಸಂತ ತುಕಾರಾಮರು ಭಗವಂತ ಯಾಕೆ ಅವತಾರ ಲೀಲೆಯನ್ನು ತೋರುತ್ತಾನೆ ಎನ್ನುವುದನ್ನು ಸುಂದರವಾಗಿ ನಿರೂಪಣೆ ಮಾಡುತ್ತಾರೆ.[12]
ಆಮ್ಹಾ ಸಾಠೀ ಅವತಾರ ।
ಮತ್ಸ್ಯ ಕೂರ್ಮಾದಿ ಸೂಕರ ।
ಮೋಹೇ ಧಾವ ಘಾಲೀ ಪಾನ್ಹಾ ।
ನಾವ ಘೇತಾ ಪಂಢರೀ ರಾಣಾ ।
ತುಕಾಮ್ಹಣೇ ಕೃಪಾನಿದೀ । ಆಮ್ಹಾ ಉತರಿ ।
ನಾವೇ ಮಧೀ ॥

ದೇವರ ಮತ್ಸ್ಯ, ಕೂರ್ಮ, ವರಾಹ ಇತ್ಯಾದಿ ಅವತಾರಗಳು ನಮಗಾಗಿ ಅಂದರೆ ಭಕ್ತರಿಗಾಗಿ ಇರುವವು. ಒಂದು ದೃಷ್ಟಿಯಿಂದ ನೋಡಿದರೆ ಅವನು ಎಲ್ಲಿಯೂ ಕಾಣಿಸಿಕೊಳ್ಳುವುದಿಲ್ಲ. ಆದರೆ ಭಕ್ತರಿಗೆ ಸಂಕಟಗಳು ಒದಗಿ ಬಂದಾಕ್ಷಣ ಒಮ್ಮಿಂದೊಮ್ಮೆಲೇ ಜಿಗಿದು ಓಡಿ ಬರುವನು. ಕೃಪಾನಿಧಿಯಾದ ಶ್ರೀ ಪಂಢರೀರಾಯನು ನಾಮವೆಂಬ ನೌಕೆಯಲ್ಲಿ ಕೂಡಿಸಿ ಸಂಸಾರವೆಂಬ ಸಾಗರವನ್ನು ದಾಟಿಸುವನು ಎಂದು ತುಕಾರಾಮ ಮಹಾರಾಜರು ಹೇಳುತ್ತಾರೆ.

ಶ್ರೀ ರಾಮಕೃಷ್ಣರು ಹೇಳುತ್ತಾರೆ. "ಯಾರು ಪರರನ್ನು ಮುಕ್ತರನ್ನಾಗಿ ಮಾಡುತ್ತಾನೋ ಆತನೇ ಅವತಾರ ಪುರುಷ. ಅದಕ್ಕಾಗಿಯೇ ಶಾಸ್ತ್ರಗಳು ಹೇಳುತ್ತಿರುವುದು ಹತ್ತು,
ಇಪ್ಪತ್ತನಾಲ್ಕು, ಅಸಂಖ್ಯ ಅವತಾರಗಳೂ ಇವೆ. ಎಲ್ಲಿ ಭಗವಂತ ವಿಶೇಷವಾಗಿ ವ್ಯಕ್ತವಾಗಿದ್ದಾನೋ ಅಲ್ಲಿ ಆತ ಅವತರಿಸಿದ್ದಾನೆ ಎಂದು ಅರಿತುಕೊಳ್ಳಬೇಕು" "ಶಕ್ತಿಯ ಲೀಲೆಯಿಂದಲೇ ಅವತಾರದ ಉತ್ಪನ್ನ, ಅವತಾರ ಪುರುಷ ಪ್ರೇಮ ಭಕ್ತಿಯನ್ನು ಕಲಿಸಿಕೊಡಲುಬರುತ್ತಾನೆ. ಆತನನ್ನು ಹಸುವಿನ ಕೆಚ್ಚಲಿಗೆ ಹೋಲಿಸಬಹುದು. ಹಾಲು ಬೇಕಾಗಿದ್ದರೆ, ಅದು ಕೆಚ್ಚಲಿನ ಮೂಲಕವೇ ಬರಬೇಕು. ಭಗವಂತ ಮನುಷ್ಯನಾಗಿ ಅವತೀರ್ಣನಾಗುತ್ತಾನೆ. ಸರೋವರದ ಗುಂಡಿಗಳಲ್ಲಿ ಅನೇಕ ಮೀನುಗಳು ಬಂದು ಸೇರಿಕೊಳ್ಳುವ ಹಾಗೆ, ಅವತಾರ ಪುರುಷನಲ್ಲಿ ಭಗವಂತನ ಶಕ್ತಿ ವಿಶೇಷವಾಗಿ ತುಂಬಿಕೊಂಡಿರುತ್ತವೆ"[14] ಶಕ್ತಿಯ ಲೀಲೆಯಿಂದಲೇ ಅವತಾರದ ಉತ್ಪನ್ನ ಅವತಾರ ಪುರುಷ ಪ್ರೇಮಾಭಕ್ತಿಯನ್ನು ಕಲಿಸಿಕೊಡಲು ಬರುತ್ತಾನೆ. ಅದಕ್ಕಾಗಿ ಪುರಂದರ ದಾಸರು ಹಾಡಿದರು:[15]
ಈ ಪರಿಯ ಸೊಬಗ್ಯಾವ ದೇವರಲಿ ನಾ ಕಾಣೆ ।
ಗೋಪಿ ಜನಪ್ರಿಯ ಗೋಪಾಲಗಲ್ಲದೆ ॥
ದೊರೆಯನದಲಿ ನೋಡೆ ಧರಣಿದೇವಿಗೆ ರಮಣ ।
ಸಿರಿಯತನದಲಿ ನೋಡೆ ಶ್ರೀಕಾಂತನು ।
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯಾ ।

**ಗುರುವುತನದಲಿ ನೋಡೆ ಜಗದಾದಿ ಗುರುವು ॥**

ಭಗವಂತ ಯಾವುದೇ ರೂಪವನ್ನು ಧರಿಸಿದರೂ ಭಕ್ತನು ಅವನನ್ನು ಗುರುತಿಸುತ್ತಾನೆ. ಶ್ರೀ ರಾಮಕೃಷ್ಣರು ಹೇಳುವಂತೆ "ಅವತಾರ ಪುರುಷನು ಅವತರಿಸಿಬಂದಾಗ ಅದು ಸಾಮಾನ್ಯ ಜನರಿಗೆ ಗೊತ್ತಾಗುವುದಿಲ್ಲ. ರಹಸ್ಯವಾಗಿ ಬರುತ್ತಾನೆ. ಎಲ್ಲೊ ಒಂದು ಐದಾರು ಮಂದಿ ಅಂತರಂಗ ಭಕ್ತರುಮಾತ್ರ ಆತನನ್ನು ಗುರುತಿಸಬಲ್ಲರು. ರಾಮ ಪುರ್ಣಬ್ರಹ್ಮ, ಪೂರ್ಣ ಅಮಾರ ಎಂಬುದು ಕೇವಲ ಹನ್ನೆರಡು ಜನ ಋಷಿಗಳಿಗೆ ಮಾತ್ರ ಗೊತ್ತಿತ್ತು...... ಭಾರದ್ವಾಚಾದಿ ಋಷಿಗಳು ರಾಮನನ್ನು ಸ್ತೋತ್ರ ಮಾಡಿದರು: 'ಹೇರಾಮ, ನೀನೇ ಅಖಂಡ ಸಚ್ಚಿದಾನಂದ. ನೀನು ನಮ್ಮ ಹತ್ತಿರಕ್ಕೆ ಮನುಷ್ಯ ರೂಪ ಧರಿಸಿ ಬಂದಿದ್ದೀಯೆ. ನೀನೇ ನಿನ್ನನ್ನು ನಿನ್ನ ಮಾಯೆಯಿಂದ ಮುಚ್ಚಿಕೊಂಡಿರುವುದರಿಂದ ಮನುಷ್ಯನಾಗಿ ಕಾಣ ಬರುತ್ತಿದ್ದೀಯೆ'. ಈ ಋಷಿಗಳು ರಾಮನ ಪರಮಭಕ್ತರು. ಇವರದು ಪಕ್ವಭಕ್ತಿ" (ಶ್ರೀ ರಾಮಕೃಷ್ಣ ವಚನವೇದ, ಪೂರ್ವಾರ್ಧ – 'ಮ' – ಮೂಲ ವಂಗಲೇಖಕರು, ಶ್ರೀ ರಾಮಕೃಷ್ಣಾಶ್ರಮ, ಮೈಸೂರು, 1996, ಪುಟ 141.)

ಪುರಂದರದಾಸರು ಬಹಳ ಸಲುಗೆಯಿಂದಲೇ ಭಗವಂತನಿಗೆ ಸವಾಲು ಹಾಕುತ್ತಾರೆ. ನೀನು ಯಾವುದೇ ರೂಪವನ್ನಾದರೂ ಧರಿಸು, ನಾನು ಮಾತ್ರ ನಿನ್ನ ಪಾದವನ್ನು ಬಿಡೆ ಎಂಬುದಾಗಿ:[16]

**ಬಿಡೆ ನಿನ್ನ ಪಾದವ ಬಿಂಕವಿದೇಕೊ ।**
**ಕೊಡು ಮನದಿಷ್ಟವ ಕೋಪವಿದೇಕೊ ॥**
**ನೀರ ಹೊಕ್ಕಿರುಬಿಡೆ ಬೆನ್ನಿನೊಳಗೆ ಬಹು**
**ಭಾರ ಹೊತ್ತೆನೆಂದು ಬಿದ್ದರೂ ನಾ ಬಿಡೆ ॥**
**ಕೋರೆಯ ಮಸೆಯುತ ಕೆಸರು ಕೊಂಡರು ಬಿಡೆ ।**
**ಘೋರ ರೂಪವ ತಾಳಿ ಘುರುಘವಿರಿಸಲು ನಾ ॥**

ಇನ್ನು ಭಗವಂತನ ದಶಾವತಾರಗಳನ್ನು ಕನಕದಾಸರು ಹೀಗೆ ವರ್ಣಿಸುತ್ತಾರೆ:[17]

**ದ್ಯಾವಿ ನಮ್ಮ ದ್ಯಾವರು ಬಂದರು ಬನ್ನಿರೆ, ನೋಡಬನ್ನೀರೆ ॥ ಪ ॥**

**ಕೆಂಗಣ್ಣ ಮೀನನಾಗಿ ನಮ ರಂಗ**
**ಗುಂಗಾಡಿ ಸೋಮನ ಕೊಂದಾನ್ಯಾ**
**ಗುಂಗಾಡಿ ಸೋಮನ ಕೊಂದು ವೇದವನು**
**ಬಂಗಾರದೊಡಲಿನಿಗಿತ್ತಾನ್ಯಾ ॥ ೧ ॥**

.................................

**ಡೊಳ್ಳಿನ ಮೇಲ್ ಕೈಯ ಭರಮಪ್ಪ ಹಾಕ್ಯಾನು**
**ತಾಳವ ಶಿವನಪ್ಪ ತಟ್ಯ್ಯಾನ್ಯಾ**
**ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು**

**ಚೆಲುವ ಕನಕಪ್ಪ ಕುಣಿದಾನ್ಯಾ**

ಭಗವಂತನ ದಶಾವತಾರಗಳನ್ನು ಬಹಳ ಸುಂದರವಾಗಿ ಗ್ರಾಮೀಣ ಆಡುನುಡಿಗಳಲ್ಲಿ ನಿರೂಪಿಸಿ ತಮ್ಮ ಅಪ್ರತಿಮ ಕವಿಪ್ರತಿಭೆಯನ್ನು ಮೆರೆದಿದ್ದಾರೆ ಕನಕದಾಸರು. ಹೀಗೆ ಕನ್ನಡದ ಸಂತ ಕವಿಗಳ ಕೃತಿಗಳಲ್ಲಿ ಅವತಾರಗಳ ಮಹಿಮೆಯು ಸುಂದರವಾಗಿ ಅಭಿವ್ಯಕ್ತಗೊಂಡಿದೆ.

---

**ಟಿಪ್ಪಣಿಗಳು**

1 ಸಟೀಕಾ ಶ್ರೀ ದೇವಿ ಮಹಾತ್ಮೆ, ಪುಟ 92

2. ಉಪಾಧಿ– ಯಾವುದರ ಯೋಗದಿಂದ ವಸ್ತುವಿನ ಸತ್ಯ ಸ್ವರೂಪವು ವಿಶೇಷ ಮತ್ತು ವಿಪರೀತವಾಗಿ ತೋರುವುದೋ ಅದು ಆ ವಸ್ತುವಿಗೆ ಉಪಾಧಿಯೆನಿಸುವುದು.

3. ಪು.ದಾ.ಕೀ. ಪುಟ 667, ಉಗಾಭೋಗ ಸಂಖ್ಯೆ 147

4. ಹೆಳವನ ಕಟ್ಟೆ ಗಿರಿಯಮ್ಮನ ಹಾಡುಗಳು, ಸಂ: ಟಿ.ಕೆ.ಇಂದುಬಾಯಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ವಿಶ್ವವಿದ್ಯಾನಿಲಯ, 1987, ಪುಟ 20, 21 ಕೀ.ಸಂ 16

5. ಪು.ದಾ.ಕೀ., ಪುಟ. 483, ಕೀ. ಸಂ. 780

6. ಕ.ಸಾ.ಸಂ., 4, ಪುಟ 259, ಕೀ.ಸಂ. 127

7. **ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ**

**ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ**

**ಯಥಾ ಸತಃ ಪುರುಷಾ ತ್ಕೇಶ ಲೋಮಾನಿ**

**ತಥಾಕ್ಷರಾತ್ಸಂಭವತೀಹ ವಿಶ್ವಂ** ॥ ಮುಂಡಕೋಪನಿಷತ್ 1–2

ಜೇಡರಹುಳವು ಹೇಗೆ ಎಳಗಳನ್ನು ತನ್ನೊಳಗಿಂದಲೇ ಎಳೆದು ಹರಡುತ್ತದೆಯೋ,

ಮತ್ತು ಹೇಗೆ ಅವ್ವಗಳನ್ನು ತನ್ನೊಳಕ್ಕೆ ಎಳೆದುಕೊಳ್ಳುತ್ತದೆಯೋ, ಹೇಗೆ ಬಳ್ಳಿಗಳು

ಗಿಡಗಳು ಭೂಮಿಯಲ್ಲಿ ಉಂಟಾಗುವವ್ಲೇ, ಹೇಗೆ ತಲೆಗೂದಲು ಮತ್ತು

ಮೈಮೇಲಿನ ಕೂದಲು ಸಜೀವನಾದ ಪುರುಷನಿಂದ ಉಂಟಾಗುವ್ರವೋ

ಹಾಗೆ ಈ ವಿಶ್ವವ್ರ ಆ ಅಕ್ಷರಪುರುಷರನಿಂದ ಉಂಟಾಗದೆ.

8. ಕ.ಸಾ.ಸಂ – 4, ಪುಟ 291, ಕೀ.ಸಂ. 147

9. ತ್ರಿಮಲ = ಮೂರು ಬಗೆಯ ಪಾಪಕರ್ಮಗಳ ಕೊಳೆ (ಸಂಚಿತ, ಆಗಾಮಿ, ಪ್ರಾರಬ್ಧ)

10. ಸಟೀಕಾ ಶ್ರೀ ದೇವೀ ಮಹಾತ್ಮೆ. ಮೂಲ – ಶ್ರೀ ಚಿದಾನಂದವಧೂತ. ಟೀಕೆ – ಶ್ರೀಮತಿ ವಿಶಾಲಾಕ್ಷಾಂಬಾತಾಯಿ, ಪಂ.ವೇ.ತೋಟಪ್ಪಯ್ಯ ಶಾಸ್ತ್ರಿಗಳು ಹಿರೇಮಠ, ಗದಗ, ಶ್ರೀ ತೋಂಬವಾರ್ಯ ಬುಕ್ ಡಿಪೋ, ಗದಗ,

11. ಉಪಾಧಿ – ಯಾವುದರ ಸಂಯೋಗದಿಂದ ವಸ್ತುವಿನ ಸ್ವರೂಪವು ವಿಶೇಷ ಮತ್ತು ವಿಪರೀತವಾಗಿ ತೋರುವುದೋ ಅದು ಆ ವಸ್ತುವಿಗೆ ಉಪಾಧಿ. ಒಂದು, ವಸ್ತುವಿನ ಭಾಗವಾಗಿರದೆ ಆ ವಸ್ತುವನ್ನು ವಿಂಗಡಿಸಿ ತೋರಿಸುವ ಮತ್ತೊಂದಕ್ಕೆ ಆ ವಸ್ತುವಿನ 'ಉಪಾಧಿ' ಎನ್ನುತ್ತಾರೆ : ಉದಾ : ಚಿನ್ನದ ಭಾಗವಾಗಿರದೆ ಚಿನ್ನವನ್ನು ವಿಂಗಡಿಸಿ ತೋರಿಸುವ ಉಂಗುರವನ್ನು ಚಿನ್ನದ 'ಉಪಾಧಿ' ಎನ್ನುತ್ತಾರೆ. ಸ್ವಾಮಿ ಪರಮಾನಂದ ಭಾರತಿ – ವೇದಾಂತ ಪ್ರಬೋಧ, ಪುಟ 56.
12. ಪಂಢರೀ ವಾರಕರೀ ಸಾರ್ಥಭಜನೀ ಮಾಲಿಕಾ.ಸಂ: ಕೃಷ್ಣಾಜಿ ಜ್ಞಾನಮೋರೆ, ಶ್ರೀ ವಾಸಕರ ವಾರಕರೀ ಸಂಸ್ಥಾ ಟ್ರಸ್ಟ್, ಕೊಪ್ಪಳ, 2001, ಪುಟ 20, ಕೀ.ಸಂ. 51
13. ಶ್ರೀ ರಾಮಕೃಷ್ಣ ವಚನವೇದ, ಪೂರ್ವಾರ್ಧ, ಮೂಲ – 'ಮ', ಶ್ರೀ ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು – 570020, 1996, ಪುಟ 115.
14. ಸಂಕ್ಷಿಪ್ತ ಶ್ರೀ ರಾಮಕೃಷ್ಣ ವಚನವೇದ, ಮೂಲ – 'ಮ', ಶ್ರೀ ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು – 570020, 1999, ಪುಟ 65,66.
15. (ಪು. ದಾ. ಕೀ., ಪುಟ 83, ಕೀ. ಸಂ. 128)
16. (ಪು. ದಾ. ಕೀ., ಪುಟ 406, ಕೀ. ಸಂ. 650)
17. (ಕ. ಸಾ. ಸಂ., ಪುಟ 447, ಕೀ. ಸಂ 230)

*****

## ಅಧ್ಯಾಯ ೫

# ಭಕ್ತಿ ಸೂತ್ರಗಳ ಸಿದ್ಧಾಂತದ ಅನುಷ್ಠಾನ ಹಾಗೂ ಪ್ರಸಾರದಲ್ಲಿ ಕಲೆಯ ಪಾತ್ರ

### ೫.೧ ಕಲೆ ಮತ್ತು ಅಧ್ಯಾತ್ಮ

ನಿಘಂಟುಗಳಲ್ಲಿ ಕಲಾ ಅಂದರೆ ಗತಿ, ಅರ್ಥ, ಜ್ಞಾನ ಎಂಬ ಅರ್ಥಗಳು ಸಿಗುತ್ತವೆ. ಭಾಗ, ಅಂಶ ಅಥವಾ ಎನ್ನುವ ಅರ್ಥಗಳು ಗೋಚರಿಸುತ್ತದೆ. ಹಾಗಾಗಿ ಪರಿಪೂರ್ಣತೆಯನ್ನು ನಮ್ಮನ್ನೊಯ್ಯುವ ಸಾಧನಾಂಶವನ್ನೇ ಕಲೆ ಎಂದು ಅರ್ಥೈಸಿದ್ದಾರೆ[1]. ಆ ನಿಟ್ಟಿನಲ್ಲಿ ವಿದ್ಯೆಯೂ ಕಲೆ, ವಿಜ್ಞಾನವೂ ಕಲೆ, ಕ್ರೀಡೆಯೂ ಕಲೆ, ಅಧ್ಯಾತ್ಮವೂ ಕಲೆಯೇ ಆಗಿದೆ. ಭಾರತೀಯ ಶಾಸ್ತ್ರಗಳಲ್ಲಿ ೬೪ ಕಲೆಗಳನ್ನು ಪಟ್ಟಿ ಮಾಡಲಾಗಿದೆ. ಚತುಃಷ್ಷಷ್ಠಿ ಕಲಾ ಎಂಬುದಾಗಿ ಗಾನ, ನಾಟ್ಯ, ಚಿತ್ರ, ಹೂಕಟ್ಟುವುದು, ರಂಗವಲ್ಲಿ, ಗಣಿತಜ್ಞತೆ, ಬಹುಭಾಷಾತಜ್ಞತೆ, ಅಶ್ವಶಾಸ್ತ್ರ, ಗಜಶಾಸ್ತ್ರ, ಆಯುರ್ವೇದ, ವಾಸ್ತು, ಜ್ಯೋತಿಷ್ಯ, ಇಂದ್ರಜಾಲ, ಅಂತ್ಯಾಕ್ಷರಿ, ಸಮಸ್ಯಾಪೂರ್ತಿ, ಕಾವ್ಯವಾಚನ; ಕಾವ್ಯ ರಚನೆ ಮುಂತಾದ ಬೌದ್ಧಿಕ ಹಾಗೂ ದೈಹಿಕ ಕ್ರೀಡೆಗಳೂ ಈ ಪಟ್ಟಿಯಲ್ಲಿವೆ. ಕಡೆಗೆ ಚೋರವಿದ್ಯೆಯೂ ಕಲೆಯೆನ್ನುವುದು ನಿಜಕ್ಕೂ ಸ್ವಾರಸ್ಯಕರ ಅಂಶವಾಗಿದೆ. ಈ ಕಲೆಗಳನ್ನು ಬುದ್ಧಿಪ್ರಧಾನವಾದುವು, ಭಾವ ಪ್ರಧಾನವಾದುವು, ಪ್ರತಿಭಾ ಪ್ರಧಾನವಾದುವು ಎನ್ನುವ ವಿಂಗಡಣೆ ಮಾಡಿಕೊಳ್ಳಬಹುದು ಅಥವಾ ವಿಜ್ಞಾನ, ಲಲಿತಕಲೆ ಹಾಗೂ ಕುಶಲಕಲೆ ಎಂಬುವುದಾಗಿ ವಿಭಜಿಸಿಕೊಳ್ಳಬಹುದು.

ಕಲೆ ಮಾನವನಿಗೆ ಮಾನವತ್ವದ ಘನತೆಯನ್ನು ದೇವತ್ವದ ಸಂಸ್ಪರ್ಶವನ್ನು ಒದಗಿಸುವ ಒಂದು ಅನನ್ಯ ಪ್ರತಿಭಾ ವಿಶೇಷ. ಒಬ್ಬ ಕಲಾವಿದನನ್ನು ಕೃತಿಯ ಮೂಲಕ ನೋಡುವವನ ಅಹಂ ಅನ್ನು ಮರೆಯಿಸುವ, ತಾನು ಯಾರು, ತಾನೆಲ್ಲಿದ್ದೇನೆ ಎನ್ನುವ ವರ್ತಮಾನದ ಹಮ್ಮು ಬಿಮ್ಮು ದುಮ್ಮಾನಗಳನ್ನು ಮರೆಯುವಂತೆ ಮಾಡಿಯಾರು ತನ್ನ ಕಲಾಕೃತಿಯಲ್ಲಿ ಅವನ ಮನಸ್ಸು ಒಂದಾಗುವ ಹಾಗೆ ಮಾಡುತ್ತಾನೆ, ಅವನೇ ನಿಜವಾದ ಕಲಾವಿದ, ಅದೇ ನೈಜ ಕಲಾಕೃತಿ. ಕಲೆಯಿಂದ ಕೇವಲ ಮನಸ್ಸಿಗೆ ಸಂತೋಷ ಮಾತ್ರವಲ್ಲ ಅದರಿಂದ ಸಂಸ್ಕಾರವೂ ಆಗುತ್ತದೆ. ಉತ್ಕೃಷ್ಟ ಭಾವನಾವಿಕಾಸವು ಸಾಧ್ಯವಾಗುತ್ತದೆ. ಕಲೆಯ ರಸಾನುಭವದಿಂದ ಹೃದಯದಲ್ಲುತ್ಪನ್ನವಾಗುವ ಕರುಣ, ವೀರ, ಪ್ರೇಮಾದಿ ಯಾವ ಉದಾತ್ತಭಾವಗಳುಂಟೋ ಅದೇ ಮನುಷ್ಯ ಜೀವನದ ಮೂಲ ಸಾಮಾಗ್ರಿ.

ಡಿವಿಜಿಯವರು ಹೇಳುವಂತೆ "ಭಾರತೀಯ ಕಲೆಗಳ ಮೂಲ ಉದ್ದೇಶವೂ ಇದೇ ಆಗಿದೆ. ಮನಃ ಸಂತೋಷದ ಜೊತೆಗೆ ಸತ್‌ಸಂಸ್ಕಾರ, ಆತ್ಮೋತ್ಕರ್ಷ, ಪಾಪ, ದೋಷ, ದುಃಖ, ಅಜ್ಞಾನಗಳ ನಾಶ, ಭಾರತೀಯ ಕಲೆಗಳ ಪರಮ ಪ್ರಯೋಜನವೆಂದರೆ ಆತ್ಮ ವಿಸ್ತರಣ, ಆತ್ಮ ಪರಿಷ್ಕರಣ, ತನ್ಮೂಲಕ

ಆತ್ಮೋದ್ಧರಣ, ಆತ್ಮ ವಿಸ್ತರಣ ಎಂದರೆ ನನ್ನಂತೆ ಇತರರು ಎಂದು ಭಾವಿಸುವುದು. ತನ್ಮೂಲಕ ಸಮಾಜದಲ್ಲಿ ಸೌಹಾರ್ದತೆಯನ್ನು ಸಾಧಿಸುವುದು, ಆತ್ಮ ಪರಿಷ್ಕರಣ ಅಂದರೆ ತನ್ನಲ್ಲಿರುವಾಗ ದೌರ್ಬಲ್ಯ ದೋಷಗಳನ್ನು ಗುರುತಿಸಿಕೊಂಡು ಸಾಧನೆಯ ಮೂಲಕ ಅವುಗಳನ್ನು ನಿವಾರಿಸಿಕೊಂಡು ತನ್ನನ್ನು ತಾನು ಉದ್ಧರಿಸಿಕೊಳ್ಳುವಂಥಾದ್ದು ಹೀಗೇ ವ್ಯಷ್ಟಿ ಹಾಗೂ ಸಮಷ್ಟಿ ಎರಡರ ಉತ್ಕೃಷ್ಟವನ್ನು ಕಲೆಯ ಮೂಲಕ ಸಾಧಿಸಲು ಸಾಧ್ಯ. ಈ ವಿಶಾಲ ದೃಷ್ಟಿಯನ್ನು ಅಭ್ಯಾಸ ತಂದೊದಗಿಸುತ್ತದೆ.

ತನ್ನಲ್ಲಿಯೇ ಹುದುಗಿರುವ ಈಶ್ವರಚೈತನ್ಯವನ್ನು ಅದರ ವಿಶ್ವತೋಮುಖ ವ್ಯಾಪ್ತಿಯನ್ನು ಮಾನವ ಅರ್ಥಮಾಡಿಕೊಂಡು, ಆ ಚೈತನ್ಯ ಪ್ರಸರಣದಲ್ಲಿ ನಿರತವಾಗುವುದೇ ಸಂಸ್ಕೃತಿ. ಧರ್ಮ ಸಾಹಿತ್ಯ, ಲಲಿತಕಲೆ, ಜೀವನಕಲೆಯ ಮೂಲಕ ಮಾನವನ ಆತ್ಮಜ್ಞಾನ ಅಭಿವ್ಯಕ್ತವಾಗುತ್ತದೆ. ಯಾವುದೋ ದೈವಿಕಶಕ್ತಿ ಅವುಗಳ ಪ್ರತಿಭಾ ಪ್ರಕಾಶನಕ್ಕೆ ನೆರವಾಗಿದೆಯೆಂದು ನಾವು ನಂಬುತ್ತೇವೆ.

ಮನಸ್ಸಿಗೆ ಶಾಂತಸ್ಥಿತಿಯನ್ನು ತಂದೊದಗಿಸಿ ರಸಾನುಭವದ ಮೂಲಕ "ದಿವ್ಯ ಸತ್ಯದರ್ಶನ" ಮಾಡಿಸುವುದೇ ಭಾರತೀಯ ಲಲಿತಕಲೆಗಳ ಗುರಿ. ಮಾನವನ ಆಧ್ಯಾತ್ಮಿಕ ಜೀವನದಲ್ಲಿ ರಸಗಳ ಆವಶ್ಯಕತೆಯನ್ನು ಗ್ರಹಿಸಿದ ಉಪನಿಷತ್ತು ಅವುಗಳಿಗೆ ದೇವತ್ವದ ಸ್ಥಾನವನ್ನು ಕೊಟ್ಟಿದೆ– 'ರಸೋ ವೈ ಸಃ'."

ಭಾರತೀಯ ಜೀವನದ ಎಲ್ಲಾ ಆವಿಷ್ಕಾರಗಳಲ್ಲಿಯೂ ಅಧ್ಯಾತ್ಮ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಲಲಿತಕಲೆಗಳು ಈ ನಿಯಮದಿಂದ ದೂರವಾಗಿಲ್ಲ. ಭಾರತೀಯ ಶಿಲ್ಪ, ವಾಸ್ತುಶಿಲ್ಪ, ಸಂಗೀತ, ಚಿತ್ರಕಲೆ, ಭಾರತೀಯ ಆಧ್ಯಾತ್ಮಿಕ ಜೀವನದ ಹೊರಮುಖಗಳಾಗಿವೆಯೆಂದು ನಾವು ನಿಸ್ಸಂಕೋಚವಾಗಿ ಹೇಳಬಹುದು.

ಪ್ರಕೃತಿಯ ಪ್ರತಿಕೃತಿ ಹಾಗೂ ಸಮಕಾಲೀನ ಪರಿಸ್ಥಿತಿಯ ಪ್ರತಿಬಿಂಬವೇ ಕಲೆಯೆಂದು ಪಾಶ್ಚಾತ್ಯರ ತಿಳವಳಿಕೆ. ಈ ದೃಷ್ಟಿಯನ್ನು ಭಾರತೀಯರು ಒಪ್ಪುವುದಿಲ್ಲ. ಭಾರತೀಯ ಕಲಾವಿದರು ಪ್ರಕೃತಿ ಹಾಗೂ ಸಮಕಾಲೀನ ಪರಿಸ್ಥತಿಯ ಬಿಂಬಗ್ರಹಣದಲ್ಲಿ ತೃಪ್ತರಾಗಲಿಲ್ಲ. ಜೀವನವನ್ನು ಹಸನು ಮಾಡುವುದಕ್ಕೆ, ಕ್ಷೋಭೆ ನಿವಾರಿಸಿ ಶಾಂತಿ ಸ್ಥಾಪಿಸುವುದಕ್ಕೆ, ಮಾನವನಿಗೆ ಸ್ವಸ್ವರೂಪ ಜ್ಞಾನವನ್ನುಂಟುಮಾಡುವುದಕ್ಕೆ ಜೀವನವನ್ನು ಹೊಲಸುಗೊಳಿಸುತ್ತಿದ್ದ ಅರಿಷಡ್ವರ್ಗಗಳ ಉಪಟಳ ತೊಲಗಿಸುವುದಕ್ಕೆ ಭಾರತೀಯ ಕಲಾವಿದರು ಪ್ರಯತ್ನಿಸಿದರು. ಭಾರತೀಯ ಜೀವನದಲ್ಲಿ ಕಲಾವಿದ ಕೇವಲ ಬಿಂಬಗ್ರಾಹಿಯಲ್ಲ; ಅವನು ದಾರ್ಶನಿಕನೂ, ಗುರುವೂ ಆಗಿದ್ದಾನೆ.

ಭಾರತೀಯ ಲಲಿತಕಲೆಗಳು ಮಾರ್ಗ, ದೇಶೀ ಎರಡು ರೀತಿಯಲ್ಲಿ ಬೆಳೆದರೂ, ಅವು ಮೂಲಭೂತ ಆಧ್ಯಾತ್ಮಿಕ ದೃಷ್ಟಿಯನ್ನು ಬಿಡಲಿಲ್ಲ. ಜೀವನದ ಸರ್ವತೋಮುಖ ವಿಕಾಸವನ್ನೇ ಗುರಿಯಾಗಿಟ್ಟುಕೊಂಡಿದ್ದ ಭಾರತೀಯ ಲಲಿತಕಲೆ, ಹೊಸಹೊಸ ಅವಿಷ್ಕಾರಗಳನ್ನು ತನ್ನ ವಿರಾಟ್‌ಗರ್ಭದಲ್ಲಿ ಅಡಗಿಸಿಕೊಳ್ಳುತ್ತ ಬಂದಿತು. ಭಾರತೀಯ ಸಂಸ್ಕೃತಿ ವೈವಿಧ್ಯಪೂರ್ಣವಾಗಿದ್ದರೂ ಏಕಸೂತ್ರ, ಏಕಧ್ಯೇಯವನ್ನೇ ಅರಸತೊಡಗಿತು.

ಭಾರತೀಯ ಲಲಿತಕಲೆಗಳ ನಿತ್ಯ ತತ್ತ್ವಗಳ ಪ್ರೇರಕ ಶಕ್ತಿಯಾಗಿರುವ ಸೂತ್ರಗಳೆಂದರೆ:

೧. ಭಾರತೀಯ ಜೀವನದಲ್ಲಿ ಅಧ್ಯಾತ್ಮಕ್ಕೆ ವಿಶಿಷ್ಟ ಸ್ಥಾನವಿದೆ. ಜಗತ್ತಿನ ಯಾವ ರಾಷ್ಟ್ರವೂ ಭಾರತದಂತೆ ಆಧ್ಯಾತ್ಮಕ್ಕೆ ಈ ಸ್ಥಾನವನ್ನಿತ್ತಿಲ್ಲ.

೨. ಭಾರತೀಯ ಸಾಹಿತ್ಯ ಲಲಿತಕಲೆಗಳು ಭಾರತದ ಆಧ್ಯಾತ್ಮಿಕ ಸಿದ್ಧಿಯ ಪ್ರತೀಕಗಳಾಗಿವೆ.

೩. ಭಾರತೀಯ ಲಲಿತಕಲೆಗಳು 'ಜೀವ-ಶಿವ'ರಲ್ಲಿರುವ ಅಂತರವನ್ನು ಹೋಗಲಾಡಿಸಿ, ಜೀವನವನ್ನು ಶಿವನನ್ನಾಗಿ ಮಾರ್ಪಡಿಸುವ ಪ್ರಯತ್ನ ನಡೆಸಿದೆ.

೪. ಭಾರತೀಯ ಲಲಿತಕಲೆಗಳು ಶಾಂತಿದಾಯಿ. ಇಹ ಜೀವನವನ್ನು ರಾಗದ್ವೇಷರಹಿತವನ್ನಾಗಿ ಮಾಡುವುದೇ ಅವುಗಳ ಗುರಿ.

೫. ಭಾರತೀಯ ಲಲಿತಕಲೆಗಳು ಅನೇಕತ್ವವನ್ನು ನಿರಾಕರಿಸದಿದ್ದರೂ ಅವುಗಳನ್ನು ಕಟ್ಟಿ ಕೊಡಿಸುವ ಏಕಸೂತ್ರಕ್ಕೆ ಪ್ರಾಧಾನ್ಯ ಕೊಟ್ಟಿವೆ.

೬. ಭಾರತೀಯ ಲಲಿತಕಲೆಗಳು ವರ್ಗ, ಜಾತಿ, ಮತ, ರಾಷ್ಟ್ರಗಳ ಸೊತ್ತಲ್ಲ. ಅವು ವಿಶ್ವದ ಮಹಾನಿಧಿ, ಅವುಗಳ ಪರಮಗುರಿ ಲೋಕಕಲ್ಯಾಣವೇ ವಿನಾ ಜಾತಿ, ಮತ ವರ್ಗಗಳ ಕಲ್ಯಾಣವಲ್ಲ.

ಇಹಲೋಕದಲ್ಲಿಯೂ ಭಗವದಂಶವಿದೆ. ಐಹಿಕ ಸೌಂದರ್ಯಗಳು ಭಗವದ್ವಿಲಾಸಗಳೇ, ಈ ಸೌಂದರ್ಯಗಳೇ- ಈ ರೂಪ ಸೌಂದರ್ಯ ಭಾವಸೌಂದರ್ಯಗಳೇ ವಿಶ್ವಸತ್ಯದ ಗುಡಿಯ ಗೋಪುರದಿಂದ ದೂರಕ್ಕೆ ಕಾಣಬರುವ ಬೆಳಕಿನ ಕಿರಣಗಳು. ಈ ಮಿತ ಸೌಂದರ್ಯಗಳನ್ನು ಹಿಡಿದೇ ಮನುಷ್ಯನು ಅಮಿತ ಸೌಂದರ್ಯದ ದಾರಿಯನ್ನು ತಿಳಿಯಬೇಕಾಗಿದೆ. ಐಹಿಕ ಸೌಂದರ್ಯಗಳನ್ನು ಅವನು ಅಲಕ್ಷ್ಯ ಮಾಡಲಾಗದು. ಹುಟ್ಟಿದಕ್ಕೆ ಬಾಳಬೇಕು; ಬಾಳನ್ನು ಚೆನ್ನಾಗಿಸಬೇಕು; ಚೆನ್ನಾಗಿಸುವುದಕ್ಕೆ ಬುದ್ಧಿಯಿಂದಲೂ ಬಾಹುದಂಡದಿಂದಲೂ ಪ್ರಯತ್ನಿಸಬೇಕು; ಪ್ರಯತ್ನದಲ್ಲಿ ಉತ್ಸಾಹ, ಧೈರ್ಯ, ಶ್ರದ್ಧೆಗಳಿರಬೇಕು; ಈ ಜೀವನೋಲ್ಲಾಸ, ಈ ಪ್ರಯತ್ನೋತ್ಸಾಹ, ಈ ಸೌಂದರ್ಯ ಸಂತೋಷ ಇವು ಮನುಷ್ಯನ ನರಂತರ ಧರ್ಮದ ಮೂಲಾಂಶಗಳು.

ಕಲೆಯ ಶಾಖೆಗಳಲ್ಲಿ ಮುಖ್ಯವಾದವು ೧. ಕಾವ್ಯ ೨. ಸಂಗೀತ ೩. ಅಭಿನಯ ನರ್ತನಗಳು ೪. ಚಿತ್ರಪಟ ಶಿಲ್ಪ ವಿಗ್ರಹಗಳು ಭಕ್ತಿಸೂತ್ರಗಳಲ್ಲಿ (ಮುಖ್ಯವಾಗಿ ನಾರದ ಭಕ್ತಿ ಸೂತ್ರ) ಪ್ರತಿಪಾದಿತವಾದ ಭಕ್ತಿಸಿದ್ಧಾಂತದ ಪರಿಣಾಮವನ್ನು ಎರಡು ನೆಲೆಯಲ್ಲಿ ವಿಶ್ಲೇಷಿಸಬಹುದು.

**ಅ. ವೈಯಕ್ತಿಕ ಪರಿಣಾಮ**

**ಆ. ಸಾಮುದಾಯಿಕ ಪರಿಣಾಮ**

ಈ ಎರಡೂ ನೆಲೆಗಳ ಪರಿಣಾಮಗಳು ಪರಸ್ಪರ ಪೂರಕವೂ, ಪ್ರೇರಕವೂ ಆಗಿದೆ. ನಾರದ ಭಕ್ತಿಸೂತ್ರ ಭಕ್ತಿ ಸಾಧನೆಗೆ ಹೆಚ್ಚಿನ ಒತ್ತು ನೀಡುವುದರಿಂದ ಸಾಧನೆಯು ವೈಯಕ್ತಿಕವಾಗಿ ಸಾಗಬೇಕಾದುದರಿಂದ ಅದರ ಫಲವೂ ವೈಯಕ್ತಿಕವಾಗಿ ಕಂಡುಬರುವಂಥಾದ್ದಾಗಿದೆ. ಆದರೆ ವೈಯಕ್ತಿಕ ನೆಲೆಯಲ್ಲಿ ಫಲವು ಸಾಧಕನಿಗೆ ಲಭಿಸಿದರೂ, ಅದರ ಪರಿಣಾಮವು ಸುತ್ತಮುತ್ತಲಿನ ಸಮಾಜದ ಮೇಲೆಯೂ ಆಗುವುದನ್ನು ನಾವು ಗಮನಿಸಬಹುದು. ಭಕ್ತ ಸಾಧಕನು ಸಾಧಿಸಿದ ನೈತಿಕ ಪರಿಶುದ್ಧಿಯ ಪ್ರಭಾವಲಯಕ್ಕೆ ಬಂದವರ ಮೇಲೆ ಪರಿಣಾಮವಾಗುವುದು ಸಹಜವೇ

ಆಗಿದೆ. ಆ ಪರಿಣಾಮ ತಾತ್ಕಾಲಿಕವಾದದ್ದಿರಬಹುದು. ಆದರೆ ಇಂತಹ ಪರಿಣಾಮ ಮತ್ತೆ ಮತ್ತೆ ಆಗುವುದರಿಂದ ವ್ಯಕ್ತಿಯಲ್ಲಿ ಪರಿವರ್ತನೆ ಮೂಡುವುದು ಸ್ವಾಭಾವಿಕ. ಆ ನಿಟ್ಟಿನಲ್ಲಿ ಕಲೆಯು ಅಂತಹ ಪರಿಣಾಮವನ್ನು ಮೂಡಿಸುವಲ್ಲಿ ಪ್ರಬಲವಾದ ಮಾಧ್ಯಮವಾಗಿದೆ.

ಇನ್ನು ಭಕ್ತಿಸೂತ್ರಗಳಾದ ಕರ್ತೃವಾದ ನಾರದ ಮಹರ್ಷಿಗಳು ಸ್ವತಹ ಓರ್ವ ಕಲಾವಿದರಾಗಿ (ಸಂಗೀತಜ್ಞ, ಗಾಯಕರಾಗಿ) ಭಕ್ತಿಸಿದ್ಧಾಂತದ ಪ್ರಸಾರಕರಾಗಿ ಪುರಾಣಗಳಲ್ಲಿ ಚಿತ್ರಿತವಾಗಿರುವ ಕಾರಣ, ಪರಂಪರೆಯಲ್ಲಿ ನಂಬಿಕೆಯು ಬೇರೂರಿರುವ ಕಾರಣ ಕಲೆಯ ಪಾತ್ರವು ಗಮನಾರ್ಹ. ಹಿರಿಯ ವಿದ್ವಾಂಸರಾದ ಡಾ। ವಿ. ರಾಘವನ್‌ರವರು

ಹೇಳುತ್ತಾರೆ[3]: "ಭರತನ ನಾಟ್ಯಶಾಸ್ತ್ರಕ್ಕೆ ಮುಂಚೆಯೇ ಸದಾಶಿವ ಮತ್ತು ಬ್ರಹ್ಮ ಈ ಇಬ್ಬರೂ ಬರೆದ ಎರಡು ಸಂಗೀತ ಗ್ರಂಥಗಳು ಪ್ರಚಲಿತವಿದ್ದವು ಎಂಬುದು ಪರಂಪರೆಯಿಂದ ಬಂದ ನಂಬಿಕೆ. ನಾಟ್ಯಶಾಸ್ತ್ರದಲ್ಲಿಯೇ ಈ ಇಬ್ಬರು ಪೂರ್ವಾಚಾರ್ಯರೇ ಅಲ್ಲದೇ, ನಾರದನೂ ಸ್ಮರಿಸಲ್ಪಟ್ಟಿದ್ದಾನೆ."

ಡಾ। ರಂ.ಶ್ರೀ ಮುಗುಳಿಯವರು ಹೇಳುತ್ತಾರೆ "ಹರಿದಾಸರು ಭಕ್ತಿಪ್ರಸಾರಕ್ಕೆಂದು ತಾವು ರಚಿಸಿದ ಕೀರ್ತನೆಗಳಲ್ಲಿ ಕರ್ನಾಟಕ ಸಂಗೀತದ ಶಾಸ್ತ್ರಶುದ್ಧ ರೀತಿಯನ್ನು ಅನುಸರಿಸಿದರು. ಅದೇ ರೀತಿಯಾಗಿ ಅವನ್ನು ಹಾಡಿ ತೋರಿಸಿದರು. ಮನೆ ಮನೆಗೆ ಅವುಗಳ ಸ್ವಾರಸ್ಯ ಮನದಟ್ಟಾಗುವಂತೆ ಮಾಡಿದರು. ಈ ಪ್ರಸಾರ ಕಾರ್ಯದಿಂದ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಬೆಳವಣಿಗೆಯಾಯಿತಲ್ಲದೇ ಕರ್ನಾಟಕ ಸಂಗೀತವೂ ಜನಪ್ರಿಯವಾಯಿತು. ಒಂದಕ್ಕೊಂದು ಪೋಷಕವಾಯಿತು.'[4]

'ಮಾನವವರ್ಗಕ್ಕೇ ವಿಶಿಷ್ಟವಾದ 'ಕಲೆ' ಅವನಿಗೆ ಮಾನವತ್ವದ ಘನತೆಯನ್ನೂ, ದೇವತ್ವದ ಸಂಸ್ಪರ್ಶವನ್ನೂ ಒದಗಿಸುವ ಒಂದು ಅನನ್ಯ ಪ್ರತಿಭಾವಿಶೇಷ'[5]. ಎನ್ನುತ್ತಾರೆ.

ಇದು ಸಾಧ್ಯವಾಗಬೇಕಾದರೆ ಅದಕ್ಕೆ ಭಕ್ತಿಯ ಸಂಸ್ಪರ್ಶ ಅತೀ ಅಗತ್ಯ.

ಕಲೆಯ ಪಂಚಲಕ್ಷಣಗಳನ್ನು ಹೀಗೆ ಹೇಳಿದ್ದಾರೆ: ಉಪಯುಕ್ತತೆ, ಕ್ರಿಯಾಶೀಲತೆ, ತನ್ಮಯತೆ, ಸ್ವೋಪಜ್ಞತೆ ಮತ್ತು ಉತ್ಕೃಷ್ಟತೆ.[6]

'ಸಂಸ್ಕೃತಿ' ಎನ್ನುವ ಗ್ರಂಥದಲ್ಲಿ[7] 'ಸಂಸ್ಕೃತಿ ಮತ್ತು ರಾಷ್ಟ್ರಜೀವನ' ಎನ್ನುವ ಪ್ರಬಂಧದಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರರು ಈ ದೇಶದಲ್ಲಿ ಹಿಂದೆ ಇದ್ದಂತಹ ನಾಗರೀಕತೆ ಹಾಗೂ ಸುಸಂಸ್ಕೃತಿಗಳ ಕುರಿತಾಗಿ ವಿದೇಶೀ ಪ್ರವಾಸಿಗರು, ವಿದ್ವಾಂಸರು ದಾಖಲಿಸಿರುವ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಿ ಹೇಳಿದ್ದಾರೆ:

"ಕ್ರಿಸ್ತಪೂರ್ವ ಎರಡನೆಯ ಶತಮಾನದಲ್ಲಿ ಏರಿಯನ್ ನಮ್ಮ ಜನರನ್ನು ಕುರಿತು But Indeed no Indian is accused of lying" ಎಂದನು. ಎಂದರೆ "ವಾಸ್ತವದಲ್ಲಿ ಯಾವ ಭಾರತೀಯನಾಗಲಿ ಸುಳ್ಳಾಡಿದನೆಂದು ಯಾರೂ ದೂರುವುದಿಲ್ಲ" ಎಂದು. ಚೀನೀ ಯಾಂತ್ರಿಕ ಹುವೆನ್ ಚಾಂಗ್ ಇವರನ್ನು ವರ್ಣಿಸಿ They are distinguished by the straight forwardness and honesty of their character" ಎಂದನು. ಎಂದರೆ "ಈ ಜನರ ಋಜುವರ್ತನೆ ಸತ್ಯವಂತಿಕೆ ಇವರಿಗೆ ಗೌರವ ತರತಕ್ಕದ್ದಾಗಿದೆ" ಎಂದು. ಕ್ರಿಸ್ತಶಕ ಹದಿಮೂರನೆಯ ಶತಮಾನದ ಒಬ್ಬ ಹಿರಿಯಾತ ಈ ಜನ Free from all deceit and violence. They fear neither death nor life" ಎಂದನು. ಎಂದರೆ "ಇವರು

ಮೋಸವನ್ನು, ಕ್ರೌರ್ಯವನ್ನು ಕಾಣರು. ಇವರಿಗೆ ಬಾಳೆನ್ನಲಿ ಸಾವೆನ್ನಲಿ ಭಯವೆನ್ನುವುದಿಲ್ಲ" ಎಂದು. ಪ್ರವಾಸಿಗ ಮಾರ್ಕೊ ಪೋಲೋ ಇಲ್ಲಿನ ವ್ಯಾಪಾರಿಗಳ ವಿಷಯದಲ್ಲಿ The best merchants in the world and the most truthful, for they would not tell a lie for anything on earth" ಎಂದನು. ಎಂದರೆ "ಇವರು ಲೋಕದಲ್ಲೇ ಅತಿ ಒಳ್ಳೆಯವರಾದ ಸತ್ಯವಂತರಾದ ವ್ಯಾಪಾರಿಗಳು, ಯಾವ ಕಾರಣದಿಂದಲೇ ಆಗಲಿ ಇವರು ಸುಳ್ಳು ಹೇಳುವವರಲ್ಲ" [8]ಎಂದು.

1907ರಲ್ಲಿ ಮೈಸೂರಿಗೆ ಬಂದಿದ್ದಾಗ ತಾಯಿ ಆನೀಬೆಸೆಂಟರವರು "ಬೇರೆ ಯಾವ ದೇಶದಲ್ಲೂ ನೂರು ಜನ ಗಂಡಸರೆದುರು ಒಬ್ಬ ಹೆಣ್ಮಗಳು ನಡೆದರೆ ಕೆಲವರಾದರೂ ಜನ ಸಿಳ್ಳೆ ಹಾಕುವುದು, ಏನೋ ಮಾತಾಡುವುದು, ಚೇಷ್ಟೆ ಮಾಡುವುದು, ಈ ರೀತಿ ಅಸಭ್ಯವಾಗಿ ವರ್ತಿಸುತ್ತಾರೆ. ಸಾವಿರ ಜನ ಗಂಡಸರೆದುರಿನಲ್ಲಿ ಒಬ್ಬಾಕೆ ನಡೆದರೂ ಒಬ್ಬನೂ ಹೀಗೆ ಅಸಭ್ಯವಾಗಿ ವರ್ತಿಸದ ದೇಶ ಒಂದೇ. ಅದು ಭರತವರ್ಷ." ಎಂದು ಅಪ್ಪಣೆ ಕೊಡಿಸಿದರು. ಇದು ನಮ್ಮ ಜನಕ್ಕೆ ಸಾವಿರಾರು ವರ್ಷಗಳ ಅಭ್ಯಾಸ ತಂದ ಶೀಲ. ಇದು ಒಂದು ರಾಷ್ಟ್ರಕ್ಕೆ ಉಳಿದೆಲ್ಲ ಐಶ್ವರ್ಯಕ್ಕೂ ಹಿರಿದಾದ ಐಶ್ವರ್ಯ."[9]

ಈ ಸಿದ್ಧಿಗೆ ಅವಶ್ಯಕವಾದ ಶಕ್ತಿ ಈ ದೇಶಕ್ಕೆ ಬಂದದ್ದು ಅದರ ಧರ್ಮ ಪ್ರೇರಣೆಯಿಂದ. ಸ್ವಾಮಿ ವಿವೇಕಾನಂದರು ಅಪ್ಪಣೆ ಕೊಡಿಸಿದ ಈ ವಾಕ್ಯಗಳು ಗಮನಾರ್ಹವಾಗಿವೆ.

"ಒಬ್ಬ ಮನುಷ್ಯನು ಹೇಗೋ ಹಾಗೆ ಒಂದೊಂದು ಜನಾಂಗವೂ ತನ್ನ ಜೀವನದಲ್ಲಿ ಒಂದು ಮುಖ್ಯ ಸೂತ್ರವನ್ನು ಅವಲಂಬಿಸಿರುತ್ತದೆ. ಅದು ಅದರ ಜೀವನದ ಹೃದಯವಾಗಿರುತ್ತದೆ, ಜೀವ ಸ್ವರವಾಗಿರುತ್ತದೆ. ಉಳಿದೆಲ್ಲ ಸಂಗತಿ ಅದರ ಸುತ್ತ ಉಪಸ್ವರವಾಗಿ ನೆರೆದಿರುತ್ತದೆ. ಯಾವುದೇ ಜನಾಂಗ ತನ್ನ ಈ ಜೀವಸ್ವರಕಲ್ಪವಾದ ಮುಖ್ಯ ಸೂತ್ರವನ್ನು ತ್ಯಜಿಸಲು ನೋಡಿತಾದರೆ, ಶತಮಾನ ಶತಮಾನ ಕಾಲದ ವ್ಯವಹಾರದಿಂದ ಅದರದಾಗಿ ಬಂದ ಆ ದಿಕ್ಕು ಕೈತಪ್ಪಿ ಆ ಜನಾಂಗ ಸಾಯುತ್ತದೆ. .......... ಭಾರತವರ್ಷದಲ್ಲಿ ಜೀವನದ ಹೃದಯ ಇರುವುದು ಧರ್ಮಾನುಷ್ಠಾನದಲ್ಲಿ. ಜನಾಂಗ ಜೀವನದ ಸಂಗೀತದ ಜೀವಸ್ವರವಿದು....." [10]

ಆ ನಿಟ್ಟಿನಲ್ಲಿ ಈ ನೆಲದ ಧರ್ಮ, ಸಂಸ್ಕೃತಿ, ಪರಂಪರೆಯನ್ನು ಉಳಿಸಿದವರಲ್ಲಿ ಪ್ರಮುಖರು ಸಂತರು, ಭಕ್ತಕವಿಗಳು ಎಂದರೆ ತಪ್ಪಾಗಲಾರದು. ಭಕ್ತಿಗೆ ವಿಶಾಲ ಅರ್ಥವನ್ನು ತಂದುಕೊಟ್ಟ ಅವರು, ಸಾಮಾಜಿಕ ಪರಿವರ್ತನೆಗೆ ವಿಶಾಲ ಮನಸ್ಸು ಬಹಳ ಮುಖ್ಯವೆಂದು ಹೇಳಿದರು. ಭಕ್ತಿ–ಮನಸ್ಸು–ಸಮಾಜ ಇವುಗಳಲ್ಲಿರುವ ಆಂತರಿಕ ಸಂಬಂಧವನ್ನು ಬಿಚ್ಚಿತೋರಿಸಿದರು.

ತೋರಿಕೆಯ ಭಕ್ತಿಯನ್ನು ತಿರಸ್ಕರಿಸಿದ ಅವರು ಆಂತರಿಕ ಹುಡುಕಾಟಕ್ಕೆ, ಆತ್ಮಶೋಧನೆಗೆ ಪ್ರಾಮುಖ್ಯತೆಕೊಟ್ಟರು. ಅಂತರಂಗ ಶುದ್ಧವಾಗದೆ ಬಹಿರಂಗ ಶುದ್ಧಿ ವ್ಯರ್ಥವೆಂದು ತಿಳಿಸಿದರು. ಮನವ ತೊಳೆಯದೆ ಮಲವ ತೊಳೆಯುವುದರಿಂದೇನು ಪ್ರಯೋಜನವೆಂದು ಕೇಳಿಕೊಂಡರು.

ಅವರ ಕೃತಿಗಳಿಂದಾಗಿ ಚಿತ್ರ, ಸಂಗೀತ, ಶಿಲ್ಪ, ನೃತ್ಯ ಹೀಗೆ ಎಲ್ಲಾ ಕಲಾಪ್ರಕಾರಗಳು ಜನಸಾಮಾನ್ಯರನ್ನು ತಲುಪಲು ಸಾಧ್ಯವಾಯಿತು. ಮುಖ್ಯವಾಗಿ ಅವರ ಆಡುಭಾಷೆಯ ಬಳಕೆ, ಗಾದೆ, ನುಡಿಗಟ್ಟುಗಳು, ಸ್ಥಳೀಯ ನಿದರ್ಶನಗಳ ಬಳಕೆ, ಸರಳ ಸಂಗೀತ ಇವುಗಳಿಂದಾಗಿ ಸುಲಭವಾಗಿ ಅವರಿಗೆ ಧರ್ಮ ನೀತಿ ಬೋಧನೆ, ಭಕ್ತಿಯ ಪ್ರಸಾರ ತನ್ಮೂಲಕ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಸಾಧ್ಯವಾಯಿತು.

### ೫.೨.ಸಂಗೀತದ ಪಾತ್ರ

ಹರಿದಾಸ ಪಂಥದಲ್ಲಿ ಹಲವಾರು ಮಂದಿ ಪ್ರಸಿದ್ಧರಾದವರು. ಅವರೆಲ್ಲಾ ಕೀರ್ತನೆಗಳನ್ನು ರಚಿಸಿ ಹಾಡಿ ತಮ್ಮ ಅಂತರಂಗ ಭಕ್ತಿಯನ್ನು ಅಭಿವ್ಯಕ್ತ ಪಡಿಸಿದ್ದಾರೆ. ಅವರಲ್ಲಿ ಬಹುಮಂದಿಯ ಪ್ರಭಾವ ಒಂದು ಪ್ರಕಾರಕ್ಕೆ ಮಾತ್ರ ಸೀಮಿತವಾಯಿತು. ಆದರೆ ಪುರಂದರದಾಸ ಮತ್ತು ಕನಕದಾಸರ ಸ್ಥಿತಿ ಹಾಗಲ್ಲ. ಸಮಾಜದ ವಿವಿಧ ಮೂಲೆಗಳಲ್ಲಿದ್ದ ಭಜನ ಮಂದಿರಗಳಲ್ಲಿ, ಬಹುತೇಕ ಮನೆಗಳಲ್ಲಿ ಮೊಳಗುತ್ತಿದ್ದುದು ಈ ಇಬ್ಬರು ರಚಿಸಿದ ಕೀರ್ತನೆಗಳೇ, ಇದಕ್ಕೆ ಕಾರಣ ಇವರಿಬ್ಬರೂ ಲೋಕ ಸಂಚಾರಿಗಳು. "ರಸವತ್ತಾದ ರಾಗಪೋಷಣೆಯಿಂದ ಭಾವಪೂರಿತವಾಗಿ ಅವರು ಹಾಡುತ್ತಿದ್ದ ಕೀರ್ತನೆಗಳು ಜನಗಳ ಕಿವಿಗೆ ಹಿತವೆನಿಸಿ ಅವರನ್ನು ಆಕರ್ಷಿಸಿ, ಪ್ರತಿಪಾದಿಸಿದ ವಿಷಯಗಳ ಸಹಿತವಾಗಿ ಜನತೆಯ ಮನಸ್ಸಿನಲ್ಲಿ ನೆಲೆಸಿದವು. ಕಲೆಯು ಜನತೆಯ ಮಧ್ಯೆ ಜೀವಂತವಾಗಿ ಬೆಳೆಯಲು ಕಾರಣರಾದರು. ಪುರಂದರದಾಸರು ಕರ್ನಾಟಕದ ಹೊರಗಡೆಯೂ ಇಡೀ ದಕ್ಷಿಣ ಭಾರತದಲ್ಲಿ ಸಂಚರಿಸಿ ವಿಜಯ ನಗರದಲ್ಲಿ ಹೊಸ ವರ್ಚಸ್ಸಿನಿಂದ ವೃದ್ಧಿಯಾದ ಪರಂಪರಾಗತ ರಾಗಗಳು ಮತ್ತು ನಿರ್ಮಿತವಾದ ಹೊಸರಾಗಗಳನ್ನೂ ಜನತೆಯ ಮಧ್ಯೆ ಪ್ರಸರಿಸಲು ಕಾರಣರಾದವರು."[11]

ಬಿ.ವಿ.ಕೆ ಶಾಸ್ತ್ರಿಯವರು 'ಸಂಗೀತ ಮತ್ತು ಕನಕದಾಸರು' ಎಂಬ ಲೇಖನದಲ್ಲಿ ಹೇಳಿರುವ ಮೇಲಿನ ಮಾತುಗಳಿಂದ ಒಂದು ಅಂಶವು ವಿದಿತವಾಗುತ್ತದೆ. ಭಕ್ತಿ ಹಾಗೂ ಸಂಗೀತ ಇವೆರಡೂ ಪರಸ್ಪರ ಪೂರಕ ಹಾಗೂ ಪ್ರೇರಕ. ಹರಿದಾಸರು ಸಂಗೀತಶಾಸ್ತ್ರಜ್ಞರಾಗಿದ್ದರೂ ಅವರ ಸಂಗೀತ ಪಾಂಡಿತ್ಯ ಪ್ರದರ್ಶನದ ಉದ್ದಿಶ್ಯವನ್ನು ಹೊಂದಿರದೆ ಸ್ವಯಂ ಪ್ರೇರಿತವಾಗಿ 'ಸ್ವಾಂತಃ ಸುಖಾಯ' ಎಂಬ ಭಾವದಿಂದ ಪರಿಪ್ಲುತವಾದುದು. ಭಕ್ತಿಯೇ ಇದರ ಮೂಲ ಸ್ರೋತ. ಗಾನಲೋಲನಾದ ಭಗವಂತನನ್ನು ಒಲಿಸಿಕೊಳ್ಳುವುದೇ ಧ್ಯೇಯ. ವಾಗ್ಗೇಯಕಾರರ ಕೃತಿಗಳಲ್ಲಿ ರಾಗವಿನ್ಯಾಸ ಮುಖ್ಯ, ಸಾಹಿತ್ಯ ಅದಕ್ಕೆ ಅವಲಂಬನ ಮಾತ್ರ. ಆದರೆ ಕನ್ನಡದ ಸಂತಕವಿಗಳು ಸಾಹಿತ್ಯ ಮುಖ್ಯವಾಗಿ (ಹರಿದಾಸರ ಕೃತಿಗಳಲ್ಲಿ) ಆಧ್ಯಾತ್ಮ ತತ್ವ, ಲೋಕನೀತಿ ಮತ್ತು ರಾಗಸ್ವರೂಪ ಇವುಗಳ ತ್ರಿವೇಣಿ ಸಂಗಮ. ಈ ಮೂರೂ ಸಮಪ್ರಧಾನ. ಆದ್ದರಿಂದ ಪ್ರೊ ರಾಜಗೋಪಾಲಾಚಾರ್ಯರು ಹೇಳುತ್ತಾರೆ[12] 'ಇಂದಿನ ಹಲವು ರಾಗಗಳ ಪ್ರಾಚೀನ ರೂಪವನ್ನು ತಿಳಿಯಲು ನಾವು ದಾಸ ಸಾಹಿತ್ಯವನ್ನೇ ಆಶ್ರಯಿಸಬೇಕು'.

ಇಂದು ಕೂಡಾ ಸಂತ ಭದ್ರಗಿರಿ ಅಚ್ಯುತದಾಸರು, ದಿ। ಬಾಳಪ್ಪ ಹುಕ್ಕೇರಿ, ಶ್ರೀ ವಿದ್ಯಾ ಭೂಷಣರು, ದಿ। ಸಿ.ಅಶ್ವಥ್ ಮೊದಲಾದ ಕಲಾವಿದರ ಮೂಲಕ ಕನ್ನಡದ ಸಂತಕವಿಗಳ ಕೃತಿಗಳು ಲೋಕಪ್ರಿಯವಾಗಲು ಕಾರಣ, ಅವರಲ್ಲಿರುವ ಸಂಗೀತ ಶಾಸ್ತ್ರಜ್ಞತೆಗಿಂತಲೂ, ಭಕ್ತಿವಿಶೇಷವೇ ಎನ್ನುವುದು ಬಹು ಜನರ ಅಭಿಪ್ರಾಯವಾಗಿದೆ. ಇಂದು ವಚನ ಸಾಹಿತ್ಯ ಮತ್ತು ದಾಸಸಾಹಿತ್ಯವು ಪ್ರವೇಶ ಮಾಡದೇ ಇರುವ ರಂಗವೇ ಇಲ್ಲ ಅನ್ನಬಹುದು. ಪೂಜೆ, ಸಂಕೀರ್ತನೆ, ಶಿಕ್ಷಣ, ಭಜನೆ, ಹರಿಕಥೆ, ಯಕ್ಷಗಾನ, ರಂಗಭೂಮಿ, ಸಂಗೀತ ಕಚೇರಿ, ಭರತನಾಟ್ಯ, ಸಿನಿಮಾ, ದೂರದರ್ಶನ, ಬೀದಿ ಹಾಡುಗಳು ಎಲ್ಲೆಂದರಲ್ಲಿ ವ್ಯಾಪಿಸಿದೆ, ಜನಪ್ರಿಯವೂ ಆಗಿದೆ.

'ಆರೆಂಟು ಶತಮಾನಗಳಿಂದ ತಲೆಯಿಂದ ತಲೆಮಾರಿಗೆ ಹರಿದು ಬಂದ ಈ ಸಾಹಿತ್ಯ ವಾಹಿನಿ ಇಂದಿಗೂ ನಿತ್ಯನೂತನವಾಗಿರಲು ಇದರಲ್ಲಿರುವ ಸಂಗೀತ ಮೌಲ್ಯವೂ ಒಂದು ಕಾರಣ' ಅನ್ನುತ್ತಾರೆ ಪ್ರೊ. ಎಂ.ರಾಜಗೋಪಾಲಾಚಾರ್ಯರು.[13] ಇಷ್ಟೇ ಅಲ್ಲದೆ ಇನ್ನೊಂದು ಕಾರಣವನ್ನು ಕೊಡುತ್ತಾರೆ.

'ದಾಸಸಾಹಿತ್ಯದಲ್ಲಿ ರಾಗಗಳು ತಮ್ಮ ಭಾವಾಭಿನಯ ಸಾಮರ್ಥ್ಯದಿಂದ ನಮ್ಮ ಮನಸ್ಸನ್ನು ತಟ್ಟುತ್ತದೆ. ಕೆಲವೊಮ್ಮೆ ತಮ್ಮ ನಿಜರೂಪವನ್ನು ಮರೆ ಮಾಚಿಯೂ ಭಾವಸ್ಪಂದನವನ್ನು ಉಂಟುಮಾಡುತ್ತಾನೆ.'[14]

ಇನ್ನೂ ಒಂದು ವೈಶಿಷ್ಟ್ಯವೆಂದರೆ 'ಈ ಸಾಹಿತ್ಯದಲ್ಲಿ ಅದರ ರಾಗಲಯಗಳು ಬೆಸುಗೆಗೊಂಡಿರುತ್ತದೆ. ಅವನ್ನು ಬೇರ್ಪಡಿಸಿದರೆ ಎರಡೂ ಸಪ್ಪೆಯೆನಿಸಬಹುದು. ಸಂಗೀತ ಸಾಹಿತ್ಯ ಎರಡೂ ಇಲ್ಲಿ ಅವಳಿ ಜವಳಿಯಾಗಿ ಹುಟ್ಟಿಕೊಂಡಿವೆ. ಇವೆರಡಕ್ಕೂ ಇಲ್ಲಿ ಬಿಡಿಸಲಾಗದ ಬಾಂಧವ್ಯ ಅವಿನಾಭಾವ ಇದೆ....'[15]

ಈ ರೀತಿ ಸಂಗೀತ, ಸಾಹಿತ್ಯಗಳ ಅವಿನಾಭಾವ ಸಂಬಂಧದ ಜೊತೆಗೆ ಭಕ್ತಿ, ಅನುಭಾವ ಈ ಸಾಹಿತ್ಯದ ಅಂತಃಸ್ರೋತವಾಗಿದ್ದುದರ ಕಾರಣ ಈ ಸಾಹಿತ್ಯವು ಜನಮಾನಸವನ್ನು ಮುಟ್ಟಲು ಸಮರ್ಥವಾಗಿದೆ ಎನ್ನಬಹುದು.

ಈ ಕಾರಣದಿಂದಲೇ ಬಿ.ವಿ.ಕೆ ಶಾಸ್ತ್ರಿಯವರು ಹೇಳುವಂತೆ 'ಈ ಹಿಂದಿನ ಶತಮಾನದ ಅರ್ಧಭಾಗದವರೆಗೂ, ಭಜನೆ ಗೋಷ್ಠಿಗಳಲ್ಲಿ ಮತ್ತು ಮನೆಗಳಲ್ಲಿ ಹಾಡುತ್ತಿದ್ದ ಹೆಂಗಸರಾಗಲೀ, ಭಜನೆ ಮಾಡುವವರಾಗಲೀ ಆನೇಕ ಮಂದಿ ಸಂಗೀತ ಬಲ್ಲವರಲ್ಲ. ಪರಂಪರೆಯಿಂದ ಬಂದ ಕೀರ್ತನೆಗಳನ್ನು ಕಿವಿಯಿಂದ ಕೇಳಿ ಕಲಿತವರು, ಸಂಗೀತದ ನಿಯಮ ತಿಳಿಯದಿದ್ದರೂ ಅವರು ಹಾಡುತ್ತಿದ್ದ ರಾಗಗಳ ಆಕಾರ ಸ್ವಚ್ಛವಾಗಿರುತ್ತಿತ್ತು, ಸರಳವಾಗಿರುತ್ತಿತ್ತು.'[16]

ಪುರಂದರದಾಸರು 'ಕರ್ನಾಟಕ ಸಂಗೀತ ಪಿತಾಮಹ'ರೆನಿಸಿದ್ದರೂ ಹರಿದಾಸರು ಪ್ರಚುರ ಪಡಿಸಿದಂತಹ ಸಂಗೀತವು ಸರಳವಾದ ಸಂಗೀತ, ಸುಗಮವಾದ ಭಕ್ತಿ ಸಂಗೀತ. ಈ ಸರಳ ಸಂಗೀತದ ಕುರಿತಾಗಿ ವಿದ್ವಾಂಸರಾದ ಎಸ್.ಕೃಷ್ಣಮೂರ್ತಿಯವರು ಹೀಗೆ ಹೇಳುತ್ತಾರೆ:[17]

"ಬುದ್ಧಿಮಟ್ಟದ ಸಂಗೀತ, ಶಾಸ್ತ್ರ, ವ್ಯಾಕರಣ, ಗಣಿತ ಹಿಂದಕ್ಕೆ ಸರಿದಾಗ, ಭಾವ ಮುಂದಾಗುತ್ತದೆ. ಸಾಹಿತ್ಯ, ಸೌಂದರ್ಯ, ರಾಗತಾಳಗಳ ಸರಳ ಶೈಲಿಯಿಂದಾಗಿ ಸಂಗೀತಕ್ಕೆ ಸರಳ ಸ್ವರೂಪ ಬರುತ್ತದೆ. ದೇವರ ನಾಮ, ವಚನ, ಕನ್ನಡಗೀತೆ, ಜಾವಳಿ, ತೇವಾಕಂ, ತಿರುಪ್ಪಗಳ್, ಹಿಂದೀ ಭಜನ್, ಗೋಷ್ಠಿಗಾನ ಮುಂತಾದವು ಈ ಸರಳ ಸಂಗೀತ ಅಥವಾ ಸುಗಮ ಸಂಗೀತ ಅಥವಾ ಭಾವ ಸಂಗೀತದ ಪರಿಕರಗಳು. ಪಂಡಿತ ಪಾಮರರೆಲ್ಲರಿಗೂ ರುಚಿಸುವ ಸಂಗೀತ ಇದು."

ಕನ್ನಡದ ಸಂತ ಸಾಹಿತ್ಯದ ಅಥವಾ ಒಟ್ಟಾರೆ ಭಕ್ತ ಕವಿಗಳ ಸಾಹಿತ್ಯದ ಚಿರಂತನತೆಗೆ ಲೋಕಪ್ರಿಯತೆಗೆ ಕಾರಣವಾದ ಮತ್ತೊಂದು ವೈಶಿಷ್ಟ್ಯದ ಕುರಿತು ವಿದ್ವಾಂಸರಾದ ಡಿ.ಆರ್. ನಾಗರಾಜ್‌ರವರು ಹೀಗೆ ಹೇಳುತ್ತಾರೆ:[18] 'ಭಕ್ತಿ ಕವಿಗಳನೇಕರು ಸ್ವತಃ ತಮ್ಮ ಕಾಯಕದಿಂದ, ಇಲ್ಲವೇ ಸಾಮಾನ್ಯ ಜೀವನದಿಂದ ಲಘು ವಿದ್ಯಮಾನಗಳನ್ನು ತಂದು ಘನವನ್ನು ವಿವರಿಸಲು ಪ್ರಯತ್ನಿಸುತ್ತಾರೆ. ಅದರಲ್ಲೂ ಶೂದ್ರಾತಿಶೂದ್ರ ವರ್ಗಗಳಿಂದ ಬಂದ ೧೨ ನೆಯ ಶತಮಾನದ ವಚನಕಾರರು ಈ ಕೆಲಸವನ್ನು ತುಂಬ ಶೃದ್ಧೆಯಿಂದ ಮಾಡುತ್ತಾರೆ. ಈ ಪ್ರಕ್ರಿಯೆಯನ್ನು ಸಾಮಾನ್ಯೀಕರಿಸಿ ಹೇಳುವುದಾದರೆ, ಭಕ್ತಿಕಾವ್ಯದ ಈ ರೀತಿಯ ಕಾವ್ಯ ಮಾದರಿಯನ್ನು "ಲಘುವಿನ ಘನೀಕರಣ ಮಾದರಿ" ಎಂದು ಕರೆಯಲು ಸಾಧ್ಯ'.

ಎಲ್ಲಾ ಲಲಿತಕಲೆಗಳಲ್ಲಿ ಸಂಗೀತ ಕಲೆಯು ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದೆ. ಸಂಗೀತವು ಶ್ರವಣ ವಿದ್ಯೆಯಾಗಿದ್ದು, ಆನಂದದ ಆವಿರ್ಭಾವ ಸಾಧನವಾಗಿದೆ. ಆನಂದವು ಈಶ್ವರನ ಸ್ವರೂಪವಾಗಿದೆ. ಆದ್ದರಿಂದ ಸಂಗೀತವು ಈಶ್ವರನ ಸ್ವರೂಪವೆಂದು ನಿರ್ಣಯವಾಗುತ್ತದೆ. ಸಾಧನೆ ಮತ್ತು ಸಾಧ್ಯ ಎರಡೂ ಸುಖರೂಪವಾಗಿರುವುದೇ ಸಂಗೀತಕಲೆಯ ವೈಶಿಷ್ಟ್ಯವಾಗಿದೆ. ಸಂಗೀತದಿಂದೊಡಗೂಡಿ ಭಗವದ್ಭಜನೆ ಮಾಡಿದಾಗ ಮನಸ್ಸು ಶೀಘ್ರವಾಗಿ ಭಗವಂತನ ನಾಮರೂಪದಲ್ಲಿ ಲೀನವಾಗುತ್ತದೆ. ಸುಮ್ಮನೆ ನಾಮೋಚ್ಚಾರಣೆ ಮಾಡಿದರೆ ಕೇವಲ ತುಟಿಗಳು ಅಲುಗುತ್ತವೆ. ಧ್ವನಿಯೂ ಬರಬಹುದು. ಆದರೆ ಮನಸ್ಸು ಆ ನಾಮದಲ್ಲೇ ಇರಬಹುದೆಂಬ ಭರವಸೆ ಇಲ್ಲ. ಹತ್ತು ಕಡೆಗೆ ಹರಿಯುವ ಹುಚ್ಚು ಮನಸ್ಸು ಸಂಗೀತ ಸಂಕೀರ್ತನದಿಂದ ಒಂದೆಡೆ ನಂತುಹೋಗಿ ಜೀವ – ಈಶ್ವರರ ಸಾಮರಸ್ಯ ಸಿದ್ಧವಾಗುತ್ತದೆ.

ಸಮ್+ಗೀತ =ಸಂಗೀತ ಹೀಗೆ ಈ ಶಬ್ದದ ವಿಭಾಜನವಾಗಿದೆ. 'ಸಮ್' ಈ ಉಪಸರ್ಗವು ಹಾಡುಗಾರಿಕೆಯಲ್ಲಿನ ಶ್ರುತಿಮಾಧುರ್ಯವನ್ನು ವ್ಯಕ್ತಮಾಡುತ್ತದೆ.

**"ಗೀತಂ ವಾದ್ಯಂ ಚ ನೃತ್ಯಂ ಚ ತ್ರಯಂ ಸಂಗೀತಮುಚ್ಯತೇ"**

ಗೀತ –ವಾದ್ಯ –ನೃತ್ಯ ಈ ಮೂರು ಸೇರಿ ಸಂಗೀತ ಎನಸಲ್ಪಡುತ್ತದೆ. ಹೀಗೆ ಭರತಮುನಿಯು ಸಂಗೀತದ ವ್ಯಾಖ್ಯೆ ಮಾಡಿದ್ದಾನೆ. ಈ ವ್ಯಾಖ್ಯೆಯಲ್ಲಿ

ಗೀತದ ಜೊತೆಗೆ ವಾದ್ಯ – ನೃತ್ಯ ಈ ಎರಡು ಉಪಾಂಗಗಳ ಸಮಾವೇಶ ಮಾಡಿದ್ದಿದೆ. ಇದರಲ್ಲಿ ಗೀತವೇ ಮುಖ್ಯವಿರುತ್ತದೆ. ವ್ಯವಹಾರದಲ್ಲಿ ಸಂಗೀತವು ಗೀತಗಾಯನ ಈ ಅರ್ಥದಲ್ಲೇ ಪ್ರಯುಕ್ತವಾಗಿದೆ. ಅದರೂ ಮೇಲಿನ ಮೂರರ ಅನ್ಯೋನ್ಯ ಸಂಬಂಧವು ಇದ್ದೇ ಇದೆ. ಗಾಯನಕ್ಕೆ ಯಾವುದಾದರೊಂದು ವಾದ್ಯದ ಅವಶ್ಯಕತೆ ಇದೆ. ಹಾಗೆಯೇ ನೃತ್ಯಕ್ಕೆ ಗೀತ ಮತ್ತು ವಾದ್ಯಗಳ ಅವಶ್ಯಕತೆ ಇದ್ದೆ ಇದೆ. ಹಾಡುವವನ ಸ್ವರಗಳ ನಕಲು ವಾದ್ಯದಿಂದ ಆದರೆ, ಆ ಎರಡರಿಂದ ಆಗುವ ಆನಂದವು ನೃತ್ಯದಲ್ಲಿ ಮುದ್ರಾಭಿನಯದ ದ್ವಾರಾ ಪ್ರಕಟಿಸಲ್ಪಡುತ್ತದೆ.

**"ಚೈತನ್ಯಂ ಸರ್ವಭೂತಾನಾಂ ವಿವೃತಂ ಜಗದಾತ್ಮನಾ ।**
**ನಾದಬ್ರಹ್ಮ ತದಾನಂದಮದ್ವಿತೀಯಮುಪಾಸ್ಮಹೇ ॥**

– (ಸಂಗೀತ ರತ್ನಾಕರ –1–31)

ಯಾವುದು ಸರ್ವಭೂತರ ಚೈತನ್ಯವಾಗಿದೆಯೋ ಮತ್ತು ಯಾವುದನ್ನು ಜಗದಾತ್ಮನು ವ್ಯಾಪಿಸಿರುವನೋ ಅಂಥ ಆ ಅದ್ವಿತೀಯ ಅನಂದಮಯ ನಾದಬ್ರಹ್ಮನ ಉಪಾಸನೆ ಮಾಡುತ್ತೇನೆ.

**"ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿಗಾನ ರಸಂ ಫಣೀ"**

ಸಂಗೀತವನ್ನು ಶಿಶುವು, ಪಶುವು, ಹಾವು ಕೂಡಾ ತಿಳಿಯುತ್ತದೆ. ಕಿವಿಗೊಟ್ಟು ಕೇಳುತ್ತವೆ. ಎಂಬ ಸಂಸ್ಕೃತ ಉಕ್ತಿ ಒಂದಿದೆ. ಇಲ್ಲಿ ಶಿಶು –ಪಶು –ಫಣೀ ಅಂದರೆ ಶಿಶು ಬಾಲಕೃಷ್ಣ, ಪಶು ಹನುಮಂತ, ಫಣೀ ಎಂದರೆ ಮಹಾಶೇಷ. ಸಂಗೀತ ಅಂದರೆ ಏನು ಎಂಬುದನ್ನು ಸಂಪೂರ್ಣವಾಗಿ ತಿಳಿದವರು ಇವರುಗಳು ಮಾತ್ರ – ಎಂಬುದೇ ಇಲ್ಲಿ ಕವಿಯ ಆಶಯವಾಗಿದೆ. ನಾದಮಯವಾದ ಸಂಗೀತವು ಭಾವ ಪ್ರಧಾನವಾದುದು. ವೇದಮಯ ಸಾಹಿತ್ಯವು ಜ್ಞಾನ ಪ್ರಧಾನವಾದುದು. ಭಾವದಿಂದೊಡಗೂಡಿದ ಜ್ಞಾನವೇ ಜೀವನದ ಪರಿಪೂರ್ಣತೆಗೆ ಇರುವ ಸಾಧನ.

ಮಾನವನಿಗೆ ಭಾವವು ಎಷ್ಟು ಶೀಘ್ರವಾಗಿ ಜಾಗೃತವಾಗಿ ಮುಟ್ಟಬಲ್ಲುದೋ, ವಿಚಾರವು ಅಷ್ಟು ಬೇಗನೇ ತಲುಪಲಾರದು. ಸಂಗೀತವು ಭಾವ ಪ್ರಧಾನವಾದುದರಿಂದ ಶ್ರೋತೃಗಳಿಗೆ ನೇರವಾಗಿ ಅದರ ಅನುಭೂತಿ ಉಂಟಾಗುತ್ತದೆ. ಭಾವವು ಬೆಳೆದಾಗ ಮನುಷ್ಯನು ಕೋಮಲನಾದರೆ, ವಿಚಾರ ಮಾತ್ರ ಹೆಚ್ಚಾದಾಗ ಕರ್ಕಶನಾದಾನು. ಮಾನವನ ಸರ್ವಾಂಗೀಣ ವಿಕಾಸಕ್ಕಾಗಿ ಮೆದುಳು (ವಿಚಾರ) ಮತ್ತು ಹೃದಯ (ಭಾವ) ಎರಡೂ ಸಮಪ್ರಮಾಣದಲ್ಲಿ ಬೆಳೆಯಬೇಕು. ಇವು ಅನ್ಯೋನ್ಯ ಸಂಬಂಧವುಳ್ಳವುಗಳು. ಕೇವಲ ಭಾವ ಮಾತ್ರವಿದ್ದರೆ ಕುರುಡನಾದಾನು. ಕೇವಲ ವಿಚಾರ ಮಾತ್ರ ಬೆಳೆದರೆ ಕುಂಟನಾದಾನು.

ಜಗತ್ತಿನಲ್ಲಿ ದೇವರು–ಭಕ್ತಿ ಇತ್ಯಾದಿಗಳು ಭಾವಪ್ರಧಾನವಾದ ವಿಷಯಗಳೇ ಆಗಿವೆ. ಆ ಭಾವ ಜಾಗೃತಿಗೆ, ಪುಷ್ಟಿಗೆ ಭಾವಪ್ರಧಾನವಾದ ಸಂಗೀತವೇ ಸಾಧನವಾಗಿದೆ. ಸಂಗೀತದಿಂದ ಭಾವ– ರಸಗಳು ಎಷ್ಟು ಬೇಗನೆ ಸ್ಫುರಣಗೊಳ್ಳುವವೋ, ಅಷ್ಟು ಬೇಗ ಸಾಹಿತ್ಯದಿಂದ ಸಾಧ್ಯವಾಗದು. ಅರ್ಧ ಗಂಟೆ ಮಾತಿಗಿಂತ ಐದು ನಿಮಿಷದ ಸಂಗೀತವು ಹೆಚ್ಚು ಭಾವವನ್ನು

ಉತ್ಪತ್ತಿ ಮಾಡೀತು. ಆದರೆ ಸಂಗೀತವನ್ನು ಕೇವಲ ಸ್ವರಗಳ ಕಸರತ್ತಾಗಿಸದೆ,

ಭಾವಪೂರ್ಣವಾಗಿ ಹಾಡಿದಾಗ ಮಾತ್ರ, ಕೇಳುವವರ ಹೃದಯಕ್ಕೆ ನೇರವಾಗಿ ಮುಟ್ಟಬಲ್ಲುದು. ಸಂಗೀತವು ಕೇವಲ ಕರ್ಣಾನಂದವಾದರೆ ಸಾಲದು, ಹೃದಯಂಗಮವಾಗಿಯೂ ಇರಬೇಕು.

ಶ್ರೀ ಪುರಂದರದಾಸರು ತಮ್ಮ ಒಂದು ದೇವರನಾಮದಲ್ಲಿ **"ಕೇಳನೋ ಹರಿ ತಾಳನೋ ! ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ"** ಎಂದು ಹಾಡಿದ್ದಾರೆ. ಇಲ್ಲಿ ಪ್ರೇಮವೆಂದರೆ ಭಕ್ತಿ ಎಂದರ್ಥ. "ಸಾ ತ್ವಸ್ಮಿನ್ ಪರಮ ಪ್ರೇಮರೂಪಾ" (ದೇ.ನಾ.ಭ.ಸೂತ್ರ ೨) ಭಕ್ತಿ ಇಲ್ಲದ ಸಂಗೀತವನ್ನು ದೇವರು ಕೇಳಲಾರ. ಜನರಿಗೂ ಬೇಸರ ತಂದೀತು.

**"ನಾನಾ ಬಗೆಯ ರಾಗ ಭಾವ ತಿಳಿದು ಸ್ವರ ।**

**ಜ್ಞಾನ ಮನೋಧರ್ಮ ಜಾತಿಯಿದ್ದು ॥**

**ದಾನವಾರಿಯ ದಿವ್ಯ ನಾಮ ರಹಿತವಾದ ।**

**ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ॥**

**ಕೇಳನೋ ಹರಿ ತಾಳನೋ"**

ಸಂಗೀತ ಶಾಸ್ತ್ರದ ಬಗ್ಗೆ ವಿಪುಲ ಜ್ಞಾನವಿದ್ದು, ಅನೇಕ ರಾಗ- ರಾಗಿಣಿಗಳನ್ನು ಲೀಲಾಜಾಲವಾಗಿ ಹಾಡುವ ಪರಿಣತಿ ಇದ್ದು, ಅದರಲ್ಲಿ ಪ್ರೇಮ -ಭಕ್ತಿ ಇಲ್ಲದಿದ್ದರೆ, ಹರಿಯ ನಾಮಾಮೃತವಿಲ್ಲದಿದ್ದರೆ, ದೇವರು ಮನವಿತ್ತು ಕೇಳಲಾರ. "ತುಂಬುರು ನಾರದರ ಗಾನ ಕೇಳುವ ಹರಿ । ನಂಬಲಾರನು ಈ ಡಂಭಕದ ಕೂಗಾಟ" ಎಂದು ದಾಸರು ಹೇಳಿರುವರು. ಹಾಗಾದರೆ ದೇವರು ಎಂಥ ಗಾನವನ್ನು ಕೇಳುವನೆಂದರೆ,

**"ಅಡಿಗಡಿಗಾನಂದ ಬಾಷ್ಪ ಪುಳಕದಿಂದ ।**

**ನಡೆನುಡಿಗೆ ಶ್ರೀ ಹರಿಯೆನ್ನುತಾ ॥**

**ದೃಢಭಕ್ತರನು ಕೂಡಿ ಹರಿಕೀರ್ತನೆ ಪಾಡಿ ।**

**ಕಡೆಗೆ ಪುರಂದರ ವಿಠ್ಠಲನೆಂದರೆ ಕೇಳ್ವ ॥"**

ಇಂಥ ಭಕ್ತಿ -ಪ್ರೇಮಯುಕ್ತವಾದ ಸಂಗೀತವು ಪರಮಾತ್ಮನಿಗೆ ಪ್ರಿಯವಾದೀತು. ದೇವರಿಗೆ ಪ್ರೀತಿ ಆದರೆ, ಸರ್ವರ ಅಂತರ್ಯಾಮಿಯು ಅವನೇ ಇರುವುದರಿಂದ ಪ್ರತಿಯೊಬ್ಬ ಶ್ರೋತೃವಿಗೂ ಆನಂದವಾಗಲೇಬೇಕು. ಭಾವ- ಭಕ್ತಿ -ಪ್ರೇಮ- ನವರಸಗಳಿಂದ ಒಡಗೂಡಿರಬೇಕೆಂಬುದೇ ಸಂಗೀತದ ಲಕ್ಷಣವಾದರೆ, ಕೇಳುಗರ ಹೃದಯವರಳಿ ಆನಂದಮಯರಾಗುವುದೇ ಅದರ ಫಲ.

ಇನ್ನು ಭಕ್ತಿಯಂತೆ ಸಂಗೀತವೂ ಒಂದು ಸಾಧನೆಯಾಗಿರುವ ಕಾರಣ ಉಪಾಸನಾ ದೃಷ್ಟಿಯಿಂದ ಸಂಗೀತ ಸಾಧನೆಯನ್ನು ಅಳವಡಿಸಿಕೊಂಡರೆ ಅದೂ ಕೈವಲ್ಯದ ಬಾಗಿಲನ್ನು ತೆರೆಯುತ್ತದೆ ಎನ್ನುವುದು ಭಾರತೀಯ ಸಂಗೀತ ಪರಂಪರೆಯ ನಂಬಿಕೆಯಾಗಿದೆ.

(Many saint musicians have in the past used the medium of music to reach their ultimate 'goal'. Just as our ancient shastras advice us to embrace vanaprastha (renunciation) towards the end of life ; in the case of music too, after a particular stage an urge comes from within which inspires the 'real artist' to sing in selfless devotion and complete dedication -like a pujari (priest) sing in the temple. Then finally he will realise that he is attuned to the sublime music throbbing in the universe and that is the eternal 'Naad-Brahma'- the path to his goal will light up and shine!)[19]

## ೫.೩ ಯಕ್ಷಗಾನ ಪ್ರದರ್ಶನಗಳ ಪಾತ್ರ

ಕರಾವಳಿ ಕರ್ನಾಟಕದಲ್ಲಿ ಭಕ್ತಿಸಿದ್ಧಾಂತದ ಪ್ರಸಾರದಲ್ಲಿ ಮಹತ್ವದ ಪಾತ್ರವಹಿಸಿದ ಗಂಡುಕಲೆ 'ಯಕ್ಷಗಾನ'. ಕರಾವಳಿ ಕರ್ನಾಟಕದಲ್ಲಿ ಬಯಲಾಟವನ್ನು ಪ್ರದರ್ಶಿಸುವಂತಹ ಮೇಳಗಳನ್ನು 'ದಶಾವತಾರ ಮೇಳ' ಎಂದು ಕರೆಯುತ್ತಾರೆ. ಅಂತಹ ಮೇಳಗಳಲ್ಲಿ ಪ್ರಮುಖವಾದುದು ಶ್ರೀ ಕ್ಷೇತ್ರ ಕಟೀಲು ಇದರ ಆಶ್ರಯವುಳ್ಳ ಕಟೀಲು ಮೇಳ. ಕರಾವಳಿಯ ದಿನಪತ್ರಿಕೆ 'ಹೊಸದಿಗಂತ'ವು 1-12-2010 ಕಟೀಲು ಯಕ್ಷಗಾನ ಮೇಳಗಳ ಕುರಿತಾದ ವಿಶೇಷ ಪುರವಣಿಯನ್ನು(**'ದುರ್ಗಾನಯನೋತ್ಸವ'**ವನ್ನು) ಹೊರತಂದಿತ್ತು. ಒಂದು ಭಕ್ತಿ ಕ್ಷೇತ್ರಕ್ಕೂ ಹಾಗೂ ಒಂದು ಕಲಾಪ್ರಕಾರದ ವಿಕಾಸಕ್ಕೂ ಇರುವ ಸಂಬಂಧ, ಜನರಲ್ಲಿ ಭಕ್ತಿಯ ವಿಕಾಸದಲ್ಲಿ ಕಲಾ ಪ್ರಕಾರವು ವಹಿಸುವ ಪಾತ್ರ ಈ ವಿಚಾರಗಳ ಕುರಿತಾಗಿ ಯಕ್ಷಗಾನ ವಿದ್ವಾಂಸರಿಂದ ಲೇಖನಗಳು ಪ್ರಕಟಗೊಂಡಿದ್ದವು. ಅವುಗಳಿಂದ ಆಯ್ದ ಕೆಲವು ಅಂಶಗಳು ಇಂತಿವೆ:

(೧) ಯಕ್ಷಗಾನದ ಸಭಾಲಕ್ಷಣವನ್ನು ನರೂಪಿಸುವಂತಹ 'ಪಾರ್ತಿಸುಬ್ಬನ ಯಕ್ಷಗಾನಗಳು' ಈ ಗ್ರಂಥದಲ್ಲಿ ಯಕ್ಷಗಾನದ ಮುಖ್ಯ ಪಾತ್ರಧಾರಿಯಾದ ಭಾಗವತನ ಲಕ್ಷಣವನ್ನು ಈ ರೀತಿ ಹೇಳಲಾಗಿದೆ

**'ಭಕಾರೋ ಭಕ್ತಿಪೂರ್ವೇಣ ಗಕಾರೋ ಗರ್ವವರ್ಜಿತಃ।**

**ವಕಾರೋ ವಾಕ್ಯಪಾಠೇನ ತಕಾರಸ್ತತ್ವನಿರ್ಣಯಃ॥೫೯॥'**– (ಪುಟ 614)

ಭಕಾರ ಭಗವದ್ಭಕ್ತಿಗೆ, ಗ – ಗರ್ವರಾಹಿತ್ವಕ್ಕೆ, ವಕಾರವು ವಾಕ್ಯಾರ್ಥ ಅನುಭವವನ್ನು ಮತ್ತು ತಕಾರವು ತಕಾರವು ತಾತ್ವಿಕ ವಿಷಯಕ್ಕೆ ಸಂಬಂಧಿಸಿದೆ ಎಂಬುದನ್ನು ಸೂಚಿಸುತ್ತದೆ. 'ಭಾಗವತನು ಭಗವದ್ಭಕ್ತನಾಗಿರಬೇಕೆಂದು ವಿಷಯವನ್ನು ಸ್ವಲ್ಪ ವೈಚಾರಿಕವಾಗಿ ವಿವೇಚಿಸಿದರೆ, ಹಲವಾರು ವಿಚಾರಗಳು ನಮಗೆ ದೊರಕುತ್ತವೆ. ಹಿಂದೆ ಯಾವುದೇ ಮೇಳಕ್ಕೆ ಕಟೀಲು ಮೇಳದಂತೆ ಒಂದು ದೇವಸ್ಥಾನದ ಹಿನ್ನೆಲೆಯಿತ್ತು. ಹರಕೆ ರೂಪದಲ್ಲಿ ದೇವರ ಹೆಸರಿನಲ್ಲಿ ಜನ ಆಟವನ್ನು ಆಡಿಸುತ್ತಿದ್ದರು. ಆಗ ಒಂದು

ದೇವಾಲಯ, ಧರ್ಮ ಸಂಸ್ಕೃತಿಯ ವಿಚಾರಗಳ ಪ್ರತೀಕವಾದ ಮೇಳದಲ್ಲಿ ಭಾಗವತ ಅವುಗಳ ಪ್ರಧಾನ ಹರಿಕಾರನಾಗಬೇಕಾದರೆ ಅವನು ನಾಸ್ತಿಕನಾಗಿದ್ದರೆ ಇದೆಲ್ಲ ಸಾಧ್ಯವೇ?

ಇಲ್ಲಿ ಮೇಳದ ಉಳಿವು ಮತ್ತು ಉದ್ದೇಶಗಳಿಗಾಗಿ ಭಾಗವತನು ಆಸ್ತಿಕನಾಗಿರಬೇಕೆಂಬುದು ಒಂದು ವಿಚಾರ. ಅಲ್ಲದೆ ಈ ಹಿಂದಿನಿಂದಲೂ ಯಾವುದೇ ಮೇಳಕ್ಕೆ ಆ ಮೇಳದ ಕ್ಷೇತ್ರದ ದೇವರ ಹೆಸರಿನೊಂದಿಗೆ 'ದಶಾವತಾರ ಯಕ್ಷಗಾನ ಮಂಡಳಿ' ಎಂಬ ನಾಮ ನಿರ್ದೇಶಿಸುತ್ತಿತ್ತು. ಅದಕ್ಕೆ ಕಾರಣ ಹಿಂದೆ ದಶಾವತಾರಕ್ಕೆ ಸಂಬಂಧಿಸಿದ ರಾಮಾಯಣ, ಮಹಾಭಾರತಗಳಂತಹ ಪುರಾಣಾಧರಿತ ಪ್ರಸಂಗಗಳು ಪ್ರದರ್ಶಿಸಲ್ಪಡುತ್ತಿದ್ದವು. ಈ ಪ್ರಸಂಗದಲ್ಲಿ ಭಕ್ತಿಯೇ ಪ್ರಧಾನ ವಿಷಯವಾಗಿರುವುದರಿಂದ ಭಾಗವತ ಅಂತಹ ಪ್ರಸಂಗಗಳನ್ನು ಶ್ರದ್ಧೆಯಿಂದ ನಿರ್ದೇಶಿಸಿ ಭಾವಪೂರ್ಣವಾಗಿ ಹಾಡಬೇಕಾದರೆ ಅವನು ಭಗವದ್ಭಕ್ತನಾಗಿರಬೇಕು. ಇಲ್ಲಿ ಇನ್ನೊಂದು ವಿಚಾರವಿದೆ. ದಶಾವತಾರ ಮಹಾವಿಷ್ಣುವಿಗೆ ಸಂಬಂಧಪಟ್ಟದ್ದು. ಹಾಗೆಯೇ ಭಾಗವತ ಎಂಬ ಶಬ್ದಕ್ಕೂ ವೈಷ್ಣವ ಅಥವಾ ವಿಷ್ಣುಭಕ್ತನೆಂಬ ಅರ್ಥವ್ಯಾಪ್ತಿಯೂ ಇದ್ದು ಹಿಂದಿನ ದಶಾವತಾರ ಯಕ್ಷಗಾನ ಮಂಡಳಿಗಳಿಗೂ ಭಾಗವತನಿಗೂ ಒಂದು ವಿಶೇಷ ಸಂಬಂಧ ನಮಗೆ ಗೋಚರಿಸುತ್ತದೆ.'– ಲೇಖಕ: ಗಣೇಶ, ಪುಟ 5, 6

(೨) 'ಮೇಳ ಹೊರಡುವುದು ಹೀಗೆ'– ಕಟೀಲು ಮೇಳ ಹೊರಡುವ ವಿಧಾನವೂ ಒಂದು ಉಪಾಸನಾ ಪದ್ಧತಿಯೇ ಆಗಿದೆ. ಆ ವಿಧಾನವು ಇಂತಿದೆ: ಮೇಳ ಒಳಗಿರುವಾಗ

ಮೇ ತಿಂಗಳ ಕೊನೆಯಲ್ಲಿ ಆಸ್ರಣ್ಣರು(ಶ್ರೀ ಕ್ಷೇತ್ರದ ಪ್ರಧಾನ ಅರ್ಚಕರು) ಹೇಳುವ ಕಾರ್ತಿಕ ದೀಪೋತ್ಸವದ ಅನಂತರದ ಶುಭದಿನದಂದು ಮೇಳ ಹೊರಡುವುದು. ವೃಷಭ ಮಾಸದ 11ನೆಯ ದಿನ ಮೇಳ ಒಳಗಾಗುವುದು.

ಮೇಳ ಹೊರಡುವ ದಿನ ಬೆಳಿಗ್ಗೆ ದೇವರ ಮೂಜಾ ಕಿರೀಟಗಳ ಪ್ರತಿಷ್ಠೆ. ಸಾಯಂಕಾಲ ಪ್ರತಿ ಮೇಳದ ಭಾಗವತರಿಂದ ಪ್ರತ್ಯೇಕ ಪ್ರತ್ಯೇಕ ಗಣಪತಿ ಸ್ತುತಿ, ದುರ್ಗಾಸ್ತುತಿ. ಇದನ್ನು ತಾಳಮದ್ದಲೆ ಅಂತಲೂ ಕರೆಯುತ್ತಾರೆ. ಬಳಿಕ ವೀಳ್ಯ ಇಡುವುದು. ಭಾಗವತರಿಗೆ ವೀಳ್ಯದೆಲೆ ಕೊಡುವವರಿಗೆ, ವಾದ್ಯದವರಿಗೆ ಸೀರೆ ಪ್ರಸಾದ ನೀಡುವುದು. ಇತ್ತೀಚಿನ ವರ್ಷಗಳಲ್ಲಿ ಎಲ್ಲ ಕಲಾವಿದರಿಗೆ ಪ್ರಸಾದ ನೀಡಲಾಗುತ್ತದೆ. ಆಮೇಲೆ ದೇವತಾರಾಧನೆ ಪ್ರಾರ್ಥನೆ, ದೇವರ ಪೂಜೆ, ದೇವರ ಪ್ರಸಾದ ಹಾಕಿ ಅರ್ಚಕರಾದ ಆಸ್ರಣ್ಣರು ಭಾಗವತರಿಗೆ ಜಾಗಟೆ, ಹಿಮ್ಮೇಳದವರಿಗೆ ಚೆಂಡೆ, ಮದ್ದಲೆ, ಮೇಳವೊಂದರ ತಲಾ ಇಬ್ಬರು ಕಲಾವಿದರಿಗೆ ಗೆಜ್ಜೆಗಳನ್ನು ನೀಡುತ್ತಾರೆ. ದೇವರ ಎದುರು ಕುಣಿದು, ಚೌಕಿಗೆ ಹೋಗುತ್ತಾರೆ. ಅಲ್ಲಿ ಚೌಕಿ ದೇವರಿಗೆ ಪೂಜೆಯಾಗುತ್ತದೆ.–(ಪುಟ 6)

(೩) ಪ್ರಾತಃಕಾಲ ಆಟ ಮುಗಿಸಿ, ದೇವಸ್ಥಾನದ ಬಳಿಗೆ ಹೋಗಿ ಮಂಗಲ ಮಾಡುವುದು. ಸಂಪ್ರದಾಯ ವೇಷಗಳು ಹೋಗುವಾಗ ಮರಳಿ ಚೌಕಿಗೆ ಬರುವಾಗ 'ರಂಗನಾಯಕ ರಾಜೀವ ..........' ಎಂಬ ದಾಸರ ಪದ್ಯ ಹಾಡುವುದಿತ್ತು.

ಕಟೀಲು ಮೇಳದ ಮಹಿಮೆಯ ಕುರಿತು ಹಿಂದಿನಿಂದ ಬಂದ ಅನೇಕ ನಂಬಿಕೆಗಳನ್ನು ನಾವು ಹಿರಿಯರಿಂದ ಕೇಳಿದ್ದಿದೆ. ಆರಂಭ ಕಾಲದಲ್ಲಿ ಈ ಮೇಳದವರು ಒಂದು ಮನೆಯಲ್ಲಿ ಕುಡಿಯುವ ನೀರು ಕೇಳುವಾಗ, ನಾವು ಆಟದವರಿಗೆ ನೀರು ಕೊಡುವುದಿಲ್ಲ ಎಂದು ನಿಂದಿಸಿ ಕಳುಹಿಸಿದರಂತೆ, ಇವರು ಸಮೀಪದ ಬೇರೊಂದು ಮನೆಯಲ್ಲಿ ನೀರು ಕುಡಿದು ಹೋದರು, ಅದೇ ರಾತ್ರಿ ನೀರು ಕೊಡದವರ ಮನೆಗೆ ಬೆಂಕಿ ಬಿತ್ತಂತೆ. ಇದು ಮೇಳವನ್ನು ಸುಬ್ಬಣ್ಣ ಶ್ಯಾನುಭೋಗರು ನಡೆಸುತ್ತಿದ್ದ ಕಾಲದಲ್ಲಿ ನಡೆದ ಘಟನೆ, ಆಟ ನೋಡಿದರೆ ಹೊಟ್ಟೆಗಾಗುವುದಿಲ್ಲವೆಂದು ಹೇಳಿ ಲಘುವಾಗಿ ಮಾತನಾಡಿದವನೊಬ್ಬ ಮುಂದೆ ಅವನಿಗೆ ಆರಂಭವಾದ ಉದರವ್ಯಾಧಿ ಉಪಶಯನ ಹೊಂದಲು ಹತ್ತು ಆಟ ನೋಡುವೆನೆಂದು ಹರಕೆ ಹೇಳಬೇಕಾಯಿತು. ಆಟದವರು ಗಡಿಬಿಡಿಯಲ್ಲಿ ಬಿಟ್ಟು ಹೋದ ಕನ್ನಡಿಯನ್ನು ತೆಗೆದಿಟ್ಟ ಮನೆಯ ಯಾಜಮಾನನಿಗೆ ಕನಸಿನಲ್ಲಿ ಕನ್ಯೆಯೊಬ್ಬಳು ಕಾಣಿಸಿ, ನನ್ನ ಕನ್ನಡಿ ಇಟ್ಟುಕೊಳ್ಳಬೇಡ. ಕೊಂಡುಹೋಗಿ ಕೊಡು ಎಂದು ಹೇಳಿದ ಘಟನೆಯೊಂದಿದೆ. ತಾನು ಕಟ್ಟಿದ ಗೆಜ್ಜೆಯನ್ನು ಕೈಯಲ್ಲಿ ಹಿಡಿದುಕೊಂಡು ಇದೆಂತಹ ಗೆಜ್ಜೆ? ಗೆಜ್ಜೆಗೆ ಸ್ವರವಿಲ್ಲ. ಇದನ್ನು ಕಟ್ಟುವುದಕ್ಕಿಂತ ಕಟ್ಟದಿರುವುದು ಲೇಸು ಎಂದು ನಿಂದಿಸಿದ ಕಲಾವಿದನ ಪಾದಗಳಿಗೆ ನೋವು ಬಂದು ಅವನು ಶರಣಾಗತನಾದನೆಂಬ ಮತ್ತೊಂದು ಹೇಳಿಕೆಯಿದೆ. ಕಟೀಲು ಬೀದಿಯಲ್ಲಿ ಆಟವಾಗುವಾಗ ದೇವಿ ಬಂದು ಅಗೋಚರವಾಗಿ ಅಲ್ಲಿರುವ ರಕ್ತೇಶ್ವರಿ ಶಿಲೆಯಲ್ಲಿರುತ್ತಾಳೆಂಬ ಹಳೆಯ ಮಾತಿದೆ. ಇತ್ತೀಚೆಗೆ ಅಲ್ಲಿ ವೃತ್ತಾಕಾರದ ಪೀಠ ನಿರ್ಮಾಣ ಮಾಡಿದ್ದಿದೆ. – ಕಟೀಲು ಮೇಳದ ಗೆಜ್ಜೆ ಗುರುತುಗಳು... ಲೇಖಕ: ಪು. ಶ್ರೀನಿವಾಸ ಭಟ್ಟ ಕಟೀಲು

(೪) ಕಟೀಲು ಮೇಳದ ದೇವಿ ಮಹಾತ್ಮೆ ಪ್ರಸಂಗದ ಪ್ರದರ್ಶನ ಭೂಮಿತೂಕದ್ದು. ಸಾಕ್ಷಾತ್ ದೇವಿಯೇ ರಂಗಸ್ಥಳದಲ್ಲಿ ಸನ್ನಿಹಿತಳಾಗುತ್ತಾಳೆಂಬ ಶ್ರದ್ಧೆ, ಪ್ರತೀತಿಗಳು ಹಳೆಕಾಲದಿಂದಲೂ ಹರಿದುಬಂದಿದೆ. ಆ ಕಾಲದಲ್ಲಿ ಈಗಿನಂತೆ ಆಧುನಿಕ ರಂಗಪರಿಕರಗಳ ಸೌಲಭ್ಯವಿರಲಿಲ್ಲ. ದೇವಿಯ ವೇಷಧಾರಿ ಅಂದು ನೋಟಕರಿಗೆ ಮಾನವನಾಗಿ ಕಾಣಿಸುತ್ತಿರಲಿಲ್ಲ. ಪಾತ್ರಧಾರಿಯೂ ದೀಕ್ಷಾಬದ್ಧನಾಗಿ ಆಹಾರ ಆಚಾರಗಳಲ್ಲಿ ಆ ದಿನ ಅಷ್ಟೇ, ನಿಷ್ಠೆಯಿಂದ ಇರುತ್ತಿದ್ದ. ಗುಡಿಯಲ್ಲಿ ಅಂದು ಸಪ್ತಶತೀ ಪಾರಾಯಣ, ವಿಶೇಷ ಪೂಜಾರಾಧನೆ, ಸಂತರ್ಪಣೆಗಳು ನಡೆಯುತ್ತಿದ್ದವು. ಅಂದು ಚಂಡಮುಂಡಾದಿ ರಾಕ್ಷಸ ವೇಷಗಳು ದೇವಿಗೆ ಸಾಕಷ್ಟು ದೂರ ನಿಂತೇ ಯುದ್ಧ ಮಾಡುತ್ತಿದ್ದವು. ಹತ್ತಿರ ಸುಳಿಯುತ್ತಿರಲಿಲ್ಲ. ರಂಗದಲ್ಲಿ ಹೆಚ್ಚು ಹೊತ್ತು ನಿಲ್ಲುತ್ತಿರಲಿಲ್ಲ. ಕಣ್ ಮುಚ್ಚಿ ತೆರೆಯುವುದರೊಳಗಾಗಿ ಕಾಳಗದ ಅಭಿನಯ ಮಾಡಿ ಓಡುತ್ತಿದ್ದರು. ಪಾತ್ರಧಾರಿಗೂ ದೇವಿಗೂ ಅಂತಹ ತಾದಾತ್ಮ್ಯ– 'ಕಟೀಲಿನ ಯಕ್ಷಗಾನ ಮೇಳಗಳು'– ವಿ.ಕೊರ್ಗಿ ವೆಂಕಟೇಶ್ವರ ಉಪಾಧ್ಯಾಯ, ಕಟೀಲು, ಪುಟ 2 ಮತ್ತು 12.

ಇನ್ನು ಯಕ್ಷಗಾನ 'ಸಭಾಲಕ್ಷಣ' ಗ್ರಂಥವನ್ನು ಅವಲೋಕಿಸಿದರೆ ವಿವಿಧ ದೇವತಾ ಸ್ತುತಿಗಳೆ ತುಂಬಿರುವುದನ್ನು ನಾವು ಗಮನಸಬಹುದಾಗಿದೆ.

ಹೀಗೆ ಭಕ್ತಿ ಮತ್ತು ಯಕ್ಷಗಾನ ಕಲಾಪ್ರಕಾರಕ್ಕೆ ಅವಿನಾಭಾವ ಸಂಬಂಧವನ್ನು ಗುರುತಿಸಬಹುದಾಗಿದೆ. ಸಂಗೀತ, ನೃತ್ಯ, ಅಭಿನಯ, ಪುರಾಣಲೋಕ, ಮುಖವರ್ಣಿಕೆ ಹೀಗೆ ಎಲ್ಲಾ ವಿಧವಾದ ಕಲಾಪ್ರಕಾರಗಳನ್ನು ತನ್ನಲ್ಲಿ ಮೈಗೂಡಿಸಿಕೊಂಡಿರುವ ಯಕ್ಷಗಾನವು ಭಕ್ತಿಯ ಪ್ರಸಾರದಲ್ಲಿ ಉನ್ನತವಾದ ಪಾತ್ರವನ್ನು ನಿರ್ವಹಿಸಿದೆ.

## ೫.೪ ಕಥಾಕೀರ್ತನ ಕಲೆ – ಪ್ರಯೋಗ, ಪ್ರದರ್ಶನಗಳ ಪಾತ್ರ

(ಈ ಉಪ ಅಧ್ಯಾಯವನ್ನು ಸಿದ್ಧಪಡಿಸಲು ಬಳಸಿದ ಆಕರ ಗ್ರಂಥಗಳು –

(1) ಕೇಂದ್ರ ಸಂಗೀತ ನಾಟಕ ಅಕಾಡೆಮಿ, ನವದೆಹಲಿ, ಹಾಗೂ ಭಾರತೀಯ ವಿದ್ಯಾಭವನ ಬೆಂಗಳೂರು, ಇವರು ಮಾರ್ಚ್ 27–29, 1983 ರಲ್ಲಿ ಜಂಟಿಯಾಗಿ ಆಯೋಜಿಸಿದ್ದ **'ಕಥಾ ಕೀರ್ತನ'** ಕಲೆಯ ಕುರಿತಾದ ದುಂಡು ಮೇಜಿನ ರಾಷ್ಟ್ರೀಯ ಸಮ್ಮೇಳನದಲ್ಲಿ ವಿವಿಧ ವಿದ್ವಾಂಸರು ಮಂಡಿಸಿದ ಪ್ರಬಂಧಗಳ ಸಂಕಲನ 'Katha Keertan'

(2) ಕಥಾಕೀರ್ತನ ಕಲೆ, ಲೇ: ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣ್‌ಕರ್, ಪ್ರ: ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, 14/3, ಕೆನರಾ ಫೈನಾನ್ಸ್ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು– 2, 1994

(3) ಆಂಗ್ಲ ಪತ್ರಿಕೆ 'Bhavan's Journal' 1984, ಏಪ್ರಿಲ್ 16 ಈ ಸಂಚಿಕೆಯಲ್ಲಿ ಪ್ರಕಟವಾದ ಡಾ.ಹೆಚ್.ಕೆ.ರಂಗನಾಥ್ ಇವರ ಲೇಖನ The Art of Katha- Kirtan, ಪುಟ 17–23)

ಸಾಧಾರಣವಾಗಿ 'ಹರಿ' ಅಂದರೆ 'ವಿಷ್ಣು' ಎನ್ನುವ ಕಲ್ಪನೆ ನಮ್ಮದು. ಈ ಒಂದು ಕಲ್ಪನೆ ನಮ್ಮಲ್ಲಿ ಬೇರೂರಿವುದರಿಂದಲೋ ಎಂಬಂತೆ ಇತ್ತೀಚೆಗೆ ನಮ್ಮಲ್ಲಿ ಹರಿಕಥೆಯ ಸಾಂಪ್ರದಾಯಿಕ ಚೌಕಟ್ಟಿನಲ್ಲೇ ಇದೇ ಕಲಾ ಪ್ರಕಾರವನ್ನು ಶೈವರು ಶಿವಕಥೆಯೆಂದೂ, ಜೈನರು ಜಿನಕಥೆ ಎಂಬುವುದಾಗಿಯೋ, ನಾಮಭೇದದಿಂದ ಪ್ರತ್ಯೇಕಿಸಿಕೊಂಡರು. ಆದರೆ, ಬರೀ ಮತಭೇದದ ಭ್ರಾಂತಿಯಿಂದ, ವಿಶಿಷ್ಟ ಕಲಾಪ್ರಕಾರವು ಹರಿದು ಹಂಚಿಹೋಗಬಾರದು ಎನ್ನುವ ಉದ್ದೇಶದಿಂದ, ಸಂಗೀತನೃತ್ಯ ಅಕಾಡೆಮಿಯು ಕಲಾಪ್ರಕಾರಕ್ಕೆ ಕಥಾಕೀರ್ತನ ಎಂಬ ಸೂಕ್ತವಾದ ಹೊಸ ಅನ್ವರ್ಥನಾಮವನ್ನು ನೀಡಿದೆ. ಕಥಾಕೀರ್ತನ ಇದು ಒಂದು ಸಮಗ್ರವಾದ ರಾಷ್ಟ್ರೀಯ ಕಥೆ. ಈ ಕಲಾಪ್ರಕಾರವು ದೇಶದ ನಾನಾ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಪ್ರಸಿದ್ಧವಾಗಿದೆ. ಕರ್ನಾಟಕದಲ್ಲಿ ಹರಿಕಥೆ ಮತ್ತು ಶಿವಕಥೆ ಎಂಬುವುದಾಗಿ, ಮಹಾರಾಷ್ಟ್ರದಲ್ಲಿ 'ಕೀರ್ತನ್' ಎಂಬುದಾಗಿ, ಆಂಧ್ರಪ್ರದೇಶದಲ್ಲಿ ಕಥಾ ಎಂದು, ತಮಿಳುನಾಡಿನಲ್ಲಿ 'ಕಥಾಕಾಲಕ್ಷೇಪ' ಎಂಬುವುದಾಗಿ, ಕೇರಳದಲ್ಲಿ ಕಥಾಪ್ರಸಂಗ ಎಂದೂ, ಬಂಗಾಳದಲ್ಲಿ ಸಂಕೀರ್ತನೆ ಎಂಬ ಹೆಸರಿನಿಂದಲೂ ಪ್ರಖ್ಯಾತವಾಗಿದೆ. ಇಲ್ಲಿ ಭಾಷೆ, ವೇಷ, ಕಥಾವಸ್ತು ಆಯಾ ಪ್ರದೇಶಕ್ಕನುಸಾರವಾಗಿ

ಬೇರೆಯಾಗಿದ್ದರೂ, ಕಲಾಪ್ರದರ್ಶನದ ಚೌಕಟ್ಟಿನಲ್ಲಿ ನೋಡುವಾಗ ಇವುಗಳಲ್ಲಿ ಬಹಳಷ್ಟು ಸಾಮ್ಯತೆ ಕಂಡುಬರುತ್ತದೆ.

ಕಥಾಕೀರ್ತನ ಕಲೆ ಅತ್ಯಂತ ಪ್ರಾಚೀನ ಕಲೆ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಇದರ ಮೂಲ ಯಾವುದು ಎನ್ನುವುದಕ್ಕೆ ನಿಖರವಾದ ಆಧಾರಗಳು ಸಿಗುವುದಿಲ್ಲ. ನಾರದಮಹರ್ಷಿಗಳೇ ಪ್ರಪ್ರಥಮ ಹರಿದಾಸರು ಎನ್ನುವ ಮಾತು ಇದೆ. ತ್ರಿಲೋಕ ಸಂಚಾರಿ

ನಾರದರು ಮಹಾನ್ ಜ್ಞಾನಿಗಳೂ, ಸಂಗೀತ ವಿದುಷಿಗಳೂ, ಮಹಾನ್ ಹರಿಭಕ್ತರೂ ಆಗಿದ್ದರು ಎನ್ನುವುದನ್ನು ನಮ್ಮ ಪುರಾಣಗಳಲ್ಲಿ ಕಾಣುತ್ತೇವೆಯೇ ಹೊರತು, ಅವರ 'ಹರಿಕಥೆ' ಮಾಡಿದ ಉಲ್ಲೇಖ ಎಲ್ಲಿಯೂ ಬರುವುದಿಲ್ಲ. ರಾಮಾಯಣದಲ್ಲಿ, ಲವಕುಶರಿಂದ ಶ್ರೀರಾಮನ ಕಥೆಯನ್ನು ವಾಲ್ಮೀಕಿ ಮಹರ್ಷಿಗಳು ಗೇಯ ರೂಪದಲ್ಲಿ ವಾಚಿಸಿದರು ಎಂಬ ಉಲ್ಲೇಖ ದೊರೆಯುತ್ತದೆ. ಆದರೆ ನಾವು ಇವತ್ತು 'ಕಥಾಕೀರ್ತನ' ಅಥವಾ 'ಹರಿಕಥೆ'ಯ ಯಾವ ರೂಪವನ್ನು ಕಾಣುತ್ತಿದ್ದೇವೆ, ಆ ರೂಪದಲ್ಲೇ ಲವಕುಶರು, ಶ್ರೀ ರಾಮ ಕಥೆಯನ್ನು ನಿರೂಪಿಸಿದರೇ ಎಂಬುವುದು ಒಂದು ಪ್ರಶ್ನೆ?

ಕಥಾ ಕೀರ್ತನೆ ಬರೇ ಶುಷ್ಕ ಜ್ಞಾನಬೋಧನೆ ಮಾಡುವಂಥ ಪ್ರವಚನ ವೇದಿಕೆ ಅಥವಾ ವೇದಾಂತ, ತರ್ಕ ಬೋಧನೆಯ ಮಂಟಪವಲ್ಲ. ಹಾಗೆಂದು ಬರೀ ಮನರಂಜನೆಯನ್ನು ನೀಡುವುದ್ದೇ ಕಥಾಕೀರ್ತನೆಯ ಉದ್ದೇಶವಲ್ಲ. ಓರ್ವ ಪ್ರತಿಭಾವಂತ ಕೀರ್ತನಕಾರ ನೀಡುವಂಥ ಕಥಾಕೀರ್ತನಾ ಕಾರ್ಯಕ್ರಮವು ಬುದ್ಧಿಗೆ ಬೆಳಕನ್ನು ಹದಯಕ್ಕೆ ಭಕ್ತಿಯ ತಂಪನ್ನೂ, ಮನಕ್ಕೆ ಆನಂದದ ಕಂಪನ್ನೂ ನೀಡುವಂಥ ಜ್ಞಾನ, ಭಕ್ತಿ, ವೈರಾಗ್ಯದ ತ್ರಿವೇಣೀ ಸಂಗಮ. ಹಿರಿಯ ವಿದ್ವಾಂಸ ಡಾ.ಹೆಚ್.ಕೆ. ರಂಗನಾಥ್ ಹೇಳುವಂತೆ Katha Keerthan is a balanced blend of entertainment and enlightenment. ಪಾಮರರಿಂದ ಪಂಡಿತರವರೆಗೆ ಎಲ್ಲಾ ವರ್ಗದ ಶ್ರೋತೃಗಳ ಹೃದಯ ತಣಿಸುವ, ಬುದ್ಧಿ ಬೆಳಗಿಸುವ ಕಲೆ, ಕಥಾಕೀರ್ತನೆ.

ಕಥಾಕೀರ್ತನ ಒಂದು ಸಂವಹನಕಲೆ. ಕೀರ್ತನಕಾರ ಹಾಗೂ ಶ್ರೋತೃಗಳ ಮಧ್ಯೆ ಏರ್ಪಡುವಂತಹ ಒಂದು ಸಂವಹನಕ್ರಿಯೆ ಇನ್ನ್ಯಾವುದೇ ಕಲಾ ಪ್ರಕಾರದಲ್ಲಿ ಕಾಣಸಿಗಲು ಸಾಧ್ಯವಿಲ್ಲ. ಪ್ರತಿಭಾವಂತ ಕೀರ್ತನಕಾರ, ಶ್ರೋತೃಗಳನ್ನು ಮಂತ್ರಮುಗ್ಧರನ್ನಾಗಿಸುವುದೇ ಮಾತ್ರವಲ್ಲದೆ ಮಧ್ಯೆ ಮಧ್ಯೆ ದೇವರನಾಮ, ಭಜನೆಗಳನ್ನು ಶ್ರೋತೃಗಳಿಂದ ಹಾಡಿಸುತ್ತಾ, ಅವರನ್ನು ಈ ರಂಗದಲ್ಲಿ ತೊಡಗಿಸಿಕೊಳ್ಳುತ್ತಾನೆ. ಶ್ರೋತೃಗಳ ಈ ತೊಡಗಿಸಿಕೊಳ್ಳುವಿಕೆ, ತಲ್ಲೀನತೆ ಇನ್ನ್ಯಾವುದೇ ಸಾಂಪ್ರದಾಯಿಕ ಕಲಾಪ್ರಕಾರಗಳಲ್ಲಿ ಕಾಣಲು ಸಾಧ್ಯವಿಲ್ಲ. ಆದ್ದರಿಂದಲೇ ಪ್ರಾಚೀನ ಕಾಲದಿಂದ ಕಥಾಕೀರ್ತನೆ ಸಮೂಹ ಸಂಪರ್ಕ ಸಾಧನಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯ ಪಡೆದಿತ್ತು.

ಕಥಾಕೀರ್ತನೆಯಲ್ಲಿ ಕೀರ್ತನಕಾರನೇ ಕೇಂದ್ರ ಬಿಂದು. ಹಿರಿಯರಂಗ ವಿದ್ವಾಂಸ ಡಾ। ಹೆಚ್. ಕೆ. ರಂಗನಾಥ್ ಹೇಳುವಂತೆ 'The performer is himself the performance' ಪ್ರೊ। ಮಿಲ್ಟನ್ ಸಿಂಗರ್ ಎಂಬ ಪಾಶ್ಚಾತ್ಯ ರಂಗ ವಿದ್ವಾಂಸ

ಕಥಾಕೀರ್ತನೆಯನ್ನು 'It is a one man theatre' ಎಂದು ಕರೆದಿದ್ದಾನೆ. ಕಥಾಕೀರ್ತನೆ 'ಏಕವ್ಯಕ್ತಿ ರಂಗಭೂಮಿ', ಇದೊಂದು ಏಕಪಾತ್ರವಿರುವ ನಾಟಕ. ಇದರಲ್ಲಿ ಒಬ್ಬ ನುರಿತ ಅಭಿನೇತೃ ಒಂದು ಪಾತ್ರದಿಂದ ಮತ್ತೊಂದು ಪಾತ್ರಕ್ಕೆ ಲೀಲಾಜಾಲವಾಗಿ ಪ್ರವೇಶ ಮಾಡುತ್ತಾನೆ. ಸಂಗೀತ, ಸಾಹಿತ್ಯ, ಅಭಿನಯ, ಇವುಗಳ ಸಂಗಮ ಇವೆಲ್ಲಕ್ಕಿಂತ ಮಿಗಿಲಾಗಿ, ಭಕ್ತಿ ಹಾಗೂ ಜ್ಞಾನದ ಅಪ್ರತಿಮ ಸಮರಸತೆಯ ಸಾರ ಕಥಾಕೀರ್ತನೆ ಎನ್ನಬಹುದು.

ಕಥಾಕೀರ್ತನೆ ಸಮಾಜ ಶಿಕ್ಷಣದ ಮಾಧ್ಯಮವೂ ಹೌದು. ದಾಸ ಸಾಹಿತ್ಯದ ಕಡೆಗೆ ಕಣ್ಣು ಹಾಯಿಸಿದರೆ, ಸಮಾಜದ ಅಂಕುಡೊಂಕುಗಳನ್ನು ತಿದ್ದಲು ಪ್ರೇರೇಪಿಸುವಂತಹ ಹಲವಾರು ಕೀರ್ತನೆಗಳು ನಮಗೆ ಸಿಗುತ್ತವೆ. ಕನಕದಾಸರ 'ಕುಲ ಕುಲ ಕುಲವೆಂದು ಹೊಡೆದಾಡದಿರಿ', ಪುರಂದರದಾಸರ 'ಆಚಾರವೆಂಬ ನಾಲಿಗೆ, ನಿನ್ನ ನೀಚಬುದ್ಧಿಯ ಬಿಡು ನಾಲಗೆ' ಹೀಗೆ ಹಲವಾರು ಕೀರ್ತನೆಗಳನ್ನು ನಾವು ಕಾಣಬಹುದು.

ನವವಿಧ ಭಕ್ತಿಗಳಲ್ಲಿ ಶ್ರವಣ ಹಾಗೂ ಕೀರ್ತನ ಬಹಳ ಪ್ರಮುಖವಾದವು. ಭಗವಂತನ ನಾಮವನ್ನು, ಅಥವಾ ಗುಣವನ್ನು ಗೇಯ ರೂಪದಲ್ಲಿ ಪಠಿಸುವಂಥಾದ್ದು ಅಥವಾ ಉಚ್ಚರಿಸುವಂಥಾದ್ದು. ಈ ಒಂದು ಆಧ್ಯಾತ್ಮಿಕ ಪ್ರಕ್ರಿಯೆಯೇ ಕಥಾಕೀರ್ತನೆಗೆ ಮೂಲ ಎನ್ನಬಹುದು. ಶುಕ, ನಾರದರಂಥ ಮುನಿಶ್ರೇಷ್ಠರು ತೋರಿದ ಈ ಹಾದಿ, ಕ್ರಿ.ಶ. 13ನೇ ಶತಮಾನದ ಕಾಲದಲ್ಲಿ ಮಹಾರಾಷ್ಟ್ರದ ಸಂತ ನಾಮದೇವರ ಕಾಲದಲ್ಲಿ ಭಕ್ತಿಪಂಥದ ಪ್ರಚಾರಕ್ಕೆ ನಾಂದಿ ಹಾಡಿತು. ಸಂತ ಕವಿಗಳಾದ ಜ್ಞಾನೇಶ್ವರ ನಾಮದೇವ, ಏಕನಾಥ, ತುಕಾರಾಂ ಹಾಗೂ ರಾಮದಾಸರು ಪರಮಾತ್ಮ ಸಾಕ್ಷಾತ್ಕಾರ ಪಡೆಯುವಲ್ಲಿ ಭಕ್ತಿಯ ಪ್ರಭಾವವನ್ನು ಬೋಧಿಸಿದರು. ಭಾರತೀಯ ಜನತೆ ಭಕ್ತಿ ಲಹರಿಯ ತರಂಗಗಳನ್ನು, ಈ ಸಂತಶ್ರೇಷ್ಠರ ಕೀರ್ತನೆ ಹಾಗೂ ಪ್ರವಚನಗಳ ಮೂಲಕ ಅನುಭವಿಸಿದರು. ಈ ಕೀರ್ತನೆಯೇ ಕಾಲಕ್ರಮೇಣ, ಪುರಾಣ ಕಥೆಗಳ ಅಳವಡಿಕೆಯಿಂದ ಕಥಾಕೀರ್ತನೆಯ ರೂಪವನ್ನು ಪಡೆಯಿತು ಎಂಬುವುದಾಗಿ ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಕಾಲಕ್ರಮೇಣ, ಕೀರ್ತನಕಾರನು ಕಥೆಗೆ ಪೂರಕವಾಗಿ ಹಾಡುಗಳನ್ನು, ಹೇಳಿಕೆಗಳನ್ನು ಶ್ಲೋಕ, ಉಪಕಥೆಗಳನ್ನು ಕಥೆಯ ಚೌಕಟ್ಟಿಗೆ ಅಳವಡಿಸಿಕೊಂಡರು. ಹೀಗೆ ಒಂದು ಶತಮಾನದ ಕಾಲದಲ್ಲಿ ಈ ಕಲೆಯು ನಿಧಾನವಾಗಿ ಮಹಾರಾಷ್ಟ್ರವಲ್ಲದೆ ಇತರ ಹೊರ ರಾಜ್ಯಗಳಲ್ಲೂ ಮುಖ್ಯವಾಗಿ ದಕ್ಷಿಣ ಭಾರತದ ಭಾಷೆಗಳಲ್ಲೂ ಜನಪ್ರಿಯವಾಗತೊಡಗಿತು.

ತಂಜಾವೂರಿನ ಮಹಾರಾಜರು ಮಹಾರಾಷ್ಟ್ರದ ಕೀರ್ತನಕಾರರನ್ನು ಆಸ್ಥಾನಕ್ಕೆ ಆಹ್ವಾನಿಸಿ, ಈ ಕಲೆಯನ್ನು ತಮಿಳ್ನಾಡಿನ ಜನತೆಗೂ ಪರಿಚಯಿಸಿದರು. ಈ ಕೀರ್ತನಕಾರರು, ಮರಾಠಿ ಹಾಡುಗಳನ್ನು ಹಾಡುತ್ತಾ ಮಧ್ಯೆ ಮಧ್ಯೆ ಪುರಾಣ ಶಾಸ್ತ್ರಗಳ ಸಂಸ್ಕೃತ ಶ್ಲೋಕಗಳನ್ನು ಅಳವಡಿಸಿಕೊಳ್ಳುತ್ತಿದ್ದರು. ತಮಿಳಿನಲ್ಲಿ (ಸಂಸ್ಕೃತೀಕರಣಗೊಂಡ ತಮಿಳು, 'ಮಣಿಪ್ರವಲ' ಎಂದು ಕರೆಯುತ್ತಾರೆ) ಮಾಡುತ್ತಿದ್ದರೂ, ತ್ಯಾಗರಾಜ, ರಾಮದಾಸರಂಥ ತೆಲುಗು ಸಂತಕವಿಗಳ, ಪುರಂದರದಾಸ, ಕನಕದಾಸರಾದಿ ಕನ್ನಡ,

ಕವಿಗಳ, ತುಲಸೀದಾಸ್, ಕಬೀರ್‌ದಾಸ್, ಸೂರದಾಸರಂಥ ಹಿಂದೀ ಕವಿಗಳ, ತುಕಾರಾಮ, ನಾಮದೇವರಂಥ ಮರಾಠಿ ಸಂತರ ಕೀರ್ತನೆಗಳನ್ನು, ಹೇಳಿಕೆಗಳನ್ನು ತಮ್ಮ ಕೀರ್ತನೆಯಲ್ಲಿ ಅಳವಡಿಸಿಕೊಂಡರು.

ಶ್ರೇಷ್ಠ ಕೀರ್ತನಕಾರರಾದ ದಿ। ಮಾಂಗುಡಿ ಚಿದಂಬರ ಭಾಗವತರು, ಶೇಕ್ಸ್‌ಪಿಯರ್ ಮಿಲ್ಟನ್ ಮೊದಲಾದ ಆಂಗ್ಲಕವಿಗಳ ಕವಿತೆಗಳನ್ನೂ, ಮಹಾತ್ಮಾಗಾಂಧಿ, ಸ್ವಾಮಿ ವಿವೇಕಾನಂದರ ಅಣಿಮುತ್ತುಗಳನ್ನು ಕೀರ್ತನೆಯಲ್ಲಿ ಅಳವಡಿಸಿಕೊಳ್ಳುತ್ತಿದ್ದರು. ತಮಿಳುನಾಡಿನಲ್ಲಿ ಇಂದಿಗೂ ಕೀರ್ತನೆಗೈಯ್ಯುವಂಥ ಭಾಗವತರು ಶ್ರೇಷ್ಠ ಗೌರವಕ್ಕೆ ಪಾತ್ರರಾಗಿದ್ದಾರೆ.

ಹರಿಕಥಾ ವಿದ್ವಾಂಸರಾದ ಡಾ। ಗೋವಿಂದ ಖರೆ ಅವರ ಪ್ರಕಾರ, ಪೂರ್ವರಂಗ ಅಥವಾ ಪೀಠಿಕೆ ಹಾಗೂ ಉತ್ತರರಂಗಗಳಿಂದ ಯುಕ್ತವಾದ ಕಥಾಕೀರ್ತನ ಪದ್ಧತಿಗೆ, ಮಹಾರಾಷ್ಟ್ರದ ನಂದಿಂಬೊ ಮಹಾರಾಜ್ ಎಂಬ ಕೀರ್ತನಕಾರರೇ ಮೂಲಪುರುಷರಾಗಿದ್ದಾರೆ. ಭಕ್ತಿ ಹಾಗೂ ಹಿಂದೂ ಧರ್ಮ, ಸಂಸ್ಕೃತಿ ಪ್ರಚಾರಕ್ಕಾಗಿ, ಅವರು ಈ ಮಾಧ್ಯಮವನ್ನು ಸಮರ್ಥವಾಗಿ ಬಳಸಿಕೊಂಡರು. ಮರಾಠಿ, ಪೇಶ್ವರ ಕಾಲದಲ್ಲಿ ಈ ಕಲೆಗೆ ಮತ್ತಷ್ಟು ಪ್ರೋತ್ಸಾಹ ದೊರೆಯಿತು. ಅವರು ಜನರು ತಮ್ಮ ದೇಶ, ಭಾಷೆ, ಸಂಸ್ಕೃತಿಗಳ ಬಗ್ಗೆ ಅಭಿಮಾನ ತಾಳುವಂತಾಗಲು ಈ ಮಾಧ್ಯಮವನ್ನು ಬಳಸಿಕೊಂಡರು. ಹೀಗೆ ಮಹಾರಾಷ್ಟ್ರದ ಕಥಾಕೀರ್ತನೆಯು ಒಂದು ಪರಿಪೂರ್ಣ ಕಲೆಯಾಗಿ ಬೆಳೆಯಿತು.

ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಜನಮನದಲ್ಲಿ ರಾಷ್ಟ್ರೀಯ ಜಾಗೃತಿ ಉಂಟುಮಾಡುವಲ್ಲಿ ಕಥಾಕೀರ್ತನೆಯ ಪ್ರಭಾವ ಅದ್ಭುತವಾಗಿದ್ದಿತು. ಹಿರಿಯ ಕೀರ್ತನ ವಿದ್ವಾಂಸರಾದ ಡಾ। ದತ್ತೋಪಂಥ ಪಟವರ್ಧನ್ ಅವರು ಇತಿಹಾಸದ, ಧರ್ಮದ, ಸಂಸ್ಕೃತಿಯ, ರಾಷ್ಟ್ರಭಕ್ತಿ, ರಾಷ್ಟ್ರೈಕ್ಯತೆಯ ಉಲ್ಲೇಖಗಳನ್ನು ತಮ್ಮ ಕೀರ್ತನೆಯಲ್ಲಿ ಅಳವಡಿಸಿಕೊಂಡು, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಜನತೆ ಉತ್ಸಾಹದಿಂದ ಪಾಲ್ಗೊಳ್ಳುವಂತೆ ಪ್ರೋತ್ಸಾಹಿಸಿದರು.

ಲೋಕಮಾನ್ಯ ತಿಲಕರು, ಒಂದು ಕಡೆ ಹೇಳಿದರು 'ನಾನು ಒಂದು ವೇಳೆ, ಪತ್ರಕರ್ತನಾಗಿರದೇ ಇರುತ್ತಿದ್ದರೆ. ಕೀರ್ತನಕಾರನಾಗುತ್ತಿದ್ದೆ'. ಈ ಮಾತಿನಿಂದ ಕೀರ್ತನೆ ಅದೆಷ್ಟು ಪ್ರಭಾವೀ ಮಾಧ್ಯಮವಾಗಿತ್ತು ಎನ್ನುವುದನ್ನು ನಾವು ಅರ್ಥೈಸಬಹುದು.

ಹರಿಕಥೆ ಯಾವ ರೀತಿಯಲ್ಲಿ ಇರಬೇಕು. ಒಬ್ಬ ಹರಿದಾಸ ಅಥವಾ ಕೀರ್ತನಕಾರ ಹೇಗೆ ಇರಬೇಕು ಎಂಬುವುದನ್ನು ಸಮರ್ಥ ರಾಮದಾಸರು (17ನೇ ಶತಮಾನ) ತಮ್ಮ 'ದಾಸಬೋಧೆಯಲ್ಲಿ' ವಿವರವಾಗಿ ವಿಶ್ಲೇಷಿಸಿದ್ದಾರೆ. ಸಂತ ತುಕಾರಾಮರು (17ನೇ ಶತಮಾನ) ಕೀರ್ತನೆಯ ವಿವರಣೆಯನ್ನು ತಮ್ಮ ಅಭಂಗ ಕೃತಿಯಲ್ಲಿ ನಿರೂಪಿಸಿದ್ದಾರೆ.

ಆದರೆ ಡಾ। ಯು. ಸೂರ್ಯನಾಥ್ ಕಾಮತ್ ಅವರ ಪ್ರಕಾರ ಮಹಾರಾಷ್ಟ್ರದಲ್ಲಿ ಕಥಾಕೀರ್ತನೆ, ಕರ್ನಾಟಕದ ಹರಿದಾಸರಿಂದಲೇ ಜನಪ್ರಿಯವಾಯಿತು. (ಮಹಾರಾಷ್ಟ್ರದಲ್ಲಿ

ಕೀರ್ತನಕಾರರನ್ನು ಇಂದಿಗೂ 'ಹರಿದಾಸ'ರೆಂದೇ ಕರೆಯುತ್ತಾರೆ) ಆದರೆ ಈ ಬಗ್ಗೆ ಹೆಚ್ಚಿನ ಸಂಶೋಧನೆ ಅಗತ್ಯ.

ಭಾರತೀಯ ಸಂಸ್ಕೃತಿಕೋಶ ಭಾಗ 2. ಇದರಲ್ಲಿ 'ಕೀರ್ತನ್‌ಕಾರ್' ಎನ್ನುವ ಪದಕ್ಕೆ 'ಹರಿದಾಸ' ಅಥವಾ 'ಕಥೆಕರಿಬುವಾ' ಎಂಬುವುದಾಗಿ ಹೆಸರಿಸಿದ್ದಾರೆ. (ಪುರಂದರ, ಕನಕದಾಸರು ಶ್ರೇಷ್ಠ ಹರಿದಾಸರು, 16ನೇ ಶತಮಾನ ಕಾಲ)

ಕರ್ನಾಟಕದಲ್ಲಿ ಕಥಾಕೀರ್ತನೆಯು ಶ್ರೀ ನರಹರಿತೀರ್ಥರ ಪ್ರಭಾವದಿಂದ ಮುಳಿಬಾಗಿಲಿನ ಶ್ರೀ ಪಾದರಾಜರಿಂದ ಪ್ರಣೀತವಾಯಿತು ಎಂಬ ಮಾತಿದೆ. ಮುಂದೆ ವ್ಯಾಸತೀರ್ಥರ ವ್ಯಾಸಕೂಟದಲ್ಲಿ ಪುರಂದರ, ಕನಕ, ವಿಜಯದಾಸರಿಂದ ಈ ದೈವಿಕ ಕಲೆ ಜನಪ್ರಿಯತೆಯ ಶಿಖರಕ್ಕೇರಿತು ಎಂಬುವುದಾಗಿಯೂ ಹೇಳುತ್ತಾರೆ. ಪುರಂದರದಾಸರು 'ಹರಿಕಥಾಶ್ರವಣ ಮಾಡು' ಇತ್ಯಾದಿ ಕೀರ್ತನೆಗಳಲ್ಲಿ ಹರಿಕಥೆಯ ಬಗ್ಗೆ ಉಲ್ಲೇಖಿಸಿದ್ದಾರೆ. ಕನಕದಾಸರ ವಸ್ತ್ರಾಪರಣ ಎಂಬ ಕವನ, ಮೋಹನ ತರಂಗಿಣಿ, ನಳ ಚರಿತ್ರೆಯಂತಹ ಕಾವ್ಯಗಳು ಅವರು ಜನಪ್ರಿಯ ಕೀರ್ತನಕಾರರಾಗಿದ್ದರು ಎಂಬ ಪುರಾವೆಯನ್ನು ಒದಗಿಸುತ್ತವೆ ಎಂಬುವುದಾಗಿ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ, ಅಂದಿನ ಆ ಹರಿಕಥೆ ಇಂದಿನ ಆಧುನಿಕ ಹರಿಕಥೆಯ ರೂಪದಲ್ಲೇ ಇತ್ತೇ ಎಂಬುವುದು ಪ್ರಶ್ನೆ?

12ನೆ ಶತಮಾನದ ಚಾಲುಕ್ಯ ವಂಶಸ್ಥನಾದ ರಾಜಸೋಮೇಶ್ವರನ 'ರಾಜಾ ಮಾನಸೋಲ್ಲಾಸ' ಎಂಬ ಕನ್ನಡ ಕೃತಿಯಲ್ಲಿ ಕಥಾಕೀರ್ತನ ಕಲೆಯ ಇಂದಿನ ರೂಪ, ಗುಣ, ಸ್ವಭಾವಗಳ ಬಗ್ಗೆ ಸಾಕಷ್ಟು ಉಲ್ಲೇಖಗಳಿವೆಯಂತೆ. ಮಹಾರಾಷ್ಟ್ರದ ವಾರ್ಕ(ರಿ) ಪಂಥವು ಕಥಾಕೀರ್ತನೆ ಕಲೆಯನ್ನು ಜನಪ್ರಿಯಗೊಳಿಸಿತು ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ಆದರೆ ಈ ಪಂಥೀಯರ ಕಥಾಕೀರ್ತನ ಪ್ರಸ್ತುತಿಯು ಕೀರ್ತನಾ ಭಾಗಕ್ಕಿಂತ (ಸಂಗೀತ ಭಾಗ) ನಿರೂಪಣಾಭಾಗ ಅಥವಾ ಸಾಹಿತ್ಯಿಕ ಗದ್ಯಭಾಗಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದೆ. ಭಾರತೀಯ ಸಂಸ್ಕೃತಿ ಕೋಶ ಭಾಗ 2ರಲ್ಲಿ ಹರಿಕೀರ್ತನ ಕಲೆಯು ವಾರ್ಕರೀ ಸಂಪ್ರದಾಯದ ಕೀರ್ತನಾ ಪದ್ಧತಿಗಿಂತ ವಸ್ತು ಹಾಗೂ ರೂಪಗಳಲ್ಲಿ ಸಂಪೂರ್ಣ ಭಿನ್ನವಾಗಿದೆ ಎಂಬುದಾಗಿ ಹೇಳಲಾಗಿದೆ.

ರಾಜ ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಕೀರ್ತನಕಾರನ ಗುಣಲಕ್ಷಣಗಳನ್ನು ಈ ರೀತಿಯಾಗಿ ವಿವರಿಸಲಾಗಿದೆ.

1. ಕೀರ್ತನಕಾರನು ಎಲ್ಲಾ 64 ಕಲೆಗಳಲ್ಲಿ ನುರಿತವನಾಗಿರಬೇಕು.
2. ನಾಲ್ಕು ಭಾಷೆಗಳನ್ನು ಬಲ್ಲವನಾಗಿರಬೇಕು,
3. ಅವನು ಚಿತ್ರಜ್ಞ (ಮಾನಸಿಕ ಶಾಸ್ತ್ರಜ್ಞ)
4. ಅವನು ಸಮಯಜ್ಞ (ಸಮಯದ ಮಹತ್ವ)
5. ಸಾವಧಾನವಾಗಿರಬೇಕು (ತಾಳ್ಮೆಯಿಂದ ಕೂಡಿದವನಾಗಿರಬೇಕು)
6. ರಾಗ ದ್ವೇಷ ವಿವರ್ಜಿತನಾಗಿರಬೇಕು.
7. ಪರಮ ಆಸ್ತಿಕನಾಗಿರಬೇಕು.
8. ವಾಗ್ಮಿ

9. ಸಂಗೀತಜ್ಞನಾಗಿರಬೇಕು, ಒಳ್ಳೆಯ ಕಂಠ ಹೊಂದಿರಬೇಕು.

10. ಸಭಾಶಾಸ್ತ್ರಜ್ಞನಾಗಿರಬೇಕು.

11. ಪುರಾಣ, ಶಾಸ್ತ್ರ, ಗೀತೆ, ತತ್ವಗಳಲ್ಲಿ ಪಾಂಡಿತ್ಯವನ್ನು ಹೊಂದಿರಬೇಕು.

ಅವನ ಕಥಾ ಪ್ರಸ್ತುತಿಯು, ನವರಸಭರಿತವಾಗಿರಬೇಕು. (ರೌದ್ರ, ಭೀಭತ್ಸ, ಹಾಸ್ಯ, ಕರುಣ, ಭಯಾನಕ, ಶೃಂಗಾರ, ಪ್ರೇಮ, ಭೋಗ, ವಿಪ್ರಲಂಭ ಅಥವಾ ವಿರಹ, ಈರ್ಷ್ಯೆ, ದರ್ಪ, ಮದ, ಮೋಹ, ಇತ್ಯಾದಿ ಭಾವಗಳನ್ನು ಪ್ರಕಟಿಸುವ ಹಾಗೂ ಅವುಗಳನ್ನು ದಮನಿಸುವ ಪ್ರಸಂಗಗಳಿಂದ ಕೂಡಿರಬೇಕು.)

ಇವೆಲ್ಲಕ್ಕಿಂತ ಮಿಗಿಲಾಗಿ, ಕೀರ್ತನಕಾರನ ವೈಯ್ಯಕ್ತಿಕ ಜೀವನ ಯಾವುದೇ ಕಳಂಕವಿಲ್ಲದೆ ಪರಿಶುದ್ಧವಾಗಿರಬೇಕು.

ಅಂತಹ ಕೀರ್ತನಕಾರರು, ಸಮಾಜದಿಂದ ಗೌರವಿಸಲ್ಪಡುವುದು ಮಾತ್ರವಲ್ಲದೆ ಸಮಾಜದಲ್ಲಿ ಪೂಜನೀಯ ಸ್ಥಾನವನ್ನು ಪಡೆಯುತ್ತಾರೆ.

ಮಾನಸೋಲ್ಲಾಸವಲ್ಲದೆ, ಸಮಗ್ರ ದಾಸಸಾಹಿತ್ಯ ಹಾಗೂ ವಚನಸಾಹಿತ್ಯ ಕಥಾಕೀರ್ತನೆಗೆ ವಿಫುಲವಾದ ಗ್ರಾಸವನ್ನು ಒದಗಿಸುತ್ತದೆ. ಈ ನಿಟ್ಟಿನಲ್ಲಿ ಜಗನ್ನಾಥದಾಸರ 'ಹರಿಕಥಾಮೃತ ಸಾರ', ಭದ್ರಗಿರಿ ಅಚ್ಯುತದಾಸ್ ಹಾಗೂ ಕೇಶವದಾಸರ ಅನನ್ಯ ಕೃತಿಗಳೂ ಈ ನಿಟ್ಟಿನಲ್ಲಿ ಅಮೂಲ್ಯ ಆಕರ ಕೃತಿಗಳಾಗಿವೆ. ಕರ್ನಾಟಕದಲ್ಲಿ, ಮುಖ್ಯವಾಗಿ ದಕ್ಷಿಣ ಕರ್ನಾಟಕದಲ್ಲಿ ಕಥಾಕೀರ್ತನ ಕಲೆಯ ಬೆಳವಣಿಗೆಯನ್ನು ಗಮನಿಸಿದರೆ, ಇಲ್ಲಿ ಈ ಕಲೆ ಶ್ರೀಮಂತವಾಗಿಯೇ ಬೆಳೆದಿತ್ತು ಎನ್ನುವುದನ್ನು ನಾವು ಕಾಣಬಹುದು, ಪಾವಂಜೆ ಲಕ್ಷ್ಮಿನಾರ್ಣಪ್ಪನವರು, ಮಲ್ಪೆ ಸಾಮಗರು, ಭದ್ರಗಿರಿ ಸಹೋದರರು, ಶೇಣಿ ಗೋಪಾಲಕೃಷ್ಣ ಭಟ್ಟರು, ಹೀಗೆ ಹಲವಾರು ದಿಗ್ಗಜಗಳನ್ನು ನಾವು ಗುರುತಿಸಬಹುದು. ಕೆಲವಷ್ಟೇ ಹೆಸರುಗಳನ್ನು ನಾನು ಹೇಳಿದ್ದೇನೆ.

ಮತ್ತೊಂದು ವಿಶಿಷ್ಟವಾದ ಬೆಳವಣಿಗೆಯೆಂದರೆ ಕರಾವಳಿಯ ಶ್ರೀಮಂತ ಕಲೆ ಯುಕ್ಷಗಾನವೂ ಹರಿಕಥೆಯಿಂದ ಹಾಗೂ ಹರಿಕಥೆ ಯುಕ್ಷಗಾನದಿಂದಲೂ ಪ್ರಭಾವಿತವಾದುದನ್ನು ನಾವು ಕಾಣಬಹುದು.

ಯಕ್ಷಗಾನದ

* ತಾಳಮದ್ದಳೆ,
* ಭಾಗವತ
* ವೇಷಭೂಷಣ
* ಹಾಡುಗಳು

ಈ ಅಂಗಗಳಲ್ಲಿ ಕಥಾಕೀರ್ತನೆಯ ಪ್ರಭಾವವನ್ನು ಗುರುತಿಸಬಹುದಾಗಿದೆ.ಅಲ್ಲದೆ ಹಲವಾರು ಹರಿದಾಸರು ಯಕ್ಷಗಾನ ಕೃತಿಗಳನ್ನು ರಚಿಸಿ, ಯಕ್ಷಗಾನದ ಮೇಳ ಕಲಾವಿದರಾಗಿ, ಈ ಕಲೆಯನ್ನು ಇನ್ನಷ್ಟು ಶ್ರೀಮಂತಗೊಳಿಸಿರುವುದನ್ನು ಕಾಣಬಹುದು.

ಕರ್ನಾಟಕದಲ್ಲಿ ಹರಿಕಥೆ ; ಕಥಾಕೀರ್ತನೆ, ಸ್ವಾತಂತ್ರ್ಯ ಚಳುವಳಿಯಲ್ಲಿ ಮಹತ್ವಪೂರ್ಣ ಪಾತ್ರ ವಹಿಸಿರುವುದನ್ನು ಗಮನಿಸಬಹುದು. ಸ್ವಾತಂತ್ರ್ಯ ಚಳುವಳಿಗೆ ಹೊಸ ಚೇತನ ತುಂಬಿದ ಕೀರ್ತನಕಾರರಲ್ಲಿ ಧಾರವಾಡದ ಶಾಂತಕವಿ ಅಥವಾ ಬಾಲಾಚಾರ್ಯ ಸಕ್ರಿ ಇವರು ಮೊದಲಿಗರು. ಅವರ 'ವಿದ್ಯಾರಣ್ಯ ವಿಜಯ' ಎಂಬ ಕಥಾ ಪ್ರಸಂಗವು ಒಂದು ಮಹತ್ವಪೂರ್ಣ ಕೃತಿಯಾಗಿದೆ.

ಮುದ್ವೀಡು ಕೃಷ್ಣರಾಯರು, ಇದೇ ನಿಟ್ಟಿನಲ್ಲಿ ಒಬ್ಬ ಯಶಸ್ವೀ ಕೀರ್ತನಕಾರರಾಗಿದ್ದಾರೆ. ಆದರೆ ರಾಷ್ಟ್ರೀಯತೆ, ರಾಷ್ಟ್ರಭಕ್ತಿಯನ್ನು ಉಜ್ವಲಗೊಳಿಸುವಲ್ಲಿ ರಾಜ್ಯದ ಹಳ್ಳಿ ಮೂಲೆಗಳಲ್ಲಿ ಸಂಚರಿಸಿ ಕೀರ್ತನೆ ದುಂದುಭಿ ಮೊಳಗಿದ ಜಯರಾಮಾಚಾರ್ಯ ಕೊಪ್ಪಳ (1885–1955) ಇವರು ಅತ್ಯಂತ ಜನಪ್ರಿಯ ಕೀರ್ತನಕಾರರು ಅವರ ಕೀರ್ತನಾ ಕಾರ್ಯಕ್ರಮದ ಬಳಿಕ, ಹೋಳಿ ಅಗ್ನಿಯಲ್ಲಿ ಸಾಮೂಹಿಕ ವಿದೇಶೀ ವಸ್ತ್ರದಹನ ಕಾರ್ಯ ನೆರವೇರುತ್ತಿತ್ತು. ಅವರ ರಾಷ್ಟ್ರೀಯತೆಯನ್ನು ಪ್ರಚೋದಿಸುವ ಕೀರ್ತನೆಗಳನ್ನು ಕೇಳಿ ಮಹಿಳೆಯರು ತಮ್ಮ ಒಡವೆಗಳನ್ನು ರಾಷ್ಟ್ರಕಾರ್ಯಕ್ಕಾಗಿ ದಾನಕೊಡುತ್ತಿದ್ದರು. ಇವರಲ್ಲದೆ ಉತ್ತರ ಕನ್ನಡದ ಶ್ರೀ ಗೇರುಸೊಪ್ಪ ರಾಮ ಪೈ, ಕೊಡಗಿನ ಬೇಲೂರು ಕೇಶವದಾಸ್, ಕೊಡಗಿನ ಗೋಪಾಲ್‌ದಾಸ್, ದಕ್ಷಿಣಕನ್ನಡದ ಕಳ್ಳಿ ತಿಪ್ಪಣ್ಣ ಶಾಸ್ತ್ರೀ, ಚಿನ್ಮಯಸ್ವಾಮಿ ಓಂಕಾರ್ ಮಠ್, ಪಂಡಿತ್ ಶಿವಮೂರ್ತಿ ಶಾಸ್ತ್ರೀ, ಮಂಗಳೂರಿನ ರಾಘವೇಂದ್ರಾಚಾರ್ ಇವರೆಲ್ಲಾ ಕೀರ್ತನೆಯ ಮೂಲಕ ರಾಷ್ಟ್ರೀಯತೆಯನ್ನು ಜ್ವಾಜಲ್ಯಮಾನ ಗೊಳಿಸಿದ ಶ್ರೇಷ್ಠ ಕೀರ್ತನಕಾರರು.

## ಪ್ರಸಿದ್ಧ ಕೀರ್ತನಕಾರರು




ಸಂತ ಭದ್ರಗಿರಿ ಅಚ್ಯುತದಾಸ್ ಜೀ



ಸಂತ ಭದ್ರಗಿರಿ ಕೇಶವ್‌ದಾಸ್



ಶ್ರೀ ದೇವೀ ಮಹಾತ್ಮ್ಯೆಯ ಮಹಿಷಾಸುರ ವೇಷ



ಕಟೀಲು ಮೇಳದ ಹಿಮ್ಮೇಳ



ಶ್ರೀ ದೇವೀ ಮಹಾತ್ಮ್ಯೆಯ
ದೇವಿ ಪ್ರಕಟವಾಗುವ ದೃಶ್ಯ

## ಟಿಪ್ಪಣಿಗಳು

1. ಚತುಷ್ಷಷ್ಠಿ ಕಲೆ – ಟಿ.ಎಸ್.ಸತ್ಯವತಿ, ಭವನದ ಗಾಂಧೀ ಕೇಂದ್ರ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು–560001, ಪುಟ 3
2. ಜೀವನಸೌಂದರ್ಯ ಮತ್ತು ಸಾಹಿತ್ಯ, ಡಿವಿಜಿ ಕಾವ್ಯಾಲಯಪ್ರಕಾಶಕರು ಮೈಸೂರು, ಪುಟ 158, 159
3. ಗಾನ ಕಲಾ ಮಂಜರಿ ಸಂಪುಟ 1, ಸಂಗೀತ ಪ್ರಬಂಧ ಸಂಕಲನ ಇದರಲ್ಲಿ ಪ್ರಕಟಿತ ಡಾ। ವಿ. ರಾಘವನ್‌ರವರ ಪ್ರಬಂಧ ಭಾರತೀಯ ಸಂಗೀತ ಇತಿಹಾಸ ವಾಙ್ಮಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1995, ಪುಟ 4.
4. ಗಾನ ಕಲಾ ಮಂಜರಿ ಸಂಪುಟ 2, ಸಂಗೀತ ಪ್ರಬಂಧ ಸಂಕಲನ, ಇದರಲ್ಲಿ ಪ್ರಕಟಿತ ಡಾ। ರಂ.ಶ್ರೀ ಮುಗುಳಿಯವರ 'ಕರ್ನಾಟಕ ಸಂಗೀತಕ್ಕೆ ಹರಿದಾಸರ ಕೊಡುಗೆ' ಎಂಬ ಲೇಖನ ಪುಟ 22.
5. ಚತುಷ್ಷಷ್ಟಿ ಕಲೆ – ಪ್ರೊ.ಟಿ.ಎಸ್.ಸತ್ಯವತಿ, ಭವನದ ಗಾಂಧೀ ಕೇಂದ್ರ, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ಬೆಂಗಳೂರು–1, 2002, ಪುಟ 5,
6. ಅದೇ, ಪುಟ 5.
7. ಸಂಸ್ಕೃತಿ, ಸುವರ್ಣ ಪರಂಪರೆ ಮಾಲೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಮೊ.ಮು. 1955, ಮರು ಮುದ್ರಣ 2007
8. ಸಂಸ್ಕೃತಿ, ಸುವರ್ಣ ಪರಂಪರೆ ಮಾಲೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಮೊ.ಮು. 1955, ಪುಟ 75
9. ಅದೇ, ಪುಟ 76
10. ಅದೇ, ಪುಟ 77
11. **ಕಲೆಯಗೊಂಚಲು–ಜನಪ್ರಿಯ ಪುಸ್ತಕಮಾಲೆ, ಬಿ.ವಿ.ಕೆ ಶಾಸ್ತ್ರೀ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು, 1994, ಪುಟ 120 121**
12. 'ಹರಿದಾಸರ ಸಂಪ್ರದಾಯದ ಹಾಡುಗಳು.' ಪ್ರೊ.ಎಂ.ರಾಕಗೋಪಾಲಾಚಾರ್ಯ, ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ, ಎಂ.ಜಿ.ಎಂ.ಕಾಲೇಜು, ಉಡುಪಿ–576102, ಪುಟ V
13. ಅದೇ, ಪುಟ vII
14. ಅದೇ, ಪುಟ vIII
15. ಅದೇ, ಪುಟ IV
16. ಕಲೆಯ ಗೊಂಚಲು, ಬಿ.ವಿ.ಕೆ ಶಾಸ್ತ್ರೀ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು 1994, ಪುಟ 12
17. ಸಂಗೀತ ಸರಿತಾ, ಭಾವ ಸಂಗೀತ, ಎಸ್. ಕೃಷ್ಣ ಮೂರ್ತಿ, ಡಿ.ವಿ.ಕೆ. ಮೂರ್ತಿ, ಮೈಸೂರು – 4+ ಮೊದಲನೆಯ ಮುದ್ರಣ ; 1977, ಪುಟ 223, 224
18. ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ, ಡಿ.ಆರ್.ನಾಗರಾಜ್, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ–577417, 2006, ಪುಟ 18
19. Indian classical music - Prof. Sunil Bose, Vikas Publishing House,.Pvt.Ltd, 576, Masjid Road, Jangpura, New Delhi-14, 1990, Page No. 26, 27

*****

## ಅಧ್ಯಾಯ ೬
## ಭಕ್ತಿಸೂತ್ರಗಳಲ್ಲಿ ಅಡಕವಾಗಿರುವ ಸಿದ್ಧಾಂತದ ಅನುಷ್ಠಾನ, ಪ್ರಚಾರ ಮತು ಸಮಾಜ

### ೬.೧. ಅನುಷ್ಠಾನ ಮತ್ತು ಪ್ರಚಾರ – ಯಾಕೆ, ಹೇಗೆ

ಖ್ಯಾತ ವಿದ್ವಾಂಸರಾದ ರಾ.ಸತ್ಯನಾರಾಯಣರವರು 'ಭಕ್ತಿ ಭಾರತೀ' ಎನ್ನುವ ಗ್ರಂಥದಲ್ಲಿ, 'ಭಾರತದಲ್ಲಿ ಭಕ್ತಿ ಪಂಥ–ಅದರಲ್ಲಿ ಹರಿದಾಸ ಪಥ' ಎನ್ನುವ ಪ್ರಬಂಧದಲ್ಲಿ(ಪುಟ 139) ಹೇಳುತ್ತಾರೆ– " ಭಾರತದಲ್ಲಿ ಭಕ್ತಿಗೆ ಆಧ್ಯಾತ್ಮಿಕಾನ್ವೇಷಣೆಯದಷ್ಟೇ ಅಲ್ಲದೆ ಸಾಮಾಜಿಕ ಮತ್ತು ನೈತಿಕ ಮೌಲ್ಯಗಳೂ ಬಹಳ ಹಿಂದಿನಿಂದಲೇ ಅಂಟಿಕೊಂಡೇ ಬಂದಿವೆ. ಎಲ್ಲ ಮತಧರ್ಮಗಳಿಗೂ ಸಾಧಾರಣವಾದುದು ಭಕ್ತಿಯೇ. ಅದು ಸಾಧಕನಲ್ಲಿ ಮೊದಲು ವಿಧಿಸುವುದು ನಮ್ರತೆ, ಸಹಿಷ್ಣುತೆಗಳನ್ನು ಮತ್ತು ಎಲ್ಲರೂ ಸಮಾನವಾಗಿ ಭಗವಂತನ ಮಕ್ಕಳೇ. ಎಲ್ಲರೂ ಸಮಾನವಾಗಿ ಅವನ ಕೃಪೆಗೆ ಪಾತ್ರರೇ ಎಂಬ ಸಂದೇಶವನ್ನು." ಇದು ದೇಶದ ಸಮಗ್ರತೆಯ ದೃಷ್ಟಿಯಿಂದ ಬಹಳ ಮಹತ್ವದ ಉಪಲಬ್ಧಿಯಾಗಿದೆ.

ಇಂದಿನ ಆಧುನಿಕ ಪರಿಸ್ಥಿತಿಯಲ್ಲಿ ಜಾತಿ. ಮತ, ಭಾಷೆ, ಸಂಪ್ರದಾಯಗಳ ಹೆಸರಿನಲ್ಲಿ ಸಮಗ್ರತೆಗೆ ಧಕ್ಕೆಯುಂಟು ಮಾಡುವ ಸನ್ನಿವೇಶಗಳನ್ನು ಆಗಿಂದಾಗ್ಯೆ ಎದುರಿಸುತ್ತಿದ್ದೇವೆ. ಇನ್ನು ಯುವಜನಾಂಗದಲ್ಲಿ ನಮ್ಮ ಧರ್ಮ, ಸಂಸ್ಕೃತಿಗಳ ಕುರಿತಾಗಿ ಒಲವು ಮೂಡಿಸಲು ಸರಿಯಾದ ಸಂಸ್ಕಾರವನ್ನು ನೀಡುವ ಜವಾಬ್ದಾರಿ ಸಮಾಜದ ಮೇಲಿದೆ. ಸ್ವಾರ್ಥರಾಜಕಾರಣದಿಂದ ಆಗುತ್ತಿರುವ ಸಮಾಜದ ವಿಘಟನೆಯನ್ನು ತಪ್ಪಿಸಿ, ಸಾಮರಸ್ಯವನ್ನು ಕಾಯ್ದುಕೊಳ್ಳುವ ಜವಾಬ್ದಾರಿ ಸಮಾಜದ ಮೇಲಿದೆ. ಹಲವು ರೀತಿಯ ಆಮಿಷಗಳಿಗೆ ಒಳಗಾಗಿ ದುಶ್ಚಟಗಳಿಗೆ ಬಲಿಯಾಗುತ್ತಿರುವ ಯುವಜನಾಂಗಕ್ಕೆ ಸರಿಯಾದ ಮಾರ್ಗದರ್ಶನ ನೀಡುವ ತುರ್ತು ಜವಾಬ್ದಾರಿಯಿದೆ. ಜಾಗತೀಕರಣದಿಂದ ಶ್ರೀಮಂತ ಹಾಗೂ ಬಡವರ ಮಧ್ಯೆ ಹೆಚ್ಚಾಗುತ್ತಿರುವ ಆರ್ಥಿಕ ಅಸಮಾನತೆಯನ್ನು ನಿವಾರಿಸಲು ಸಮಾಜದ ಬಡವರ್ಗದ ಜನತೆಗೆ ಸ್ವಾವಲಂಬಿಗಳಾಗಿ ಬದುಕುವ ಅವಕಾಶವನ್ನು ನೀಡಬೇಕಾಗಿದೆ. ಸಮಾಜದಲ್ಲಿ ಇನ್ನೂ ಉಳಿದುಕೊಂಡಿರುವ ಅಸ್ಪೃಶ್ಯತೆ, ಅಸಮಾನತೆ, ವರದಕ್ಷಿಣೆ ಮೊದಲಾದ ಪಿಡುಗುಗಳನ್ನು ನಿವಾರಿಸಿ ಸ್ವಸ್ಥ ಸುದೃಢ ಸಮಾಜವನ್ನು ನಿರ್ಮಿಸಬೇಕಾಗಿದೆ.

ಇಂದಿನ ಆಧುನಿಕ ಪರಿಸ್ಥಿತಿಯಲ್ಲಿ ಜಾತಿ. ಮತ, ಭಾಷೆ, ಸಂಪ್ರದಾಯಗಳ ಹೆಸರಿನಲ್ಲಿ ಸಮಗ್ರತೆಗೆ ಧಕ್ಕೆಯುಂಟು ಮಾಡುವ ಸನ್ನಿವೇಶಗಳನ್ನು ಆಗಿಂದಾಗ್ಯೆ ಎದುರಿಸುತ್ತಿದ್ದೇವೆ. ಇನ್ನು ಯುವಜನಾಂಗದಲ್ಲಿ ನಮ್ಮ ಧರ್ಮ, ಸಂಸ್ಕೃತಿಗಳ ಕುರಿತಾಗಿ ಒಲವು ಮೂಡಿಸಲು ಸರಿಯಾದ ಸಂಸ್ಕಾರವನ್ನು ನೀಡುವ ಜವಾಬ್ದಾರಿ ಸಮಾಜದ ಮೇಲಿದೆ. ಸ್ವಾರ್ಥರಾಜಕಾರಣದಿಂದ ಆಗುತ್ತಿರುವ ಸಮಾಜದ ವಿಘಟನೆಯನ್ನು ತಪ್ಪಿಸಿ,

ಸಾಮರಸ್ಯವನ್ನು ಕಾಯ್ದುಕೊಳ್ಳುವ ಜವಾಬ್ದಾರಿ ಸಮಾಜದ ಮೇಲಿದೆ. ಹಲವು ರೀತಿಯ ಆಮಿಷಗಳಿಗೆ ಒಳಗಾಗಿ ದುಶ್ಚಟಗಳಿಗೆ ಬಲಿಯಾಗುತ್ತಿರುವ ಯುವಜನಾಂಗಕ್ಕೆ ಸರಿಯಾದ ಮಾರ್ಗದರ್ಶನ ನೀಡುವ ತುರ್ತು ಜವಾಬ್ದಾರಿಯಿದೆ. ಜಾಗತೀಕರಣದಿಂದ ಶ್ರೀಮಂತ ಹಾಗೂ ಬಡವರ ಮಧ್ಯೆ ಹೆಚ್ಚಾಗುತ್ತಿರುವ ಆರ್ಥಿಕ ಅಸಮಾನತೆಯನ್ನು ನಿವಾರಿಸಲು ಸಮಾಜದ ಬಡವರ್ಗದ ಜನತೆಗೆ ಸ್ವಾವಲಂಬಿಗಳಾಗಿ ಬದುಕುವ ಅವಕಾಶವನ್ನು ನೀಡಬೇಕಾಗಿದೆ. ಸಮಾಜದಲ್ಲಿ ಇನ್ನೂ ಉಳಿದುಕೊಂಡಿರುವ ಅಸ್ಪೃಶ್ಯತೆ, ಅಸಮಾನತೆ, ವರದಕ್ಷಿಣೆ ಮೊದಲಾದ ಪಿಡುಗುಗಳನ್ನು ನಿವಾರಿಸಿ ಸ್ವಸ್ಥ ಸುದೃಢ ಸಮಾಜವನ್ನು ನಿರ್ಮಿಸಬೇಕಾಗಿದೆ.

### ೬.೨ ಅನುಷ್ಠಾನ ಮತ್ತು ಪ್ರಚಾರದ ಮೂಲಕ ಸಮಾಜದ ಪರಿವರ್ತನೆಯಲ್ಲಿ ತತ್ಪರವಾಗಿರುವ ಕೆಲವು ಕ್ಷೇತ್ರಗಳು / ಸಂಸ್ಥೆಗಳು

ಇಂದಿನ ಪರಿಸ್ಥಿತಿಯಲ್ಲಿ ಈ ಎಲ್ಲಾ ಕಾರ್ಯಗಳು ಸರಕಾರದ ಯೋಜನೆಗಳ ಮೂಲಕ ಕಾರ್ಯಗತಗೊಳ್ಳುವುದು ಕನಸಿನ ಮಾತಾಗಿದೆ. ನಾವು ಈಗಾಗಲೇ ಅವಲೋಕಿಸಿರುವಂತೆ ನಮ್ಮ ದೇಶದ ಇತಿಹಾಸದಲ್ಲಿ ಸಂತರು ಸಮಾಜವನ್ನು ಕಟ್ಟುವ ಕಾರ್ಯದಲ್ಲಿ ಯಶಸ್ವಿಯಾದಷ್ಟು ಇನ್ನ್ಯಾವುದೇ ರಾಜಕೀಯ ನಾಯಕರಾಗಲೀ, ರಾಜಮಹಾರಾಜರಾಗಲೀ ಯಶಸ್ಸನ್ನು ಕಂಡಿಲ್ಲ. ಪ್ರಸ್ತುತ ಪರಿಸ್ಥಿತಿಯನ್ನು ಅವಲೋಕಿಸುವಾಗಲೂ ಅನೇಕ ಸಂತರು, ಅವರ ಧ್ಯೇಯ, ಧೋರಣೆಗಳನ್ನು ಅನುಸರಿಸುತ್ತಿರುವ ಆಧ್ಯಾತ್ಮಿಕ ಸಂಸ್ಥೆಗಳು ಅನೇಕ ಸಮಾಜಮುಖಿಯಾದ ಯೋಜನೆಗಳನ್ನು ಅನುಷ್ಠಾನಕ್ಕೆ ತಂದು ಅವನ್ನು ಯಶಸ್ವಿಯಾಗಿ ವ್ಯಾಪಕವಾಗಿ ಮುನ್ನಡೆಸಿಕೊಂಡು ಹೋಗುತ್ತಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ ಉದಾಹರಣೆಗಾಗಿ ಹೆಸರಿಸಬಹುದಾದ ಕೆಲವು ಸಂಸ್ಥೆಗಳು:

1. ಶ್ರೀ ರಾಮಕೃಷ್ಣ ಮಿಷನ್
2. ಶ್ರೀ ಮಾತಾ ಅಮೃತಾನಂದಮಯಿ– ಸೇವಾ ಸಂಸ್ಥೆಗಳು
3. ಶ್ರೀ ಬಾಬಾ ರಾಮದೇವ್ ಅವರ ಸೇವಾ ಸಂಸ್ಥೆಗಳು
4. ಶ್ರೀ ಸತ್ಯಸಾಯಿ ಸೇವಾ ಸಂಸ್ಥೆಗಳು
5. ಇಸ್ಕಾನ್‌ನ ಸೇವಾಸಂಸ್ಥೆಗಳು
6. ಶ್ರೀ ಕ್ಷೇತ್ರ ಧರ್ಮಸ್ಥಳದ ಆಡಳಿತಕ್ಕೊಳ ಪಟ್ಟ ಸೇವಾ ಸಂಸ್ಥೆಗಳು
7. ಶ್ರೀ ರವಿಶಂಕರ್ ಗುರೂಜಿ– ಆರ್ಟ್ ಆಫ್ ಲಿವಿಂಗ್
8. ಚಿನ್ಮಯ ಮಿಷನ್ ಸೇವಾ ಸಂಸ್ಥೆಗಳು
9. ತುಮಕೂರಿನ ಶ್ರೀ ಸಿದ್ಧಗಂಗಾ ಕ್ಷೇತ್ರ
10. ಪೂಜ್ಯ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿ, ಪೇಜಾವರ ಮಠ

ಹೀಗೆ ಹತ್ತು ಹಲವಾರು ಸಂಸ್ಥೆಗಳು ಭಕ್ತಿಯ ನೆಲೆಯಲ್ಲಿ ಸಮಾಜ ಸೇವಾ ಕಾರ್ಯಗಳಲ್ಲಿ ತತ್ಪರವಾಗಿವೆ. ಈ ಎಲ್ಲಾ ಸಂಸ್ಥೆಗಳು ನಡೆಸುತ್ತಿರುವ ಸುದೃಢವಾದ,

ಸ್ವಸ್ಥ ಸಮಾಜವನ್ನು ನಿರ್ಮಿಸುವ ಕಾರ್ಯಗಳಿಗೆ ಆಧಾರವಾಗಿರುವ ಮೂಲಭೂತ ಅಂಶಗಳು:

(ಅ) ಪರಮಾರ್ಥ ಸಾಧನೆಯನ್ನು ಧ್ಯೇಯವಾಗಿರಿಸಿಕೊಂಡು ಮಾಡುವ ಎಲ್ಲಾ ಕಾರ್ಯಗಳನ್ನು ಭಗವಂತನ ಸೇವೆ ಎನ್ನುವ ಭಾವನೆಯಿಂದ ಮಾಡುವ ಮನೋಭೂಮಿಕೆ.

(ಆ) ಭಕ್ತಿಯ ನೆಲೆಯಲ್ಲಿ ಸೇವಾಕಾರ್ಯಗಳಿಗೆ ಹರಿದು ಬರುವ ಆರ್ಥಿಕ ಸಂಪನ್ಮೂಲ.

(ಇ) ಭಕ್ತಿಯ ನೆಲೆಯಲ್ಲಿ ಸೇವಾಕಾರ್ಯಗಳಲ್ಲಿ ಸ್ವ ಇಚ್ಛೆಯಿಂದ ಯಾವುದೇ ಫಲಾಪೇಕ್ಷೆಯಿಲ್ಲದೆ ಪಾಲ್ಗೊಳ್ಳಲು ಹರಿದು ಬರುವ ಮಾನವ ಸಂಪನ್ಮೂಲ.

(ಈ) ಈ ಸಂಪನ್ಮೂಲಗಳನ್ನು ಪರಿಣಾಮಕಾರಿಯಾಗಿ ಯಶಸ್ವಿಯಾಗಿ ಬಳಸಿಕೊಳ್ಳುವ ಭಕ್ತಿ ಹಾಗೂ ನೈತಿಕತೆಯನ್ನು ರೂಢಿಸಿಕೊಂಡ ಆಡಳಿತ ವರ್ಗ.

ಮೇಲೆ ಹೇಳಿದ ಅಂಶಗಳಿಂದಾಗಿ ಒಂದು ಸರಕಾರಿ ಸಂಸ್ಥೆಯು ಮಾಡುವ ಸಮಾಜ ಕಲ್ಯಾಣಕಾರಿ ಕಾರ್ಯಕ್ರಮಗಳಿಗೆ ಸಮನಾಗಿ ಅಥವಾ ಅದಕ್ಕಿಂತಲೂ ಯಶಸ್ವಿಯಾಗಿ ಈ ಸಂಸ್ಥೆಗಳು ಜನರನ್ನು ತಲುಪಲು ಸಾಧ್ಯವಾಗಿದೆ.

ನಾರದ ಭಕ್ತಿಸೂತ್ರದಲ್ಲಿ ನಿರೂಪಿಸಲ್ಪಟ್ಟಿರುವ

(ಅ) ಭಕ್ತಿ ಸಾಧನೆ

(ಆ) ಶಾಸ್ತ್ರವು ವಿಧಿಸುವಂತಹ ಧರ್ಮಾನುಷ್ಠಾನ

(ಇ) ಸಮಾನತೆ ಮತ್ತು ಸಾಮರಸ್ಯ

(ಈ) ಸತ್ಸಂಗ ಮತ್ತು ಸತ್ಸಂಸ್ಕಾರಗಳ ಮಹತ್ವ

(ಉ) ಮಾಡುವ ಕರ್ಮವನ್ನು ಭಗವತ್ಸೇವೆಯಾಗಿಸುವ ವಿಧಾನ

ಈ ಅಂಶಗಳನ್ನು ವೈಯಕ್ತಿಕ ನೆಲೆಯಲ್ಲಿ ಮಾತ್ರವಲ್ಲದೆ ಸಮಾಜದ ಅಭ್ಯುದಯದ ದೃಷ್ಟಿಯಿಂದ, ಸಮಾಜದಲ್ಲಿ ಸದ್‌ಪರಿವರ್ತನೆಯ ದೃಷ್ಟಿಯಿಂದ ಈ ಸಂಸ್ಥೆಗಳು ಹಾಗೂ ಮಹನೀಯರು ತಮ್ಮ ಕಾರ್ಯಕ್ಷೇತ್ರದಲ್ಲಿ ಹೇಗೆ ಅಳವಡಿಸಿಕೊಂಡಿದ್ದಾರೆ ಎಂಬುವುದನ್ನು ಈ ಅಧ್ಯಾಯದಲ್ಲಿ ದಾಖಲಿಸಿರುತ್ತೇನೆ. ಈ ಅಧ್ಯಯನವನ್ನು ಎರಡು ವಿಭಾಗವಾಗಿ ವಿಂಗಡಿಸಿಕೊಂಡಿರುತ್ತೇನೆ:

(ಅ) ಭಕ್ತಿಸಿದ್ಧಾಂತದ ಪ್ರಚಾರ ಮತ್ತು ಅನುಷ್ಠಾನದ ಮೂಲಕ ಈಗಾಗಲೇ ಸಮಾಜದಲ್ಲಿ ಸತ್ ಪರಿವರ್ತನೆಯ ರೂವಾರಿಗಳಾದ ಕೆಲವು (ದಕ್ಷಿಣ ಕನ್ನಡ ಜಿಲ್ಲೆ ವ್ಯಾಪ್ತಿಯ) ಸಂಸ್ಥೆಗಳ ಸಾಧನೆಯ ಅಧ್ಯಯನ.

(ಆ) ಭಕ್ತಿಸಿದ್ಧಾಂತದ ಪ್ರಚಾರ ಮತ್ತು ಅನುಷ್ಠಾನದಲ್ಲಿ ತತ್ಪರರಾದ ಕೆಲವು ಮಹನೀಯರ ಅಭಿಪ್ರಾಯ ಹಾಗೂ ಅನುಭವದ ಅಧ್ಯಯನ.

ಈ ಅಧ್ಯಾಯವು ವಿಶಾಲ ವ್ಯಾಪ್ತಿಯುಳ್ಳದ್ದಾದ್ದರಿಂದ ಹಲವು ವರ್ಷಗಳಿಂದ ನಾನು ಬಲ್ಲಂಥ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಆಯ್ದ ಕೆಲವು ಕ್ಷೇತ್ರಗಳಿಗೆ ಮಾತ್ರ ಅಧ್ಯಯನವನ್ನು ಸೀಮಿತಗೊಳಿಸಿದ್ದೇನೆ. ಕ್ಷೇತ್ರದ ಆಯ್ಕೆಗೆ ನಾನು ವಿಧಿಸಿಕೊಂಡಂತಹ ಕೆಲವು ಮಾನದಂಡಗಳು ಇಂತಿವೆ:

(ಅ) ಕ್ಷೇತ್ರವು ಭಕ್ತಿ ಶ್ರದ್ಧೆಗಳ ಕೇಂದ್ರವಾಗಿದ್ದು, ಜನರಲ್ಲಿ ಸತ್ಸಂಸ್ಕಾರವನ್ನು ಮೂಡಿಸುವ ಚಟುವಟಿಕೆಗಳಲ್ಲಿ ನಿರತವಾಗಿರಬೇಕು.

(ಆ) ಯಾವುದೇ ಜಾತಿ ಮತಗಳಿಗೆ ಸೀಮಿತವಾಗಿರದೆ, ಏಕತೆ ಮತ್ತು ಸಮಾನತೆಯ ಆದರ್ಶವನ್ನುರೂಢಿಸಿಕೊಂಡಿರಬೇಕು.

(ಇ) ರಾಜಕೀಯ ರಹಿತವಾದ, ಸುದೃಢವಾದ ನೈತಿಕ ನೆಲೆಗಟ್ಟಿನ, ಪಾರಮಾರ್ಥಿಕ ಹಿನ್ನೆಲೆಯ ಮುಂದಾಳುತ್ವ (ಆಡಳಿತ ವರ್ಗವನ್ನು) ಹೊಂದಿರಬೇಕು.

(ಈ) ಕ್ಷೇತ್ರವು ಆಧ್ಯಾತ್ಮಿಕ ನೆಲೆಗಟ್ಟಿನಲ್ಲಿ ಸಮಾಜಕಲ್ಯಾಣದ ಸೇವಾಕಾರ್ಯಗಳಲ್ಲಿ ನಿರತವಾಗಿರಬೇಕು.

(ಉ) ಯುವಜನತೆಯನ್ನೂ ಧರ್ಮಮಾರ್ಗದತ್ತ ಸೆಳೆಯುವಂತಹ, ನಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಪ್ರೇರೇಪಿಸುವಂತಹ ಕಾರ್ಯಚಟುವಟಿಕೆಗಳನ್ನು ಹೊಂದಿರಬೇಕು.

ಈ ಹಿನ್ನೆಲೆಯಲ್ಲಿ ಪ್ರಾತಿನಿಧಿಕವಾಗಿ ಕೆಲವೇ ಕ್ಷೇತ್ರಗಳನ್ನು (ಶ್ರೀ ಕ್ಷೇತ್ರ ಧರ್ಮಸ್ಥಳ, ರಾಮಕೃಷ್ಣ ಮಿಷನ್–ರಾಮಕೃಷ್ಣ ಮಠ ಮಂಗಳೂರು, ರಮಾ ಶಕ್ತಿ ಮಿಷನ್, ಪರಿಶಿಷ್ಟ ಸಮಾಜದಲ್ಲಿ ಜನಿಸಿ ಭಕ್ತಿ, ಭಜನೆಯ ಮೂಲಕ ಆ ಸಮಾಜದಲ್ಲಿ ಪರಿವರ್ತನೆಯ ಬೆಳಕು ಮೂಡಿಸಿದ ಶ್ರೀ ದೇವಪ್ಪ ಕುದ್ರೋಳಿ, ರಾಮಕೃಷ್ಣ ತಪೋವನ ಪೊಳಲಿ, ಕೃಷ್ಣ ಜ್ಞಾನ ಪ್ರಚಾರಕ ಸಂಘ ಮಂಗಳೂರು, ಹೊಸಬೆಟ್ಟು ಗ್ರಾಮಸೇವಾ ಸಂಘ, ಹರಿಕಥಾ ಪರಿಷತ್ ಮಂಗಳೂರು ಇತ್ಯಾದಿ) ಮಾತ್ರ ಅಧ್ಯಯನಕ್ಕೆ ಆಯ್ದುಕೊಂಡಿರುತ್ತೇನೆ. ಹಾಗೆಯೇ ಭಕ್ತಿಸಿದ್ಧಾಂತದ ಪ್ರಚಾರ ಮತ್ತು ಅನುಷ್ಠಾನದ ಮೂಲಕ ಸಮಾಜಕಲ್ಯಾಣದ ಸೇವೆಯಲ್ಲಿ ತತ್ಪರರಾದ ಮತ್ತು ಅದಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟಂತಹ (ಮುಖ್ಯವಾಗಿ ದಕ್ಷಿಣಕನ್ನಡ ಜಿಲ್ಲೆ ಹಾಗೂ ಈ ಜಿಲ್ಲೆಗೆ ಸಂಬಂಧಿಸಿದ ಹಿನ್ನೆಲೆಯುಳ್ಳ, ಮತ್ತು ನಾನು ಹಲವಾರು ವರ್ಷಗಳಿಂದ ವ್ಯಕ್ತಿಗತವಾಗಿ ಬಹಳ ಹತ್ತಿರದಿಂದ ಬಲ್ಲಂತಹ) ಕೆಲವು ಮಹನೀಯರ ಅಭಿಪ್ರಾಯ ಹಾಗೂ ಅನುಭವಗಳನ್ನು ದಾಖಲಿಸಿರುತ್ತೇನೆ. ಈ ಹಿನ್ನೆಲೆಯಲ್ಲಿ ಪ್ರಾತಿನಿಧಿಕವಾಗಿ ನಾನು ಸಂದರ್ಶಿಸಿರುವಂತಹ ಮಹನೀಯರು: ಸ್ವಾಮಿ ಹರ್ಷಾನಂದ, ಅಧ್ಯಕ್ಷರು, ರಾಮಕೃಷ್ಣ ಮಿಷನ್(ರಾಮಕೃಷ್ಣ ಮಠ), ಬೆಂಗಳೂರು, ಕೀರ್ತನಕೇಸರಿ ಸಂತ ಭದ್ರಗಿರಿ ಅಚ್ಯುತದಾಸರು, ಕಥಾಕೀರ್ತನ ವಿದ್ವಾಂಸರುಗಳಾದ ಶ್ರೀ ಲಕ್ಷ್ಮಣದಾಸ ವೇಲಣಕರ್, ಶ್ರೀ ಪೊಳಲಿ ಜಗದೀಶದಾಸರು, ಭಕ್ತಿ ಭಜನೆಯನ್ನೂ ಒಂದು ಚಿಕಿತ್ಸಾ ಮಾಧ್ಯಮವಾಗಿ ಬಳಸಿ ಯಶಸ್ವಿಯಾಗಿರುವ ಡಾ.ಶ್ರೀಧರದಾಸ್ ಜೀ, ಖ್ಯಾತ ಗಾಯಕರಾದ ಪಂ.ಕೆ.ವಿ.ನಂದಕುಮಾರ್, ಯುವ ಕೀರ್ತನಕಾರರಾದ ಶ್ರೀ ಶಿರಸಿ ನಾರಾಯಣದಾಸರು ಇತ್ಯಾದಿ.

## ರಾಮಕೃಷ್ಣ ಮಿಷನ್

ರಾಮಕೃಷ್ಣ ಮಿಷನ್ 1901ರ ಮೇ 4ರಂದು ಒಂದು ಸಂಘವಾಗಿ ನೊಂದಾವಣೆಗೊಂಡಿದ್ದು, ಭಾರತದಾದ್ಯಂತ ಮತ್ತು ಇತರ ಕೆಲವು ದೇಶಗಳಲ್ಲಿ ಶಾಖೆಗಳನ್ನು ಹೊಂದಿದೆ.

ಅಜ್ಞಾನ ನಿವಾರಣೆ ಹಾಗೂ ದೈವಸಾಕ್ಷಾತ್ಕಾರಕ್ಕೊಯ್ಯುವ ಆಂತರಿಕ ದೈವಿಕತೆಯ ಅಭಿವ್ಯಕ್ತಿಯು ಯೋಗದ ಮೂಲಕ ಸಾಧಿತವಾಗುತ್ತದೆ. ಪ್ರಮುಖವಾದ **ಯೋಗಗಳು ನಾಲ್ಕು: ಜ್ಞಾನಯೋಗ, ಭಕ್ತಿಯೋಗ, ರಾಜಯೋಗ, ಮತ್ತು ಕರ್ಮಯೋಗ.** ಪ್ರತಿಯೊಂದು ಯೋಗವೂ ದೈವ ಸಾಕ್ಷಾತ್ಕಾರದ ಸ್ವತಂತ್ರ ಮಾರ್ಗ. ಆದರೆ ವಿಚಾರ, ಭಾವ ಅಥವಾ ಸಂಕಲ್ಪದಂತಹ ಶಕ್ತಿಗಳ ಬೆಳವಣಿಗೆಯಲ್ಲಿ ಒಂದೊಂದು ಯೋಗವು ಯಾವುದೋ ಒಂದು ಶಕ್ತಿಗೆ ಹೆಚ್ಚು ಒತ್ತು ನೀಡುವುದರಿಂದ, ಒಂದು ಸಂತುಲಿತ, "ಸಂಪೂರ್ಣ ಕ್ರಿಯಾಶೀಲ" ವ್ಯಕ್ತಿತ್ವದ ವಿಕಾಸಕ್ಕೆ ಈ ಎಲ್ಲ ನಾಲ್ಕು ಯೋಗಗಳ ಸಮನ್ವಯ ಅಗತ್ಯ. ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣ ಮಠ ಮತ್ತು ಮಿಷನ್ನಿನ ಆದರ್ಶವೆಂದು ಪರಿಗಣಿಸಿದ್ದು ಈ ಯೋಗಸಮನ್ವಯವನ್ನೆ.

**ಎಲ್ಲ ಕೆಲಸವೂ ಪವಿತ್ರ :** ವೇದಾಂತದ ಪ್ರಕಾರ ಭೌತಿಕ ವಿಶ್ವ ಎಂಬುದು ಎನಿಸಿದ ಭಗವಂತನ ವಿರಾಟ್ ರೂಪದ ಅಭಿವ್ಯಕ್ತಿ. ಆದ್ದರಿಂದ, ಸೋದರಿ ನಿವೇದಿತಾ ಹೇಳಿದಂತೆ, "ಆಧ್ಯಾತ್ಮಿಕತೆಗೂ ಲೌಕಿಕತೆಗೂ ಏನೂ ಭೇದವಿಲ್ಲ." ಈ ಹೇಳಿಕೆಯ ಅರ್ಥವೇನೆಂದರೆ, ಎಲ್ಲ ದುಡಿಮೆಯೂ ಪವಿತ್ರವೇ ಆಗಿದೆ. ನೆಲ ಗುಡಿಸುವ ಅಥವಾ ಚಪ್ಪಲಿ ಹೊಲಿಯುವ ಸೇವಾ ಕಾರ್ಯವನ್ನು ಕೂಡ ದೇವರ ಕೆಲಸಗಳಂತೆಯೇ ಶ್ರದ್ಧಾಭಕ್ತಿಯಿಂದ ಮಾಡಬೇಕು.

**ಮಾನವಸೇವೆಯೇ ದೇವರ ಸೇವೆ :** ಸ್ವಾಮಿ ವಿವೇಕಾನಂದರು ತಮ್ಮ ಗುರುವಿನಿಂದ ಕಲಿತ ಮುಖ್ಯ ತತ್ವಗಳಲ್ಲೊಂದೆಂದರೆ: ಶಿವಜ್ಞಾನೇ ಜೀವಸೇವಾ (ಶಿವನೆಂದು ಭಾವಿಸಿ ಜೀವನಿಗೆ ಸೇವೆ ಸಲ್ಲಿಸುವುದು). ಮನುಷ್ಯನಲ್ಲಿ ದೈವಿಕತೆ ಅಂತರ್ನಿಹಿತವಾಗಿ ಇರುವುದರಿಂದ, ನಾವು ಮಾಡುವ ಮಾನವಸೇವೆ ವಾಸ್ತವವಾಗಿ ದೇವರ ಸೇವೆಯೇ ಆಗುತ್ತದೆ. ಸೇವೆಯ ಅಗತ್ಯವಿರುವ ವ್ಯಕ್ತಿಯನ್ನು ಕನಿಕರದ ವಸ್ತುವನ್ನಾಗಿ ಕಾಣುವುದರ ಬದಲು ಪೂಜೆಯ ವಸ್ತುವನ್ನಾಗಿ ಕಾಣಬೇಕು. ಇಂತಹ ದೃಷ್ಟಿಯು ಕೊಡುವವನು, ಪಡೆಯುವವನು ಇಬ್ಬರನ್ನೂ ದೊಡ್ಡವರನ್ನಾಗಿ ಮಾಡುತ್ತದೆ.

**ದೀನದಲಿತರ ಸೇವೆಯ ಮೇಲೆ ಒತ್ತು :** ಭಾರತದಲ್ಲಿ ಬಡವರ ಮತ್ತು ದಲಿತರ ಪರವಾಗಿ ದನಿಯೆತ್ತಿ ಹೀಗೆ ಧೈರ್ಯವಾಗಿ ಮಾತನಾಡಿದ ಮೊತ್ತಮೊದಲನೆಯ ಧಾರ್ಮಿಕ ನಾಯಕರು ಸ್ವಾಮಿ ವಿವೇಕಾನಂದರು: "ಬಡವರಲ್ಲಿ, ದುರ್ಬಲರಲ್ಲಿ ಮತ್ತು ರೋಗಿಗಳಲ್ಲಿ ಶಿವನನ್ನು ಕಾಣುವವನು ನಿಜವಾದ ಅರ್ಥದಲ್ಲಿ ಶಿವನನ್ನು ಪೂಜಿಸುತ್ತಾನೆ... ದೇಗುಲಗಳಲ್ಲಿ ಮಾತ್ರ ಶಿವನನ್ನು ಕಾಣುವವನಿಗಿಂತ ಇಂಥ ಮನೋಭಾವದ ವ್ಯಕ್ತಿಯನ್ನು ಶಿವ ಮೆಚ್ಚಿಕೊಳ್ಳುತ್ತಾನೆ." ಬಡವರಿಗೆ ಅನ್ವಯಿಸುವಂತೆ ದರಿದ್ರನಾರಾಯಣ ಎಂಬ ಶಬ್ದವನ್ನು ಟಂಕಿಸಿದವರು ಸ್ವಾಮಿಜಿ. ಬಡವರ ಬಗೆಗಿನ ಸ್ವಾಮಿಜಿಯ ಪ್ರೀತಿ ಮತ್ತು ಕಳಕಳಿ

ರಾಮಕೃಷ್ಣ ಮಿಷನ್ನಿನ ಸೇವಾಕಾರ್ಯಕ್ರಮಗಳಲ್ಲಿ ಒಂದು ನಿರ್ದೇಶಕ ತತ್ತ್ವವಾಗಿ ಮುಂದುವರಿದುಕೊಂಡು ಬಂದಿದೆ.

**ದುಡಿಮೆಯೊಂದು ಆಧ್ಯಾತ್ಮಿಕ ಸಾಧನೆ :** ಮೇಲಿನ ನಿಬಂಧನೆಗಳನ್ನು ಪೂರೈಸುತ್ತ ಮಾಡುವ ಯಾವುದೇ ಕೆಲಸ ಆಧ್ಯಾತ್ಮಿಕ ಸಾಧನೆಯಾಗಿ ಪರಿಣಮಿಸುತ್ತದೆ, ಆದರಿಂದ ಮನಸ್ಸು ಶುದ್ಧಿಗೊಳ್ಳುತ್ತದೆ ಮತ್ತು ಜೀವನಲ್ಲಿ ಸುಪ್ತವಾಗಿರುವ ದೈವಿಕತೆ ಹೆಚ್ಚುಹೆಚ್ಚಾಗಿ ಪ್ರಕಟವಾಗುತ್ತದೆ. ಹೀಗಾಗಿ, ಪೂಜಾತ್ಮಕ ಸೇವೆಯೆಂದು ಭಾವಿಸಿ ಮಾಡಿದ ಇಂಥ ಕೆಲಸದಿಂದ ಮಾಡಿದವನಿಗೇ ಆಧ್ಯಾತ್ಮಿಕವಾಗಿ ಲಾಭ ದೊರೆಯುತ್ತದೆ; ಅದೊಂದು ಆಧ್ಯಾತ್ಮಿಕ ಶಿಸ್ತು ಅಥವಾ ಯೋಗವಾಗುತ್ತದೆ. ಬಡವರಿಗೆ ಅನ್ನ, ಬಟ್ಟೆಗಳನ್ನು ಕೊಡುವುದು, ರೋಗಿಗಳ ಆರೈಕೆ ಮಾಡುವುದು ಮುಂತಾದ ರಾಮಕೃಷ್ಣ ಮಿಷನ್ನಿನ ಸೇವಾ ಚಟುವಟಿಕೆಗಳೆಲ್ಲ ನಡೆಯುವುದು ಕಾಯಕವನ್ನು ಆಧ್ಯಾತ್ಮಿಕ ಶಿಸ್ತಾಗಿ ಕಾಣುವ (ಕರ್ಮಯೋಗದ) ಈ ಗ್ರಹಿಕೆಯಿಂದಲೇ. ಹೀಗಾಗಿ, ಮನುಷ್ಯನಲ್ಲಿರುವ ಭಗವಂತನ ಪೂಜೆಯಾಗಿ ಕೈಕೊಳ್ಳುವ ಸೇವೆ ಇಬ್ಬಗೆಯಲ್ಲಿ ಫಲ ನೀಡುತ್ತದೆ: ಸೇವೆ ಪಡೆಯುವ ವ್ಯಕ್ತಿಗೆ ಅದು ದೈಹಿಕವಾಗಿ ಅಥವಾ ಮಾನಸಿಕವಾಗಿ ಅನುಕೂಲವಾಗುತ್ತದೆ ಮತ್ತು ಸೇವೆ ಮಾಡುವ ವ್ಯಕ್ತಿಗೆ ಆಧ್ಯಾತ್ಮಿಕವಾಗಿ ಅನುಕೂಲವಾಗುತ್ತದೆ.

**ಧ್ಯೇಯ ವಾಕ್ಯ :**

ಸೇವಾಚಟುವಟಿಕೆಗಳ ಈ ದ್ವಿಮುಖ ಉದ್ದೇಶವನ್ನು, ವಾಸ್ತವವಾಗಿ ಶ್ರೀ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಇಡೀ ವಿಚಾರಪ್ರಣಾಳಿಯನ್ನು ಸ್ವಾಮಿ ವಿವೇಕಾನಂದರು ರೂಪಿಸಿದ ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ–ಸ್ವಂತ ಮುಕ್ತಿಗಾಗಿ ಮತ್ತು ಲೋಕಹಿತಕ್ಕಾಗಿ–ಎಂಬ ಧ್ಯೇಯವಾಕ್ಯದಲ್ಲಿ ಅಡಕಗೊಳಿಸಲಾಗಿದೆ.

ಮೊದಲೇ ಹೇಳಿದಂತೆ, ಶ್ರೀ ರಾಮಕೃಷ್ಣ ಆಂದೋಲನದಲ್ಲಿ ಅನುಸರಿಸುತ್ತಿರುವ ಸೇವಾದರ್ಶ, "ಶಿವಜ್ಞಾನೇ ಜೀವಸೇವಾ", ಎಂದರೆ, ಮನುಷ್ಯನೇ ಭಗವದ್ರೂಪವೆಂದು ತಿಳಿದು ಅವನಿಗೆ ಸೇವೆ ಸಲ್ಲಿಸುವುದು. ಆದರೂ ಎಲ್ಲರಿಗೂ–ಅದರಲ್ಲೂ ದರಿದ್ರರು ಮತ್ತು ರೋಗಿಗಳಗೆ–ಪೂಜಾ ಮನೋಭಾವದಿಂದ ಸೇವೆ ಸಲ್ಲಿಸುವುದು ಹೇಳಿದಷ್ಟು ಸುಲಭವಲ್ಲ. ಕಾಲ, ಶಕ್ತಿ, ಸುಖ ಇತ್ಯಾದಿ ಬಹಳಷ್ಟು ವಿಷಯಗಳ ತ್ಯಾಗವನ್ನು ಅಪೇಕ್ಷಿಸುತ್ತದೆ, ಈ ಸೇವಾದರ್ಶ. ಪ್ರತಿಫಲ, ಮನ್ನಣೆ ಅಥವಾ ಕೀರ್ತಿಯ ಯಾವುದೇ ನಿರೀಕ್ಷೆಯಲ್ಲದೆ ರಾಮಕೃಷ್ಣ ಆಂದೋಲನದ ಸದಸ್ಯರು ಕೈಗೊಳ್ಳುವ ಈ ತ್ಯಾಗಗಳೇ ಅವರ ಸೇವಾದರ್ಶವನ್ನು ಯಥಾರ್ಥಗೊಳಿಸುವಂಥವು.

ಸೇವೆ ಮತ್ತು ತ್ಯಾಗಗಳ ಹಿಂದಿನ ಪ್ರೇರಕಶಕ್ತಿಯೇ ಪ್ರೇಮ. ರಾಮಕೃಷ್ಣ ಮಠ ಮತ್ತು ಮಿಷನ್ನಿನ ಮೂಲಕ ಪ್ರವಹಿಸುವ ಪ್ರೇಮ ದೈವಿಕ ಪ್ರೇಮ–ಮನುಕುಲಕ್ಕೆ ಶ್ರೀ ರಾಮಕೃಷ್ಣ, ಶ್ರೀಮಾತೆ ಹಾಗೂ ಸ್ವಾಮಿ ವಿವೇಕಾನಂದರು ತೋರಿದ ಪರಿಶುದ್ಧವೂ, ಅವಿನಾಶಿಯೂ ಆದ ಪ್ರೇಮ. ಈ ದೈವಿಕ ಪ್ರೇಮವೇ ಸನ್ಯಾಸಿ ಸೋದರರನ್ನೂ, ಸಾಮಾನ್ಯ ಭಕ್ತರನ್ನೂ ಒಗ್ಗೂಡಿಸಿ, ಸಂಘವನ್ನು ಒಟ್ಟಾಗಿ ಹಿಡಿದಿಟ್ಟಿದೆ.

**ಸ್ವಾತಂತ್ರ್ಯ, ಸಮಾನತೆ, ಸೋದರತೆ :**

ಸ್ವಾಮಿ ವಿವೇಕಾನಂದರು ಮತ್ತೆ ಮತ್ತೆ ಹೇಳಿದ್ದಾರೆ. "ಬಿಡುಗಡೆಯೇ ಬೆಳವಣಿಗೆಯ ಮೊದಲ ಷರತ್ತು." ಮತಾಂಧತೆ, ಅಸಹನೆ, ದ್ವೇಷ, ಮೂಢ ನಂಬಿಕೆಗಳಿಂದ ಬಿಡುಗಡೆ, ಧಾರ್ಮಿಕ, ಸಾಮಾಜಿಕ, ಮತ್ತು ಜನಾಂಗಿಕ ಪೂರ್ವಗ್ರಹಗಳಿಂದ ಬಿಡುಗಡೆ–ಒಂದೇ ಮಾತಿನಲ್ಲಿ ಹೇಳುವುದಾದರೆ ವಿಚಾರ, ನಂಬಿಕೆಗಳ ಸ್ವಾತಂತ್ರ್ಯ ಎಂಬುದು ರಾಮಕೃಷ್ಣ ಆಂದೋಲನದಲ್ಲಿ ಕಂಡು ಬರುವ ಕೇಂದ್ರ ಸಂಗತಿ. ರಾಮಕೃಷ್ಣ ಮಠ ಮತ್ತು ಮಿಷನ್ನಿನ ಚಟುವಟಿಕೆಗಳು, ಜಾತಿ, ಪಂಥ, ಜನಾಂಗಗಳ, ಯಾವುದೇ ಭೇದಗಳಿಲ್ಲದೆ ಸಮಷ್ಟಿಯ ಯೋಗಕ್ಷೇಮವನ್ನು ಗುರಿಯಾಗಿಟ್ಟುಕೊಂಡಿವೆ. ಬಡವ–ಬಲ್ಲಿದ, ಬ್ರಾಹ್ಮಣ–ಹರಿಜನ, ಹಿಂದುಗಳು, ಮುಸ್ಲಿಮರು, ಕ್ರೈಸ್ತರು–ಎಲ್ಲರೂ ಇಲ್ಲಿ ಒಬ್ಬರೇ ದೈವೇ ತಂದೆತಾಯಿಯರ ಮಕ್ಕಳಾಗಿ ಪರಿಗಣಿಸಲ್ಪಡುತ್ತಾರೆ. ಸಾಮಾಜಿಕ ಸಮಾನತೆಯನ್ನು ಉಂಟುಮಾಡುವುದು "ಕೆಳಮಟ್ಟಕ್ಕೆ ಇಳಿಸುವ" ಪ್ರಕ್ರಿಯೆಯಿಂದಲ್ಲ, "ಮೇಲ್ಮಟ್ಟಕ್ಕೆ ಏರಿಸುವ" ಪ್ರಕ್ರಿಯೆಯಿಂದ, ಎಂದರೆ ಈಗಾಗಲೇ ಮೇಲಿರುವವರನ್ನು ಕೆಳಕ್ಕೆಳೆಯುವುದರಿಂದಲ್ಲ, ಕೆಳಗಿರುವವರನ್ನು ಮೇಲಕ್ಕೆತ್ತುವುದರಿಂದ ಎಂಬ ವಿವೇಕಾನಂದರ ನಿಲುವನ್ನು ಈ ಸಂಸ್ಥೆಗಳು ಅನುಸರಿಸುತ್ತವೆ.

**ರಾಜಕೀಯರಹಿತ ಸಾಮಾಜಿಕ ಬದ್ಧತೆ :**

"ಸುಖೀ ರಾಜ್ಯ"ದ ತತ್ತ್ವವನ್ನನುಸರಿಸುವ ಪ್ರಜಾಪ್ರಭುತ್ವ ರಾಷ್ಟ್ರವೊಂದರಲ್ಲಿ ಯಾವುದೇ ಬಗೆಯ ಸಾಮಾಜಿಕ ಸೇವೆಯೂ ಅನಿವಾರ್ಯವಾಗಿ ಸರ್ಕಾರದ ಜೊತೆ ಸಂಬಂಧವನ್ನು ಒಳಗೊಳ್ಳುತ್ತದೆ. ಆದರೂ, ರಾಮಕೃಷ್ಣ ಮಿಷನ್ ಮನುಕುಲದ ಆಧ್ಯಾತ್ಮಿಕ ಪುನರುಜ್ಜೀವನವನ್ನು ಗುರಿಯಾಗಿರಿಸಿಕೊಂಡಿರುವ ಒಂದು ಆಧ್ಯಾತ್ಮಿಕ ಸಂಸ್ಥೆಯಾಗಿರುವುದರಿಂದ ತನ್ನ ಸ್ಥಾನವನ್ನು ಸಕ್ರಿಯ ರಾಜಕಾರಣ ಹಾಗೂ ರಾಜಕೀಯ ಸಂಬಂಧಗಳಿಗೆ ಅತೀತವಾಗಿ ಉಳಿಸಿಕೊಂಡಿದೆ.

**ರಾಮಕೃಷ್ಣ ಮಠ ಮತ್ತು ಮಿಷನ್ ನಡೆಸುವ ಪ್ರಮುಖ ಚಟುವಟಿಕೆಗಳನ್ನು ಮುಂದೆ ಕೊಡಲಾಗಿದೆ.**

**ಶೈಕ್ಷಣಿಕ ಚಟುವಟಿಕೆಗಳು:**

ಮಠ ಮತ್ತು ಮಿಷನ್ 12 ಕಾಲೇಜುಗಳನ್ನೂ, ಬೇರೆ ಬೇರೆ ಮಟ್ಟದ 428 ಶಾಲೆಗಳನ್ನೂ, 2ಭಾಷಾ ಶಾಲೆಗಳನ್ನೂ, 4 ಪಾಲಿಟೆಕ್ನಿಕ್‌ಗಳನ್ನೂ, 6ಜೂನಿಯರ್ ಮಟ್ಟದ ತಾಂತ್ರಿಕ ಹಾಗೂ ಔದ್ಯಮಿಕ ಶಾಲೆಗಳನ್ನೂ, 119ವಿದ್ಯಾರ್ಥಿನಿಲಯಗಳನ್ನೂ, 66 ಅನಾಥಾಲಯಗಳನ್ನೂ, ಅಂಗವಿಕಲರಿಗಾಗಿ 2 ಕೇಂದ್ರಗಳನ್ನೂ, ವೈದಿಕ ಶಿಕ್ಷಣಕ್ಕಾಗಿ 1 ಶಾಲೆಯನ್ನೂ, 270ಅನೌಪಚಾರಿಕ ಶಿಕ್ಷಣ ಕೇಂದ್ರಗಳನ್ನೂ ನಡೆಸುತ್ತಿವೆ. ಈ ಚಟುವಟಿಕೆಗಳಿಗಾಗಿ 2003–04ರಲ್ಲಿ ಮಾಡಿದ ಖರ್ಚು ಸುಮಾರು 2.1 ಕೋಟಿ ರೂ.ಗಳು.

**ಗ್ರಾಮೀಣ ಹಾಗೂ ಆದಿವಾಸಿ ಪ್ರದೇಶಗಳಲ್ಲಿ ಕಾರ್ಯಕ್ರಮಗಳು:**

ಗ್ರಾಮೀಣ ಮತ್ತು ಆದಿವಾಸಿ ಜನತೆಗಾಗಿ, ಮಠ ಮತ್ತು ಮಿಷನ್ 3ಕೃಷಿ ಸಂಸ್ಥೆಗಳನ್ನು ನಡೆಸುತ್ತಿವೆ. ಜೊತೆಗೆ, ಕೃಷಿಕರಿಗೆ ಸುಧಾರಿತ ಕೃಷಿ ವಿಧಾನಗಳನ್ನು ಕಲಿಸಲಾಗುತ್ತಿದೆ ಹಾಗೂ ಅವರಿಗೆ ಕೃಷಿಸೌಕರ್ಯ ಮತ್ತು ಆರ್ಥಿಕ ಸಹಾಯವನ್ನು ಒದಗಿಸಲಾಗುತ್ತಿದೆ. ಪಕ್ಕಾ ಮನೆಗಳ ನಿರ್ಮಾಣ, ಪಾಳುಭೂಮಿಯ ಅಭಿವೃದ್ಧಿ, ಹಣ್ಣಿನ ಮತ್ತು ಕಾಡುಸಸಿಗಳ ನೆಡುವಿಕೆ ಮುಂತಾದ ಯೋಜನೆಗಳನ್ನೂ ಕೈಗೊಳ್ಳಲಾಗುತ್ತಿದೆ. ಕೊರೆಬಾವಿ(ಬೋರ್‌ವೆಲ್ಲುಗಳು) ಮತ್ತು ಕೊಳವೆಬಾವಿಗಳನ್ನು ತೋಡಿ ಕುಡಿಯುವ ನೀರನ್ನು ಒದಗಿಸಲಾಗುತ್ತಿದೆ. ಗ್ರಾಮೀಣ ಹಾಗೂ ಆದಿವಾಸಿ ಪ್ರದೇಶಗಳಲ್ಲಿರುವ ಶೈಕ್ಷಣಿಕ ಮತ್ತು ವೈದ್ಯಕೀಯ ಸಂಸ್ಥೆಗಳಿಗಾಗಿ ಮಾಡಿದ ಭಾರಿ ವೆಚ್ಚವನ್ನು ಹೊರತುಪಡಿಸಿ, ಮಠ ಮತ್ತು ಮಿಷನ್ ಗ್ರಾಮೀಣ ಮತ್ತು ಆದಿವಾಸಿ ಅಭಿವೃದ್ಧಿ ಕಾರ್ಯಕ್ಕಾಗಿ 12ಕೋಟಿ ರೂ.ಗಳನ್ನು ಖರ್ಚುಮಾಡಿವೆ.

**ಯೋಗಕ್ಷೇಮ ಕಾರ್ಯಕ್ರಮಗಳು**

ರಾಮಕೃಷ್ಣ ಮಠ ಮತ್ತು ಮಿಷನ್ನಿನ ಕೇಂದ್ರ ಕಛೇರಿ ಮತ್ತು ಅದರ ಶಾಖೆಗಳು ಬಹಳ ಮಂದಿ ವಿದ್ಯಾರ್ಥಿಗಳಿಗೆ ತರಬೇತಿ ವೇತನಗಳನ್ನೂ, ಸಹಾಯಧನವನ್ನೂ ಬಡ ರೋಗಿಗಳಿಗೆ ವೈದ್ಯಕೀಯ ನೆರವನ್ನೂ ಹಾಗೂ ವೃದ್ಧರಿಗೆ ಮತ್ತು ಅನಾಥರಿಗೆ ಆರ್ಥಿಕ ನೆರವನ್ನೂ ನೀಡುತ್ತಿವೆ. 2003–04ರಲ್ಲಿ 1.98 ಕೋಟಿ ರೂ.ಗಳನ್ನು ಈ ಉದ್ದೇಶಗಳಿಗಾಗಿ ಖರ್ಚುಮಾಡಲಾಯಿತು. ಬಡವಿದ್ಯಾರ್ಥಿಗಳ ಅನುಕೂಲಕ್ಕಾಗಿ ನಮ್ಮ ಶೈಕ್ಷಣಿಕ ಸಂಸ್ಥೆಗಳು ಹಾಗೂ ಬಡರೋಗಿಗಳ ಚಿಕಿತ್ಸೆಗಾಗಿ ನಮ್ಮ ಆಸ್ಪತ್ರೆಗಳು ಮತ್ತು ಚಿಕಿತ್ಸಾಲಯಗಳು ಖರ್ಚು ಮಾಡಿದ ಭಾರಿ ಹಣವನ್ನು ಈ ಖರ್ಚು ಒಳಗೊಂಡಿರುವುದಿಲ್ಲ.

**ಮಹಿಳೆಯರಿಗಾಗಿ ಕಾರ್ಯಕ್ರಮಗಳು**

ಈ ಎರಡೂ ಸಂಸ್ಥೆಗಳು ತಮ್ಮ ಆಸ್ಪತ್ರೆಗಳ ಹೆರಿಗೆ ವಿಭಾಗಗಳ ಮತ್ತು ಮಹಿಳಾ ವೃದ್ಧಾಶ್ರಮದ ಮೂಲಕ ಮಹಿಳೆಯರಿಗೆ ಅನುಕೂಲವಾಗುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಇದರ ಜೊತೆಗೆ ವಿಧವೆಯರಿಗೆ ಮಾಸಾಶನ ನೀಡುವುದು, ಮಹಿಳೆಯರಿಗಾಗಿ ಶುಶ್ರೂಷಾ ಶಾಲೆಗಳನ್ನು ನಡೆಸುವುದು ಮತ್ತು ವೃತ್ತಿ ಶಿಕ್ಷಣ ತರಬೇತಿಯನ್ನೂ ನೀಡುತ್ತಿವೆ.

**ಯುವಜನರಿಗೆ ಚಟುವಟಿಕೆಗಳು:**

ಮಠ ಮತ್ತು ಮಿಷನ್ ನಡೆಸುವ ಎಲ್ಲ ಶೈಕ್ಷಣಿಕ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳ ಚಾರಿತ್ರ್ಯನಿರ್ಮಾಣಕ್ಕೆ ಹಾಗೂ ಅಧ್ಯಾತ್ಮಪರತೆಗೆ ವಿಶೇಷ ಗಮನ ನೀಡಲಾಗುತ್ತಿದೆ. ಇದಲ್ಲದೆ, ಅನೇಕ ಶಾಖಾ ಕೇಂದ್ರಗಳು ಯುವಜನರಿಗೆ ಮನರಂಜನಾತ್ಮಕ, ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಚಟುವಟಿಕೆಗಳನ್ನು ಒದಗಿಸುವ ಕಾರ್ಯಕ್ರಮಗಳನ್ನು, ಶಾಲಾಕಾಲೇಜುಗಳ ವೇಳೆಯನ್ನು ಹೊರತುಪಡಿಸಿದ ಕೆಲವು ನಿರ್ದಿಷ್ಟ ಅವಧಿಗಳಲ್ಲಿ ಹಮ್ಮಿಕೊಳ್ಳುತ್ತವೆ. ಈ

ಚಟುವಟಿಕೆಗಳಲ್ಲಿ ಸ್ತೋತ್ರಪಠನ, ಭಕ್ತಿಗೀತೆಗಳ ಗಾಯನ, ಸಾಹಿತ್ಯಕ ಚಟುವಟಿಕೆಗಳು ಮತ್ತು ಕ್ರೀಡೆಗಳು, ಚಾರಿತ್ರ್ಯ ನಿರ್ಮಾಣ ಮತ್ತು ನೈತಿಕ ಜೀವನದ ಬಗೆಗೆ ತಿಳಿವಳಿಕೆ, ಮಹಾಪುರುಷರನ್ನು ಕುರಿತ ಕತೆಗಳ ನಿರೂಪಣೆ ಇತ್ಯಾದಿಗಳು ಸೇರಿರುತ್ತವೆ.

**ಧರ್ಮ, ಸಂಸ್ಕೃತಿಗಳ ಪ್ರಸಾರ:**

ಬಹುಸಂಖ್ಯೆಯ ಗ್ರಂಥಾಲಯಗಳು, ಉಪನ್ಯಾಸಗಳು, ಪ್ರವಚನಗಳು ಮತ್ತು ವಿಚಾರಸಂಕಿರಣಗಳು, ಶ್ರವಣ-ದೃಶ್ಯ ಘಟಕಗಳು, ಪ್ರದರ್ಶನಗಳು, ವಸ್ತುಸಂಗ್ರಹಾಲಯಗಳು, ಆಧ್ಯಾತ್ಮಿಕ ಶಿಬಿರಗಳು, ಪುಸ್ತಕ ಪತ್ರಿಕೆಗಳ ಪ್ರಕಟಣೆ ಇತ್ಯಾದಿಗಳ ಮೂಲಕ ಈ ಉದ್ದೇಶ ನೆರವೇರುತ್ತಿದೆ. ಮಠ ಮತ್ತು ಮಿಷನ್ 18 ಪತ್ರಿಕೆಗಳನ್ನು 12 ಭಾಷೆಗಳಲ್ಲಿ ಪ್ರಕಟಿಸುತ್ತಿದೆ. ವೇದಾಂತ, ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾದೇವಿ ಮತ್ತು ಸ್ವಾಮಿ ವಿವೇಕಾನಂದರ ಸಂದೇಶ, ಆಧ್ಯಾತ್ಮಿಕತೆ ಮತ್ತು ವಿಶ್ವಧರ್ಮಗಳನ್ನು ಕುರಿತ ಪುಸ್ತಕಗಳು ಹೆಚ್ಚು ಕಡಿಮೆ ಭಾರತದ ಎಲ್ಲ ಪ್ರಮುಖ ಭಾಷೆಗಳಲ್ಲಿ ಮತ್ತು ಇತರ ದೇಶಗಳ ಕೆಲವು ಪ್ರಮುಖ ಭಾಷೆಗಳಲ್ಲಿ 21 ಪ್ರಕಟಣ ಕೇಂದ್ರಗಳಿಂದ ಪ್ರಕಾಶನಗೊಳ್ಳುತ್ತಿವೆ. ಇಂಗ್ಲಿಷ್ ಭಾಷೆಯೊಂದರಲ್ಲೇ 700ಕ್ಕೂ ಹೆಚ್ಚು ಪುಸ್ತಕಗಳನ್ನು ಹೊರತರಲಾಗುತ್ತಿದೆ. ಕೆಲವು ಬುಡಗಟ್ಟು ಭಾಷೆಗಳೂ ಸೇರಿದಂತೆ ಬಹುತೇಕ ಎಲ್ಲ ಪ್ರಾದೇಶಿಕ ಭಾಷೆಗಳಲ್ಲಿಯೂ ನೂರಾರು ಪುಸ್ತಕಗಳು ಹೊರಬರುತ್ತಿವೆ.

**ಆಧ್ಯಾತ್ಮಿಕ ಸೇವೆ:**

ಪ್ರತಿಯೊಂದು ಮಠದ ಕೇಂದ್ರದಲ್ಲಿಯೂ ಶ್ರೀರಾಮಕೃಷ್ಣರ ದೇಗುಲ ಇದ್ದು, ಅಲ್ಲಿ ಪ್ರತಿನಿತ್ಯವೂ ವಿಧಿವತ್ತಾದ ಪೂಜೆ ನಡೆಯುತ್ತದೆ. ಸಂಜೆಯ ಹೊತ್ತು ಸಾಮೂಹಿಕ ಪ್ರಾರ್ಥನೆ ಮತ್ತು ಭಜನೆಗಳ ಸಹಿತ ಆರತಿಯಾಗುತ್ತದೆ; ಅದರಲ್ಲಿ ಸನ್ಯಾಸಿಗಳೂ ಭಕ್ತರೂ ಪಾಲ್ಗೊಳ್ಳುತ್ತಾರೆ. ಹಬ್ಬಹರಿದಿನಗಳಂದು ಹಾಗೂ ಶ್ರೀ ರಾಮಕೃಷ್ಣ, ಶ್ರೀಮಾತೆ, ಸ್ವಾಮಿ ವಿವೇಕಾನಂದರ ಜನ್ಮದಿನಗಳಂದು ವಿಶೇಷ ಆಧ್ಯಾತ್ಮಿಕ ಕಾರ್ಯಕ್ರಮಗಳು ನಡೆಯುತ್ತವೆ; ಅವುಗಳಲ್ಲಿ ಸಾವಿರಾರು ಜನ ಭಾಗವಹಿಸುತ್ತಾರೆ. ಬುದ್ಧಪೂರ್ಣಿಮೆ ಹಾಗೂ ಕ್ರಿಸ್ಮಸ್ ಸಂಜೆಯನ್ನು ಎಲ್ಲ ರಾಮಕೃಷ್ಣ ಕೇಂದ್ರಗಳಲ್ಲಿ ಆಚರಿಸಲಾಗುತ್ತದೆ. ಕೇಂದ್ರಗಳ ಮುಖ್ಯಸ್ಥರು ಹಾಗೂ ಹಿರಿಯ ಸನ್ಯಾಸಿಗಳು ಭಕ್ತರಿಗಾಗಿ ಆಧ್ಯಾತ್ಮಿಕ ವಿಷಯಗಳ ಮೇಲೆ ನೀಡುವ ಉಪನ್ಯಾಸಗಳು ಹಾಗೂ ಹಿತವಚನಗಳು, ಮತ್ತು ಭಕ್ತರ ಪ್ರಯೋಜನಕ್ಕಾಗಿ ಏರ್ಪಡಿಸುವ ಆಧ್ಯಾತ್ಮಿಕ ಶಿಬಿರಗಳು ಮತ್ತು ಭಕ್ತಸಮ್ಮೇಳನಗಳು ಈ ಆಧ್ಯಾತ್ಮಿಕ ಸೇವೆಯ ಮತ್ತೊಂದು ಮುಖ. ಆಧ್ಯಾತ್ಮಿಕ ಶಿಬಿರಗಳು ಮತ್ತು ಭಕ್ತಸಮ್ಮೇಳನಗಳು ಈ ಆಧ್ಯಾತ್ಮಿಕ ಸೇವೆಯ ಮತ್ತೊಂದು ಮುಖ. ಆಧ್ಯಾತ್ಮಿಕ ಶಿಬಿರಗಳು ಮತ್ತು ಭಕ್ತಸಮ್ಮೇಳನಗಳು ಈ ಆಧ್ಯಾತ್ಮಿಕ ಸೇವೆಯ ಮತ್ತೊಂದು ಮುಖ. ಆಧ್ಯಾತ್ಮಿಕ ಸೇವೆಯ ಅತ್ಯಂತ ಮುಖ್ಯ ಪ್ರಕಾರವೆಂದರೆ, ರಾಮಕೃಷ್ಣ ಸಂಘದ ಮಹಾಧ್ಯಕ್ಷರು ಮತ್ತು ಉಪಾಧ್ಯಕ್ಷರು ಪ್ರಾಮಾಣಿಕರಾದ ಆಧ್ಯಾತ್ಮಿಕ ಅನ್ವೇಷಕರಿಗೆ ನೀಡುವ ದೀಕ್ಷೆ.

## ರಾಮಕೃಷ್ಣ ಮಠ ಮತ್ತು ಮಿಷನ್, ಮಂಗಳೂರು

1940ರ ದಶಕ. ದಿವಂಗತ ಸಾಹುಕಾರ್ ವೆಂಕಟೇಶ ಪೈ ಅವರು ಸೇವೆಯ ಆದರ್ಶವನ್ನು ಮುಂದಿಟ್ಟುಕೊಂಡು ಸ್ವಜಾತಿಯ ಬಡಮಕ್ಕಳ ಕಲ್ಯಾಣಕ್ಕಾಗಿ ಒಂದು ಬಾಲಕಾಶ್ರಮವನ್ನು ಹುಟ್ಟುಹಾಕಿದ್ದರು. ಈ ಬಾಲಾಕಾಶ್ರಮದಲ್ಲಿ ಮಕ್ಕಳಿಗೆ ಉಚಿತವಾಗಿ ಊಟ-ವಸತಿಗಳನ್ನು ನೀಡಲಾಗುತ್ತಿತ್ತು. ಅನಂತರ ಅದನ್ನು ವ್ಯವಸ್ಥಿತವಾಗಿ ನಡೆಸಲು ಹಿಂದೂ ಸೇವಾ ಸಂಘವೆಂಬ ವಿಶ್ವಸ್ಥ ಮಂಡಳಿಯನ್ನು ಮಾಡಿ ಅದಕ್ಕೆ ಬಾಲಾಕಾಶ್ರಮವನ್ನು ವರ್ಗಾಯಿಸಿದರು. ಇದೇ ಸಮಯದಲ್ಲಿ ಮಂಗಳೂರಿನಲ್ಲಿ ಶ್ರೀರಾಮಕೃಷ್ಣ ಮಠದ ಕೇಂದ್ರವೊಂದನ್ನು ಪ್ರಾರಂಭಿಸುವಂತೆ ಮಂಗಳೂರಿನ ಜನತೆ ಮಾಡಿದ ಮನವಿಗೆ ಫಲರೂಪಿಯಾಗಿ ಪ್ರಧಾನ ಕೇಂದ್ರವಾದ ಬೇಲೂರುಮಠದಿಂದ ಸ್ವಾಮಿ ವಿಮಲಾನಂದಜಿಯವರನ್ನು ಕಳುಹಿಸಿಕೊಟ್ಟರು

3.6.1947 ರಂದು ಮಂಗಳೂರಿನ ಶ್ರೀ ರಾಮಕೃಷ್ಣ ಮಠವು ಲಾಲ್‌ಬಾಗಿನ ಒಂದು ಬಾಡಿಗೆ ಮನೆಯಲ್ಲಿ ಪ್ರಾರಂಭವಾಯಿತು. ಈ ಮಠದಲ್ಲಿ ಸ್ವಾಮಿ ವಿಮಲಾನಂದಜಿಯವರು ಕೆಲವು ಬ್ರಹ್ಮಚಾರಿಗಳ ಸಹಾಯದಿಂದ ಪೂಜೆ-ಭಜನೆಗಳನ್ನೂ ಪಾಠ-ಪ್ರವಚನಗಳನ್ನೂ ನಡೆಸುತ್ತಾ ಬಂದರು. ಸ್ವಾಮಿ ವಿಮಲಾನಂದಜಿಯವರು ಆರಂಭದಲ್ಲಿ ಆಂಗ್ಲಭಾಷೆಯಲ್ಲಿ ಪ್ರವಚನವನ್ನು ನೀಡುತ್ತಿದ್ದರು. ಶೀಘ್ರದಲ್ಲಿಯೇ ಕನ್ನಡ ಭಾಷೆಯನ್ನು ಕಲಿತು ಅದರಲ್ಲಿಯೇ ಪ್ರವಚನಗಳನ್ನು ಮಾಡುತ್ತಿದ್ದರು. ಆಳವಾದ ಶಾಸ್ತ್ರಜ್ಞಾನವನ್ನು ಹೊಂದಿದ್ದ ಅವರು ಮಂಗಳೂರಿನಲ್ಲಿ ರಾಮಕೃಷ್ಣ-ವಿವೇಕಾನಂದ ವಿಚಾರಧಾರೆಯ ಪ್ರಚಾರಕ್ಕಾಗಿ ಶ್ರಮಿಸಿದರು.

ಇದೇ ಸಮಯದಲ್ಲಿ ಹಿಂದೂ ಸೇವಾಸಂಘದ ವತಿಯಿಂದ ತಮ್ಮ ಮಿತ್ರರೊಡನೆ ಬಾಲಕಾಶ್ರಮವನ್ನು ನಡೆಸುತ್ತಿದ್ದ ಸಾಹುಕಾರ್ ವೆಂಕಟೇಶ ಪೈ ಅವರು ಅದನ್ನು ರಾಮಕೃಷ್ಣ ಮಠಕ್ಕೆ ಒಪ್ಪಿಸಲು ತುಂಬು ಮನಸ್ಸಿನಿಂದ ಮುಂದೆ ಬಂದರು. ಅದರಂತೆಯೇ

**ಪರಿಹಾರ ಮತ್ತು ಪುನರ್ವಸತಿ ಕಾರ್ಯ:**

1897ರಲ್ಲಿ ರಾಮಕೃಷ್ಣ ಮಿಷನ್ ಸ್ಥಾಪಿತವಾದಂದಿನಿಂದಲೂ ಪ್ರತಿವರ್ಷವೂ ಉಂಟಾಗುವ ಚಂಡಮಾರುತ, ಪ್ರವಾಹ, ಭೂಕಂಪ ಮತ್ತು ಅಗ್ನಿ ಆಕಸ್ಮಿಕಗಳಂಥ ಪ್ರಾಕೃತಿಕ ವಿಕೋಪಗಳು ಮತ್ತು ದೊಂಬಿ, ಗಲಭೆಗಳಂಥ ಮಾನವಕೃತ ಅನರ್ಥಗಳಿಂದ ತೊಂದರೆಗೊಳಗಾದವರಿಗಾಗಿ ವ್ಯಾಪಕ ಪರಿಹಾರ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. 759 ಗ್ರಾಮಗಳಿಗೆ ಸೇರಿದ 2.55 ಲಕ್ಷ ಜನರ ಅನುಕೂಲಕ್ಕಾಗಿ 2003-04ರಲ್ಲಿ 2.6 ಕೋಟಿ ರೂ.ಗಳನ್ನು ಖರ್ಚು ಮಾಡಲಾಯಿತು.

**ವೈದ್ಯಕೀಯ ಸೇವೆ :**

2003-04ರಲ್ಲಿ ಶ್ರೀ ರಾಮಕೃಷ್ಣ ಮಠ ಮತ್ತು ಮಿಷನ್ಗಳ ಅಧೀನದಲ್ಲಿ (2032 ಹಾಸಿಗೆಗಳ) 15 ಆಸ್ಪತ್ರೆಗಳೂ, 120ಹೊರಾಂಗಣ ಆಸ್ಪತ್ರೆಗಳೂ ಮತ್ತು 46 ಸಂಚಾರಿ

ಆಸ್ಪತ್ರೆಗಳೂ ಇದ್ದುವು. (ಇವು ಬಹುತೇಕ ಗ್ರಾಮೀಣ ಮತ್ತು ಆದಿವಾಸಿ ಪ್ರದೇಶಗಳಲ್ಲಿ ಸೇವೆ ಸಲ್ಲಿಸುತ್ತಿವೆ.) ಆಸ್ಪತ್ರೆಗಳು ಮತ್ತು ಚಿಕಿತ್ಸಾಲಯಗಳು ನಗರಗಳಲ್ಲಿ ಊರುಗಳಲ್ಲಿ ಮತ್ತು ಹಿಮಾಲಯದ ಸುತ್ತಮುತ್ತಲಿನ ಸಣ್ಣ ಹಳ್ಳಿಗಳಲ್ಲಿ ಕೂಡ ಲಭ್ಯವಿದ್ದು, ಅವು ಬಹುಮಟ್ಟಿಗೆ ಬಡವರಿಗಾಗಿ ಮೀಸಲಾಗಿವೆ. ಈ ವೈದ್ಯಕೀಯ ಕೇಂದ್ರಗಳ ಮುಖಾಂತರ 2003–04ರಲ್ಲಿ 80ಲಕ್ಷ ರೋಗಿಗಳನ್ನು ಉಪಚರಿಸಲಾಯಿತು. ಜೊತೆಗೆ, ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ವೈದ್ಯಕೀಯ ಶಿಬಿರಗಳನ್ನು ವ್ಯವಸ್ಥೆಗೊಳಿಸಲಾಗುತ್ತದೆ; ಅಲ್ಲಿ ಕೂಡ ಪ್ರತೀ ವರ್ಷ ಸಾವಿರಾರು ರೋಗಿಗಳನ್ನು ಉಪಚರಿಸಲಾಗುತ್ತಿದೆ. 3000ಕ್ಕೂ ಹೆಚ್ಚು ಮಂದಿಗೆ ಉಚಿತವಾಗಿ ಕಣ್ಣಿನ ಪೊರೆಯ ಶಸ್ತ್ರಚಿಕಿತ್ಸೆ ಮಾಡಲಾಗುತ್ತದೆ. ಮಠ ಮತ್ತು ಮಿಷನ್ 5ಶುಶ್ರೂಷಕರ ತರಬೇತಿ ಕೇಂದ್ರಗಳನ್ನು ನಡೆಸುತ್ತಿದ್ದು, ಅಲ್ಲಿ ಪ್ರತಿ ವರ್ಷವೂ ಸುಮರು 400 ವಿದ್ಯಾರ್ಥಿಗಳಿಗೆ ಶುಶ್ರೂಷಾ ತರಬೇತಿಯನ್ನು ಕೊಡಲಾಗುತ್ತದೆ. ಪುರುಷರಿಗಾಗಿ ಎರಡು ವೃದ್ಧಾಶ್ರಮಗಳನ್ನೂ, ಮಹಿಳೆಯರಿಗೆ ಒಂದು ವೃದ್ಧಾಶ್ರಮವನ್ನೂ ನಡೆಸಲಾಗುತ್ತಿದೆ; ಅವುಗಳಲ್ಲಿ ಕ್ರಮವಾಗಿ 67 ಮತ್ತು 32 ಜನ ವಾಸಿಸುತ್ತಾರೆ. ವೈದ್ಯಕೀಯ ಸೇವೆಗಾಗಿ 2003–04 ರಲ್ಲಿ ಸುಮಾರು 3.2 ಕೋಟಿ ರೂ.ಗಳನ್ನು ಖರ್ಚುಮಾಡಲಾಗಿದೆ.

ದಿನಾಂಕ 11.08.1951ರಂದು ಬಾಲಕಾಶ್ರಮ, ಅದರ ಜೊತೆಗೆ ಏಳು ಎಕರೆಗಳಷ್ಟು ಜಮೀನು ಹಾಗೂ ಅದರಲ್ಲಿರುವ ಸುಂದರ ನಿವೇಶನ ಇವುಗಳನ್ನು ರಾಮಕೃಷ್ಣ ಮಹಾಸಂಘಕ್ಕೆ ಹಸ್ತಾಂತರಿಸಿದರು. ಶ್ರೀರಾಮಕೃಷ್ಣ ಮಠವು ಹಳೆಯ ಜಾಗದಲ್ಲಿ ನಡೆಸಿದಂತೆ ಪೂಜೆ ಪ್ರವಚನಗಳನ್ನು ಇಲ್ಲಿ ಮುಂದುವರೆಸಿಕೊಂಡು ಬಂದರೆ, ಬಾಲಕಾಶ್ರಮವನ್ನು ರಾಮಕೃಷ್ಣ ಮಿಷನ್ ನಡೆಸತೊಡಗಿತು.

ಸ್ಥಳೀಯ ಬಡಜನತೆಗೆ ವೈದ್ಯಕೀಯ ನೆರವಿನ ಅಗತ್ಯವನ್ನು ಮನಗಂಡ ಆಶ್ರಮವು ದಿನಾಂಕ ೩೦.೪.೧೯೫೫ರಂದು ಉಚಿತ ಚಿಕಿತ್ಸಾಲಯವನ್ನು ಪ್ರಾರಂಭಿಸಿತು. ಮಂಗಳೂರಿನ ನಿಷ್ಠಾವಂತ ಗಣ್ಯವೈದ್ಯರ ನೆರವಿನಿಂದ ಜಾತಿಮತ ಭೇದವಿಲ್ಲದೆ ರೋಗಿಗಳ ಸೇವೆಗೆ ತನ್ನನ್ನು ತೊಡಗಿಸಿಕೊಂಡ ಚಿಕಿತ್ಸಾಲಯವು ಬಹು ಬೇಗ ಜನಪ್ರಿಯವಾಯಿತು. ಸ್ವಾಮಿ ವಿವೇಕಾನಂದರ ಜನ್ಮಶತಾಬ್ಧಿಯ ಸವಿನೆನಪಿಗಾಗಿ ೧೯೬೩ರಲ್ಲಿ ಬಾಲಕಾಶ್ರಮಕ್ಕೆ ತನ್ನದೇ ಆದ ಒಂದು ಕಟ್ಟಡದ ನಿರ್ಮಾಣವಾಯಿತು.

ಸಾರ್ವಜನಿಕರಿಗೆ ಹಾಗೂ ವಿದ್ಯಾರ್ಥಿ ಸಮುದಾಯಕ್ಕೆ ಅಗತ್ಯವಿರುವ ಆಧ್ಯಾತ್ಮಿಕ ಶಿಬಿರಗಳು, ವ್ಯಕ್ತಿತ್ವನಿರ್ಮಾಣ ಶಿಬಿರಗಳು, ಬೇಸಿಗೆ ಶಿಬಿರಗಳು, ಹಾಗೂ ಇತರ ಧಾರ್ಮಿಕ, ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಅನುಕೂಲವಾಗುವಂತೆ ಸುಸಜ್ಜಿತ ಸಭಾಭವನ, ಬಹೂಪಯೋಗಿ ಭವನ ಹಾಗು ಗ್ರಂಥಾಲಯವನ್ನು ಒಳಗೊಂಡ ಕಟ್ಟಡ ಸಂಕೀರ್ಣವನ್ನು ಸಾರ್ವಜನಿಕರ ಸಹಾಯದಿಂದ ನಿರ್ಮಿಸುವಲ್ಲಿ ಆಶ್ರಮವು ಯಶಸ್ವಿಯಾಗಿದೆ. ಬಡ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗಾಗಿ

ಉಚಿತ ತರಬೇತಿ ಕೇಂದ್ರವನ್ನು ಆಶ್ರಮ ನಡೆಸುತ್ತಿದೆ. ಅದಲ್ಲದೆ, ರಾಮಕೃಷ್ಣ ಬಾಲವೃಂದ ಎಂಬ ಹೆಸರಿನಲ್ಲಿ ಮಕ್ಕಳಿಗೆ ನೈತಿಕ ಮತ್ತು ಆಧ್ಯಾತ್ಮಿಕ ವಿಷಯಗಳ ಬಗ್ಗೆ ತರಗತಿಗಳನ್ನು ನಡೆಸುತ್ತಿದೆ. ಇದಲ್ಲದೆ, ಬಡಶಾಲಾ ಮಕ್ಕಳಿಗಾಗಿ ಉಚಿತ ಶಿಕ್ಷಣ ತರಬೇತಿಯನ್ನೂ ನೀಡಲಾಗುತ್ತಿದೆ.

ರಾಮಕೃಷ್ಣ ಮಿಷನ್ನಿನ ಸೇವಾಕಾರ್ಯವು ಸ್ವಾಮಿ ವಿವೇಕಾನಂದರ ಉಪದೇಶದ ಫಲಸ್ವರೂಪವಾಗಿದೆ. ಶ್ರೀ ರಾಮಕೃಷ್ಣರ ಸೇವಕರು ಎಷ್ಟು ಪ್ರೀತಿಪೂರ್ವಕವಾಗಿ ಸೇವಾಕಾರ್ಯವನ್ನು ಮಾಡುತ್ತಾರೆ. ಎಂಬುದನ್ನು ನಾನು ನೋಡಿದ್ದೇನೆ. ಆಧ್ಯಾತ್ಮಿಕ ನಿಷ್ಠೆಯಿಂದ ದುಃಖಿಗಳ ಸೇವೆ ಮಾಡುವ ವಿಷಯದಲ್ಲಿ ಅವರು ಅತುಲನೀಯ ದೃಷ್ಟಾಂತವಾಗಿದ್ದಾರೆ. –ಶ್ರೀ ವಿನೋಬಾ ಭಾವೆ

ಸ್ವಾಮೀ ವಿವೇಕಾನಂದರಿಂದ 'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ' ಎಂಬ ಧ್ಯೇಯದೊಂದಿಗೆ ಸ್ಥಾಪಿತವಾದ ಶ್ರೀರಾಮಕೃಷ್ಣ ಮಹಾ ಸಂಘವು ಸದ್ದುಗದ್ದಲವಿಲ್ಲದೆ ಮೆಲ್ಲಮೆಲ್ಲನೆ ಕ್ರಮಕ್ರಮೇಣ ತನ್ನ ಮಾತೃಸದೃಶವಾದ

ಕರುಣಾಬಾಹುಗಳಿಂದ ಪ್ರಪಂಚವನ್ನೆಲ್ಲಾ ತಬ್ಬುತ್ತಿದೆ.....ಆದರೆ ಅದರ ರೀತಿಯೇ ಬೇರೆ, ನೀತಿಯೇ ಬೇರೆ. ಅದು ಮತ ಪ್ರಚಾರದ ಸಂಸ್ಥೆಯಲ್ಲ. ಧರ್ಮಪ್ರಚಾರದ ಸಂಸ್ಥೆ. ಶ್ರೀ ರಾಮಕೃಷ್ಣ ಸಂಘದ ಕೇಂದ್ರೋಪಕೇಂದ್ರಗಳು ಯಾವ ಕೃತಕ ಪ್ರಚೋದನೆಯೂ ಇಲ್ಲದೆ, ಯಾವ ಲೌಕಿಕ ಪ್ರಯೋಜನದ ಉದ್ದೇಶಗಳನ್ನೂ ಒಲ್ಲದೆ, ಸ್ವಾಭಾವಿಕವಾಗಿ, ಸಂದೇಹ ಭೀತಿ ಘರ್ಷಣೆಗಳಿಗೆ ಅವಕಾಶವಿಲ್ಲದಂತೆ ಮೂಡಿ ಮಲರಿ ಬಾಳುತ್ತಿವೆ. ಬದುಕನ್ನು ಬೆಳಗಿಸುತ್ತಿವೆ.

–ಕುವೆಂಪು

( ಈ ಮಾಹಿತಿಯನ್ನು ಮೈಸೂರಿನ ಶ್ರೀ ರಾಮಕೃಷ್ಣ ಆಶ್ರಮವು ಪ್ರಕಟಿಸಿದ ರಾಮಕೃಷ್ಣ ಮಿಷನ್ನಿನ ಕುರಿತಾದ ಕೈಪಿಡಿಯಿಂದ ಆಯ್ದುಕೊಳ್ಳಲಾಗಿದೆ. ಹಾಗೂ ಭಾವಚಿತ್ರಗಳನ್ನು ರಾಮಕೃಷ್ಣ ಮಿಷನ್ನಿನ ಅಂತರ್ಜಾಲ ತಾಣದಿಂದ ಆಯ್ದುಕೊಳ್ಳಲಾಗಿದೆ.)







ದಿವ್ಯ ತ್ರಯರು







ಉಚಿತ ತರಬೇತಿ ಕೇಂದ್ರ



ಪ್ರಾರ್ಥನಾಲಯ





ರಾಮಕೃಷ್ಣ ಮಠ, ಮಂಗಳೂರು ಪ್ರಧಾನ ಕಟ್ಟಡ

## ಶ್ರೀಕ್ಷೇತ್ರ ಧರ್ಮಸ್ಥಳ



ಶ್ರೀ ಮಂಜುನಾಥ ಸ್ವಾಮಿ



ಧರ್ಮಾಧಿಕಾರಿ ರಾಜರ್ಷಿ ಡಾ। ಡಿ. ವೀರೇಂದ್ರ ಹೆಗ್ಗಡೆ



ಮಹಿಳಾ ಜ್ಞಾನ ವಿಕಾಸ ಕಾರ್ಯಕ್ರಮ



ಬಾಹುಬಲಿ



ಸ್ವಸಹಾಯ ಗುಂಪು

# ಶ್ರೀ ಕ್ಷೇತ್ರ ಧರ್ಮಸ್ಥಳ

ಧರ್ಮಸ್ಥಳ ಸರ್ವಧರ್ಮ ಸಮನ್ವಯದ ತಾಣ. ಕರಾವಳಿಯ ಹಸುರು ವನಸಿರಿಯ ನಡುವೆ 'ಬೀಡು' ಕಟ್ಟಿಕೊಂಡಿದ್ದ ಹೆಗ್ಗಡೆಯವರಿಗೆ 'ಮಾನವ ಜಾತಿ ತಾನೊಂದೆ' ಎಂಬ ಸತ್ಯ ಧರ್ಮದೇವತೆಗಳ ಆದೇಶದ ರೂಪದಲ್ಲಿ ಹೊಳೆಯಿತೆನ್ನುವುದು ಒಂದು ರೂಪಕ. ಈ ಆದರ್ಶವನ್ನು ಸಾಕಾರಗೊಳಿಸಿ ಅದಕ್ಕೊಂದು ಸಾಂಸ್ಥಿಕ ರೂಪವನ್ನು ಕೊಟ್ಟವರು ಶ್ರೀ ಬರ್ಮಣ್ಣ ಹೆಗ್ಗಡೆಯವರು. ತಾವು ಜೈನ ಮತೀಯರಾಗಿದ್ದರೂ ಕರಾವಳಿಯ ನೆಲದಲ್ಲಿ ಆಗ ಗಾಢವಾಗಿ ಆವರಿಸಿಕೊಂಡಿದ್ದ ನಾಥಪಂಥದ ಆರಾಧ್ಯದೈವ ಶ್ರೀ ಮಂಜುನಾಥ ಸ್ವಾಮಿಯನ್ನು ಪ್ರತಿಷ್ಠಾಪಿಸಿ, ವೈಷ್ಣವ ಬ್ರಾಹ್ಮಣರನ್ನು ಪೂಜೆಗೆ ನಿಯುಕ್ತಿಗೊಳಿಸಿದರು. ಹೀಗೆ ಶೈವ-ವೈಷ್ಣವ-ಜೈನಧರ್ಮಗಳು ಈ ಕ್ಷೇತ್ರದಲ್ಲಿ ಸಾಮರಸ್ಯದಿಂದ ಸಮಾವೇಶಗೊಂಡವು. ಇಲ್ಲಿಗೆ ಎಲ್ಲ ಜಾತಿಯ, ಧರ್ಮದವರು ಬರಬಹುದು. ಊಟ, ವಸತಿ, ದೇವರದರ್ಶನ ಎಲ್ಲದರಲ್ಲೂ ಸಮಾನ ಅವಕಾಶ. ಸರ್ವಧರ್ಮ ಸಮನ್ವಯದ ಕುರುಹಾಗಿ ಪ್ರತಿವರ್ಷವೂ ಲಕ್ಷದೀಪೋತ್ಸವದ ಸಂದರ್ಭದಲ್ಲಿ ಸರ್ವಧರ್ಮ ಸಮ್ಮೇಳನ ಜರಗುತ್ತದೆ.

ಒಟ್ಟಿನಲ್ಲಿ ಧರ್ಮಸ್ಥಳ ಒಂದು ಧರ್ಮ ಸಾಮ್ರಾಜ್ಯ. ಹೆಗ್ಗಡೆಯವರು ಧರ್ಮದೇವತೆಗಳ, ಮಂಜುನಾಥ ಸ್ವಾಮಿಯ ಪ್ರತಿನಿಧಿಗಳು ಪೂಜ್ಯ ಹೆಗ್ಗಡೆಯವರು ಈ ಧರ್ಮದೇವತೆಗಳು ಹಾಗೂ ಮಂಜುನಾಥ ಸ್ವಾಮಿಯ ಪ್ರತಿನಿಧಿಯಾಗಿ, ತತ್ವದರ್ಶನಗಳನ್ನು ಸಾಕಾರಗೊಳಿಸುವ ಕ್ರಿಯಾಶಕ್ತಿಯಾಗಿ ಗೋಚರಿಸುತ್ತಿದ್ದಾರೆ. ಸರ್ವ ಜಾತಿ, ಮತ, ಪಂಥಗಳನ್ನು ಸಮಾನವಾಗಿ ಗೌರವಿಸುವ, ಲೋಕಕಲ್ಯಾಣವನ್ನೇ ಆದರ್ಶವಾಗಿ ನೆಚ್ಚಿಕೊಂಡ ಅವಿರತ ಚಟುವಟಿಕೆಗಳ ಫಲವಾಗಿ ಧರ್ಮಸ್ಥಳ ಇಂದು ಧಾರ್ಮಿಕ ಯಾತ್ರಾಸ್ಥಳವಾಗಿ ಮಾತ್ರವಲ್ಲದೆ ಭಕ್ತಿ ಆಧರಿತ ಸಾಂಸ್ಕೃತಿಕ, ಸಾಮಾಜಿಕ, ಶೈಕ್ಷಣಿಕ ಕೇಂದ್ರವೂ ಆಗಿರುವುದು ಗಮನಾರ್ಹ.

**ಚತುರ್ದಾನದ ಪರಿಕಲ್ಪನೆ :**

ಜೈನ ಶ್ರಾವಕನೊಬ್ಬನು ತನ್ನ ಬದುಕಿನಲ್ಲಿ ಅನುಸರಿಸಬೇಕಾದ ಕರ್ತವ್ಯಗಳಲ್ಲಿ 'ಚತುರ್ದಾನ' ಒಂದು ಅನ್ನದಾನ, ವಿದ್ಯಾದಾನ, ಔಷಧದಾನ, ಹಾಗೂ ಅಭಯದಾನ, ಇವು ಚತುರ್ದಾನಗಳು. ಜೈನಧರ್ಮದಲ್ಲಿ ಹೇಳಿದ ಈ ದಾನದ ಪರಿಕಲ್ಪನೆಯನ್ನು ಸಮಸ್ತ ಮಾನವ ಸಮುದಾಯಕ್ಕೆ ಅನ್ವಯಿಸುವಂತೆ ವರ್ತಮಾನದ ಅಗತ್ಯ ಮತ್ತು ಅನಿವಾರ್ಯತೆಗಳ ಹಿನ್ನೆಲೆಯಲ್ಲಿ ಪುನರ್ ಸಂಯೋಜಿಸುವ ಕೆಲಸವನ್ನು ಶ್ರೀ ಕ್ಷೇತ್ರ ಧರ್ಮಸ್ಥಳ ನಡೆಸಿಕೊಂಡು ಬರುತ್ತದೆ. ದಾನಧರ್ಮಗಳಿಂದಾಗಿ ಧರ್ಮಸ್ಥಳ ಎಂದು ಹೆಸರು ಪಡೆಯಿತು ಎಂದು ತಿಳಿಯಲಾಗಿರುವ ಧರ್ಮಸ್ಥಳ ಹೀಗೆ ಪರಂಪರೆಯನ್ನು

ಕೈ ಬಿಡದೆ ಆಧುನಿಕತೆಯನ್ನು ಹಾಗೂ ಸಮಕಾಲದ ಆವಶ್ಯಕತೆಯನ್ನು ಪೂರೈಸುತ್ತಾ ಬರುತ್ತಿರುವ ಸಾಮಾಜಿಕ ಕಳಕಳಿಯುಳ್ಳ ಧಾರ್ಮಿಕ ಸಂಸ್ಥೆ.

ಧರ್ಮಸ್ಥಳದ ಅನ್ನದಾನದ ವೈಭವವನ್ನು ಪ್ರೊ.ಎಂ. ರಾಮಚಂದ್ರ ಅವರು ಹೀಗೆ ನಿರೂಪಿಸುತ್ತಾರೆ : 'ದೇವರ ಮುಡಿಗೆ ಹೂ ತಪ್ಪದೇ ಇರುವಂತೆ, ಗರ್ಭಗುಡಿಯ ನಂದಾದೀಪ ಬಾಡದೇ ಇರುವಂತೆ, ಧರ್ಮಸ್ಥಳದ ಅನ್ನ ಸತ್ತದ ಒಲೆಯಲ್ಲಿ ಎಂದಿಗೂ ಬೆಂಕಿ ಆರಿದ್ದಿಲ್ಲ, ಅಲ್ಲಿಯ ಯಾತ್ರಿಕರಿಗೆ ಊಟ ತಪ್ಪಿದ್ದಿಲ್ಲ. ಹಾಗೆ ಸ್ವಾಮಿ ನಡೆಯಿಸಿದ್ದಾನೆ. ಹೆಗ್ಗಡೆಯವರು ನಡೆದಿದ್ದಾರೆ'[1].

ಸಾಮಾನ್ಯ ದಿನಗಳಲ್ಲಿ ಧರ್ಮಸ್ಥಳದ 'ಅನ್ನಪೂರ್ಣ'ದಲ್ಲಿ ಪ್ರಸಾದ ಭೋಜನ ಮಾಡುವವರ ಸಂಖ್ಯೆ ಸುಮಾರು 25 ರಿಂದ 30 ಸಾವಿರ ಜನ. ಲಕ್ಷದೀಪ ಸಾಮೂಹಿಕ ವಿವಾಹ ಸಂದರ್ಭಗಳಲ್ಲಿ ಸುಮಾರು 50 ರಿಂದ 60 ಸಾವಿರ ಜನ ಬರುತ್ತಾರಂತೆ.

**ಔಷಧದಾನ :**

'ಆರೋಗ್ಯ ಪೂರ್ಣವಾದ ದೇಹದಲ್ಲೇ ಆರೋಗ್ಯ ಪೂರ್ಣ ಆತ್ಮನಿವಾಸ ಮತ್ತು ಪರಮಾತ್ಮನ ಹುಡುಕಾಟ ಸಾಧ್ಯ' ವೆಂಬ ಆಲೋಚನೆಯಿಂದ ಧರ್ಮಾಧಿಕಾರಿ ಡಾ.ವೀರೇಂದ್ರ ಹೆಗ್ಗಡೆಯವರು ರೋಗಿಗಳಿದ್ದೆಡೆಗೆ ತೆರಳಿ ಔಷಧದಾನದ ಪರಿಕಲ್ಪನೆಗೆ ಹೊಸ ಆಯಾಮ ನೀಡಿದರು, ಊರೂರುಗಳಲ್ಲಿ ವೈದ್ಯಕೀಯ ಶಿಬಿರ ನಡೆಸಿ ಗ್ರಾಮೀಣ ಜನರು ತಮ್ಮ ಕಾಯಿಲೆಗಳನ್ನು ಗುರುತಿಸಿಕೊಳ್ಳುವ ಹಾಗೂ ಚಿಕಿತ್ಸೆ ಪಡೆಯುವುದಕ್ಕೆ ಅನುಕೂಲ ಮಾಡಿಕೊಟ್ಟರು. ಸಂಚಾರಿ ಆಸ್ಪತ್ರೆಗಳ ಏರ್ಪಾಟು ಮಾಡಿದರು. ಜನರ ಸ್ವಾಸ್ಥ್ಯಕ್ಕೆ ಅನುಕೂಲ ಕಲ್ಪಿಸಿಕೊಡುವ ದೃಷ್ಟಿಯಿಂದ ಆಯುರ್ವೇದ ಕಾಲೇಜುಗಳನ್ನು, ಯೋಗ ಮತ್ತು ಪ್ರಕೃತಿ ಚಿಕಿತ್ಸಾ ಕಾಲೇಜನ್ನು, ದಂತ ಮತ್ತು ವೈದ್ಯಕೀಯ ಕಾಲೇಜುಗಳನ್ನು, ಲೇಸರ್ ಕಿರಣ ಚಿಕಿತ್ಸಾ ಕೇಂದ್ರವನ್ನು ತೆರೆದರು.

**ವಿದ್ಯಾದಾನ :**

ಧರ್ಮಸ್ಥಳದಲ್ಲಿ ಇಪ್ಪತ್ತನೆಯ ಶತಮಾನದ ಆರಂಭದಲ್ಲೇ ಮೊದಲ ಸರಕಾರಿ ಮಾನ್ಯತೆಯ ಶಿಕ್ಷಣ ಸಂಸ್ಥೆಯನ್ನು

ಶ್ರೀ ಚಂದ್ರಯ್ಯ ಹೆಗ್ಗಡೆಯವರು ಆರಂಭಿಸಿದ್ದರೆಂದು ಪ್ರೊ. ನಾ. ವುಜಿರೆಯವರು ಬರೆಯುತ್ತಾರೆ.[2]

ಮುಂದೆ ಕೀ.ಶೇ. ಮಂಜಯ್ಯ ಹೆಗ್ಗಡೆಯವರು, ಕೀ.ಶೇ. ರತ್ನವರ್ಮ ಹೆಗ್ಗಡೆಯವರು ಹಾಗೂ ಪ್ರಸಕ್ತ ಧರ್ಮಾಧಿಕಾರಿ ಡಾ. ವೀರೇಂದ್ರ ಹೆಗ್ಗಡೆಯವರು ವಿದ್ಯೆಯ ಬೆಳಕನ್ನು ನೀಡುವ ಯೋಜನೆಯನ್ನು ವಿಶ್ವದಗಲ ವಿಸ್ತಾರಗೊಳಿಸಿದ್ದಾರೆ.

**ಅಭಯದಾನ :**

ಬದುಕಿನಲ್ಲಿ ಹಲವು ಬಗೆಯ ನೋವು, ಸಂಕಟ, ಸಮಸ್ಯೆಗಳಿಗೆ ಸಿಲುಕಿ ನೊಂದವರು ತಮ್ಮ ಅಂತರಾಳದ ಯಾತನೆಯನ್ನು ಶ್ರೀ ಸ್ವಾಮಿಯಲ್ಲಿ ನಿವೇದಿಸಿಕೊಳ್ಳಲು ಬರುತ್ತಾರೆ. ಅವರು 'ಮಾತಾಡುವ ಮಂಜುನಾಥ', ಧರ್ಮದೇವತೆಗಳ ಪ್ರತಿನಿಧಿ ಎಂದೇ ಖ್ಯಾತರಾದ

ಧರ್ಮಾಧಿಕಾರಿಯಲ್ಲಿ ತಮ್ಮ ಸಂಕಷ್ಟಗಳನ್ನು ನಿವೇದಿಸಿಕೊಳ್ಳುತ್ತಾರೆ. ಧರ್ಮಾಧಿಕಾರಿಗಳ ಧರ್ಮನಿಷ್ಠೆಯ ಕ್ರತು ಶಕ್ತಿ, ಅಭಯವಚನಗಳಲ್ಲಿರುವ ಸಂವೇದನೆ ಹಾಗೂ ನೊಂದವರ ವ್ಯಾಕುಲ ಮನದ ಪ್ರಾರ್ಥನೆಯ ಶಕ್ತಿಯು ಸಮ್ಮಿಲನದಿಂದ ನೊಂದವರ ಹೃದಯದಲ್ಲಿ ಪರಿಹಾರದ ಬೆಳಕು ಮೂಡಿ, ದುಮ್ಮಾನದ ಮಂಜು ಕರಗಿ, ನಿರುಮ್ಮಳಾಗಿ, ಮನಸ್ಸನ್ನು ಹಗುರವಾಗಿಸಿಕೊಂಡು ತೆರಳುತ್ತಾರೆ.

ಭಕ್ತಿಯೇ ಆಧಾರವಾಗಿವುಳ್ಳ 'ದೇವರ ನ್ಯಾಯ'ವಾಗಿ ತೀರ್ಮಾನ ಸಿಗುವ ಧರ್ಮಸ್ಥಳದ 'ಹೊಯ್ಲು' ಪರಂಪರೆಯನ್ನು ಭಾರತದ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು, ದೇಶದ ಪ್ರಮುಖ ನ್ಯಾಯವಾದಿಗಳು ಮೆಚ್ಚಿಕೊಂಡಿರುವುದು ಗಮನಾರ್ಹ ಅಂಶ. ಧರ್ಮಸ್ಥಳದ 'ಹೊಯ್ಲು'ವಿಗೆ ಸಿಗುವ ತೀರ್ಮಾನಕ್ಕೆ ಮೇಲ್ಮನವಿಗೆ ಅವಕಾಶವಿಲ್ಲ. ದೇವರ ಪರವಾಗಿ ಧರ್ಮಾಧಿಕಾರಿಯವರು ನೀಡುವ ತೀರ್ಮಾನಕ್ಕೆ ಸೋಲುವ–ಗೆಲ್ಲುವ ಇಬ್ಬರೂ ಬದ್ಧರಾಗಿರುತ್ತಾರೆ. ಈ ವ್ಯವಸ್ಥೆ ಒಂದು ಭಕ್ತಿ ಕೇಂದ್ರಿತವಾದ, ಶ್ರದ್ಧಾಕೇಂದ್ರಿತವಾದ ವ್ಯವಸ್ಥೆಯಿಂದ ಆಗುವ ಮಹಾತ್ಕಾರ್ಯಕ್ಕೆ ನಿದರ್ಶನವಾಗಿದೆ. ಮನೆಮನೆಗಳಲ್ಲಿ ಮೂಡಿದ ಮನಸ್ತಾಪದಿಂದ ಆದ ವಿಘಟನೆ ಧರ್ಮಾಧಿಕಾರಿಯವರ 'ಅಭಯದಾನ'ದ ಫಲವಾಗಿ ಬಗೆಹರಿದು ಒಡೆದ ಮನೆಗಳು ಮತ್ತೆ ಒಂದಾದ ಅಸಂಖ್ಯಾತ ನಿದರ್ಶನಗಳಿವೆ.

ಪರಂಪರಾಗತವಾಗಿ ಬಂದ ಚತುರ್ದಾನವನ್ನು ಇಂದಿನ ವೈಜ್ಞಾನಿಕ ಯುಗದ ಸಾಮಾಜಿಕ ಸ್ಥಿತಿಗತಿಗಳಿಗೆ ಅನುಗುಣವಾಗಿ ವಿಸ್ತರಿಸಿಕೊಂಡು ಸಮಾಜದ ಹಿತಕ್ಕಾಗಿ ಬಳಸುತ್ತಿರುವ ಧರ್ಮಾಧಿಕಾರಿ ಡಾ. ಡಿ.ವೀರೇಂದ್ರ ಹೆಗ್ಗಡೆಯವರ ಸಾಧನೆ ವಿಶ್ವದ ಇತಿಹಾಸದಲ್ಲೇ ಉಲ್ಲೇಖನೀಯ.

ಗ್ರಾಮೀಣ ಪ್ರದೇಶದ ಜನತೆ ತಮ್ಮ ಸಾಮರ್ಥ್ಯವನ್ನು ಗುರುತಿಸಿಕೊಂಡು, ಶ್ರೀ ಕ್ಷೇತ್ರದ ಮೇಲಿನ ಭಕ್ತಿ, ಶ್ರದ್ಧೆ, ಅಭಿಮಾನಗಳಿಂದ ಅದ್ಭುತ ಸಾಮರ್ಥ್ಯವನ್ನು ರೂಢಿಸಿಕೊಂಡ 'ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ', ಸುಶಿಕ್ಷಿತ ನಿರುದ್ಯೋಗಿ ಯುವಜನರ ಬಾಳ್ವೆಗೆ ಬೆಳಕು ನೀಡುವ ರುಡ್ ಸೆಟ್ ಸಂಸ್ಥೆಗಳ ಸ್ಥಾಪನೆ, ಕುಡುಕರ ಮನಃ

ಪರಿವರ್ತನೆಯ ಜನಜಾಗೃತಿ ಅಭಿಯಾನ, ಯೋಗ ನೈತಿಕ ಶಿಕ್ಷಣ ನೀಡುವ ಯೋಜನೆ, ರಾಜ್ಯದಾದ್ಯಂತ ಸ್ಮಶಾನಗಳ ಸ್ಥಿತಿಯನ್ನು ಸುಧಾರಿಸುವ ರುದ್ರಭೂಮಿ ಯೋಜನೆ, ಪರಸ್ಪರ ಸಹಕಾರದೊಂದಿಗೆ ಅಭ್ಯುದಯದೆಡೆಗೆ ರೈತರನ್ನು ಕೊಂಡೊಯ್ಯುವ 'ಪ್ರಗತಿ ಬಂಧು ಯೋಜನೆ' –ಇವು ಅಭಯದಾನದ ವಿಸ್ತೃತ ಆಧುನಿಕ ರೂಪಗಳೇ ಆಗಿವೆ.

ಗ್ರಾಮಾಭಿವೃದ್ಧಿ ಯೋಜನೆಯ ಅಡಿಯಲ್ಲಿ ಹಳ್ಳಿಗಳಲ್ಲಿ ಜರಗುವ ಸಾಮೂಹಿಕ ಸತ್ಯನಾರಾಯಣ ಪೂಜೆ, ಭಜನಾ ಕಾರ್ಯಕ್ರಮಗಳು ಈ ಯೋಜನೆಯ ಗ್ರಾಮೀಣ ಶ್ರೇಷ್ಠತಾ ಕೇಂದ್ರ ಇದರ ನಿರ್ದೇಶಕಿಯಾಗಿರುವ ಶ್ರೀಮತಿ ಮನೋರಮ ಭಟ್ ಜಿ.ವಿ ಯವರು ಹೇಳುವಂತೆ ಗ್ರಾಮೀಣ ಜನರಲ್ಲಿ ಕುಲಜಾತಿಗಳ ಏಣಿಶ್ರೇಣಿಗಳನ್ನು

ನಿರಸನಗೊಳಿಸಿ ಸಮಾನತೆ, ಐಕ್ಯಮತವನ್ನು ಮೂಡಿಸುವಲ್ಲಿ ಸಾರ್ಥಕ್ಯ ಕಂಡಿವೆ. ಸಾಮಾನ್ಯರಲ್ಲೂ ಆತ್ಮವಿಶ್ವಾಸವನ್ನು ಮೂಡಿಸಲು ಸಹಾಯಕವಾಗಿವೆ. ಎಲ್ಲಾ ಜಾತಿ, ಮತ, ಧರ್ಮದವರೂ ಸೇವಾವೃತೆಗಳಾಗಿ ದುಡಿಯುತ್ತಿರುವ ಗ್ರಾಮಾಭಿವೃದ್ಧಿ ಯೋಜನೆಯು ಯಶಸ್ವಿಯಾಗಲು ಪೂಜ್ಯ ಹೆಗ್ಗಡೆಯವರ ದೂರದರ್ಶತ್ವದ ನಾಯಕತ್ವ, ಸೇವಾವ್ರತೆಗಳ ನಿರಂತರ ಪರಿಶ್ರಮದ ಜೊತೆಗೆ, ಶ್ರೀ ಕ್ಷೇತ್ರ ಮಂಜುನಾಥ ಸ್ವಾಮಿಯ ಬಗ್ಗೆ ಜನರಲ್ಲಿ ಇರುವ ಭಕ್ತಿ, ಶ್ರದ್ಧೆಯೂ ಕಾರಣ ಎಂದು ಶ್ರೀಮತಿ ಮನೋರಮ ಭಟ್ ರವರು ಅಭಿಪ್ರಾಯ ಪಡುತ್ತಾರೆ.

ಧರ್ಮಸ್ಥಳದ ಧರ್ಮಾಧಿಕಾರಿ ಡಾ. ವೀರೇಂದ್ರ ಹೆಗ್ಗಡೆಯವರ ದೂರದೃಷ್ಟಿಯ ಪ್ರಗತಿಪರ ಚಿಂತನೆಯ ಫಲವಾಗಿ ಮೂರ್ತಗೊಂಡ ಹಲವಾರು ಜನಪರ ಯೋಜನೆಗಳಲ್ಲಿ ಸಾಮೂಹಿಕ ವಿವಾಹ ಒಂದು. 1972 ರಲ್ಲಿ ಆರಂಭವಾದ ಈ 'ಸಾಮೂಹಿಕ ವಿವಾಹ' ಹೆಣ್ಣು ಹೆತ್ತ ದುರ್ಬಲ ವರ್ಗದವರ ಬದುಕಿಗೆ ದಾರಿದೀಪವಾಯಿತು. ಜಾತಿ, ವರ್ಗಗಳ ಕಚ್ಚಾಟದ ಕಂದಕವನ್ನು ಮುಚ್ಚಿ ಹಾಕಲು ಅಂತರ್ಜಾತೀಯ ವಿವಾಹಗಳನ್ನು ಈ ಸಾಮೂಹಿಕ ವಿವಾಹದ ಸಂದರ್ಭದಲ್ಲಿ ಪ್ರೋತ್ಸಾಹಿಸುತ್ತಿರುವುದು ಒಂದು ಗಮನಾರ್ಹ ಅಂಶ. 1972 ರಿಂದ ತೊಡಗಿ 2006 ರ ತನಕದ 35 ವರ್ಷಗಳಲ್ಲಿ ಒಟ್ಟು 10,162 ವಿವಾಹಗಳು ಈ ಯೋಜನೆಯಡಿ ನೆರವೇರಿದೆ.[3] ಇಷ್ಟೊಂದು ಸಂಖ್ಯೆಯಲ್ಲಿ ಸಾಮೂಹಿಕ ವಿವಾಹ ನಡೆಯಲು ಮುಖ್ಯ ಕಾರಣ ಕ್ಷೇತ್ರದ ಮೇಲಿನ ಭಕ್ತಿ, ಗೌರವ

ಈ ಬಗ್ಗೆ ಹೆಚ್ಚಿನ ನಡೆಸಿದ ಸಂಶೋಧನಾ ಪ್ರಬಂಧದಿಂದ ಲಭ್ಯವಾದ ಇತರ ಮಾಹಿತಿ ಇಂತಿದೆ : [4]

1. ತೀರಾ ಹಿಂದುಳಿದವರು ಹಾಗೂ ಬಡವರು ಬಹು ಸಂಖ್ಯೆಯಲ್ಲಿ ಅಲ್ಲಿ ವಿವಾಹವಾಗುತ್ತಿರುವುದು ಕಂಡು ಬರುತ್ತದೆ.

2. ಧರ್ಮಸ್ಥಳದಲ್ಲಿ ವಿವಾಹವಾಗುವುದಕ್ಕೆ ಕಾರಣ ಹಣಕಾಸಿನ ಉಳಿತಾಯ, ದೈವ ಸಾನ್ನಿಧ್ಯ, ವ್ಯವಸ್ಥೆಯ ಬಗ್ಗೆ ಮೆಚ್ಚುಗೆ, ದಾಂಪತ್ಯದಲ್ಲಿ ಬಿಕ್ಕಟ್ಟು ಉಂಟಾದರೆ ಧರ್ಮಾಧಿಕಾರಿಯವರಿಂದ ರಕ್ಷಣೆ ಸಿಗುವುದೆಂಬ ನಂಬಿಕೆ. ಸಾಮಾನ್ಯವಾಗಿ

ಎಲ್ಲರೂ ಮೆಚ್ಚಿಕೊಂಡ ಅಂಶವೆಂದರೆ ವಿವಾಹವು ಅವರವರ ಸಂಸ್ಕೃತಿ, ಸಂಪ್ರದಾಯಗಳಿಗೆ ತಕ್ಕಂತೆ ನಡೆಯುತ್ತದೆ ಎನ್ನುವುದು.

ದುರ್ಬಲರಿಗೆ ಅಭಯ ನೀಡುವ ಪವಿತ್ರ ಕ್ಷೇತ್ರ ಧರ್ಮಸ್ಥಳದ ಆಶಯಗಳನ್ನು ಜನಸಾಮಾನ್ಯರಿಗೆ ಮುಟ್ಟಿಸುವ ಕಾರ್ಯಕ್ರಮ **ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ. ಕ್ಷೇತ್ರದ ಧರ್ಮಾಧಿಕಾರಿ ಪೂಜ್ಯ ವೀರೇಂದ್ರ ಹೆಗ್ಗಡೆಯವರ** ಅಂತರಾಳದ ಭಾವನೆಗಳಿಗೆ ಅಭಿವ್ಯಕ್ತಿ ನೀಡುತ್ತಿರುವ ಈ ಯೋಜನೆಯು ಜಾತಿ, ಮತ ಅಂತಸ್ತಿನ ಭೇದವಿಲ್ಲದೆ ಎಲ್ಲ ಸಂತ್ರಸ್ತರಿಗೂ ತನ್ನ ಸಹಾಯ ಹಸ್ತವನ್ನು ಚಾಚುತ್ತಿರುವ ವಿನೂತನ ಊರುಗೋಲಾಗಿದೆ. ದುರ್ಬಲರನ್ನು ದೈನ್ಯದ ಹೆಸರಿನಲ್ಲಿ ಪರಾವಲಂಬಿಯಾಗಿಸದೆ ಸಹಾಯವನ್ನು ಪಡೆದು ಸ್ವಾವಲಂಬಿಯನ್ನಾಗಿಸುವ ಹೊಸ ಮಂತ್ರ ಪೂಜ್ಯ ವೀರೇಂದ್ರ ಹೆಗ್ಗಡೆಯವರು ಯೋಜನೆಯ ಕಾರ್ಯಕರ್ತರಿಗೆ ನೀಡಿರುವ ದೀಕ್ಷೆಯಾಗಿದೆ.

ಯೋಜನೆಯಲ್ಲಿ ಮುಖ್ಯವಾಗಿ ದುರ್ಬಲರಿಗೆ ಅಗತ್ಯವಿರುವ ಎಲ್ಲ ಉಪಕರಣಗಳನ್ನು ಅವರ ಮನೆಬಾಗಿಲಿಗೆ ತಲುಪಿಸಿ ಇಡೀ ಕುಟುಂಬವೊಂದು ಸ್ವಾವಲಂಬಿಯಾಗುವಂತೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಈ ಯೋಜನೆಯಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿಗೆ ವಿಶೇಷ ಪ್ರಯತ್ನಗಳನ್ನು ಮಾಡಲಾಗಿದ್ದು, ಜನರಲ್ಲಿ ಸಚ್ಚಾರಿತ್ರ, ಸಚ್ಚಿಂತನೆ, ದೀರ್ಘ ಕಾಲದ ಗುರಿಗಳು, ಸಾಧನಾ ಪ್ರೇರಣೆ ಇವುಗಳನ್ನು ಮೂಡಿಸಿ ತನ್ಮೂಲಕ ಮಾದರಿ ಗ್ರಾಮಗಳ ನಿರ್ಮಾಣಕ್ಕೆ ನಾಂದಿ ಹಾಡಲಾಗುತ್ತಿದೆ.

ಬಹುಮುಖ ಗುರಿಗಳನ್ನುಳ್ಳ ಯೋಜನೆಯ ವಿವಿಧ ಪ್ರಕಾರಗಳು ಈ ಕೆಳಗಿನಂತಿವೆ.[4]

**ಪ್ರಾದೇಶಿಕ ವಿಸ್ತಾರ :**

ಯೋಜನೆಯು ಇದೀಗ ಕರ್ನಾಟಕ ರಾಜ್ಯದ ಒಂಬತ್ತು ಜಿಲ್ಲೆಗಳಾದ **ದ.ಕ., ಉಡುಪಿ, ಉ.ಕ., ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು, ಧಾರವಾಡ, ಹಾವೇರಿ, ಗದಗದ** ಸುಮಾರು 5,586 ಗ್ರಾಮಗಳಲ್ಲಿ ಮತ್ತು 41 ಸಣ್ಣ ಮತ್ತು ದೊಡ್ಡ ನಗರಗಳಲ್ಲಿ ಕೆಲಸ ಮಾಡುತ್ತಿದೆ.

**ಸಿಬ್ಬಂದಿ :**

ಗ್ರಾಮ ಮಟ್ಟದಲ್ಲಿ ದುಡಿಯುತ್ತಿರುವ ಸೇವಾನಿರತರನ್ನೊಳಗೊಂಡಂತೆ ಅಭಿವೃದ್ಧಿಯ ವಿವಿಧ ಕ್ಷೇತ್ರಗಳಲ್ಲಿ ತಜ್ಞತೆಯನ್ನು ಹೊಂದಿರುವ ಸುಮಾರು 3,328 ಕಾರ್ಯಕರ್ತರು ಪೂರ್ಣಾವಧಿ ಸಿಬ್ಬಂದಿಯಾಗಿ ದುಡಿಯುತ್ತಿದ್ದಾರೆ.

**ಆರ್ಥಿಕ ನೆರವು :**

ಯೋಜನೆಯಿಂದ ಅತೀ ದುರ್ಬಲರಿಗೆ ಸಹಾಯ ನೀಡುವ ಅನುದಾನದ ಕಾರ್ಯಕ್ರಮಗಳು, ಸ್ವಾವಲಂಬನೆಯ ಮೆಟ್ಟಿಲನ್ನೇರಲು ಸಾಲಗಳು ಮತ್ತು ಯೋಜನಾ ಸಿಬ್ಬಂದಿಗೆ ನಿರ್ವಹಣಾ ವೇತನಗಳು ದೊರೆಯುತ್ತಿದ್ದು ಇದಕ್ಕೆ

ಬೇಕಾದ ನೆರವನ್ನು ಶ್ರೀ ಕ್ಷೇತ್ರ ಧರ್ಮಸ್ಥಳ ದೇವಳ, ರಾಷ್ಟ್ರದ ಪ್ರಮುಖ ಬ್ಯಾಂಕುಗಳು, ಸರ್ಕಾರಿ ಕಾರ್ಯಕ್ರಮಗಳು ಮತ್ತು ಪಾಲುದಾರ ಕುಟುಂಬಗಳ ವಂತಿಗೆಯಿಂದ ಕ್ರೋಢೀಕೃತವಾಗುತ್ತದೆ. ಯೋಜನೆಯು ನೀಡುತ್ತಿರುವ ಹಲವು ಸೇವೆಗಳನ್ನು ಪಾಲುದಾರ ಕುಟುಂಬಗಳು ಶುಲ್ಕ ಪಾವತಿಸಿ ಪಡಕೊಳ್ಳುವುದರಿಂದ ಯೋಜನೆಯು ಸುಸ್ಥಿರವಾಗಿ ಕಾರ್ಯನಿರ್ವಹಿಸುತ್ತಿದೆ. 2009-10 ವಾರ್ಷಿಕ ವರ್ಷದಲ್ಲಿ ಯೋಜನಾ ವೆಚ್ಚ ರೂ.103.33 ಕೋಟಿಯಾಗಿತ್ತು. (ಬ್ಯಾಂಕ್ ಸಾಲಗಳನ್ನು ಹೊರತುಪಡಿಸಿ)

## ಕಾರ್ಯಕ್ರಮಗಳು:

**ಜನ ಸಂಘಟನೆ :**

ಯೋಜನೆಯು ಇದುವರೆಗೆ 1,96,472 ಪುರುಷರನ್ನು ಮತ್ತು 10,35,950 ಮಹಿಳೆಯರನ್ನೂ ತನ್ನ ಸಂಘಟನೆಯಲ್ಲಿ 1,15,172 ಸ್ವಸಹಾಯ ಸಂಘಗಳನ್ನು ಸೇರ್ಪಡೆಗೊಳಿಸಿದೆ. ಈ ಪೈಕಿ 26,073 ಕೃಷಿಕರ ಗುಂಪುಗಳು ಒಳಗೊಂಡಿವೆ.

**ಮಾನವಸಂಪನ್ಮೂಲ ಅಭಿವೃದ್ಧಿ :**

ತನ್ನ ಸದಸ್ಯರಲ್ಲಿ ಶಿಸ್ತು, ಗುರಿ, ಪರಿಣತಿ, ವ್ಯವಹಾರ, ಜ್ಞಾನ, ಆಧ್ಯಾತ್ಮಿಕ ಚಿಂತನೆ, ಉತ್ತಮ ಬದುಕಿನ ಸೂತ್ರಗಳನ್ನು ಅಳವಡಿಸಿಕೊಳ್ಳುವಲ್ಲಿ ವ್ಯಾಪಕ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಇದಕ್ಕಾಗಿ ತನ್ನ ಕಾರ್ಯಕರ್ತರಿಗೆ ವಿಶೇಷ ತರಬೇತಿಗಳನ್ನು ನೀಡಲಾಗುತ್ತದೆ.

**ಕೃಷಿ ಕಾರ್ಯಕ್ರಮಗಳು :**

ಯೋಜನೆಯ ಕೃಷಿಕ ಸದಸ್ಯರು ವಾರದ ಶ್ರಮವಿನಿಮಯದಿಂದ ವಿಶೇಷ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದ್ದು, ಇದುವರೆಗೆ 2.99 ಕೋಟಿ ಮಾನವ ದಿನಗಳಲ್ಲಿ ರೂ.223.00 ಕೋಟಿ ಮೌಲ್ಯದ ದೈಹಿಕ ಶ್ರಮವನ್ನು ತೊಡಗಿಸಿ ಸುಮಾರು 10,73,019 ಎಕ್ರೆ ಪ್ರದೇಶದಲ್ಲಿ ಹೊಸ ತೋಟಗಳನ್ನೂ, 39,000 ಬಾವಿಗಳನ್ನೂ, 26,808 ಪಂಪ್‌ಸೆಟ್, 29,945 ನೀರಾವರಿ ವಿಧಾನಗಳು, 13,261 ಜಲಾನಯನ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ. ನವೀನ ಬೆಳೆಗಳಾದ ಮಲ್ಲಿಗೆ, ಸುಗಂಧರಾಜ, ಗುಲಾಬಿ, ಮುಂತಾದ ಪುಷ್ಪ ಕೃಷಿಗಳು, ಬಾಳೆ, ಮಾವು, ಗೇರು, ತೆಂಗು, ಅಡಿಕೆ, ರಬ್ಬರ್, ತರಕಾರಿಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಲಾಗಿದೆ. ಇದಕ್ಕಾಗೆ ಪಾಲುದಾರರು ಹಲವೆಡೆ ನರ್ಸರಿಗಳನ್ನು ಸ್ಥಾಪಿಸಲು ಪ್ರೇರೇಪಣೆ ನೀಡಲಾಗಿದೆ.

ಶ್ರೀಕ್ಷೇತ್ರದ ಗ್ರಾಮಾಭಿವೃದ್ಧಿಯೋಜನೆಯ ಹಲವಾರು ಜನೋಪಯೋಗಿ ಕಾರ್ಯಕ್ರಮಗಳಲ್ಲಿ ಪ್ರಮುಖವಾದುದು ಮದ್ಯವರ್ಜನ ಶಿಬಿರ. ಗ್ರಾಮಾಭಿವೃದ್ಧಿ ಯೋಜನೆಯು ಪ್ರಾರಂಭಗೊಂಡು ಕೆಲವು ವರ್ಷಗಳವರೆಗೆ ಅನೇಕ ಉತ್ತಮ ಕಾರ್ಯಕ್ರಮಗಳನ್ನು ಸಂಘಟಿಸಿದರೂ ನಿರೀಕ್ಷಿತ ಫಲವನ್ನು ನೀಡಲಿಲ್ಲ. ಕಾರಣವನ್ನು ವಿವೇಚನೆ ಮಾಡಿದಾಗ ವಿದಿತವಾದದ್ದು ಸಂಸ್ಥೆಯು ಮಾಡಿದ ಎಲ್ಲಾ ಅಭಿವೃದ್ಧಿ ಕಾರ್ಯಗಳು ಪರಿಣಾಮಕಾರಿ ಯಾಗದೇ ಇರುವಂತೆ ಮಾಡಿದ್ದು ಗ್ರಮೀಣರನ್ನು ಸೆಳೆದುಕೊಂಡಿದ್ದ ಕುಡಿತ ವೆಂಬ ಮಹಾಮಾರಿ. ಗ್ರಾಮೀಣ ಜೀವನದ ಒಂದು ಅಂಗವೇ ಆಗಿತ್ತು ಎಂಬಷ್ಟು ವ್ಯಾಪಕವಾಗಿ ಈ ವ್ಯಸನಕ್ಕೆ ತುತ್ತಾಗಿದ್ದದ ಗ್ರಾಮೀಣ ಜನತೆ, ಹಾಗೂ ಅವರ ಆದಾಯದ ಬಹುಭಾಗ ಈ ಚಟಕ್ಕೆ ವಿನಿಯೋಗ ವಾಗುತಿತ್ತು. ಡಾ.ಹೆಗ್ಗಡೆಯವರ ಮಾತಿನಲ್ಲಿ ಹೇಳುವುದಾದರೆ – "ಮದ್ಯಪಾನದ ಘೋರಸ್ವರೂಪ ನಮಗೆ ಕಂಡದ್ದು ಎಂಬತ್ತರ ದಶಕದಲ್ಲಿ. ಮನೆಮನೆಗಳಲ್ಲಿ ಗ್ರಾಮಾಭಿವೃದ್ಧಿಯ ಮುಖೇನ ದೀಪ ಹಚ್ಚಲು ಹೊರಟಾಗ. ಮದ್ಯಪಾನ ಭಾಗ್ಯದ ಪಾತ್ರೆಗೆ ಒಂದು ತೂತಿದ್ದಂತೆ. ತೂತಿರುವ ಬಟ್ಟಲಿನಲ್ಲಿ ನೀರು ಹೇಗೆ ನಿಲ್ಲುವುದಿಲ್ಲವೋ, ಮದ್ಯಪಾನಿಯ ಮನೆಯಲ್ಲಿ ಸುಖ ನೆಮ್ಮದಿನಿಲ್ಲಲು ಸಾಧ್ಯವೇ ಇಲ್ಲ. ಜೊತೆಯಲ್ಲಿ ಲೌಕಿಕವಾದ ಸಂಪತ್ತೂ ಅವನಿಂದ ದೂರವಾಗುತ್ತದೆ. ಅವನ ಮನೆ ಮಕ್ಕಳಿಗೆ ಕಣ್ಣೀರಿನಲ್ಲಿ ಕೈತೊಳೆವುದು ಸಾಮಾನ್ಯವಾಗಿರುತ್ತದೆ. ಗ್ರಾಮಾಭಿವೃದ್ಧಿಯೋಜನೆಯ ಲಾಭ ಈ ಕುಟುಂಬವನ್ನು ತಲುಪುವುದಾದರು ಹೇಗೆ? ಸುದೀರ್ಘ ಆಲೋಚನೆಯ ನಂತರ ಬೆಳ್ತಂಗಡಿ ತಾಲೂಕಿನಲ್ಲಿ ಮದ್ಯಮುಕ್ತ ಸಮಾಜವನ್ನು ನಿರ್ಮಿಸುವ ಬಯಕೆಯೊಂದಿಗೆ ಜನಜಾಗೃತಿ ಪ್ರಾರಂಭವಾದದ್ದು ಹೀಗೆ[5]

1991 ರಲ್ಲಿ ಪೂಜ್ಯ ಡಾ.ಡಿ.ವೀರೇಂದ್ರ ಹೆಗ್ಗಡೆಯವರ ಮಾರ್ಗದರ್ಶನದಲ್ಲಿ ಬೆಳ್ತಂಗಡಿ ತಾಲೂಕಿನ ಆಸಕ್ತ ಪ್ರಜ್ಞಾವಂತ ನಾಗರಿಕರು ಸೇರಿ 'ಜನಜಾಗೃತಿ ವೇದಿಕೆ' ಎಂಬ ಹೆಸರಿನಲ್ಲಿ ಮದ್ಯವ್ಯಸನದ ವಿರುದ್ಧ ಆಂದೋಲನವನ್ನು ಪ್ರಾರಂಭಿಸಿದರು.ಗ್ರಾಮಸ್ಥರಿಗೆ ಮದ್ಯಪಾನಾದಿ ದುಶ್ಚಟಗಳ ಬಗ್ಗೆ ಮಾಹಿತಿ ನೀಡಿ ಅವರನ್ನು ದುಶ್ಚಟಗಳಿಂದ ಸೆಳೆಯುವ, ಸನ್ಮಾರ್ಗಕ್ಕೆ ಪ್ರೇರೇಪಿಸುವ, ಸಚ್ಚಾರಿತ್ರ್ಯ ರೂಪಿಸುವ ಕಾರ್ಯಕ್ರಮ ಜನಜಾಗೃತಿ. :– ಈ ಅಭಿಯಾನದ ಮಾನವ ಸಂಪನ್ಮೂಲ ಅಭಿವೃದ್ಧಿ ಅಧಿಕಾರಿ ಶ್ರೀ ವಿವೇಕ್ ವಿ.ಪ್ಯಾಸ್ ಹೇಳುವಂತೆ: (ಅವಲೋಕನ, ಪುಟ.5)

**"ಮನಸ್ಸಿನ ವ್ಯಸನವಾದ ಮದ್ಯಪಾನದ ಚಟಕ್ಕೆ ಚಿಕಿತ್ಸೆ ನೀಡಲು ಭಗವದ್ಭಕ್ತಿಯನ್ನೂ ಒಂದು ಸಾಧನವಾಗಿ ಬಳಸುತ್ತಾರೆ, ಮದ್ಯವರ್ಜನ ಶಿಬಿರಗಳಲ್ಲಿ."**

ಮದ್ಯವರ್ಜನ ಶಿಬಿರ ಇದರಲ್ಲಿ ಪಾಲ್ಗೊಂಡ ಓರ್ವ ಶಿಬಿರಾರ್ಥಿಯ ಪ್ರಕಾರ ಶಿಬಿರದಲ್ಲಿ ಅಳವಡಿಸುವ 'ಆತ್ಮನಿವೇದನ' ಎನ್ನುವ ಪ್ರಾರ್ಥನೆ, ಹಾಗೂ ಸಾಮೂಹಿಕ ಭಜನೆಯು ಈ ಚಟದಿಂದ ಮುಕ್ತರಾಗಲು ಮುಖ್ಯಪಾತ್ರ ವಹಿಸುತ್ತದೆ.ಗ್ರಾಮೀಣಾಭಿವೃದ್ಧಿಯೋಜನೆ ಹಾಗೂ ಅದರ ಯಶಸ್ವೀ ಕಾರ್ಯಯೋಜನೆ ಗಳಲ್ಲೊಂದಾದ ಮದ್ಯವರ್ಜನ ಶಿಬಿರ ಇದರಲ್ಲಿ ಪಾಲ್ಗೊಂಡು ಜೀವನವನ್ನು ರೂಪಿಸಿಕೊಂಡ ಒಂದು ಉದಾಹರಣೆ:

'ಧರಣಮ್ಮ ಮತ್ತು ಚನ್ನನ ಗೌಡ ಬೆಳ್ತಂಗಡಿಯ ಸಮೀಪದ ವಚ ಎಂಬ ಗ್ರಾಮದ ನಿವಾಸಿಗಳು ಅವರಿಗೆ ಮೂರು ಮಕ್ಕಳು ಗಂಡಕುಡುಕನಾಗಿದ್ದು ಬೇಜವಾಬ್ದಾರಿಯಿಂದ ವರ್ತಿಸುತ್ತಿದ್ದ ಕಾರಣ ತನ್ನ ಮಕ್ಕಳಿಗೆ ಎರಡು ಹೊತ್ತಿನ ಊಟ ಹಾಕುವುದೂ ಕಷ್ಟವಾಗಿತ್ತು. ಧರಣಮ್ಮನಿಗೆ ವಿದ್ಯಾರ್ಹತೆಯೂ ಇಲ್ಲದೆ ಜೀವನದ ಬಗ್ಗೆ ಸಂಪೂರ್ಣ ವಿಶ್ವಾಸವನ್ನೇ ಕಳಕೊಂಡಿದ್ದಳು. ಧೈರ್ಯವೂ ಇಲ್ಲದೆ ತನ್ನ ಗುಡಿಸಲಿನಲ್ಲಿ ಇದ್ದದ್ದನ್ನು ಬೇಯಿಸಿ ದಿನ ಕಳೆಯುತ್ತಿದ್ದಳು.

ಚನ್ನನು ಪ್ರತಿನಿತ್ಯ ತಡವಾಗಿ ಮನೆಗೆ ಬಂದು ಪತ್ನಿಯನ್ನು ಬಾಯಿಗೆ ಬಂದಂತೆ ಬಯ್ಯುತ್ತಿದ್ದ. ಆದರೂ ಯಾರಿಗೂ ದೂರನ್ನು ನೀಡುವ ಧೈರ್ಯವಿರಲಿಲ್ಲ ಅವಳಿಗೆ. ಮೊದಲ ಮಗಳ ಮದುವೆಯ ಸಂದರ್ಭದಲ್ಲಿಯೂ ತಂದೆ ಚನ್ನನ ಏನೂ ಮಾಡದೆ ಕೈ ಚೆಲ್ಲಿದ. ಅವನು ಪ್ರತಿನಿತ್ಯ ೫ ಲೀಟರಿನಷ್ಟು ಮದ್ಯ ಅವರಿವರಿಂದ ಕಾಡಿ, ಬೇಡಿ, ಸಾಲಮಾಡಿ ಕುಡಿಯುತ್ತಿದ್ದ, ಬೇರೆ ದಾರಿಕಾಣದೆ ಧರಣಮ್ಮ ಅಲ್ಲಿ ಇಲ್ಲಿ ಸಹಾಯಪಡೆದು, ಸಾಲಮಾಡಿ ಮಕ್ಕಳನ್ನು ಸಾಕುತ್ತಿದ್ದಳು. ಹಾಗಾಗಿ ದಿನದಿಂದ ದಿನಕ್ಕೆ ಸಾಲದಹೊರೆ ಹೆಚ್ಚಾಗುತ್ತಾ ಹೋಯಿತು.

೨೦೦೧ ನೇ ಇಸವಿಯಲ್ಲಿ ಶ್ರೀಕ್ಷೇತ್ರ ಧರ್ಮಸ್ಥಳದ ಗ್ರಾಮಾಭಿವೃದ್ಧಿಯೋಜನೆಯ ಓರ್ವ ಸೇವಾನಿರತರು ಧರಣಮ್ಮನ ಪರಿಸ್ಥಿತಿಯ ಬಗ್ಗೆ ಕೇಳಿ, ಭೇಟಿಮಾಡಿದರು ಆಕೆಯ ಅಸಾಯಕ ಪರಿಸ್ಥಿತಿಯನ್ನು ಮನಗಂಡ ಗ್ರಾಮದ ಜ್ಞನವಿಕಾಸ ಕೇಂದ್ರದ ಮಹಿಳಾ ವೃಂದವನ್ನು ಸೇರುವಂತೆ ಪ್ರೋತ್ಸಾಹಿಸಿದರು ಪ್ರಾರಂಭದಲ್ಲಿ ಆಕೆ ನಿರಾಕರಿಸಿದರೂ ಒತ್ತಾಯಮಾಡಿದಾಗ ಕೇಂದ್ರಕ್ಕೆ ಸೇರಿದಳು ಪ್ರಾರಂಭದಲ್ಲಿ ಆಕೆಯ ಪಾಲ್ಗೊಳ್ಳುವಿಕೆ

ಕೇವಲ ಕೇಂದ್ರ ವಿಧಿಸಿದ ನಿಯಮಗಳನ್ನು ಪಾಲಿಸುವುದು ಹಾಗೂ ತನ್ನಿಂದ ಎಷ್ಟಾಗುತ್ತದೋ ಅಷ್ಟು ಉಳಿತಾಯ ಮಾಡಿಕೊಳ್ಳುವುದಕಷ್ಟೇ ಸೀಮಿತವಾಗಿತ್ತು ದಿನಕಳೆದಂತೆ ಆಕೆ ತನ್ನ ಸಮಸ್ಯೆಗಳನ್ನು ಕೇಂದ್ರದ ಇತರ ಸದಸ್ಯೆಯರೊಂದಿಗೆ ಹಂಚಿಕೊಳ್ಳ ತೊಡಗಿದಳು. ಕಾಲಕ್ರಮೇಣ ಅವಳು ತನ್ನ ಕಣ್ಣೀರ ಕಥೆಯನ್ನು ಕೇಂದ್ರದ ತನ್ನ ಗುಂಪಿನ ಮುಂದೆತೋಡಿಕೊಂಡಳು ಇತರ ಸದಸ್ಯೆಯರು ಆಕೆಯಿರುವ ಗಂಭೀರ ಪರಿಸ್ಥಿತಿಯನ್ನು ಅರ್ಥೈಸಿಕೊಂಡು, ಗ್ರಾಮಪಂಚಾಯತಿಗೆ ವರದಿಯೊಪ್ಪಿಸಿದರು. ಅವಳ ಕರುಣ ಕಥೆಯನ್ನು ಕೇಳಿ ಓರ್ವ ಹಿರಿಯ ಸದಸ್ಯರ ಮನಕರಗಿತು. ಅವರು ಧರಣಮ್ಮನ ಮನೆಗೆ ಭೇಟಿಯಿತ್ತು ಆಕೆಯ ಪತಿ ಚನ್ನನನ್ನು ಎಸ್.ಕೆ.ಡಿ.ಆರ್.ಪಿ.ಯ ಮದ್ಯವರ್ಜನ ಶಿಬಿರದಲ್ಲಿ ಪಾಲ್ಗೊಳ್ಳುವಂತೆ ಒತ್ತಾಯಿಸಿದರು. ಶಿಬಿರದಲ್ಲಿ ಭಾಗವಹಿಸಲು ಸದಸ್ಯ ಶುಲ್ಕ ರೂ.೨೦೦ನ್ನು ಕೊಡಲು ಕುಟುಂಬಕ್ಕೆ ಸಾಮರ್ಥ್ಯವಿಲ್ಲದಿದ್ದ ಕಾರಣ, ಧರಣಮ್ಮನ ಸ್ವಸಹಾಯ ಗುಂಪಿನ ಸದಸ್ಯೆಯರು ರೂ.೫೦ರಂತೆ ಸಂಗ್ರಹಿಸಿ ಸದಸ್ಯ ಶುಲ್ಕವನ್ನು ತೆತ್ತರು. ಚನ್ನನ ಶಿಬಿರದಲ್ಲಿ ಸಂಪೂರ್ಣವಾಗಿ ಪರಿವರ್ತನೆ ಹೊಂದಿದ. ತನ್ನ ಕುಟುಂಬದ ಪೋಷಣೆ ಜವಾಬ್ದಾರಿ ವಹಿಸಿಕೊಳ್ಳಲು ಆರಂಭಿಸಿದ, ಜೊತೆಗೆ ಸ್ಥಳೀಯ ಪ್ರಗತಿ ಬಂಧು ಸಮೂಹದ ಸದಸ್ಯನೂ ಆದ. ಕುಟುಂಬಕ್ಕೆ ಸೇರಿದ ಸಣ್ಣ ಭೂಮಿಯಲ್ಲಿ ಕೃಷಿ ವ್ಯವಸಾಯವನ್ನು ಆರಂಭಿಸಿದ ಆರಂಭದ ಬಂಡವಾಳಕ್ಕೆ, ಹಾಗೂ ಹಿಂದೆ ಮಾಡಿದ ಸಾಲವನ್ನು ಹಿಂದಿರುಗಿಸಲು ಒಂದಿಷ್ಟು ಸಾಲ ಪಡೆದ. ಜೊತೆಗೆ ಸಾಮಾನ್ಯ ಆಳುವಾಗಿಯೂ ದುಡಿಯಲಾರಂಭಿಸಿದ.

ಧರಣಮ್ಮ ಕೂಡ ಸಂಪೂರ್ಣವಾಗಿ ಪರಿವರ್ತನೆ ಹೊಂದಿದಳು. ಆಕೆ ಸಮಾಜದಲ್ಲಿ ಇತರರೊಂದಿಗೆ ಗೆಳೆತನವನ್ನು ಸಾಧಿಸಿ, ತನ್ನ ಮಗಳಿಗೆ ಯೋಗ್ಯ ವರನನ್ನು ಗೊತ್ತು ಮಾಡಿದಳು. ಧರಣಮ್ಮ ತನ್ನ ಸ್ವಹಾಯ ಗುಂಪಿನಿಂದ ಮಗಳ ಮದುವೆಗೆಂದು ರೂ.೪೫,೦೦೦ ಸಾಲವನ್ನು ಪಡೆದಳು, ಮತ್ತು ಚನ್ನನು ಈಗ ಗ್ರಾಮ ಪಂಚಾಯತ್ತಿನ ಉಪಾಧ್ಯಕ್ಷನೂ ಆದ.[೬]

**ಟಿಪ್ಪಣಿಗಳು**

1. ಅನ್ನಪೂರ್ಣ ಧರ್ಮಸ್ಥಳ. 'ಸಪ್ತರಂಗ' ರಜತೋತ್ಸವ ಸಂಪುಟದಲ್ಲಿ ಪ್ರಕಟವಾದ ಪ್ರೊ.ರಾಮಚಂದ್ರ ಎಂ. ಅವರ ಲೇಖನ ಪ್ರ : ಡಾ. ವೀರೇಂದ್ರ ಹೆಗ್ಗಡೆ ಪಟ್ಟಾಭಿಷೇಕ ರಜತೋತ್ಸವ ಸಮಿತಿ. ಧರ್ಮಸ್ಥಳ.
2. ಮಹಾನಡಾವಳಿ ಧರ್ಮಸ್ಥಳ. 2005, ಸಂ : ಪ್ರೊ.ಎಸ್. ಪ್ರಭಾಕರ್, ಪ್ರ : ಶ್ರೀ. ಧ. ಮಂ. ಪುಸ್ತಕ ಪ್ರಕಾಶನ ಮಾಲೆ, ಧರ್ಮಸ್ಥಳ. ಪುಟ 99.
3. ಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲಾ ಮಾಹಿತಯನ್ನು 'ಶ್ರೀ ಕ್ಷೇತ್ರ ಧರ್ಮಸ್ಥಳ ಬಹುಮುಖ ಅಧ್ಯಯನ' – ಡಾ.ಪ್ರಜ್ಞಾ ಅಮ್ಮೆಂಬಳ. ಶ್ರೀ ನರಹರಿ ತೀರ್ಥ ದಾಸಸಾಹಿತ್ಯ ಅಧ್ಯಯನ ಕೇಂದ್ರ, ರಾಯಚೂರು, 2009,' ಈ ಗ್ರಂಥದಿಂದ ಆಯ್ದುಕೊಳ್ಳಲಾಗಿದೆ (ಪುಟ 104).
4. ಈ ಮಾಹಿತಿಯನ್ನು ಎಸ್.ಕೆ.ಡಿ.ಆರ್.ಪಿ. ಇದರ ಗ್ರಾಮೀಣ ಶ್ರೇಷ್ಠತಾ ಕೇಂದ್ರ ಇದರ ನಿರ್ದೇಶಕಿಯಾಗಿರುವ ಶ್ರೀಮತಿ ಮನೋರಮಾ ಭಟ್, ಜಿ.ವಿ. ಇವರು ಒದಗಿಸಿದ ಮಾಹಿತಿ ಕೈಪಿಡಿಯಿಂದ ಆಯ್ದುಕೊಳ್ಳಲಾಗಿದೆ

5. ಅವಲೋಕನ ಈ ಗ್ರಂಥದ ಮುನ್ನುಡಿ "ಖಾವಂದರ ಮನದಾಳದಿಂದ" ಪ್ರ: ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿಯೋಜನೆ(ರಿ),ಧರ್ಮಸ್ಥಳ-574216
6. ಅವಲೋಕನ- ಡಾ।ಎಲ್.ಮಂಜುನಾಥ್, ಮದ್ಯವರ್ಜನ ಮತ್ತು ಭಗವದ್ಭಕ್ತಿ, ಪುಟ.15)
7. ಆಧಾರ: Development, Divinity and Dharma - The role of religion in development and microfinance institutions by Malcom Harper, D.S.K Rao and Ashis Kumar Sahu, Practical Action Publishing, 2008 Chapter 4, Page no.53)

# ರಮಾಶಕ್ತಿ ಮಿಷನ್

ಮಂಗಳೂರಿನ ರಮಾಶಕ್ತಿ ಮಿಷನ್ ದಿವ್ಯಮಾತೆ ಶ್ರೀ ರಮಾದೇವಿಯವರು ಸ್ಥಾಪಿಸಿದ ಆಧ್ಯಾತ್ಮಿಕ ಸಂಸ್ಥೆ. ಮಂಗಳೂರಿನಲ್ಲಿ 1944ನೆಯ ಮಾರ್ಚ್ 4ರಂದು ಶ್ರೀ ಗೋಪಾಲಕೃಷ್ಣ ಶೆಣ್ಯೆ ದಂಪತಿಗಳಲ್ಲಿ ಮಾತೆಯವರು ಜನ್ಮ ತಳೆದರು. ಕನ್ನಡ ನಾಲ್ಕನೆಯ ಕ್ಲಾಸ್‌ನವರೆಗೆ ಓದು. ಹದಿನಾಲ್ಕನೆಯ ವಯಸ್ಸಿಗೆ ಮದುವೆ. ಇಳಿವಯಸ್ಸಿನ ವರ; ತಮಗೆ ಅವರೇ ಯೋಗ್ಯ ನಿಶ್ಚಿತ ವರ ಎಂದು ಬಾಲಿಕೆಯ ಆಗ್ರಹ. ಈ ಮದುವೆ ಆತ್ಮ-ಪರಮಾತ್ಮಗಳ ಐಕ್ಯತೆಯ ಅರ್ಥ ಸಾರಿತು. ಆ ಆದರ್ಶ ನೆಲೆಯ ದೃಷ್ಟಿಯಲ್ಲಿ ಪತಿ ದೇಹ ತಳೆದ ದೇವರೇ ಸರಿ. ಆಕೆಯ ಅನುಪಮ ವಿಧೇಯತೆ, ನಿಸ್ಸೀಮ ತಾಳ್ಮೆ, ನಿಸ್ವಾರ್ಥ ಸೇವೆಗಳ ಫಲವಾಗಿ, ಪತಿಯ ಸ್ವಭಾವದಲ್ಲಿ ಅದ್ಭುತ ಪರಿವರ್ತನೆಯಾಗಿ, ಆತ ಮಾತೆಯವರ ಮಗುವೇ ಆದರು. ಮನೆ ದೇಗುಲವೇ ಆಯಿತು. ಸಂಸಾರದ ಸಕಲ ಹೊಣೆಗಳನ್ನು ನಿರ್ವಹಿಸುತ್ತಾ ರಮಾದೇವಿಯವರು ಪ್ರಖರವಾದ ಸಾಧನೆಯಲ್ಲಿ ತೊಡಗಿದರು. ಹಗಲು ಮನೆಗೆಲಸ, ಪತಿಸೇವೆ, ಅತಿಥಿ ಸೇವೆ, ರಾತ್ರಿ ಅಖಂಡ ರಾಮ ನಾಮ ಜಪ-ಧ್ಯಾನ; ಕಡು ತರ ವೈರಾಗ್ಯ, ಪ್ರಾಪಂಚಿಕ ವಿಷಯಗಳಲ್ಲಿ ಅಭೇದ್ಯವಾದ ನಿಸ್ಪೃಹತೆ, ಹೀಗೆ ಹನ್ನೆರಡು ವರ್ಷಗಳ ಕಾಲ ಅವ್ಯಾಹತವಾಗಿ ತಪಶ್ಚರ್ಯೆ ನಡೆದು, ದಿವ್ಯದರ್ಶನ, ದಿವ್ಯಾನುಭವಗಳಾಗಿ, ಇಪ್ಪತ್ತೆಂಟನೆಯ ವಯಸ್ಸಿನಲ್ಲಿ ಬ್ರಹ್ಮಸಾಕ್ಷಾತ್ಕಾರವಾಯಿತು. ಸಾಧನೆಯ ಕೊನೆಗೊಂದು ದಿವ್ಯಾನುಭವ. ಅಂದು, ದೇವಿಯವರ ಧ್ಯಾನವು ನಿರ್ವಿಕಲ್ಪ ಸಮಾಧಿಯಾಗಿ ಫಲಿಸಿತು. ಆಧ್ಯಾತ್ಮಿಕ ಸಾಧನೆಯ ಅತ್ಯುಚ್ಚ ಶಿಖರವದು, ಜ್ಞಾತೃ, ಜ್ಞಾನ, ಜ್ಞೇಯ ಎಂಬ ತ್ರಿಪುಟಿವಾಯುವಾಗಿ, 'ಏಕಮೇವಾದ್ವತೀಯಂ ಬ್ರಹ್ಮ'ವೆನಿಸಿದ ಆ ಅದ್ವೈತಾನುಭೂತಿಯ ಉತ್ತುಂಗ ಶಿಖರದಲ್ಲಿ ರಮಾದೇವಿಯವರು ಅರವತ್ತು ಗಂಟೆಗಳ ಕಾಲ ಇದ್ದರು. ಆ ಬಳಿಕ ಮಾತೆಯವರ ಜಗದುದ್ಧಾರದ ಕಾರ್ಯ ಪ್ರಾರಂಭವಾದುದು. ಅತಿಥಿ ಸೇವೆ, ಭಜನೆ, ಬೋಧನೆ, ಅನುದಿನದ ಕಾಯಕವಾಯಿತು. ಕೊಡುಗೈ ತಾಯಿಯಾಗಿ ಬಂದ ಸದ್ಗುರುವಿನ ಬಳಿಸಾರಲು ಹತ್ತು ದಿಕ್ಕುಗಳಿಂದ ಮುಮುಕ್ಷುಗಳು ಸಾಲುಗಟ್ಟಿ ಬಂದರು. ಇದರ ಫಲಶ್ರುತಿ 'ರಮಾಶಕ್ತಿ ಮಿಷನ್ನಿನ ಸ್ಥಾಪನೆ,' ಇದರ

ಕಾರ್ಯದರ್ಶಿಗಳಾದ ಶ್ರೀ.ಎ.ಎಂ.ದೇವಯ್ಯನವರು ದಿವ್ಯಮಾತೆ ಶ್ರೀ ರಮಾದೇವಿಯವರ ಮಿಷನ್ನಿನ ಧ್ಯೇಯ, ಸಾಧನೆಗಳ ಕುರಿತು,

ಭಕ್ತಿಸಿದ್ಧಾಂತ ಪ್ರಚಾರದ ಮೂಲಕ ಸಮಾಜದಲ್ಲಿ ಪರಿವರ್ತನೆ ಸಾಧ್ಯವೇ ಎಂಬ ಬಗ್ಗೆ ಹೀಗೆ ಹೇಳುತ್ತಾರೆ:

ಭಕ್ತಿಯಿಂದ ಸಮಾಜದ ಪರಿವರ್ತನೆ ಸಾಧ್ಯವೇ?

ಸಾಧ್ಯವಿದೆ. ಇದಕ್ಕೆ ಋಷಿಮುನಿಗಳ, ಸಂತರ ಮತ್ತು ಅವತಾರಗಳ ಜೀವನವೇ ಆದರ್ಶ. ಭಕ್ತಿ ಮಾರ್ಗವು ಬಹಳ ಪುರಾತನವಾದುದು. ಅದಕ್ಕೆ ಹಲವು ಮುಖಗಳಿವೆ– ಗುರುಭಕ್ತಿ, ಮಾತೃಭಕ್ತಿ, ಪಿತೃಭಕ್ತಿ, ಭ್ರಾತೃ ಭಕ್ತಿ, ದೇಶಭಕ್ತಿ ಇತ್ಯಾದಿ. ಗೌಣಭಾವದಲ್ಲಿ ಒಬ್ಬರೊಬ್ಬರಿಗೆ ಗೌರವಿಸುವುದು, ಪ್ರೀತಿ ಮಾಡುವುದು, ಸ್ನೇಹ ಮಾಡುವುದು, ಯಾವ ಒಂದು ಫಲಾಪೇಕ್ಷೆ ಇಲ್ಲದಿದ್ದಾಗ, ಧರ್ಮದ ಪರಿಧಿಯೊಳಗೆ ಇದ್ದಾಗ ಭಕ್ತಿ ಎನಿಸಿಕೊಳ್ಳುತ್ತದೆ.

ಒಂದು ಗ್ರಹಸ್ಥ ಜೀವನವನ್ನು ವೀಕ್ಷಿಸಿದಾಗ, ಕುಟುಂಬ ವ್ಯವಸ್ಥೆಯಲ್ಲಿ ತಂದೆ, ತಾಯಿ, ಮಕ್ಕಳು, ಮೊಮ್ಮಕ್ಕಳು ಇರುವ ಸಂಸಾರ. ಈ ಸಂಸಾರವು ಅಚ್ಚು ಕಟ್ಟಾಗಿ ಇರಬೇಕಾದರೆ ಸಂಸಾರದಲ್ಲಿ ನೀತಿ, ನಿಯಮಗಳು ಇರಬೇಕು. ಈ ನೀತಿ ನಿಯಮಗಳು ಯಾವುವು? ಮಕ್ಕಳು ಮಾತಾ–ಪಿತೃಗಳನ್ನು ಗೌರವಿಸಬೇಕು. ಹೆಂಡತಿ ಗಂಡನನ್ನು ಗೌರವಿಸಬೇಕು. ಎಲ್ಲರೂ ಒಬ್ಬರನ್ನು ಒಬ್ಬರು ಪ್ರೀತಿಯಿಂದ ನೋಡಬೇಕು. ಗೃಹದಲ್ಲಿ ಶಾಂತಿ ಇರಬೇಕಾದರೆ ಸಾಮರಸ್ಯ ಇರಬೇಕು. ಹೃದಯ ವಿಶಾಲ, ಭಾವನೆ ವಿಶಾಲವಾಗಿರಬೇಕು. ಹೀಗೆ ಇದ್ದರೆ ಗೃಹದಲ್ಲಿ ಶಾಂತಿ ಇರುತ್ತದೆ. ಈ ಶಾಂತಿ ನೆಲೆಸಬೇಕಾದರೆ ಭಕ್ತಿಯೇ ಕಾರಣ. ಮೊದಲು ಗೃಹದಲ್ಲಿ ಶಾಂತಿ ಇರಬೇಕು. ಗೃಹವು ಪರಿವರ್ತನೆಯಾದರೆ ಇಡೀ ಸಮಾಜವೇ ಪರಿವರ್ತನೆಯಾಗುತ್ತದೆ. ಸಮಾಜದಿಂದ ರಾಜ್ಯ, ರಾಜ್ಯದಿಂದ ಇಡೀ ರಾಷ್ಟ್ರದ ಪರಿವರ್ತನೆ ಸಾಧ್ಯ. ಭಕ್ತಿಯು ಸಾಮಾಜಿಕ ಶಕ್ತಿಯಾಗಿ ರಾಷ್ಟ್ರವನ್ನು ನಿರ್ಮಾಣಮಾಡುವ ಶಕ್ತಿಯಾಗಿ ಪರಿಣಮಿಸುತ್ತದೆ.

ದಿವ್ಯಮಾತೆ ಶ್ರೀ ರಮಾದೇವಿಯವರ ಆದರ್ಶ ಜೀವನವೇ ಒಂದು ಮಹಾನ್ ನಿದರ್ಶನ. ಸಣ್ಣ ಮಗುವಾಗಿರುವಾಗಲೇ ದಯಾಹೃದಯ, ಎಲ್ಲರಲ್ಲೂ ಅನುಕಂಪ, ಪ್ರೇಮ, ಪವಿತ್ರ ಭಾವನೆ, ನಡೆ, ನುಡಿ.

ಅಣ್ಣ ತಮ್ಮಂದಿರಲ್ಲಿ, ಅಕ್ಕ ತಂಗಿಯರಲ್ಲಿ ಸಾಮರಸ್ಯವನ್ನುಂಟು ಮಾಡಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಸಮಸ್ಯೆ ಬಂದಾಗ ಎಲ್ಲರಿಗೂ ದೇವರ ನಾಮ ಹೇಳಿ ಎಂದು ಪ್ರಚೋದಿಸುತ್ತಿದ್ದರು.

ಮದುವೆಯಾಗಿ ಗ್ರಹಸ್ಥ ಜೀವನದಲ್ಲೂ ಕೂಡ ಅಸದೃಶ ಪತಿಭಕ್ತಿಯಿಂದ ಇತರರಲ್ಲಿ ಅಪಾರಪ್ರೇಮ ಅನುಕಂಪದಿಂದ ಗೃಹದ ದೇವತೆಯಾಗಿದ್ದರು. ಗೃಹ ಜೀವನವನ್ನೇ ತಪೋ ಶಿಕ್ಷಣ ಕೇಂದ್ರವಾಗಿ ಮಾಡಿಕೊಂಡು ಗೃಹವನ್ನೇ ದೇಗುಲವನ್ನಾಗಿ ಮಾಡಿದರು. ಇದರಿಂದ ಬಂದವರಿಗೆ ಶಾಂತಿ, ಸಮಾಧಾನ ಸಿಗುತ್ತಿತ್ತು.

ತಾನು ಗೃಹದಲ್ಲೇ ಇದ್ದು 12 ವರ್ಷ ಕಠಿಣ ತಪಸ್ಸು ಮಾಡಿ ದೇವರ ಪರಿಪೂರ್ಣ ಸಾಕ್ಷಾತ್ಕಾರವನ್ನು ಪಡೆದರು.

ಭಜನೆ, ಪೂಜೆ, ನಾಮಸ್ಮರಣೆಯಿಂದ, ಗೃಹದಲ್ಲಿ, ಸಮಾಜದಲ್ಲಿ ಶಾಂತಿಯನ್ನು ಸೃಷ್ಟಿಸಿ ಸಾವಿರಾರು ಭಕ್ತಾದಿಗಳಲ್ಲಿ ಸಾಮರಸ್ಯವನ್ನು ಉಂಟು ಮಾಡಿ ಅವರ ಪರಿವರ್ತನೆಯಾಗಿದೆ. ಆದುದರಿಂದ ಭಕ್ತಿಯಿಂದ ಸಮಾಜದ ಪರಿವರ್ತನೆ ಸಾಧ್ಯವಿದೆ ಎಂದು ದಿವ್ಯಮಾತೆಯವರು ಪ್ರಾಯೋಗಿಕವಾಗಿ ತೋರಿಸಿದ್ದಾರೆ.

ಹಾಗೆಯೇ ಕಳೆದ 38 ವರ್ಷಗಳಿಂದ ಮಿಷನ್ನಿನ ಅಧಿದೇವತೆಯಾದ ಶ್ರೀ ರಮಾಂಬಿಕೆಯ ಪೂಜಾ ಕೈಂಕರ್ಯವನ್ನು ಗೈಯುತ್ತಿರುವ ಕೀರ್ತನಕಾರರೂ ಆಗಿರುವ ಪ್ರಸ್ತುತ ಮಿಷನ್ನಿನ ಜತೆ ಕಾರ್ಯದರ್ಶಿಯವರಾದ ಶ್ರೀ.ಜಿ.ಆನಂದರಾಯ ಕಾಮತ್‌ರವರು ಹೀಗೆ ಹೇಳುತ್ತಾರೆ:

ಮನೆಯು ಮಂದಿರವಾಗಬೇಕು ಎಂಬುದೇ ದಿವ್ಯ ಮಾತಾ ಶ್ರೀ ರಮಾದೇವಿಯವರ ಅಮರ ಸಂದೇಶದ ಸಾರ. ಪ್ರತಿಯೊಬ್ಬನೂ ಮನಃಶಾಂತಿಯನ್ನು ಸಂಪಾದಿಸಲಿಕ್ಕಾಗಿ ತನ್ನ ಜೀವನವನ್ನೇ ಮುಡಿಪಾಗಿಡುತ್ತಾನೆ. ಸಕಲರೂ ಬಯಸಿ ಬೇಡುವ ಈ ಶಾಂತಿಯನ್ನು ಮನೆಯಲ್ಲಿದ್ದುಕೊಂಡೇ ಸಾಧಿಸಬಹುದು ಮತ್ತು ಸಂಪಾದಿಸಬಹುದು ಎಂದು ದಿವ್ಯಮಾತೆಯವರು ಸಿದ್ಧಮಾಡಿ ತೋರಿಸಿರುತ್ತಾರೆ.

ಈ ಸುಲಭ ಸಾಧನೆಯ ಹಾದಿಯಲ್ಲಿ ಸುಗಮವಾಗಿ ಸಾಗುವ ವಿಧಿವಿಧಾನಗಳನ್ನೂ ಅನುಸರಿಸಬೇಕಾದ ನೀತಿ ನಿಯಮಗಳನ್ನೂ ಮಾತೆಯವರು ಎಲ್ಲರಿಗೂ ಯಾವ ಜಾತಿ ಮತ ಭೇದವನ್ನೆಣಿಸದೆ, ಮೇಲು ಕೀಳೆಂಬ ಭಾವನೆಯಿಲ್ಲದೆ ಸರಳ ರೀತಿಯಿಂದ ತಿಳಿಯಪಡಿಸಿದ್ದಾರೆ.

ಮನೆಮಂದಿಯೆಲ್ಲ ಒಮ್ಮತದಿಂದ, ಭಯ ಭಕ್ತಿಯಿಂದ ಪ್ರಾರ್ಥಿಸಿದರೆ
ಬಯಸಿದ ಬೇಡಿಕೆಗಳನ್ನೆಲ್ಲಾ ಭಗವಂತನು ಬೇಗನೆ ಬಗೆಹರಿಸುತ್ತಾನೆ ಎಂಬ ವಿಶ್ವಾಸವೇ ಭಕ್ತಿ ಬೆಳೆಯುವ ತಾಯಿಬೇರು.

ಭಕ್ತಿಯ ಬಂಧವೇ ಮನೆಮಂದಿಯ ಅನ್ಯೋನ್ಯ ಸ್ನೇಹ ಸೌಹಾರ್ದತೆಯ ಬಾಂಧವ್ಯಕ್ಕೆ ಮೂಲ, ಭಕ್ತಿಯ ಭಾವನಾತ್ಮಕ ಬಂಧನದಿಂದ ಮಾತ್ರವೇ ಮನೆಯ ಸದಸ್ಯರೆಲ್ಲರೂ ತಮ್ಮ ತಮ್ಮ ಕರ್ತವ್ಯ ಭಾರವಾಹಿತ್ವಗಳನ್ನು ಸುಸೂತ್ರವಾಗಿ ನಿಭಾಯಿಸಲು ಸಮರ್ಥರಾಗುತ್ತಾರೆ.

ಮನೆಯೊಂದು ಸಮಾಜದ ಘಟಕ. ಒಂದು ಮನೆಯಲ್ಲಿ ಶಾಂತಿ ಸಮಾಧಾನ ನೆಲೆನಿಂತಾಗ ಈ ಅನುಕರಣೀಯ ಆದರ್ಶವನ್ನು ತಮ್ಮದಾಗಿಸಿಕೊಳ್ಳಲು ಸಮಾಜದ ಇತರ ಮನೆಯವರೂ ಅಪೇಕ್ಷಿಸುವುದು ಸಹಜ.

ಒಂದು ದೀಪದಿಂದ ಹಲವು ದೀಪಗಳನ್ನು ಬೆಳಗಿಸುವಂತೆ ಒಂದು ಮನೆಯಿಂದ ಸಮಾಜವೇ ಸುಖಶಾಂತಿಯನ್ನು ಪಡೆಯಲು ಸಾಧ್ಯವಾಗುತ್ತದೆ.

ಈ ಉದಾತ್ತ ಸಂದೇಶವನ್ನು ಸಮಾಜದ ಎಲ್ಲಾ ಸ್ತರಗಳಿಗೂ ನಿರಂತರ ಬಿತ್ತರಿಸಲ್ಪಡಬೇಕೆಂಬ ಮಹದಾಕಾಂಕ್ಷೆಯಿಂದ ರಮಾ ಶಕ್ತಿ ಮಿಷನ್ ಎಂಬ ಸಂಸ್ಥೆಯು ಹುಟ್ಟಿ ಬೆಳೆದಿದೆ. ಮಾತೆಯವರ ಜೀವನ ಸಂದೇಶವನ್ನು ಮುಂದಿನ ಜನಾಂಗಗಳಿಗೆ ತಲಪಿಸಲು ಈ ಸಂಸ್ಥೆಯು ಕಟಿಬದ್ಧವಾಗಿದೆ.

ದೇಶ ವಿದೇಶಗಳಲ್ಲಿ ಪಸರಿಸಿರುವ ಮಾತೆಯವರ ಭಕ್ತರು ಸಂಸ್ಥೆಯ ಕೇಂದ್ರವಾದ ಶಕ್ತಿನಗರಕ್ಕೆ ಅವಕಾಶವಿದ್ದಾಗಲೆಲ್ಲಾ ಬಂದು ತಮ್ಮ ಭಕ್ತಿಯ ಬೆಳವಣಿಗೆಗೆ ಸಹಾಯಕವಾಗುವಂಥಾ ಕಾರ್ಯಕ್ರಮಗಳಲ್ಲಿ ಉದ್ಯುಕ್ತರಾಗುತ್ತಾರೆ.

ರಮಾ ಶಕ್ತಿ ಮಿಷನ್ನಿನ ಸಂಪರ್ಕವನ್ನು ಸಾಧಿಸಿ ಜೀವನವನ್ನು ಉಜ್ಜೀವನಗೊಳಿಸಿಕೊಂಡಿರುವ ಉದಾಹರಣೆಗಳೆಷ್ಟೊ ಲೆಕ್ಕವಿಲ್ಲದಷ್ಟು.

ಜನಸಾಮಾನ್ಯರೂ ಪ್ರಪಂಚ ಮತ್ತು ಪರಮಾರ್ಥಗಳೆರಡರ ಸಮನ್ವಯತೆಯನ್ನು ಸಾಧಿಸಿ ತಾನಿರುವ ಆಶ್ರಮ ಧರ್ಮವನ್ನು ಚಾಚೂ ತಪ್ಪದೆ ಪಾಲಿಸುತ್ತಾ ಮಾನವ ಜನ್ಮದ ಪರಮೋದ್ದೇಶವಾದ ಆತ್ಮಸಾಕ್ಷಾತ್ಕಾರವನ್ನು ಸಾಧಿಸಬೇಕೆಂಬುದೇ ಮಾತೆಯವರ ಆಶಯ ಮತ್ತು ಆಗ್ರಹ.

**ಮಿಷನ್ನಿನ ವೈಶಿಷ್ಟ್ಯಗಳು:**

ಅ. ಜಾತಿ ಮತ ಭೇದವಿಲ್ಲದೆ ಎಲ್ಲರಿಗೂ ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ಪೂಜಾ ಕೈಂಕರ್ಯಗಳಲ್ಲಿ ಸಮಾನವಾಗಿ ಭಾಗವಹಿಸುವ ಅವಕಾಶ

ಆ. ಮಾತೆಯರ ಆದರ್ಶದಂತೆ ಮನೆಯಲ್ಲಿ ಕೌಟುಂಬಿಕ ಜೀವನವನ್ನೇ ಉದಾತ್ತೀಕರಿಸಿ ಪರಸ್ಪರ ಪ್ರೇಮದಿಂದ ಬಾಳುವಂತೆ, ಗೃಹವನ್ನೇ ಸ್ವರ್ಗವಾಗಿಸುವ ಶಿಕ್ಷಣ.

ಇ. ಯಾವುದೇ ಪ್ರಚಾರ, ರಾಜಕೀಯ ಅಪೇಕ್ಷೆ ರಹಿತವಾಗಿ ಎಲೆಮರೆಯ ಕಾಯಿಯಂತೆ ಸರಳತೆ ಹಾಗೂ ಋಜುತ್ವವನ್ನು ರೂಢಿಸಿಕೊಂಡ ಆಡಳಿತ.

ಈ. ಸೀಮಿತವಾದ ಪರಿಧಿಯಲ್ಲಿ ಆಸುಪಾಸಿನ ಬಡಜನತೆಗೆ ಸಹಾಯ ಸೌಲಭ್ಯ ನೀಡುತ್ತಿರುವುದು

ಉದಾಹರಣೆಗೆ:

1. ಸಮೀಪದ ಸರ್ಕಾರಿ ಶಾಲೆಗೆ ಕಟ್ಟಡ ನಿರ್ಮಾಣ.
2. ಧರ್ಮಾರ್ಥ ಆಸ್ಪತ್ರೆಯ ಮೂಲಕ ನಿರಂತರ ಸೇವೆ.
3. ಬಡಕುಟುಂಬಗಳಿಗೆ ವಿಶೇಷ ದಿನಗಳಲ್ಲಿ ಅಕ್ಕಿ ವಿತರಣೆ.
4. ಎಳೆ ಮಕ್ಕಳ ಪ್ರತಿಭೆಯನ್ನು ಗುರುತಿಸಿ, ಅವರಿಗೆ ಸಂಸ್ಕಾರ ನೀಡಿ ಅವರ ಪ್ರತಿಭಾ ವಿಕಾಸಕ್ಕೆ ಸೂಕ್ತ ವೇದಿಕೆ ಕಲ್ಪಿಸಿಕೊಡುವುದು



ದಿವ್ಯಮಾತೆ ಶ್ರೀ ರಮಾದೇವಿ



ದಿವ್ಯಮಾತೆ ಶ್ರೀ ತಾರಾದೇವಿ

( ಶ್ರೀ ರಮಾದೇವಿಯವರ ಪರಮ ಶಿಷ್ಯರು)



ಕ್ಷೇತ್ರದ ಅಧಿದೇವತೆ ದೇವಿ

ಶ್ರೀ ರಮಾಂಬಿಕೆ




ಧರ್ಮಾರ್ಥ ಆಸ್ಪತ್ರೆ

## ಶ್ರೀ ರಾಮಕೃಷ್ಣ ತಪೋವನ

ಸುಪ್ರಸಿದ್ಧ ಕ್ಷೇತ್ರ ಪೊಳಲಿ ಶ್ರೀ ರಾಜರಾಜೇಶ್ವರಿ ದೇವಸ್ಥಾನದ ಬಳಿಯಲ್ಲಿ ಶ್ರೀ ರಾಮಕೃಷ್ಣ ಪರಮಹಂಸರ ತತ್ವ ಆದರ್ಶಗಳ ಅನುಷ್ಠಾನದ ಮೂಲಕ ಗ್ರಾಮೀಣ ಜನತೆಯ ಸೇವೆ, ಧರ್ಮಸಮನ್ವಯತೆಯನ್ನು ಸಾಧಿಸಲು ಸ್ಥಾಪಿತಗೊಂಡ ಆಧ್ಯಾತ್ಮಿಕ ಸಂಸ್ಥೆ ಶ್ರೀ ರಾಮಕೃಷ್ಣ ತಪೋವನ. ಇದರ ರುವಾರಿ ಪೊಳಲಿಯವರೇ ಆಗಿದ್ದು ಬೆಂಗಳೂರಿನಲ್ಲಿ ನೆಲೆಸಿದ್ದ ಶ್ರೀ ಬಾಲಕೃಷ್ಣ ಶೆಟ್ಟಿಯವರು (ಇತ್ತೀಚೆಗೆ ಅವರ ಸಂನ್ಯಾಸವನ್ನು ಸ್ವೀಕಾರ ಮಾಡಿ ಸ್ವಾಮಿ ಶ್ರೀ ವಿವೇಕ ಚೈತನ್ಯಾನಂದ ಎಂದು ಅಭಿದಾನವನ್ನು ಧರಿಸಿದ್ದಾರೆ.) ಪ್ರಶಾಂತವಾದ ಪವಿತ್ರವಾದ ಪ್ರಾರ್ಥನಾಲಯ, ವಿಶಾಲವಾದ ಸಾಧುನಿವಾಸ, ಜೊತೆಗೆ ಸ್ವಾಮಿವಿವೇಕಾನಂದರ ಹೆಸರಿನಲ್ಲಿ ಒಂದು ಸಂಶೋಧನಾ ಕೇಂದ್ರ ಇವನ್ನು ಹೊಂದಿದ್ದು ಒಂದೂವರೆ ವರ್ಷಗಳಿಂದ ಆಧ್ಯಾತ್ಮಿಕ ಚಟುವಟಿಕೆಗಳನ್ನು, ಸೇವಾ ಕೈಂಕರ್ಯಗಳನ್ನು ನಡೆಸುತ್ತದೆ. ಈ ಕೇಂದ್ರದಲ್ಲಿ ಪ್ರಸ್ತುತ ಇಪ್ಪತ್ತು ಮಂದಿ ಬಡ ವಿದ್ಯಾರ್ಥಿಗಳಿಗೆ ಅನ್ನ, ಆಶ್ರಯವನ್ನಿತ್ತು ಅವರಿಗೆ ಸಂಪೂರ್ಣ ವಿದ್ಯಾಭ್ಯಾಸವನ್ನು ನೀಡಲಾಗುತ್ತಿದೆ. ಪ್ರತಿನಿತ್ಯ ಪ್ರಾರ್ಥನೆ, ಭಜನೆಗಳ ಮೂಲಕ ಸತ್ ಸಂಸ್ಕಾರವನ್ನು ನೀಡಲಾಗುತ್ತದೆ. ಅಲ್ಲದೆ ಊರಿನ ಅನೇಕ ಬಡಕುಟುಂಬಗಳಿಗೆ ಕೃಷಿ ವಿದ್ಯಾಭ್ಯಾಸಗಳಿಗೆ ಆರ್ಥಿಕ ಸಹಾಯವನ್ನು, ಆವಶ್ಯಕ ಸಾಮಾಗ್ರಿಗಳನ್ನು ಕೇಂದ್ರದ ಮೂಲಕ ನೀಡಲಾಗುತ್ತಿದೆ.

## ಗೀತಾಜ್ಞಾನ ಪ್ರಚಾರಕ ಸಂಘ

ಇದೇ ರೀತಿಯಲ್ಲಿ ಏಕಾಂಗಿಯಾಗಿ ತಮ್ಮ ಭಕ್ತಿ, ಶ್ರದ್ಧೆಗಳ ಬಲದಿಂದ ಸಂಸ್ಥೆಯನ್ನು ಕಟ್ಟಿ ಪರಿವರ್ತನೆಯ ಬೆಳಕು ಮೂಡಿಸಿದ ಹಲವು ಮಹನೀಯರನ್ನು ನಾವು ಕಾಣಹುದು. ಅಂಥವರಲ್ಲೊಬ್ಬರು ಭಕ್ತಿ ಶಾಸ್ತ್ರಿ ಗೋವಿಂದ ರಾಮದಾಸರವರು. ಅವರ ಕಿರು ಪರಿಚಯ ಇಂತಿದೆ:

ಶ್ರೀ ಗೋವಿಂದರಾಮದಾಸ ಯಾನೆ ಕೆ.ಬಿ. ಗೋವಿಂದ ರಾವ್ **M.Ed, L.L.B.,** ಇವರು ದಿ। ಕೆ.ಬಿ. ದೇವದಾಸ್ ರಾವ್ ಮತ್ತು ದಿ। ಕೃಷ್ಣಾಬಾಯಿಯವರ ಪುತ್ರರು. ಕೇರಳ ರಾಜ್ಯದ ಕಾಸರಗೋಡು ಜಿಲ್ಲೆಯ ಮಂಗಲ್ಪಾಡಿ ಗ್ರಾಮದಲ್ಲಿ 19–6–34 ರಂದು ಜನಿಸಿ, 1960ರಲ್ಲಿ ಕಲ್ಲಿಕೋಟೆಯ ದಿ। ಆರ್.ಎನ್. ಕೂಳೂರು ಮತ್ತು ದಿ। ತಾರಾ ಕೂಳೂರುರವರ ಪುತ್ರಿ ಶ್ರೀಮತಿ ವಿಲಾಸಿನಿ (ಜನನ 10–6–37) ಯವರನ್ನು ವಿವಾಹವಾದರು.

ತನ್ನ ವೃತ್ತಿಪರ ಜೀವನವನ್ನು ಕಾರ್ಕಳದ ಶ್ರೀ ಭುವನೇಂದ್ರ ಹೈಸ್ಕೂಲಿನ ಪ್ರಪ್ರಥಮ ಮುಖ್ಯೋಪಾಧ್ಯಾಯರಾಗಿ 1957 ರಿಂದ 1962ವರೆಗೆ ಕಾರ್ಯನಿರ್ವಹಿಸಿ, ಮುಂದೆ

1962 ರಿಂದ 1995 ವರೆಗೆ ಅವರು ಆದಾಯಕರ ನ್ಯಾಯವಾದಿಯಾಗಿ ಕೇರಳದ ಕಲ್ಲಿಕೋಟೆಯಲ್ಲಿ ಜನಮನ್ನಣೆ ಪಡೆದರು.

ಇಸ್ಕಾನ್ ಸಂಸ್ಥೆಯೊಡನೆ ಇವರ ಸಂಬಂಧವು ಸುಮಾರು 1981ರಿಂದ ಆರಂಭವಾಯಿತು. ಅಂದು ಇಸ್ಕಾನ್ ಸಂಸ್ಥೆಗೆ ಕಲ್ಲಿಕೋಟೆಯಲ್ಲಿ ಶಾಖೆ ಇರಲಿಲ್ಲ. ತಿರುವನಂತಪುರ ಮತ್ತು ಕೊಯಮುತ್ತೂರಿನಿಂದ ಬರುತ್ತಿದ್ದ ಇಸ್ಕಾನಿನ ಧರ್ಮ ಪ್ರಚಾರಕ ಬ್ರಹ್ಮಚಾರಿಗಳೂ, ಸಂನ್ಯಾಸಿಗಳೂ ಇವರಲ್ಲಿಯೇ ಮೊಕ್ಕಾಂ ಮಾಡುತ್ತಿದ್ದು, ಸಹವಾಸದ ಪ್ರಭಾವದಿಂದಾಗಿ ಇವರಿಗೆ ಶ್ರೀ ಶ್ರೀ ಚೈತನ್ಯ ಮಹಾಪ್ರಭುಗಳ ಸಿದ್ಧಾಂತದಲ್ಲಿಯೂ, ಶ್ರೀಲ ಪ್ರಭುಪಾದರ ಭಗವದ್ಗೀತೆಯಲ್ಲಿಯೂ ತುಂಬ ಆಸಕ್ತಿಯುಂಟಾಯಿತು. ಇದರ ಫಲವಾಗಿ 1995ರಲ್ಲಿ ಶ್ರೀಲ ಪ್ರಭುಪಾದರ ಶಿಷ್ಯರಾದ ಶ್ರೀ ಶ್ರೀ ಜಯಪತಾಕ ಸ್ವಾಮೀಜಿಯವರಿಂದ ಪತ್ನೀಸಹಿತ ದೀಕ್ಷೆ ಪಡೆದ ಇವರು **ಗೋವಿಂದರಾಮದಾಸ**ರೆಂದೂ, ಇವರ ಪತ್ನಿ **ವಿಲಾಸಿನಿ ರಾಧಾದೇವಿದಾಸಿ** ಎಂದೂ ನಾಮಾಂಕಿತರಾದರು. ಮುಂದೆ 1995ರ ಜೂನಿನಲ್ಲಿ ವೃಂದಾವನದಲ್ಲಿ ಗುರುಕುಲ ಮಾದರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ **ವೈಷ್ಣವ ಇನ್‌ಸ್ಟಿಟ್ಯೂಟ್ ಆಫ್ ಹೈಯರ್ ಎಜುಕೇಶನ್** ಎಂಬ ಆಧ್ಯಾತ್ಮಿಕ ವಿದ್ಯಾಸಂಸ್ಥೆಯಲ್ಲಿ ನಿರಂತರ 6ತಿಂಗಳ ವಿದ್ಯಾಭ್ಯಾಸವನ್ನು ಮುಗಿಸಿ, **"ಭಕ್ತಿಶಾಸ್ತ್ರಿ"** ಎಂಬ ಪದವಿಯನ್ನು ಪಡೆದರು.

1995ರಲ್ಲಿ ವೃತ್ತಿ ಜೀವನಕ್ಕೆ ವಿದಾಯ ಹೇಳಿ, ಮಂಗಳೂರಿನಲ್ಲಿ ನೆಲೆಸಿ ತನ್ನನ್ನು ಆಧ್ಯಾತ್ಮಿಕ ಜೀವನದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡರು. ಶ್ರೀಯುತರು ಗೀತಾಜ್ಞಾನ ಪ್ರಚಾರ ಸಭಾ ಎಂಬ ಆಧ್ಯಾತ್ಮಿಕ ಸಂಸ್ಥೆಯನ್ನು ಸ್ಥಾಪಿಸಿ ಶ್ರೀ ಶ್ರೀ ಚೈತನ್ಯ ಮಹಾಪ್ರಭುಗಳ ಅನುಯಾಯಿಗಳೂ ಮತ್ತು ಇಸ್ಕಾನ್ ಸಂಸ್ಥೆಯ ಸ್ಥಾಪಕರೂ ಆಗಿರುವ ಭಕ್ತಿ ವೇದಾಂತ ಸ್ವಾಮಿ ಶ್ರೀಲ ಪ್ರಭುಪಾದರ ಮೇಲ್ಪಂಕ್ತಿಯಲ್ಲಿಯೇ ಶ್ರೀಕೃಷ್ಣಪ್ರಜ್ಞೆ ಹಾಗೂ ಭಾಗವತ ಧರ್ಮ ಪ್ರಚಾರದಲ್ಲಿ ಸತತವಾಗಿ ನಿರತರಾಗಿದ್ದಾರೆ. ಮಂಗಳೂರಿನ ಕುದ್ರೋಳಿಯ ಅಳಕೆಯಲ್ಲಿ **ಗೀತಾಜ್ಞಾನ ಮಂದಿರ**ದಲ್ಲಿ ಭಗವಾನ್ ಶ್ರೀ ವೇಣುಗೋಪಾಲನ ಅರ್ಚಾವಿಗ್ರಹವನ್ನು ಪ್ರತಿಷ್ಠಾಪಿಸಿ, ಶಿಸ್ತು ಬದ್ಧವಾಗಿ ಸ್ವತಃ ಶ್ರೀಮದ್ ಭಗವದ್ಗೀತಾ ಹಾಗೂ ಭಾಗವತ ಪ್ರವಚನ, ಭಜನೆ, ಧಾರ್ಮಿಕ ಸತ್ಸಂಗ, ವಿಷ್ಣು ಸಹಸ್ರನಾಮ, ಹನುಮಾನ್ ಚಾಲೀಸ ಮತ್ತಿತರ ಆನೇಕ ಧಾರ್ಮಿಕ ವಿಚಾರಗಳನ್ನು ಭಕ್ತಜನರಿಗೆ ಬೋಧಿಸುತ್ತಿದ್ದಾರೆ. ಇವರ ಸಂಚಾಲಕತ್ವದಲ್ಲಿ ಪ್ರತಿ ಆದಿತ್ಯವಾರ, ಗುರುವಾರ, ಶನಿವಾರ, ಏಕಾದಶಿಯ ದಿನಗಳಲ್ಲಿ ಮತ್ತು ಶ್ರೀಕೃಷ್ಣ ಜನ್ಮಾಷ್ಟಮಿ, ನಂದೋತ್ಸವ, ಗೌರ ಪೌರ್ಣಮಿ, ಅಷ್ಟೇ ಅಲ್ಲ ಇವರು ಭಕ್ತವೃಂದದವರಿಗೆ ವೃಂದಾವನ, ಮಥುರಾ, ದ್ವಾರಕಾ, ಜಗನ್ನಾಥ ಪುರಿ ಮೊದಲಾದ ಭಗವಂತನ ಧಾಮಗಳನ್ನು ಸಂದರ್ಶಿಸುವ ಅವಕಾಶಗಳನ್ನು

ಕಲ್ಪಿಸಿಕೊಡುತ್ತಿದ್ದು, ಗೀತಾಜ್ಞಾನ ಪ್ರಚಾರಸಭೆಯ ಚಟುವಟಿಕೆಗಳು ದಿನದಿಂದ ದಿನಕ್ಕೆ ವೃದ್ಧಿ ಹೊಂದುತ್ತ ಜನಾದರಣೀಯವಾಗಿದೆ.

ಇಂದು ತಮ್ಮ ಗೀತಾಜ್ಞಾನ ಪ್ರಚಾಂಕ ಸಂಘದ ಮೂಲಕ ಜಾತಿಮತ ಭೇದವೆಣಿಸದೆ ಎಲ್ಲರನ್ನೂ ಸೇರಿಸಿಕೊಂಡು ಕೃಷ್ಣಭಕ್ತಿ ಮತ್ತು ಗೀತಾಜ್ಞಾನ ಪ್ರಸಾರದ ಕೈಂಕರ್ಯದಲ್ಲಿ ತತ್ಪರರಾಗಿದ್ದಾರೆ. ಪ್ರತಿನಿತ್ಯ ಭಜನೆ, ಸತ್ಸಂಗ, ವಿಷ್ಣುಸಹಸ್ರನಾಮ, ಗೀತಾಪಠನ, ರವಿವಾರ ಹಾಗೂ ವಿಶೇಷ ದಿನಗಳಲ್ಲಿ ವಿಶೇಷ ಸತ್ಸಂಗ, ಹರಿಕಥಾ, ಭಾಗವತಾ ಸಪ್ತಾಹಗಳ ಆಯೋಜನೆ, ಆಗಾಗ್ಯೆ ಸಾಮೂಹಿಕವಾಗಿ ತೀರ್ಥಕ್ಷೇತ್ರಗಳ ಸಂದರ್ಶನ ಹೀಗೆ ಸಂಸಾರದ ಜಂಜಡಗಳಲ್ಲಿ ಮುಳುಗಿ ನೆಮ್ಮದಿಗಾಗಿ ಅಲೆದಾಡುವವರಿಗೆ ನಗರಮಧ್ಯದಲ್ಲೇ ಶಾಂತಿ, ಆನಂದವನ್ನು ಕಂಡುಕೊಳ್ಳುವ ಮಾರ್ಗವನ್ನು ತೋರುತ್ತಿದ್ದಾರೆ.

## ಹರಿಕಥಾ ಪರಿಷತ್ ಮಂಗಳೂರು:

ಮಂಗಳೂರಿನ ಪ್ರಸಿದ್ಧ ವಕೀಲರಾದ ಹಾಗೂ ಕೀರ್ತನಕಾರರೂ ಆದಂತಹ ಶ್ರೀ ಕೆ.ಮಹಾಬಲ ಶೆಟ್ಟಿ (ಶ್ರೀ ದೇವಕೀತನಯ ಕೂಡ್ಲು) ಇವರು 'ಮಂಗಳೂರಿನ ಸಹೃದಯ, ಸಮಾನ ಮನಸ್ಕರಿಂದೊಡಗೂಡಿ 'ಕಥಾಕೀರ್ತನ ಕಲೆ' (ಹರಿಕಥೆಯ) ಮೂಲಕ ಭಕ್ತಿ ಸಿದ್ಧಾಂತ ಹಾಗೂ ಸಂಸ್ಕೃತಿಯ ಪ್ರಚಾರದ ಉದ್ದೇಶದಿಂದ ಸ್ಥಾಪಿಸಿರುವ ಸಂಸ್ಥೆ 'ಹರಿಕಥಾಪರಿಷತ್' ಪ್ರತೀ ತಿಂಗಳೂ ದಕ್ಷಿಣ ಕನ್ನಡ ಅಥವಾ ಕಾಸರಗೋಡು ಜಿಲ್ಲೆಯ ಯಾವುದಾದರೂ ಒಂದು ದೇವಸ್ಥಾನದ (ಕ್ಷೇತ್ರದಲ್ಲಿ) ಆಶ್ರಯದಲ್ಲಿ ಒಂದು ವಾರದ ಕಾಲ ಬೇರೆ ಬೇರೆ ಹರಿದಾಸರಿಂದ ಹರಿಕಥೆಯನ್ನು ಆಯೋಜಿಸುವ ಚಟುವಟಿಕೆಯಲ್ಲಿ ಪ್ರವೃತ್ತವಾಗಿದೆ. ಜನವರಿ 24, 2010ರಲ್ಲಿ ಪ್ರಾರಂಭವಾದ ಈ ಸಂಸ್ಥೆಯು ಭಕ್ತಿ ಸಿದ್ಧಾಂತ ಪ್ರಚಾರ ಮತ್ತು ಹರಿಕಥಾ ಕಲೆಯ ಬೆಳವಣಿಗೆಯಲ್ಲಿ ಮಹತ್ವದ ಜವಬ್ದಾರಿಯನ್ನು ವಹಿಸಿಕೊಂಡು ಯಶಸ್ವಿಯಾಗಿ ಮುನ್ನಡೆಯುತ್ತಿದೆ.

## ಹೊಸಬೆಟ್ಟು ಗ್ರಾಮಸೇವಾ ಸಂಘ

ಮಂಗಳೂರಿನ ಹೊರವಲಯದ ಸುರತ್ಕಲ್ಲಿಗೆ ಸಮೀಪದ ಹೊಸಬೆಟ್ಟಿನಲ್ಲಿ ಹರಿಭಕ್ತಿ, ಭಜನೆ, ಸೇವಾಕೈಂಕರ್ಯಗಳಲ್ಲಿ ಐವತ್ತು ವರ್ಷಕ್ಕೂ ಮೇಲ್ಪಟ್ಟ ಇತಿಹಾಸವನ್ನು ಹೊಂದಿದ ಸಂಸ್ಥೆ ಇದೆ. ಅದುವೇ ಹೊಸಬೆಟ್ಟು ಗ್ರಾಮ ಸೇವಾ ಸಂಘ. ಈ ಸಂಘವು ಪಾಂಡುರಂಗ ಭಜನಾ ಮಂದಿರವನ್ನು ಹೊಂದಿರುವುದಲ್ಲದೆ ನವಗಿರಿ ಕಲ್ಯಾಣ ಮಂಟಪವನ್ನು ತನ್ನ ಚಟುವಟಿಕೆಗಳ ಕೇಂದ್ರವಾಗಿಸಿಕೊಂಡಿದೆ. ವರ್ಷವರ್ಷವೂ ಶ್ರಾವಣಮಾಸದ ಶುಕ್ಲಪಂಚಮಿ(ನಾಗರಪಂಚಮಿ)ಯಿಂದ ಪ್ರಾರಂಭಗೊಂಡು ಹುಣ್ಣಿಮೆಯವರೆಗೆ 'ಹರಿಕೀರ್ತನಾ

ಮಹೋತ್ಸವ'ವನ್ನು ಹಮ್ಮಿಕೊಳ್ಳುತ್ತದೆ. 2009ರಲ್ಲಿ 50ನೇ ವರ್ಷದ 'ಹರಿಕೀರ್ತನಾ ಮಹೋತ್ಸವ'ವನ್ನು ಆಚರಿಸಿದ ಈ ಸಂಸ್ಥೆಯು ಮಕ್ಕಳಿಗಾಗಿ ದಾಸಕೀರ್ತನ ಸ್ಪರ್ಧೆ, ಹರಿಕಥಾ ಸ್ಪರ್ಧೆ, ಭಜನಾ ತಂಡಗಳ ಮಧ್ಯೆ ಭಜನಾ ಸ್ಪರ್ಧೆ, ಭಜನೆಯಲ್ಲಿ ಅಂತ್ಯಾಕ್ಷರಿ ಸ್ಪರ್ಧೆ ಈ ರೀತಿ ವಿಶಿಷ್ಟವಾದಂತಹ ಕಾರ್ಯಕ್ರಮಗಳ ಮೂಲಕ ಯುವಜನಾಂಗವು ಭಕ್ತಿ, ಭಜನೆ, ತನ್ಮೂಲಕ ನಮ್ಮ ಸಂಸ್ಕೃತಿಯ ಬಗ್ಗೆ ಅಭಿರುಚಿ, ಆಸಕ್ತಿಯನ್ನು ಬೆಳೆಸಿಕೊಳ್ಳಲು ಅನುಪಮ ಸೇವೆ ಸಲ್ಲಿಸುತ್ತಿದೆ. ಕಲಾಭಿಜ್ಞರಾದ, ಶ್ರೇಷ್ಠ ಹರಿಕಥಾ ಶ್ರೋತ್ರವೃಂದವನ್ನು ತಯಾರುಮಾಡಿದ ಹೆಮ್ಮೆ ಈ ಸಂಸ್ಥೆಯದು. ಹಿರಿಯ ಕೀರ್ತನಕಾರರಾಗಿದ್ದ ಹರಿದಾಸ ಹೊಸಬೆಟ್ಟು ಶ್ರೀಧರಾಚಾರ್ಯರಿಂದ ಪ್ರಾರಂಭಗೊಂಡ 'ಹರಿಕೀರ್ತನಾ ಮಹೋತ್ಸವ'ವು ಇಂದಿಗೂ ಕೂಡಾ ವಿಜೃಂಭಣೆಯಿಂದ ಯಶಸ್ವಿಯಾಗಿ ವರ್ಷವರ್ಷವೂ ನಡೆಯುತ್ತದೆ.

ಆರ್ಥಿಕವಾಗಿ ಹಿಂದುಳಿವ ವಿದ್ಯಾರ್ಥಿಗಳಿಗೆ ಧನಸಹಾಯ, ಅಶಕ್ತರಿಗೆ ಚಿಕಿತ್ಸಾ ಸೌಲಭ್ಯಕ್ಕೆ ಸಹಾಯ ಇಂತಹ ಸಾಮಾಜಿಕ ಚಟುವಟಿಕೆಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಿದೆ.

## ೬.೩ ಅನುಷ್ಠಾನ ಮತ್ತು ಪ್ರಚಾರದ ಮೂಲಕ ಸಮಾಜದ ಪರಿವರ್ತನೆ – ಕೆಲವು ಮಹನೀಯರ ಅಭಿಪ್ರಾಯಗಳು

### ಸ್ವಾಮಿ ಹರ್ಷಾನಂದಾಜೀ



ಸ್ವಾಮಿ ಹರ್ಷಾನಂದಜೀಯವರು ಬೆಂಗಳೂರಿನ ರಾಮಕೃಷ್ಣ ಆಶ್ರಮದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ರಾಮಕೃಷ್ಣಾಶ್ರಮಕ್ಕೆ ಸೇರಿದ್ದು 1954ರಲ್ಲಿ 'ಜೀವನವನ್ನೆಲ್ಲಾ ಭಗವಂತನ ಸೇವೆಗೆ ಮುಡಿಪಿಟ್ಟು' 1962ರಲ್ಲಿ ಸಂನ್ಯಾಸ ದೀಕ್ಷೆಯನ್ನು ಸ್ವೀಕರಿಸಿದರು. ರಾಮಕೃಷ್ಣಾಶ್ರಮದ ಮಂಗಳೂರು, ಮೈಸೂರು, ಅಲಹಾಬಾದ್ ಕೇಂದ್ರಗಳಲ್ಲಿ ಸೇವೆ ಸಲ್ಲಿಸಿದ್ದಾರೆ. 1989ರಿಂದ ಬೆಂಗಳೂರಿನ ಕೇಂದ್ರದಲ್ಲಿದ್ದಾರೆ. ಇಂಗ್ಲೀಷ್, ಕನ್ನಡ, ಸಂಸ್ಕೃತಗಳಲ್ಲಿ ಅಪಾರ ಪಾಂಡಿತ್ಯವನ್ನು ಹೊಂದಿರುವ ಇವರು ಅನೇಕ ಉದ್ಗ್ರಂಥಗಳನ್ನು ರಚಿಸಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ನಾರದೀಯ ಭಕ್ತಿಸೂತ್ರಗಳ ಕುರಿತಾಗಿ ವಿಸ್ತೃತವಾದ ವ್ಯಾಖ್ಯಾನವುಳ್ಳ 'ದೇವರ್ಷಿ ನಾರದರ ಭಕ್ತಿ ಸೂತ್ರಗಳು' ಎಂಬ ಗ್ರಂಥವನ್ನು ರಚಿಸಿರುತ್ತಾರೆ. ಇವರು ರಚಿಸಿದ ಹಲವಾರು ಪುಸ್ತಕಗಳನ್ನು ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದೆ. ಹಿಂದೂ ಧರ್ಮದ ಬಗ್ಗೆ ಒಟ್ಟಾರೆಯಾಗಿ ಸವಿಸ್ತಾರವಾದ ಮಾಹಿತಿ ಸಂಗ್ರಹವನ್ನೊಳಗೊಂಡ ಮಹಾನ್ ಗ್ರಂಥ 'ಹಿಂದೂ ಧರ್ಮದ ಬಗ್ಗೆ ವಿವರಣಾತ್ಮಕ ವಿಶ್ವಕೋಶ (ಮೂರು ಸಂಪುಟಗಳಲ್ಲಿ), 'A concise Encyclopaedia of Hinduism' ಇತ್ತೀಚೆಗೆ ಬಿಡುಗಡೆಗೊಂಡಿದೆ.

ಇವರನ್ನು ನಾನು ತಾ.20-11-2010ರಂದು ಮಂಗಳೂರಿನ ಶ್ರೀ ರಾಮಕೃಷ್ಣ ಆಶ್ರಮದಲ್ಲಿ ಭೇಟಿಯಾದೆ. ಭಕ್ತಿ ಸೂತ್ರಗಳಲ್ಲಿ ಅಡಕವಾಗಿರುವ ಸಿದ್ಧಾಂತದ ಪ್ರಚಾರದಿಂದ ಸಮಾಜದಲ್ಲಿ ಪರಿವರ್ತನೆಯ ಕುರಿತಾಗಿ ಅವರ ಅಭಿಪ್ರಾಯಗಳು ಇಂತಿವೆ:

"ಭಕ್ತಿಸೂತ್ರಗಳಲ್ಲಿ ವಿಶೇಷವಾಗಿ ನಾರದ ಭಕ್ತಿ ಸೂತ್ರದಲ್ಲಿ ಭಕ್ತಿಸಾಧನೆಯ ಕುರಿತಾಗಿ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಭಕ್ತಿ ಸಾಧನೆಯು ನೈತಿಕ ಪರಿಶುದ್ಧತೆಯನ್ನು ಅಗತ್ಯವಾಗಿ ಅಪೇಕ್ಷಿಸುತ್ತದೆ. ಆ ನಿಟ್ಟಿನಲ್ಲಿ ಹೆಚ್ಚು ಜನರು ಭಕ್ತಿ ಸಾಧನೆಯಲ್ಲಿ ತತ್ಪರರಾದರೆ ಅಷ್ಟರ ಮಟ್ಟಿಗೆ ಸಮಾಜವು ಶುಚಿಯಾಗಲು, ಸತ್‌ಪರಿವರ್ತನೆ ಹೊಂದಲು ಸಾಧ್ಯ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಆ ಮಟ್ಟಿನ ವಿಸ್ತ್ರತವಾದ ಪರಿವರ್ತನೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಕಾರಣವೆಂದರೆ ಯಾರು ಅಥವಾ ಯಾವ ಸಂಸ್ಥೆಗಳು ಧರ್ಮ, ನೀತಿ, ನಿಯಮಗಳನ್ನು ಸಮಾಜದಲ್ಲಿ ರೂಢಿಸಲು ತತ್ಪರವಾಗಿಯೋ ಅವರ / ಅವುಗಳ

ನೈತಿಕತೆ, ಧರ್ಮನಿಷ್ಠೆಯನ್ನು ಪ್ರಶ್ನಿಸುವಂತಹ ಸಂಶಯಿಸುವಂತಹ ಸನ್ನಿವೇಶ ನಿರ್ಮಾಣವಾಗಿದೆ. ಇದಕ್ಕೆ ಶ್ರೀ ರಾಮಕೃಷ್ಣ ಪರಮಹಂಸರು ಒಂದು ದೃಷ್ಟಾಂತವನ್ನು ಕೊಡುತ್ತಾರೆ. ದೆವ್ವ ಹಿಡಿದಿರುವಂತಹ ವ್ಯಕ್ತಿಯನ್ನು ಮಂತ್ರವಾದಿಯ ಬಳಿಗೆ ಕರೆದೊಯ್ದಾಗ ಮಂತ್ರವಾದಿಯು ಮುಷ್ಠಿಯಲ್ಲಿ ಸಾಸಿವೆ ಹಿಡಿದು ಮಂತ್ರೋಚ್ಚಾರ ಮಾಡಿ ದೆವ್ವ ಹಿಡಿದವನ ಮೇಲೆ ಎಸೆಯುತ್ತಾನೆ. ಒಂದು ವೇಳೆ ದೆವ್ವವು ಸಾಸಿವೆ ಕಾಳಿನಲ್ಲೇ ಅಡಗಿದ್ದಿದ್ರೆ? ಕೆಲವರಿಂದಾಗಿ ಧರ್ಮ, ನೈತಿಕತೆಯನ್ನು ಬೋಧಿಸುವವರನ್ನೇ, ಪ್ರಸಾರಮಾಡುವವರನ್ನೇ ಯುವ ಜನಾಂಗ ಅನುಮಾನದ ದೃಷ್ಟಿಯಿಂದ ನೋಡುವಂತಹ ಸನ್ನವೇಶವು ನಿರ್ಮಾಣವಾಗುತ್ತದೆ. ಆದರೂ ನಮ್ಮ ನಾಡಿನ ಸಂತ ಮಹಂತರ ಸಂದೇಶವು ಯಾವತ್ತಿಗೂ ಅಧ್ಯಯನ ಯೋಗ್ಯವಾದುದು, ಮನನಯೋಗ್ಯವಾದುದು. ಕೆಲವೊಂದು ಸಂತ ಮಹಂತರ ಕೃತಿಗಳಲ್ಲಿ ಅಡಕವಾಗಿರುವ ವಿಚಾರಗಳನ್ನು ಜನಸಾಮಾನ್ಯರಿಗೆ ತಲುಪಿಸಲು ಇನ್ನೂ ಸಾಧ್ಯವಾಗಿಲ್ಲ. ಆ ನಿಟ್ಟಿನಲ್ಲಿ ಪ್ರಯತ್ನ ಮಾಡಬೇಕಾಗಿದೆ:"

ಇದಿಷ್ಟು ಸ್ವಾಮಿ ಹರ್ಷಾನಂದಜೀಯವರ ಅನುಭವದ ಮಾತುಗಳ ಸಾರವಾಗಿದೆ.

## ಸಂತ ಶ್ರೀ ಭದ್ರಗಿರಿ ಅಚ್ಯುತದಾಸ್‌ಜೀ



ಕರ್ನಾಟಕದ ಕೀರ್ತನ ಕಲೆಗೆ ಒಂದು ದೀರ್ಘ ಪರಂಪರೆ ಇದೆ. ನಾಡಿನ ಸಾಮಾಜಿಕ ಬದುಕಿಗೆ ಹರಿದಾಸರು ನೀಡಿದ ಕೊಡುಗೆ ಬಹಳ ದೊಡ್ಡದು. ಕರ್ನಾಟಕ ಸಂಗೀತದ ಪ್ರವರ್ತಕರಾಗಿ ಅವರು ವಹಿಸಿದ್ದ ಪಾತ್ರವೂ ಅಷ್ಟೇ ಮಹತ್ವದ್ದು.

ಅಂತಹ ದಾನ ವರಂವರೆಂಯು ಪ್ರಸ್ತುತ ನವರ್ಧರಾಯಭಾರಿಯಂತಿರುವರು ಸಂತಭದ್ರಗಿರಿ ಅಬ್ಯತದಾನರು.

ಕರ್ನಾಟಕದಲ್ಲಿ ಅವರ ಹರಿಕಥೆಯನ್ನು ಆಲಿಸದವರು ವಿರಳ. ಅವರ ಕಾರ್ಯಕ್ರಮಗಳಿಗಾಗಿ ಜನ ತಿಂಗಳುಗಟ್ಟಳೆ, ವರ್ಷಗಟ್ಟಳೆ, ಕಾದಿರುತ್ತಾರೆ.

ಕಥೆಯ ಹಂದರಕ್ಕೆ, ಅದರ ಚೌಕಟ್ಟಿಗೆ ಹೊಂದುವಂತೆ ಪುರಾಣದ ಸಂದರ್ಭಗಳನ್ನು, ಸನ್ನಿವೇಶಗಳನ್ನು ಅವರು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ.

ಕಥೆಯ ಓಘಕ್ಕೆ ಭಂಗ ಉಂಟಾಗದಂತೆ, ಅದರ ಬಂಧ ಸಡಿಲಾಗದಂತೆ ದೃಷ್ಟಾಂತಗಳನ್ನು ಉಪಕತೆಗಳನ್ನೂ ಹೊಸೆಯುತ್ತಾ ಹೋಗುತ್ತಾರೆ. ನಡು ನಡುವೆ ಗಂಭೀರ, ಮೌಲಿಕ ವಸ್ತು–ವಿಷಯಗಳ ವಿಶ್ಲೇಷಣೆ, ಶಾಸ್ತ್ರ ವಿಚಾರಗಳು ಬಂದಾಗ ಗ್ರಾಂಥಿಕ ಭಾಷೆ, ಉಳಿದಂತೆ ಆಡುಭಾಷೆಯ ಬಳಕೆಯ ಸೊಗಡು.

ಸನ್ನಿವೇಶ ನಿರ್ಮಾಣ, ಪಾತ್ರ ಚಿತ್ರಣ, ತತ್ವ ಚಿಂತನೆ, ಎಲ್ಲ ಸಂದರ್ಭದಲ್ಲೂ ಹಳಿ ತಪ್ಪದ ಸಂಯಮ. ಅಷ್ಟು ತೂಕದ ಮಾತು, ಅಷ್ಟು ಪಕ್ವವಾದ ಚಿಂತನೆ. ಮಾತು ಮಾತಿಗೂ ತಮಾಷೆ, ಹಾಸ್ಯ, ವಿಡಂಬನೆ, ಚತುರೋಕ್ತಿ. ಆದರೆ ಯಾರ ಮನಸ್ಸೂ ನೋಯದು.

ಸಂದರ್ಭಕ್ಕೆ ಒಪ್ಪುವಂತೆ ಗಾದೆಗಳು, ನಾಣ್ನುಡಿಗಳು, ಜಾಣ್ನುಡಿಗಳು, ಲೋಕೋಕ್ತಿಗಳು ದೃಷ್ಟಾಂತಗಳು ಅವರ ಬತ್ತಳಿಕೆಯಲ್ಲಿ ಸದಾ ಸಿದ್ಧ.

ಕನ್ನಡ, ಮರಾಠಿ, ಹಿಂದಿ, ಕೊಂಕಣಿ ಮತ್ತು ತುಳು ಭಾಷೆಗಳಲ್ಲಿ ಹರಿಕೀರ್ತನೆ ನಡೆಸುವ ಭದ್ರಗಿರಿಯವರು ಭಾರತೀಯರ ಭಾವೈಕ್ಯದ ಪ್ರತೀಕವಾಗಿದ್ದಾರೆ. ವೈದಿಕ ಧರ್ಮ ಮತ್ತು ಸಂತ ಸಾಹಿತ್ಯದ ಪ್ರಚಾರ ಮತ್ತು ಪ್ರಸಾರ ಕಾರ್ಯದಲ್ಲೇ ಅರ್ಧ ಶತಮಾನವನ್ನು ಪೂರೈಸಿರುವ ಮಹನೀಯರಾಗಿದ್ದಾರೆ.

ಗುರುಗಳಾದ ಕಾಶಿ ಮಠಾಧೀಶ ಶ್ರೀ ಸುಧೀಂದ್ರ ತೀರ್ಥರಿಂದ ಆಶೀರ್ವಾದಪೂರ್ವಕವಾಗಿ ಪಡೆದ 'ಮೂಲ ನಾರಾಯಣ' ಅಂಕಿತದಿಂದ ಕನ್ನಡ, ಮರಾಠಿ, ಕೊಂಕಣಿ ಮತ್ತು ತುಳು ಭಾಷೆಗಳಲ್ಲಿ ಸಾವಿರಾರು ಕೀರ್ತನೆಗಳನ್ನು ರಚಿಸಿ ಕರ್ನಾಟಕದ ಹರಿದಾಸರ ಕೀರ್ತನ ಪರಂಪರೆಯನ್ನು ಬೆಳೆಸಿರುವ ಹಿರಿಮೆಯೂ ಅವರದಾಗಿದೆ.

ಅದರ ಜತೆಯಲ್ಲೇ ಕೀರ್ತನಾಭ್ಯಾಸಿಗಳಿಗಾಗಿ ಹರಿಕಥಾ ಪೂರ್ವರಂಗ, ಗೀತಾರ್ಥ ಚಿಂತನ ಹಾಗೂ ಶ್ರೀ ಹರಿಕಥಾಮೃತ ಸಿಂಧು (ರಾಮಾಯಣ–ಮಹಾಭಾರತ ಕುರಿತ ಸಮಗ್ರ ಸಂಪುಟಗಳು) ಎಂಬ ಮಹಾ ಸಂಪುಟಗಳನ್ನು ರಚಿಸಿದ್ದಾರೆ.

ಇದಲ್ಲದೆ ಶ್ರೀಗುರು ಚರಿತಾಮೃತ ಎಂಬ (ಓವೀಬದ್ಧ ಕೊಂಕಣಿ ಭಾಷೆಯಲ್ಲಿ)ಬೃಹತ್ ಗ್ರಂಥವನ್ನೂ ರಚಿಸಿದ್ದಾರೆ.

ಭದ್ರಗಿರಿ ನಿತ್ಯ ಸಂಚಾರಿ. ಕಾವ್ಯಶಾಸ್ತ್ರ, ವಿನೋದದಲ್ಲೇ ಅವರ ಜೀವನಯಾತ್ರೆ.

ಇನ್ನೊಂದು ಅರ್ಥದಲ್ಲಿ ಅವರು ವಾಙ್ಮಯ ತಪಸ್ವಿ. ಮಾತು ಅವರ ಹೃದಯದಷ್ಟೇ ಮೃದು, ಸ್ನೇಹಮಯಿ, ವಾತ್ಸಲ್ಯಮಯಿ.

"ಹೊಸತು ಕಿನ್ನರಿಯಲಿ ನಿನ್ನ ಹಳೆಯ ಹಾಡನು ಉಕ್ಕಿಸು" ಎಂಬ ಕವಿವಾಣಿ ಅವರಿಗೆ ಆದರ್ಶ. ಜೀವನದ ಉದಾತ್ತ ಧ್ಯೇಯ, ಆದರ್ಶ, ಮೌಲ್ಯಗಳನ್ನು ಮತ–ಪಂಥ ನಿರಪೇಕ್ಷವಾಗಿ ಜನರಿಗೆ ಮುಟ್ಟಿಸುವುದೇ ಅವರ ಧ್ಯೇಯ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂಬ ಗೊಂದಲಕ್ಕೆ ಎಡೆಯಿಲ್ಲದಂತೆ ವೈದಿಕ–ಅವೈದಿಕ ಅಂಥಗಳ, ಸಿದ್ಧಾಂತಗಳ ಸಮನ್ವಯಕ್ಕೆ ಅವರು ಹೆಚ್ಚು ಗಮನಕೊಡುತ್ತಾರೆ. ಇದು ಅವರ ಧೋರಣೆ.

ಹರಿಕಥೆಯಲ್ಲಿ ಬಳಸುವ ಗಾನ–ಸಂಗೀತ ಭಾವೋದ್ದೀಪಕವಾಗಿರಬೇಕು ಎನ್ನುತ್ತಾರೆ, ಅವರು. ಹಾಡುಗಳ ಸಾಹಿತ್ಯ ಶುದ್ಧಿಗೂ ಅಷ್ಟೇ ಗಮನ, ಶಾಸ್ತ್ರೀಯ ಸಂಗೀತ ರಾಗಗಳೊಂದಿಗೆ ರಂಗ ಸಂಗೀತ, ಯಕ್ಷಗಾನ, ಜಾನಪದ, ಸುಗಮ

ಸಂಗೀತ ಹೀಗೆ ಮಾರ್ಗ ಮತ್ತು ದೇಶೀ ಶೈಲಿಗಳೆರಡನ್ನೂ ಅವರು ದುಡಿಸಿಕೊಳ್ಳುತ್ತಾರೆ. ವಾಲ್ಮೀಕಿಯಿಂದ ಕಬೀರದಾಸರವರೆಗೆ, ಪಂಪನಿಂದ ಅಡಿಗರವರೆಗೆ ಎಲ್ಲ ಕಾವ್ಯಗಳಲ್ಲಿನ ಕಾವ್ಯಾಂಶಗಳ ಚಿಂತನಾಂಶಗಳನ್ನೂ ಅವರು ತಮ್ಮ ಹರಿಕಥೆಯಲ್ಲಿ ಮೊಗೆಮೊಗೆದು ಕೊಡುತ್ತಾರೆ.

ಹರಿಕಥೆಯಲ್ಲಿ ಯಾವ ಕಾರಣಕ್ಕೂ ಯಾವದೇ ಜಾತಿ, ಮತ ವೃತ್ತಿಗಳ ನಿಂದನೆ ಕೂಡದು. ಯಾವ ಕಾರಣಕ್ಕೂ ಯಾರ ಮನಸ್ಸೂ ನೋಯಿಸಬಾರದು. ಅಂಥ ಸಂದರ್ಭಗಳಿದ್ದರೆ ಆಧುನಿಕ ಚಿಂತನೆ, ಮನೋಧರ್ಮಕ್ಕೆ ಹೊಂದುವಂತೆ ಮಾರ್ಪಾಡು ಮಾಡಿಕೊಂಡು ಕಥೆಯನ್ನು ಹೇಳಬೇಕು. ಇದು ಭದ್ರಗಿರಿಯವರ ದೃಷ್ಟಿಕೋನ. ಸೆಕ್ಯೂಲರ್ ದೃಷ್ಟಿಕೋನ. ಆದರೆ ತಮ್ಮ ಹರಿಕಥೆ ಮತ ಪಂಥ ನಿರಪೇಕ್ಷವಾದೀತೇ ಹೊರತು ಅದೆಂದೂ ಧರ್ಮ ನಿರಪೇಕ್ಷವಾಗದು ಎನ್ನುತ್ತಾರೆ.

ಹರಿದಾಸ ಜೇನ್ನೊಣದಂತಿರಬೇಕು. ಜ್ಞಾನದ ಮಕರಂದವನ್ನೇ ಹೀರಿ ಅದನ್ನು ಜೇನಾಗಿ ಪರಿವರ್ತಿಸಿ ಸಹೃದಯಿಗಳಿಗೆ ತಲುಪಿಸುವುದು ಅವರ ಕೆಲಸ. ಹಾಗಾಗಿ ಕೀರ್ತನಕಾರ ಸದಾ ಆಧ್ಯಯನಶೀಲನಾಗಿರಬೇಕು. ಹಾಗಿದ್ದರೆ ಮಾತ್ರ ಈ ಪ್ರಕಾರಕ್ಕೆ ನ್ಯಾಯ ಒದಗಿಸಬಹುದು. ಆದರೆ ಯಾವುದೇ ಕಾರಣಕ್ಕೂ ಕೀರ್ತನಕಾರ ಶ್ರೋತೃಗಳ ದಾರಿ ತಪ್ಪಿಸಬಾರದು.

ನಿರೂಪಣೆಯಲ್ಲಿ ಪಾಂಡಿತ್ಯ ಪ್ರದರ್ಶನ ವಾಗಾಡಂಬರ ಕೂಡದು ಎನ್ನುವುದು ಅವರ ಖಚಿತ ಧೋರಣೆ. ಸುಲಭವಾಗಿ ಅರ್ಥವಾಗುವ ಕನ್ನಡಿಯೆಂಬ ಪದಕ್ಕೆ ಬದಲಾಗಿ ದರ್ಪಣ ಎಂದು ಹೇಳಿದರೆ ಏನು ಬಂತು ಪ್ರಯೋಜನ? ಹರಿಕಥೆಯ ಉದ್ದೇಶ ಭಗವದ್ಭಕ್ತಿಯನ್ನು ಮೊಳೆಸಿ ಬೆಳೆಸುವುದು, ನೀತಿ–ಮೌಲ್ಯಗಳನ್ನು ಬಿಂಬಿಸುವುದು.

ಭಗವದ್ಭಕ್ತಿಯೊಂದಿಗೆ ರಾಷ್ಟ್ರಪ್ರೇಮವನ್ನು, ಸಮಾಜ ಪ್ರಜ್ಞೆಯನ್ನು ಜೀವಂತವಾಗಿಡುವ ಹೊಣೆಗಾರಿಕೆಯೂ ಹರಿಕಥೆಗಿದೆ ಎನ್ನುತ್ತಾರೆ ಭದ್ರಗಿರಿಯವರು. ಮದ್ಯಪಾನ, ವರದಕ್ಷಿಣೆ, ಅಸ್ಪೃಶ್ಯತೆ, ಅನಕ್ಷರತೆಗಳಂಥ ಸಮಾಜಿಕ ಅನಿಷ್ಟಗಳ ಬಗ್ಗೆ ದೃಷ್ಟಾಂತಗಳ ಮೂಲಕ ವಿಚಾರ ಮೂಡಿಸುವ ಕೆಲಸವನ್ನು ಆತ ಮಾಡಬೇಕು.

ಸಂಗೀತ, ನಾಟಕ, ಯಕ್ಷಗಾನ ಮತ್ತಿತರ ಹಲವು ಕಲಾಪ್ರಕಾರ ಮೂಲ ಹರಿಕರ್ಥೆಯಲ್ಲಿದೆ ಎಂಬುದು ಭದ್ರಗಿರಿಯವರ ವಾದ.

ಚಂದ್ರಪ್ರಭ ಪುರಾಣದಲ್ಲಿ ಬರುವ ಎಕ್ಕಲಗಾನ (ಏಕಲಗಾನ ಅಂದರೆ ಒಬ್ಬನ ಗಾನ) ಎನ್ನುವ ಪರಿಭಾಷೆ ಹರಿದಾಸನನ್ನೇ ಹೇಳುತ್ತದೆ ಎನ್ನುವುದು ಅವರ ಅಭಿಪ್ರಾಯ.

ಯಕ್ಷಗಾನದ ಭಾಗವತರು ಮೂಲತಃ ಹರಿದಾಸರೇ ಆಗಿದ್ದವರು. ಯಕ್ಷಗಾನ ಪ್ರಕಾರಕ್ಕೆ ದಶಾವತಾರ ಎಂಬುದು ನಾಮಾಂತರ. ಹರಿದಾಸರ ಶಿರೋಭೂಷಣವನ್ನೇ

ಯಕ್ಷಗಾನದ ಭಾಗವತನೂ ಧರಿಸುತ್ತಾನೆ. ಈತನೇ ಕಥೆಯ ಸೂತ್ರಧಾರಿ. ಮೇಲಾಗಿ ಯಕ್ಷಗಾನದಲ್ಲಿ ಭಾಗವತನೆ ಮೊದಲ ವೇಷದಾರಿ. ನಾಯಕ ಪಾತ್ರಧಾರಿ ಅಲ್ಲಿ ಎರಡನೇ ವೇಷ.

ಇನ್ನು ಯಕ್ಷಗಾನ ರಂಗಭೂಮಿಯಲ್ಲಿ ಬಳಸುವ 'ಸ್ವಾಮಿ ಬಂದ, ದೇವರ ದೇವ ಬಂದ, ಚೌಕಿಯಲ್ಲಿ ಹೇಳುವ ರಾಮಕೃಷ್ಣರು ಮನೆಗೆ ಬಂದರು ಬಾಗಿಲು ತೆರೆಯಿರೋ' ಮತ್ತಿತರ ಹಾಡುಗಳಂತೂ ದಾಸರ ಕೃತಿಗಳೇ ಆಗಿವೆ.

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಶ್ರೀ ಅಚ್ಯುತದಾಸ್‌ಜೀಯವರನ್ನು ಮೂರು ಬಾರಿ ಭೇಟಿ ಮಾಡಿರುತ್ತೇನೆ. ಅಧ್ಯಯನವನ್ನು ಪ್ರಾರಂಭಿಸುವ ಮೊದಲು ಅಧ್ಯಯನದ ವಿಷಯದ ಆಯ್ಕೆಯ ಸಂದರ್ಭದಲ್ಲಿ ಮಂಗಳೂರಿಗೆ ಸಮೀಪದ ಕಿನ್ನಿಗೋಳಿಯಲ್ಲಿ ಅಧ್ಯಯನವನ್ನು ಪ್ರಾರಂಭಿಸಿದ ಬಳಿಕ 17-12-2009ರಂದು ಬೆಂಗಳೂರಿನ ಅವರ ಸ್ವಗೃಹದಲ್ಲಿ ಹಾಗೂ ಇತ್ತೀಚೆಗೆ (16-11-2010) ಮತ್ತೊಮ್ಮೆ ಬೆಂಗಳೂರಿನ ಅವರ ಸ್ವಗೃಹದಲ್ಲಿ ಎರಡನೇಯ ಬಾರಿ ಅವರನ್ನು ಭೇಟಿಯಾದಾಗ ಅವರು ಪ್ರಸ್ತಾಪಿಸಿದ ಅಂಶಗಳು ಇಂತಿವೆ.

ಅ. ದಾಸಸಾಹಿತ್ಯವನ್ನು ಅಧ್ಯಯನ ಮಾಡುವಾಗ ಆಧ್ಯಾತ್ಮಿಕ ದೃಷ್ಟಿಕೋನದಿಂದ ಮಾತ್ರ ನೋಡದೆ, ಸಮಾಜದಲ್ಲಿ ಮೌಲ್ಯವರ್ಧನೆಗೆ ಅವರಿತ್ತಿರುವ ಸಂದೇಶವನ್ನು (ಉದಾಹರಣೆಗೆ: 'ಹಸಿದು ಬಂದವರಿಗೆ ಅಶನವೀಯಲು ಬೇಕು,'
'ವಿಷವನುಣಿಸಿದವಗೆ ಷಡ್ರಸವನುಣಿಸಲುಬೇಕು',
'ಕುಲಕುಲವೆಂದು ಹೊಡೆದಾಡದಿರಿ........)
ಕೂಲಂಕುಶವಾಗಿ ಗಮನಿಸಬೇಕು.

ಆ. ಭಕ್ತಿಯು ಡಾಂಭಿಕತೆಗೆ ವಿರೋಧಿಯಾದುದು, ಎಲ್ಲಿ ಸರಳತೆಯಿರುತ್ತದೋ, ಅಲ್ಲಿ ಭಕ್ತಿಯ ಬೆಳವಣಿಗೆ ಸುಲಭ ಸಾಧ್ಯ. ಹಾಗಾಗಿ ಹರಿಕಥೆ ಗ್ರಾಮೀಣ ಮುಗ್ಧ ಜನರನ್ನು ಬೇಗ ತಟ್ಟುತ್ತದೆ. ಮುಟ್ಟುತ್ತದೆ.

ಇ. ಯಕ್ಷಗಾನಕ್ಕೂ ಕಥಾ ಕೀರ್ತನ ಕಲೆಯೇ ಮೂಲ.

**ಮೂರನೇಯ ಬಾರಿ ಭೇಟಿಯಾದಾಗ ಅವರು ವಿಶದೀಕರಿಸಿದ ಅಂಶಗಳು ಇಂತಿವೆ:**

ಅ. ಮಾನವನು ಸಾರ್ಥಕ ಬಾಳ್ವೆಯನ್ನು ನಡೆಸಬೇಕಾದರೆ ದೈವೀಪ್ರಜ್ಞೆ ಮತ್ತು ಧರ್ಮಪ್ರಜ್ಞೆ ಎರಡೂ ಅಗತ್ಯ. ಇವೆರಡೂವುಳ್ಳ ಮನುಷ್ಯರು ಹೆಚ್ಚಿದಲ್ಲಿ ಸಮಾಜದ ಸ್ವಾಸ್ಥ್ಯವೂ ಹೆಚ್ಚುತ್ತದೆ. ನಮ್ಮ ಸಂಸ್ಕೃತಿಯಲ್ಲಿ ಮಾನವೀಯ ಮೌಲ್ಯಗಳೆಲ್ಲ ದೈವೀ ಪ್ರಜ್ಞೆಯಿಂದ ರೂಢಿಸಲ್ಪಟ್ಟಿವೆ. ಅದನ್ನು ದಾಸರು, ಶರಣರು ಆಡುಭಾಷೆಯಲ್ಲಿ ಸರಳವಾಗಿ, ಸುಂದರವಾಗಿ ಜನ ಮಾನಸಕ್ಕೆ ಮುಟ್ಟಿಸುವಂತಹ ಕೆಲಸ ಮಾಡಿದರು.

ಆ. ದುಃಖದ ಭರದಲ್ಲಿ ಮನುಷ್ಯ ದೈವೀ ಚಿಂತನೆಗೆ ತೊಡಗಬಹುದು. ಆದರೆ ಸುಖದ ಭರದಲ್ಲಿರುವಾಗಲೂ ದೈವೀ ಚಿಂತನೆ ಮರೆಯದಂತೆ ಮಾಡಿದಲ್ಲಿ ಅದರಿಂದ

ಸಮಾಜಕ್ಕೆ ಕಲ್ಯಾಣವಾಗುತ್ತದೆ.

ಇ. ಮಹಾರಾಷ್ಟ್ರದಿಂದ ಭಕ್ತಿಪಂಥವು ಕರ್ನಾಟಕಕ್ಕೆ ಬಂತು ಎಂಬುವುದು ಸರಿಯಲ್ಲ. ಶ್ರೀ ಮದ್ಭಾಗವತದಲ್ಲಿ.

ಉಲ್ಲೇಖವೇ ಇದೆ. 'ಉತ್ಪನ್ನಾ ದ್ರವಿಡೇ ಚಾಹಂ, ವೃದ್ಧಿಂಕರ್ಣಾಟಕೇ ಗತಾ' ದಕ್ಷಿಣ ಭಾರತವೇ ಭಕ್ತಿಯ ತವರು. ಶ್ರೀ ಮನ್ಮಧ್ವಾಚಾರ್ಯರಿಂದ ಭಕ್ತಿ ಪಂಥದ ಬೆಳವಣಿಗೆ ಸಾಧ್ಯವಾಯಿತು.

ಊ. 'ಕಥಾಕೀರ್ತನ' ಮಾಧ್ಯಮ ಅತ್ಯಂತ ಪ್ರಭಾವೀ ಮಾಧ್ಯಮ. ಒಬ್ಬ ಸಂಗೀತಗಾರ ಚೆನ್ನಾಗಿ ಗಾಯನವನ್ನು ಮಾಡಿದರೆ ಶ್ರೋತ್ರಗಳು ಬಂದು ಕೈಕುಲುಕುತ್ತಾರೆ. ಆದರೆ ಕೀರ್ತನಕಾರ ಚೆನ್ನಾಗಿ ಹರಿಕಥೆ ಮಾಡಿದರೆ ಬಂದು ಪಾದ ಮುಟ್ಟಿ ನಮಸ್ಕರಿಸುತ್ತಾರೆ. ಅಂತಹ ಪರಿಣಾಮ ಹರಿಕಥಾ ಮಾಧ್ಯಮದಿಂದ ಸಾಧ್ಯ. ಆದರೆ ಹಾಗಾಗಬೇಕಾದರೆ ಕೀರ್ತನಕಾರನಲ್ಲಿಯೂ ಅಂತಹ ಸಾಧನೆ ಬೇಕು, ಸರಳತೆ ಬೇಕು, ಮೊದಲು ಅವನು ಭಕ್ತನಾಗಿರಬೇಕು.

ಋ. ಕೇವಲ ಭಕ್ತಿ ಮಾತ್ರವಲ್ಲ ಜೀವನ ಮೌಲ್ಯಗಳು ಜನಮಾನಸದಲ್ಲಿ ಬೇರೂರುವಂತೆ ಮಾಡಲು ಹರಿಕಥೆ (ಕಥಾ ಕೀರ್ತನೆ) ಒಂದು ಪ್ರಬಲ ಮಾಧ್ಯಮವಾಗಿದೆ. ಕಾಲೇಜುಗಳಲ್ಲಿ ಹರಿಕಥೆ ಮಾಡಲು ಹೋದಾಗ ಕೇವಲ ಹಿಂದೂ ಧರ್ಮಕ್ಕೆ ಸೇರಿದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಮಾತ್ರವಲ್ಲ ಅನ್ಯಮತೀಯರು ಕೂಡಾ ಕಥಾಶ್ರವಣದಲ್ಲಿ ತೋರುವ ಆಸ್ಥೆಯೇ ಇದಕ್ಕೆ ಸಾಕ್ಷಿ.

ಎ. ಭಕ್ತಿಯ ಪ್ರಚಾರದಿಂದ ಸಮಷ್ಟಿಯಾಗಿ ಹೆಚ್ಚಿನ ಪರಿವರ್ತನೆ ಆಗದೇ ಇದ್ದರು. ವ್ಯಷ್ಟಿಯಾಗಿ ಅನೇಕರ ಮೇಲೆ ಪ್ರಭಾವ ಬೀರಿದ್ದಿದೆ. ಇದಕ್ಕೆ ಉದಾಹರಣೆ ಚಿನ್ಮಯ ಮಿಷನ್ ಬೆಂಗಳೂರು ಇದರ ಪ್ರಸ್ತುತ ಅಧ್ಯಕ್ಷರಾಗಿರುವ ಸ್ವಾಮಿ ಬ್ರಹ್ಮಾನಂದಜೀಯವರು. (ಸ್ವಾಮಿ ಬ್ರಹ್ಮಾನಂದಜೀ ಪೂರ್ವಾಶ್ರಮದಲ್ಲಿ ಬೆಳಗಾಂನಲ್ಲಿ ಖಾಸಗಿ ಸಾರಿಗೆ ಸಂಸ್ಥೆಯೊಂದರಲ್ಲಿ ಉದ್ಯೋಗಿಯಾಗಿದ್ದರು ಸಂತ ಭದ್ರಗಿರಿ ಅಚ್ಯುತದಾಸರ ಹರಿಕಥೆಯನ್ನು ಕೇಳಿ ಪ್ರಭಾವಿತರಾಗಿ ಭೌತಿಕ ಜೀವನದ ನಶ್ವರತೆಯನ್ನು ಮನಗಂಡು, ಆಧ್ಯಾತ್ಮಿಕ ಜೀವನ ನಡೆಸಲು ಸಂಕಲ್ಪಿಸಿದ್ದರು ಮುಂದೆ ಚಿನ್ಮಯಾ ಮಿಷನ್ ಸೇರಿ ಸಂನ್ಯಾಸ ಸ್ವೀಕರಿಸಿದರು. ಇಂದು ತಮ್ಮ ಪ್ರವಚನಗಳಿಂದ, ಸೇವಾಕಾರ್ಯಗಳಿಂದ ನಾಡಿನಾದ್ಯಂತ ಮನೆ ಮಾತಾಗಿದ್ದಾರೆ.)

## ಕೀರ್ತನಾಚಾರ್ಯ ಶ್ರೀ ಲಕ್ಷ್ಮಣದಾಸ ವೇಲಣಕರ್



ಹರಿಕಥಾ ವಿದ್ವಾಂಸರಾದ ಶ್ರೀ ಲಕ್ಷ್ಮಣದಾಸ ವೇಲಣಕರ್‌ರವರು ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಹತ್ಯಡ್ಕ ಗ್ರಾಮದಲ್ಲಿ 1939ರಲ್ಲಿ ಜನಿಸಿದರು. ವೇದ, ಸಂಸ್ಕೃತ, ಜ್ಯೋತಿಷ್ಯ ಶಾಸ್ತ್ರಗಳನ್ನು ಅಭ್ಯಸಿಸಿ ಕಥಾಕೀರ್ತನ ಕಲಾಭ್ಯಾಸಕ್ಕೆ ಉತ್ತಮ ಅಡಿಪಾಯವನ್ನು ಒದಗಿಸಿಕೊಂಡರು ಮುಂದೆ ಭದ್ರಗಿರಿ ಅಚ್ಯುತ್‌ದಾಸ್‌ಜೀ ಹಾಗೂ ಸದ್ಗುರು ಕೇಶವದಾಸ್‌ಜೀಯವರ ಆತ್ಮೀಯ ಶಿಷ್ಯರಾಗಿ ಕಥಾಕೀರ್ತನ ಕಲಾಭ್ಯಾಸದಲ್ಲಿ ಉನ್ನತ ಸಾಧನೆಗೈದರು. 1960ರಿಂದ ಬೆಂಗಳೂರಿನಲ್ಲಿ ನೆಲೆಸಿ ರಾಜ್ಯದ ಒಳಗೆ ಹಾಗೂ ಹೊರಗೆ ಅಸಂಖ್ಯ ಕಥಾಕೀರ್ತನ ಕಾರ್ಯಕ್ರಮಗಳನ್ನು ನೀಡಿದ್ದಾರೆ. ದಾಸಾಶ್ರಮ ಕೀರ್ತನ ಮಹಾವಿದ್ಯಾಲಯದ ಪ್ರಾಚಾರ್ಯರಾಗಿ, ಅದರ ಕನ್ನಡ ಮಾಸಪತ್ರಿಕೆಯಾದ 'ದಾಸವಾಣಿ' ಇದರ ಸಂಪಾದಕರಾಗಿ, ಕರ್ನಾಟಕ ಕೀರ್ತನ ಕಲಾ ಪರಿಷತ್ತಿನ ಕಾರ್ಯದರ್ಶಿಯಾಗಿ ಕಥಾಕೀರ್ತನಕಲೆಯ ಪ್ರಸಾರಕ್ಕಾಗಿ ಅವಿರತ ಶ್ರಮಿಸಿದ್ದಾರೆ. ಹಿಂದಿ, ಮರಾಠಿ, ಕನ್ನಡ ಮೂರು ಭಾಷೆಗಳಲ್ಲಿ ಹರಿಕಥೆಯನ್ನು ಮಾಡುವ ವಿಶಿಷ್ಟ ಸಾಮರ್ಥ್ಯ ಅವರದ್ದಾಗಿದೆ. 'ಕಥಾಕೀರ್ತನಕಲೆ' ಎನ್ನುವ ಹರಿಕಥೆಯ ಕುರಿತಾದ ವಿಮರ್ಶಾತ್ಮಕ ಗ್ರಂಥವನ್ನೂ ಕೀರ್ತನಾಭ್ಯಾಸಿಗಳಿಗೆ ಅನುಕೂಲವಾಗುವಂತೆ 'ಕಥಾ ಕೀರ್ತನ ಸಿರಿ' ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ. ಅಲ್ಲದೆ ಗೋರಖ್‌ಪುರ ಪ್ರಕಾಶನದ ಅನೇಕ ಧಾರ್ಮಿಕ, ಆಧ್ಯಾತ್ಮಿಕ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಇವರನ್ನು ಅಧ್ಯಯನದ ಅವಧಿಯಲ್ಲಿ ನಾಲ್ಕು ಬಾರಿ ಭೇಟಿಯಾಗಿದ್ದೆ. ಈ ಅಧ್ಯಾಯದಲ್ಲಿ ಪ್ರಸ್ತಾಪಿತವಾಗಿರುವ ವಿಚಾರದ ಕುರಿತಾಗಿ ಅವರನ್ನು ತಾರೀಕು 27-6-2010 ರಂದು ಬೆಂಗಳೂರಿನ ಅವರ ಸ್ವಗೃಹದಲ್ಲಿ ಭೇಟಿಮಾಡಿದ್ದೆ, ಅವರ ಅಭಿಪ್ರಾಯ, ಅನುಭವಗಳು ಇಂತಿವೆ:

ಅ. ಕಥಾ ಕೀರ್ತನ ಕಲೆಯ ಪ್ರಧಾನ ಉದ್ದೇಶವೇ ಭಕ್ತಿ ಸಿದ್ಧಾಂತದ ಪ್ರಚಾರ. ಮರಂಜನೆಯ ಜೊತೆಗೆ ಮನಃ ಪರಿವರ್ತನೆ, ನೈತಿಕತೆಯ ಉದ್ದೀಪನವನ್ನು ಸಾಧಿಸುವ ವಿಶಿಷ್ಟ ಕಲೆ ಕಥಾ ಕೀರ್ತನ.

ಆ. ಭಕ್ತಿ ಸಿದ್ಧಾಂತದ ಪ್ರಚಾರದಿಂದ ಸಮಾಜದಲ್ಲಿ ಪರಿವರ್ತನೆ ಆಗುತ್ತದೆ ಎನ್ನುವುದು ಬರಿಯ ಅಲಂಕಾರಿಕ ಮಾತು. ವ್ಯಕ್ತಿಯಲ್ಲಿ ಪರಿವರ್ತನೆ ಆಗಲು ಸಾಧ್ಯ (ಸಂತ ಭದ್ರಗಿರಿ ಅಚ್ಯುತದಾಸರ ಹರಿಕಥೆ ಕೇಳಿ ಚಿನ್ಮಯಾ ಮಿಷನ್‌ನ ಸ್ವಾಮೀಜಿಗಳಾದ ಸ್ವಾಮಿ ಬ್ರಹ್ಮಾನಂದರ ಜೀವನದಲ್ಲಿ ಆದಂತೆ.) ಓರ್ವ ವ್ಯಕ್ತಿಯಲ್ಲಿ ಸದ್‌ಪರಿವರ್ತನೆ ಆದರೆ ಭಕ್ತಿ ಪ್ರಸಾರದ ಕಾರ್ಯ ಅಷ್ಟರ ಮಟ್ಟಿಗೆ ಸಾರ್ಥಕವಾದಂತೆ. ಸಮಾಜಕ್ಕೆ ಅದರಿಂದ ಒಳಿತಾಗುವುದು ಸಹಜ ಏಕೆಂದರೆ ಈ ಓರ್ವ ಒಂದು ವ್ಯಕ್ತಿಯಿಂದ

ಇನ್ನು ಹತ್ತಾರು ಮಂದಿ ಭಕ್ತಿಯ ಬೆಳಕು ಕಾಣಲು ಸಾಧ್ಯ.

ಇ. ಹರಿದಾಸರು ಹಾಗೂ ಇತರ ಸಂತರ ಉದ್ದೇಶ ಭೌತಿಕ ಪರಿವರ್ತನೆಯಲ್ಲ. ವಿಚಾರದ ಪರಿವರ್ತನೆಗೆ ಇಂಬುಗೊಟ್ಟರು ಹರಿದಾಸರು. ವಿಚಾರದ ಪರಿವರ್ತನೆಯಿಂದ ಕ್ರಮೇಣ ಸರ್ವಾಂಗೀಣ ಪರಿವರ್ತನೆ ಸಾಧ್ಯ.

ಈ. ಇಂದು ಇಸ್ಕಾನ್‌ನಂತಹ ಸಂಸ್ಥೆಯು ಭಕ್ತಿಸಿದ್ಧಾಂತದ ಪ್ರಚಾರದ ಜೊತೆಯಲ್ಲಿ ನೇರವಾಗಿ ಸಮಾಜ ಸೇವೆಗೆ ಇಳಿದಿದೆ (ಬಿಸಿಯೂಟ ಇತ್ಯಾದಿ ಯೋಜನೆಗಳ ಮೂಲಕ).

## ಹರಿದಾಸ ಪೊಳಲಿ ಜಗದೀಶದಾಸರು



1974ರಿಂದ ಆರಂಭಿಸಿ ಇಂದಿನವರೆಗೂ ಹರಿಕಥೆ, ಭಜನೆಗಾಗಿಯೇ ತಮ್ಮ ಜೀವನವನ್ನು ಮುಡಿಪಾಗಿರಿಸಿದ ಶ್ರೇಷ್ಠ ಹರಿದಾಸರು ಶ್ರೀ ಪೊಳಲಿ ಜಗದೀಶದಾಸರು 1977ರಿಂದ ಸತತ ಇಪ್ಪತ್ತು ವರ್ಷಗಳ ಕಾಲ ಸಂತ ಭದ್ರಗಿರಿ ಅಚ್ಯುತದಾಸರೊಂದಿಗಿದ್ದು ಅವರ ಶಿಷ್ಯರಾಗಿ ದಾಸಸಾಹಿತ್ಯದ ಕೃತಿ ಹಾಗೂ ಕಥಾಕೀರ್ತನ ಕಲಾಭ್ಯಾಸ ನಡೆಸಿ ಈ ಕಲೆಯ ಸಿದ್ಧಿ ಪಡೆದವರು. ಕರ್ನಾಟಕದಾದ್ಯಂತ ಮಾತ್ರವಲ್ಲದೆ ಹೊರರಾಜ್ಯಗಳಲ್ಲಿಯೂ ಅಸಂಖ್ಯಾತ ಹರಿಕಥಾ ಕಾರ್ಯಕ್ರಮಗಳನ್ನು ನೀಡಿರುತ್ತಾರೆ. ಜಗದೀಶ ವಿಠಲ ಎಂಬ ನಾಮಾಂಕಿತದಿಂದ ಸುಮಾರು ಐವತ್ತು ಕೀರ್ತನೆಗಳನ್ನು ರಚಿಸಿರುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಮೂಡುಮಾರ್ನಾಡು ಎಂಬಲ್ಲಿ ನೆಲೆಸಿದ್ದು, ಶ್ರೀ ಪುರಂದರದಾಸ ಸೇವಾಶ್ರಮ (ಪ್ರಕಾಶನ) ಎನ್ನುವ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೂಲಕ ಕಥಾ ಕೀರ್ತನ ಕಲಾಭ್ಯಾಸಿಗಳಿಗೆ ಉಪಯುಕ್ತವಾದ ಗ್ರಂಥಗಳನ್ನು, ಸಿಡಿ, ಕ್ಯಾಸೆಟ್‌ಗಳನ್ನು ಪ್ರಕಟಿಸಿ ಕೀರ್ತನಾ ಸೇವೆಯನ್ನು ನಡೆಸುತ್ತಿದ್ದಾರೆ. ಅಧ್ಯಯನದ ಅವಧಿಯಲ್ಲಿ ಅವರನ್ನು ಹಲವಾರು ಬಾರಿ ಭೇಟಿಯಾಗಿದ್ದರೂ ತಾ.7–7–2010 ರಂದು ಅಧ್ಯಯನಮ ಉಲ್ಲೇಖಿಸಿರುವ ವಿಷಯದ ಕುರಿತಾಗಿ ಅವರ ಅಭಿಪ್ರಾಯ ಅನುಭವ ಇಂತಿವೆ:

ಅ. ಕಥಾ ಕೀರ್ತನೆಯ, ಭಕ್ತಿ ಸಿದ್ಧಾಂತ ಪ್ರಚಾರದ ಮೂಲ ಉದ್ದೇಶ ನೈತಿಕತೆಯನ್ನು ಪ್ರೇರೇಪಿಸುವುದು.

ಆ. ಕೇವಲ ಭಕ್ತಿ ಮಾತ್ರವಲ್ಲ ಮೌಲ್ಯಗಳ ಪ್ರತಿಪಾದನೆ, ಮಾನವೀಯ ಸಂಬಂಧಗಳ ಉದ್ಧರಣ.

ಇ. ಇದು ಸಾಧ್ಯವಾಗಬೇಕಾದರೆ ಅರ್ವಾಚೀನ ಕಾಲದಲ್ಲಿ ಇಂದಿನ ಸಾಮಾಜಿಕ ಸ್ಥಿತಿಯಲ್ಲಿ ಯಾವುದನ್ನು ಎಲ್ಲರೂ ಅನುಸರಿಸಲು ಸಾಧ್ಯವಾಗುತ್ತದೋ ಅಂತಹ ಮೌಲ್ಯಗಳನ್ನೇ ಪ್ರತಿಪಾದಿಸುವುದು.

ಈ. ಧಾರ್ಮಿಕ ಮುಂದಾಳುಗಳಾಗಲೀ, ಕಲಾವಿದರಾಗಲೀ ಒಡೆಯುವ ಕೆಲಸ ಮಾಡದೆ ಜೋಡಿಸುವ ಕೆಲಸದಲ್ಲಿ ಪ್ರವೃತ್ತರಾಗಬೇಕು.

ಉ. ಪ್ರತಿಯೊಂದು ಮನೆಯಲ್ಲಿ ಪ್ರತಿನಿತ್ಯ ಭಜನೆ ಹಾಡುವ ಪ್ರವೃತ್ತಿಯನ್ನು ಬೆಳೆಸಬೇಕು ಇದರಿಂದ ಸಮಾಜದಲ್ಲಿ ಪರಿವರ್ತನೆ ಸಾಧ್ಯ.

## ಆಚಾರ್ಯ ಡಾ. ಕೆ. ಶ್ರೀಧರದಾಸ್‌ಜೀ.



ಆಚಾರ್ಯ ಡಾ.ಕೆ.ಶ್ರೀಧರದಾಸ್‌ಜೀಯವರದು ಬಹುಮುಖ ಪ್ರತಿಭೆಯ ಅಪರೂಪದ ವ್ಯಕ್ತಿತ್ವ. ಉಡುಪಿಗೆ ಸಮೀಪದ ಬಾರ್ಕೂರಿನ ಅವರ್ಸೆ ಗ್ರಾಮದಲ್ಲಿ ಜನಿಸಿದ ಶ್ರೀ ಯುತರು ಎಳವೆಯಲ್ಲೇ ಶ್ರೀ ಕ್ಷೇತ್ರ ವರದಹಳ್ಳಿಯ ಭಗವಾನ್ ಶ್ರೀಧರಸ್ವಾಮಿಗಳ ಕೃಪೆಗೆ ಪಾತ್ರರಾದರು. ಬಳಿಕ ಸದ್ಗುರು ಸಂತ ಭದ್ರಗಿರಿ ಕೇಶವದಾಸ್‌ಜೀ ಹಾಗೂ ಸಂತ ಭದ್ರಗಿರಿ ಅಚ್ಯುತದಾಸರ ಶಿಷ್ಯತ್ವವನ್ನು ಸ್ವೀಕರಿಸಿ ಕಥಾಕೀರ್ತನಾಕಲೆಯಲ್ಲಿ ವಿಶೇಷ ಸಾಧನೆ ಗೈದರು. ಮಲ್ಲಾಡಿಹಳ್ಳಿ ಶ್ರೀ ರಾಘವೇಂದ್ರ ಸ್ವಾಮಿಗಳಿಂದ ಸ್ವಯಂ ವೈದ್ಯಕೀಯ ಮತ್ತು ಪತಂಜಲಿ ಯೋಗ ವಿದ್ಯೆಯ ಶಿಕ್ಷಣವನ್ನು ಪಡೆದರು. ಇದಲ್ಲದೆ ಶಬ್ದಗತಿ ಪ್ರಾಣಾಯಾಮ, ಯೋಗ, ವಾಸ್ತು ಶಾಸ್ತ್ರ, ಶಿಲ್ಪಶಾಸ್ತ್ರದಲ್ಲೂ ಪ್ರಾವೀಣ್ಯತೆಯನ್ನು ಪಡೆದಿದ್ದಾರೆ.

ಪ್ರವಚನ, ಕೀರ್ತನಗಳ ಮೂಲಕ ಭಕ್ತಿ ಜ್ಞಾನ ಪ್ರಸಾರಕ್ಕಾಗಿ ದೇಶದಾದ್ಯಂತ ಪರ್ಯಟನೆಗೈದಿದ್ದಾರೆ. ಯೋಗ ಆಯುರ್ವೇದದಲ್ಲಿ ಸಿದ್ಧಿಯನ್ನು ಪಡೆದು ಸುಮಾರು 9 ಸಾವಿರ ಜನರಿಗೆ ತೊನ್ನು ರೋಗಕ್ಕೆ ಚಿಕಿತ್ಸೆಯನ್ನು ನೀಡಿ ಗುಣಪಡಿಸಿದ್ದಾರೆ. 'ದಾಸಶ್ರೀಧರನುತ' ಎನ್ನುವ ಅಂಕಿತದಿಂದ ಸುಮಾರು ಮೂರು ಸಾವಿರ ಯೋಗಜ್ಞಾನ ವಚನಗಳನ್ನೂ ಅನೇಕ ಕೀರ್ತನೆಗಳನ್ನು, ಯೋಗ ತತ್ವಗೀತೆಗಳನ್ನು, ಸುಪ್ರಭಾತಗಳನ್ನು ರಚಿಸಿದ್ದಾರೆ. ಪ್ರಸ್ತುತ ಕುಂದಾಪುರ ತಾಲೂಕಿನ ಕುಂಭಾಶಿಯಲ್ಲಿ ಆಯುರ್ವೇದ ಯೋಗಾಶ್ರಮವನ್ನು ಸ್ಥಾಪಿಸಿ, ಅಲ್ಲಿ ನೆಲೆಸಿ, ಚಿಕಿತ್ಸೆಗೆಂದು ಬರುವ ರೋಗಿಗಳಿಗೆ ಆಯುರ್ವೇದ, ಯೋಗ, ಭಕ್ತಿ, ಭಜನೆಗಳನ್ನೇ ಸಾಧನವನ್ನಾಗಿ ಬಳಸಿಕೊಂಡು ಚಿಕಿತ್ಸೆ ನೀಡುತ್ತಾ ತನ್ನದೇ ಆದ ರೀತಿಯಲ್ಲಿ ಸಮಾಜದ ಸೇವೆ ನಡೆಸುತ್ತಿದ್ದಾರೆ.

ಇವರನ್ನು ಜುಲೈ 2010ರಲ್ಲಿ ಅವರ ಕುಂಭಾಶಿಯಲ್ಲಿರುವ ಅವರ ಆಶ್ರಮದಲ್ಲಿ ಭೇಟಿಯಾಗಿ ಸಂದರ್ಶಿಸಿದೆ ಅವರ ಅನುಭವಗಳು ಇಂತಿವೆ:

ಅ. ಭಕ್ತಿಸಿದ್ಧಾಂತದ ಅನುಷ್ಠಾನ ಮತ್ತು ಪ್ರಚಾರದಿಂದ ಪರಿವರ್ತನೆ ಸಾಧ್ಯ ಅನ್ನುವುದಕ್ಕೆ ಗುರುಗಳಾದ ಸದ್ಗುರು ಕೇಶವದಾಸರೇ ಸಾಕ್ಷಿ. ಅವರೊಮ್ಮೆ ರಶ್ಯಕ್ಕೆ ಹೋಗಿದ್ದಾಗ

(ಕಮ್ಯೂನಿಸ್ಟ್ ಪ್ರಾಬಲ್ಯದಿಂದಾಗಿ ನಾಸ್ತಿಕತೆಯೇ ಅಲ್ಲಿ ತಾಂಡವಾಡುತ್ತಿತ್ತು) ದೇವರು ಇದ್ದಾನೆ ಎನ್ನುವುದನ್ನು ಸಿದ್ಧ ಮಾಡಿ ತೋರಿಸಬೇಕು ಎಂದು ಅವರಿಗೆ ಕೆಲವು ಆ ದೇಶದ ನಾಗರಿಕರು ಸವಾಲು ಹಾಕಿದರು. ಕೇಶವದಾಸರು ಒಪ್ಪಿಕೊಂಡರು. ಒಂದು ವಿಶಾಲಾದ ಸಭಾಂಗಣದಲ್ಲಿ ಶ್ರೋತ್ರಗಳು ಸೇರಿದ್ದಾರೆ. ಸಂತ ಕೇಶವದಾಸರು ಹೇಳಿದರು. "ಎಲ್ಲರೂ ಕಣ್ಣುಮುಚ್ಚಿಕೊಳ್ಳಿ. ಇಲ್ಲಿ ಏನಾಗುತ್ತದೆಯೋ ಅದನ್ನು ಮನಸ್ಸಿಟ್ಟು ಕೇಳಿ. ಆದರೆ ಯಾರೂ ಕತ್ತು ಅಲುಗಾಡಿಸಬಾರದು, ಕಾಲಿನಿಂದ ಹೆಜ್ಜೆ ಹಾಕಬಾರದು, ಚಪ್ಪಾಳೆ, ಚಿಟಕಿ ಹೊಡೆಯಬಾರದು, ಆನಂದ ಬಾಷ್ಪ ಸುರಿಸಬಾರದು, ಒಂದು ವೇಳೆ ಇದನ್ನೆಲ್ಲಾ ನೀವು ಮಾಡಿದಿರಿ ಎಂತಾದರೆ ದೇವರ ಅಸ್ತಿತ್ವವನ್ನು ನೀವು ಒಪ್ಪಿಕೊಳ್ಳಲೇಬೇಕು. ದೇವರಿಗೆ ಶರಣಾಗಲೇಬೇಕು." ಸದ್ಗುರು ಕೇಶವದಾಸರು ನಾಮ ಸಂಕೀರ್ತನೆಯನ್ನು ಪ್ರಾರಂಭಿಸಿದರು. ವಿಠಲ ನಾಮಘೋಷವು ಸಭಾಂಗಣವನ್ನೆಲ್ಲಾ ತುಂಬಿಕೊಳ್ಳುತ್ತಿದ್ದಂತೆ ಕುಳಿತಿದ್ದವರು ಓಲಾಡತೊಡಗಿದರು ಹಲವರು ಎದ್ದು ನರ್ತಿಸಲಾರಂಭಿಸಿದರು. ಕೆಲವರ ಕಣ್ಣುಗಳಲ್ಲಿ ಆನಂದಬಾಷ್ಪದ  ಕೋಡಿ ಹರಿಯತೊಡಗಿತು. ದಿವ್ಯ ಆನಂದವನ್ನು ಅವರೆಲ್ಲಾ ಅನುಭವಿಸುತ್ತಿದ್ದರು. ನಾಮ ಸಂಕೀರ್ತನೆ ಮುಗಿದ ಬಳಿಕ ಅವರೆಲ್ಲಾ ಕೇಶದಾಸರನ್ನು ಸುತ್ತುವರಿದರು. ಇದು ಹೇಗೆ ಸಾಧ್ಯ ಎಂದು ಕೇಳಿದರು. ಆಗ ಕೇಶವದಾಸರು ಹೇಳಿದರು 'ದೇವರನ್ನು ನಾವು ಪಂಚೇಂದ್ರಿಯಗಳಿಂದ ಗ್ರಹಿಸಲು ಸಾಧ್ಯವಿಲ್ಲ. ಮದ್ಭಕ್ತಾಃ ಯತ್ರಗಾಯಂತಿ ತತ್ರ ತಿಷ್ಠಾಮಿ ನಾರದ ಎಂದು ಭಗವಂತನೇ ಹೇಳಿದಂತೆ ಎಲ್ಲಿ ಅವನ ಭಕ್ತರು ಭಕ್ತಿಯಿಂದ ಆತನನ್ನು ಕೀರ್ತಿಸುತ್ತಾರೋ, ಭಜಿಸುತ್ತಾರೋ ಅಲ್ಲಿ ಅವನು ಪ್ರಕಟನಾಗುತ್ತಾನೆ. ಇಲ್ಲಿ ನಿಮ್ಮೊಳಗಿರುವ ಭಗವಂತನು ನಿಮ್ಮ ಹೃದಯದಲ್ಲಿ ಆನಂದದ ರೂಪದಲ್ಲಿ ಪ್ರಕಟನಾಗಿದ್ದಾನೆ' ಎಂದರು.

ಬಹುಮಂದಿ ಅಂದಿನಿಂದಲೇ ಸದ್ಗುರು ಕೇಶವದಾಸರ ಶಿಷ್ಯರಾದರು.

ಆ. ಭಕ್ತಿಯು ಎಲ್ಲರನ್ನೂ ಬೆಸೆಯುತ್ತದೆ ಕನಕಗಿರಿಯಲ್ಲಿ ಶ್ರಾವಣಮಾಸದಲ್ಲಿ ಪ್ರತಿನಿತ್ಯ ಭಗವಾನ್ ಮೌನೇಶ್ವರರ ಪುರಾಣ ಪ್ರವಚನ 12 ವರ್ಷಗಳ ಪರ್ಯಂತ ನಿರಂತರ ಮಾಡುತ್ತಿದ್ದೆ. ಆ ಸಂದರ್ಭದಲ್ಲಿ ಹುಸೇನಮ್ಮ ಎಂಬ ಒಬ್ಬಾಕೆ ಮುಸಲ್ಮಾನ ಮಹಿಳೆ ಪ್ರತಿನಿತ್ಯ ಸತ್ಸಂಗದಲ್ಲಿ ಬಂದು ಪಾಲ್ಗೊಳ್ಳುತ್ತಿದ್ದಳು 12 ವರ್ಷವೂ ಆಕೆ ಶ್ರದ್ಧೆಯಿಂದ ಶ್ರವಣ ಮಾಡುತ್ತಿದ್ದಳು.

ಇ. 1992-93ರಲ್ಲಿ ಗುಲ್ಬರ್ಗಾ ಜಿಲ್ಲೆಯ ತಿಂಥಿಣಿಯಲ್ಲಿ ಒಂದು ತಿಂಗಳ ಕಾಲ ಶ್ರೀ ಮೌನೇಶ್ವರ ಪುರಾಣ ಪ್ರವಚನ ಮಾಡುತ್ತಿದ್ದೆ. ಆ ಸಂದರ್ಭದಲ್ಲಿ ನೂರಾರು ಮುಸಲ್ಮಾನರು ಪ್ರತಿನಿತ್ಯ ಬಂದು ಪ್ರವಚನ ಶ್ರವಣಕ್ಕೆ ಬರುತ್ತಿದ್ದರು. ಪುರಾಣ ಪ್ರವಚನ ಮಂಗಳದ

ಸಂದರ್ಭದಲ್ಲಿ ಲಕ್ಷಾಂತರ ರೂಪಾಯಿ ದೇಣಿಗೆಯನ್ನು ಮುಸಲ್ಮಾನ ಬಂಧುಗಳೇ ಕ್ಷೇತ್ರಾಭಿವೃದ್ಧಿಗೆಂದು ನೀಡಿದರು.

ಭಗವಾನ್ ಮೌನೇಶ್ವರರು ಹಿಂದೂ ಮುಸ್ಲಿಂ ಭಾವೈಕ್ಯಕ್ಕಾಗಿ ಶ್ರಮಿಸಿದ ಮಹಾನ್ ಸಂತರು–ಕ್ರಿ.ಶ 17ನೆಯ ಶತಮಾನದ ಮಧ್ಯಭಾಗದಲ್ಲಿ ಹಿಂದೂ–ಮುಸ್ಲಿಂರಲ್ಲಿ ವೈರತ್ವ, ವೈಮನಸ್ಸು, ಈರ್ಷ್ಯೆಗಳು ಕಾಳಸರ್ಪದಂತೆ ಬುಸುಗುಟ್ಟುತ್ತಿದ್ದವು. ಇದನ್ನು ದಮನಿಸಲು ಮೌನೇಶ್ವರರು ಯತ್ನಿಸಿದರು. ಅವರು ತಮ್ಮ ಒಂದು ವಚನದಲ್ಲಿ ಹೀಗೆ ಹೇಳುತ್ತಾರೆ:[1]

ಹಿಂದು ತುರುಕರಿಗೆ ಚಂದ್ರಮನೊಬ್ಬನೆ
ನಿಂದಿಸಿದವನೇ ಅಧಮನು ಕಾಣದ
ಅಂಧಕರಿಗೇಕೆ ದರ್ಪಣವು? ಸಕಲವು
ಒಂದೆ ಎಂದು ಕಂಡ ಗುರು ಬೇರೆ.

ಇಂದಿಗೂ ತಿಂಥಿಣಿಯ ಶ್ರೀ ಮೌನೇಶ್ವರ ಸ್ವಾಮಿಗಳು ದೇಹಬಿಟ್ಟ ಗವಿಯ ಮೇಲ್ಭಾಗದಲ್ಲಿ ಬಡೇಮಿಯಾ ಎಂಬವರ ಗೋರಿ ಇದೆ. ಗೋರಿಗೆ ನಿತ್ಯ ಪೂಜೆ ಸಲ್ಲುವುದು. ಅಲ್ಲದೆ ಪ್ರತಿ ವರುಷ ಮುಸಲ್ಮಾನರ ಹಬ್ಬವನ್ನು ವೈಭವದಿಂದ ಆಚರಿಸುವರು. ಇವನ್ನೆಲ್ಲಾ ನೋಡಿದರೆ ಶ್ರೀ ಮೌನೇಶ್ವರ ಸ್ವಾಮಿಗಳು ಹಿಂದೂ–ಮುಸಲ್ಮಾನ ಐಕ್ಯತೆಗಾಗಿ ಹೋರಾಟ ಮಾಡಿದ ಐತಿಹಾಸಿಕ ಮಹಾಪುರುಷರೆಂದು ನಿಸ್ಸಂದೇಹವಾಗಿ ಘೋಷಿಸಬಹುದು. ಶ್ರೀ ಮೌನೇಶ್ವರ ವಚನ ಸಂಗ್ರಹ ಸಂ: ಜೀವಣ್ಣ ಮಸಳಿ, ವಿಶ್ವದರ್ಶನ ಪ್ರಕಾಶನ, ಬಾಗಲಕೋಟ, 1987, ಪುಟ 10,11)

ಈ. ಶಿವಮೊಗ್ಗ ಸಮೀಪದ ಒಂದು ಗ್ರಾಮ ಅಲ್ಲಿ ಬಹುಸಂಖ್ಯಾತರು ಮುಸ್ಲಿಂ ಜನಾಂಗದವರು ಕೆಲವೇ ಕೆಲವು ಹಿಂದೂ ಕುಟುಂಬಗಳಿದ್ದವು. ಅವರೆಲ್ಲಾ ಸೇರಿ ಊರಿನ ಪುಟ್ಟ ಮಂದಿರದಲ್ಲಿ ಹರಿಕಥೆಯನ್ನು ಏರ್ಪಾಡು ಮಾಡಿದ್ದರು. ಆದರೆ ಊರಿನ ಮುಸ್ಲಿಂ ನಾಯಕರು ಧ್ವನಿವರ್ಧಕವನ್ನು ಬಳಸಬಾರದು, ಭಿತ್ತಿ ಫಲಕಗಳನ್ನು ಹಾಕಬಾರದು ಎಂದೆಲ್ಲಾ ತಾಕೀತು ಮಾಡಿ ಒಂದು ರೀತಿಯಲ್ಲಿ ಕಾರ್ಯಕ್ರಮವನ್ನು ನಡೆಸಲು ಅಘೋಷಿತ ನಿರ್ಬಂಧವನ್ನೇ ಹೇರಿದ್ದರು. ಕಾರ್ಯಕ್ರಮದ ಹಿಂದಿನ ದಿನ ನಾನು ಆ ಸ್ಥಳಕ್ಕೆ ಹೋದಾಗ ಆಯೋಜಕರಲ್ಲಿ ಯಾವುದೇ ಸಿದ್ಧತೆ, ಉತ್ಸಾಹ ಕಾಣಲಿಲ್ಲ. ಆಗ ಆಯೋಜಕರಿಗೆ ಹೇಳಿ ಊರಿನ ಮುಸ್ಲಿಂ ನಾಯಕರನ್ನು ಭೇಟಿಯಾಗಲು ಹೋದೆ. ನಾನು ಯಾವುದೇ ಧರ್ಮನಿಂದನೆಯನ್ನು ಮಾಡಲು ಬಂದಿಲ್ಲ. ಯಾವರೀತಿ ಶಾಂತಿ ನೆಮ್ಮದಿಯಿಂದ ನಾವೆಲ್ಲಾ ಸಹಬಾಳ್ವೆಯನ್ನು ನಡೆಸಬಹುದು ಎನ್ನುವುದನ್ನು ಸಾರುವುದೇ ನನ್ನ ಉದ್ದೇಶ ಎಂದು ಹೇಳಿ ಕಾರ್ಯಕ್ರಮದ ಉದ್ಘಾಟನೆ ತಾವೇ ಮಾಡುವಂತೆ ಆ ಮುಸ್ಲಿಂ ನಾಯಕರನ್ನು ಒಪ್ಪಿಸಿದೆ. ಮರುದಿನ ಕಾರ್ಯಕ್ರಮ ಪ್ರಾರಂಭವಾಗುವ ಸನ್ನಿಹಿತವಾದರೂ ಆ ಮುಸ್ಲಿಂ ನಾಯಕರ ಪತ್ತೆಯೇ ಇಲ್ಲ. ನಿರ್ಬಂಧದ ಹೊರತಾಗಿಯೂ ಧ್ವನಿವರ್ಧಕವನ್ನು ಕಟ್ಟಲಾಯಿತು. ಪ್ರಾರಂಭದಲ್ಲಿ

ಸಾಮೂಹಿಕವಾಗಿ ರಘುಪತಿ ರಾಘವ ರಾಜಾ ರಾಂ ಎನ್ನುವ ಭಜನೆ, ಬಳಿಕ ಸಂತ ಶಿಶುನಾಳ ಶರೀಫರ ರಚಿಸಿದ ಭಜನೆ, ಕಬೀರದಾಸರ ಭಜನೆ ಇವನ್ನೆಲ್ಲಾ ಸಾಮೂಹಿಕವಾಗಿ ಹಾಡಿಸಿದೆ. ಆ ಭಜನೆಗಳು ಧ್ವನಿವರ್ಧಕದಿಂದ ಹೊರಹೊಮ್ಮುತ್ತಿದ್ದಂತೆ ಮುಸ್ಲಿಂ ನಾಯಕರೆಲ್ಲಾ ಆಗಮಿಸಿದರು. ಕಾರ್ಯಕ್ರಮವನ್ನು ಉದ್ಘಾಟಿಸಿದರು. ಕಾರ್ಯಕ್ರಮದ ಕೊನೆಯವರೆಗೂ ಇದ್ದು ತಮ್ಮದಾದ ದೇಣಿಗೆಯನ್ನು ಕೊಟ್ಟು ತೆರಳಿದರು. ಭಾವೈಕ್ಯತೆಯನ್ನು ಸಾಧಿಸುವ ಭಜನೆಗಳಿಗೆ ಸಮಾಜವನ್ನು ಕಟ್ಟುವ ಶಕ್ತಿ ಇದೆ ಎನ್ನುವುದಕ್ಕೆ ಇದೇ ಒಂದು ನಿದರ್ಶನ.

ಉ. 2009 ಡಿಸೆಂಬರ್ ತಿಂಗಳಲ್ಲಿ ಹುಬ್ಬಳ್ಳಿಯ ಗಂಗಾವತಿ ತಾಲೂಕಿನಿಂದ ಶ್ರೀ ಗೋಪಾಲ ಜೋಷಿ ಎನ್ನುವವರು ತನ್ನ ಪತ್ನಿಯೊಂದಿಗೆ ನಮ್ಮ ಆಶ್ರಮಕ್ಕೆ ಚಿಕಿತ್ಸೆಗೆಂದು ಆಗಮಿಸಿದ್ದರು. ಮಾನಸಿಕ ಅಸ್ವಸ್ಥಳಾಗಿದ್ದ ಅವರ ಪತ್ನಿ ಮೈಯಲ್ಲಿ ದೆವ್ವ ಹಿಡಿದವರಂತೆ ವರ್ತಿಸುತ್ತಿದ್ದಳು. ಕಳೆದ ಹಲವು ವರ್ಷಗಳಿಂದ ಹಲವು ವಿಧವಾದ ಚಿಕಿತ್ಸೆಗಳನ್ನು ನಡೆಸಿದರೂ ಪರಿಣಾಮವಾಗಿರಲಿಲ್ಲ. ಅವರನ್ನು ನಮ್ಮ ಮನೆಯಲ್ಲೇ ತಂಗುವಂತೆ ಹೇಳಿದೆ. ದೇವರ ಪ್ರಸಾದ ನೀಡಿದರೆ ಅದನ್ನು ತೆಗೆದು ಗೋಡೆಗೆ ಬಡಿದಳು. ರಕ್ಷೆ ಕೊಟ್ಟರೂ ಧರಿಸಲಿಲ್ಲ. ಭಜನೆ ಹಾಡುವಾಗ ಪ್ರಾರಂಭದಲ್ಲಿ ಪ್ರತಿರೋಧವನ್ನು ತೋರಿದಳು. ಏತರ ಕಟಪಟಿ, ಒಂದು ದಿನ ಹೋಗುತ್ತಿದ್ದೆ ಲಟಪಟಿ ಎಂಬ ಪುರಂದರದಾಸರ ಕೀರ್ತನೆಯನ್ನು ಹಾಡುವಾಗ ಅವಳ ಮುಖದಲ್ಲಿ ವಿಶೇಷವಾದ ಬದಲಾವಣೆ ಕಂಡು ಬಂದಿತು. ಕೆಲವು ದಿನಗಳ ಕಾಲ ಮನೆಯಲ್ಲೇ ಅವರನ್ನು ಉಳಿಸಿಕೊಂಡು ನಿರಂತರ ನಾಮಸ್ಮರಣೆ, ಭಜನೆಯಲ್ಲಿ ತೊಡಗುವಂತೆ ಪ್ರೇರೇಪಿಸಿದೆ. ಒಂದು ವಾರದಲ್ಲಿ ಸಂಪೂರ್ಣ ಗುಣಮುಖಳಾದಳು. ಆ ಬಳಿಕ ಇಂದಿನವರೆಗೂ ಯಾವುದೇ ಮಾನಸಿಕ ಅಸ್ವಸ್ಥತೆ ಅವಳನ್ನು ಬಾಧಿಸಿದ್ದಿಲ್ಲ, ಭಜನೆಗೆ ಮಾನಸಿಕ ರೋಗವನ್ನು ನಿವಾರಿಸುವ ಶಕ್ತಿಯೂ ಇದೆ ಎನ್ನುವುದಕ್ಕೆ ಇದೇ ಸಾಕ್ಷಿ."

## ಶಿರಸಿ ನಾರಾಯಣದಾಸರು:

ಸಂತಭದ್ರಗಿರಿ ಅಚ್ಯುತದಾಸರ ಶಿಷ್ಯರಲ್ಲಿ ಪ್ರಮುಖರಾದ ಶಿರಸಿಯವರಾದ ನಾರಾಯಣದಾಸರು ಪ್ರತಿಭಾನ್ವಿತ ಕೀರ್ತನಕಾರರಾಗಿದ್ದು ಭರವಸೆಯ ಯುವಕೀರ್ತನಕಾರರಾಗಿದ್ದಾರೆ. ಸಂತ ಭದ್ರಗಿರಿ ಅಚ್ಯುತದಾಸರ ಶಿಷ್ಯತ್ವವನ್ನು ವಹಿಸಿ ಅವರ ಮಾರ್ಗದರ್ಶನದಲ್ಲಿ ಸಾಧನೆಗೈದು ಶ್ರೇಷ್ಠ ಕೀರ್ತನಕಾರರಾಗಿ ರೂಪುಗೊಂಡಿದ್ದಾರೆ. ಅವರ ಅಭಿಪ್ರಾಯದಂತೆ ಭಕ್ತಿಯ ಪ್ರಚಾರ ಮತ್ತು ಅನುಷ್ಠಾನದಿಂದ ಸಮಾಜದಲ್ಲಿ ಪರಿವರ್ತನೆ ಖಂಡಿತಾ ಸಾಧ್ಯ. ಇದಕ್ಕೆ ದೃಷ್ಟಾಂತ ಸಂತ ಭದ್ರಗಿರಿ ಅಚ್ಯುತದಾಸರು, ಇಂದು ಅವರ ಹರಿಕಥೆಗಳನ್ನು ಕೇಳಿಯೇ ಆಧ್ಯಾತ್ಮಿಕ ಸಾಧನೆಯಲ್ಲಿ ಅಭಿರುಚಿ ಬೆಳೆಸಿಕೊಂಡವರು ಅನೇಕರು. ಅಂಥವರ ಸಂಖ್ಯೆ ಹೆಚ್ಚುತ್ತಿದ್ದಂತೆ ಸಮಾಜದಲ್ಲಿ ಸತ್‌ಪರಿವರ್ತನೆ ಆಗಲು ಸಾಧ್ಯ.



ಕನಕದಾಸ ಪ್ರಶಸ್ತಿ ಸ್ವೀಕರಿಸುತ್ತಿರುವ ಶ್ರೀ ದೇವಪ್ಪ ಕುದ್ರೋಳಿ





ಈಶ್ವರಾನಂದ ಭಜನಾ ಮಂದಿರದಲ್ಲಿ ನಡೆಯುವ ಸಂಸ್ಕಾರ ಕೇಂದ್ರದ ಚಟುವಟಿಕೆಗಳು



ಸಂತ ಅಚ್ಯುತದಾಸರಿಂದ ಭಜನಾ ಸಪ್ತಾಹದ ಉದ್ಘಾಟನೆ



ಬಡ ಮಕ್ಕಳಿಗೆ ಅನ್ನದಾನ




ಮಂಗಳೂರು ಜೆಸೀಸ್ ವತಿಯಿಂದ
ಸನ್ಮಾನ



ಕಾವೂರಿನ ನಿರ್ಗತಿಕ ಕುಟುಂಬಕ್ಕೆ
ಕಟ್ಟಿಕೊಟ್ಟ ಮನೆ

# ಶ್ರೀ ದೇವಪ್ಪ ಕುದ್ರೋಳಿ

7-7-1934ರಲ್ಲಿ ಮಂಗಳೂರಿನಲ್ಲಿ ಜನಿಸಿದ ಶ್ರೀ ದೇವಪ್ಪ ಕುದ್ರೋಳಿಯವರ ತಂದೆ ಶ್ರೀ ಪಾಪಣ್ಣ ಮೂಲತಃ ತಮಿಳ್ನಾಡಿನ ಕೊಯಮುತ್ತೂರಿನವರು. ಮಂಗಳೂರಿನ ಬೆಂಗರೆಯ ಬಳಿ ಮೀನು ಹಿಡಿಯುವ ಕಸುಬು ಮಾಡಿಕೊಂಡಿದ್ದರು. ಪರಿಶಿಷ್ಟ ಜನಾಂಗದಲ್ಲಿ, ಕಡುಬಡತನದ ಮನೆತನದಲ್ಲಿ ಜನಿಸಿದ ಶ್ರೀ ದೇವಪ್ಪನವರಿಗೆ ವಿದ್ಯೆ, ಸಂಸ್ಕಾರ ನೀಡಿದವರು, ಹಿರಿಯ ಸಮಾಜ ಸೇವಕರಾಗಿದ್ದ ದಿ। ಕುದ್ಮುಲ್ ರಂಗರಾವ್ ಇವರು (ಮುಂದೆ ಸಂನ್ಯಾಸಿ ಸ್ವೀಕಾರ ಮಾಡಿ ಸ್ವಾಮಿ ಈಶ್ವರಾನಂದ ಎಂದು ಪ್ರಸಿದ್ಧರಾಗಿದ್ದರು.) ತಂದೆ ಪಾಪಣ್ಣನ ವೃತ್ತಿ ಮೀನು ಹಿಡಿಯುವುದಾದರೂ ಪ್ರವೃತ್ತಿ ಭಜನೆ, ಕೀರ್ತನೆಯಾಗಿತ್ತು. ಕೈಯಲ್ಲಿ ತಂಬೂರಿ (ಏಕ್‌ತಾರಿ) ಹಿಡಿದು ಲಾವಣಿಗಳನ್ನು, ಭಜನೆಗಳನ್ನು ಚೆನ್ನಾಗಿ ಹಾಡುತ್ತಿದ್ದರು. ತಂದೆಯ ಪ್ರಭಾವ ಮಗ ದೇವಪ್ಪರ ಮೇಲೂ ಆಯಿತು. ಕುದ್ಮುಲ್ ರಂಗರಾಯರು ಮಂಗಳೂರಿನ ಕೊಡಿಯಾಲ್ ಬೈಲಿನಲ್ಲಿ ಪರಿಶಿಷ್ಟ ಜನಾಂಗದವರ ಉದ್ಧಾರಕ್ಕೆಂದೇ ಸ್ಥಾಪಿಸಿದ್ದ ಶಾಲೆಯಲ್ಲಿ 5ನೇ ಕ್ಲಾಸಿನವರೆಗೆ ವಿದ್ಯಾಭ್ಯಾಸ, ಕುದ್ಮುಲ್ ರಂಗರಾಯರು ಪರಿಶಿಷ್ಟರ ಉದ್ಧಾರಕ್ಕಾಗಿ ಅವಿರತ ಶ್ರಮಿಸಿದವರು. (ಅವರ ಸಂಕಲ್ಪ, ಧ್ಯೇಯ, ಹೀಗಿತ್ತು: 'ಪರಿಶಿಷ್ಟ ವರ್ಗದವನೊಬ್ಬ ವಿದ್ಯಾವಂತನಾಗಿ ಸ್ವಂತ ಕಾರಿನಲ್ಲಿ ತಿರುಗುವಾಗ ಆ ಕಾರಿನ ಧೂಳು ನನ್ನ ತಲೆಯ ಮೇಲೆ ಎಂದಿಗೆ ಕುಳಿತಿತೋ ಅಂದಿಗೆ ನನ್ನ ಜನ್ಮ ಸಾರ್ಥಕ'). ಅವರು ನಡೆಸುತ್ತಿದ್ದ ಶಾಲೆಯಲ್ಲಿ ಪರಿಶಿಷ್ಟ ಮಕ್ಕಳಿಗೆ ಅನ್ನ, ವಸತಿ, ಉಚಿತ

ವಿದ್ಯಾಭ್ಯಾಸವನ್ನು ನೀಡುತ್ತಿದ್ದುದು ಮಾತ್ರವಲ್ಲದೆ ಪ್ರತಿನಿತ್ಯ ಭಜನೆ, ಭಗವದ್ಗೀತಾ ತರಗತಿಗಳನ್ನು ಏರ್ಪಡಿಸಿ ಸತ್ ಸಂಸ್ಕಾರವನ್ನು ನೀಡುತ್ತಿದ್ದರು. ವಿದ್ಯಾಭ್ಯಾಸದ ಜೊತೆಗೆ ಹೊಲಿಗೆ, ಮರಕೆಲಸ ಇತ್ಯಾದಿ ಕಸುಬುಗಾರಿಕೆಯಲ್ಲಿಯೂ ತರಬೇತಿ ನೀಡುತ್ತಿದ್ದರು. ಅವರು ಪರಿಶಿಷ್ಟರಿಗಾಗಿ ಮಾಡುತ್ತಿದ್ದ ಸೇವೆಯನ್ನು ಕಾರ್ನಾಡು ಸದಾಶಿವರಾಯರಿಂದ ಕೇಳಿ ಸ್ವತಃ ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರೇ ಪ್ರಭಾವಿತರಾಗಿದ್ದರು ಎಂದು ಶ್ರೀ ದೇವಪ್ಪ ಹೇಳುತ್ತಾರೆ. 6ನೇ ಕ್ಲಾಸಿನಿಂದ 9ನೇ ಕ್ಲಾಸಿನವರೆಗೆ ಕೆನರಾ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಪಡೆದ ದೇವಪ್ಪನವರು 1955ರಲ್ಲಿ ಅಂಚೆ ಪೇದೆಯಾಗಿ ವೃತ್ತಿ ಜೀವನ ಪ್ರಾರಂಭಿಸಿದರು. ಬಾಲ್ಯದಿಂದಲೇ ಭಜನೆ ಮತ್ತು ಸ್ವಾಮಿ ಈಶ್ವರಾನಂದರ (ಕುದ್ಮುಲ್ ರಂಗರಾಯರು) ಸಮಾಜಸೇವೆಯಿಂದ ಪ್ರಭಾವಿತರಾಗಿದ್ದ ಶ್ರೀ ದೇವಪ್ಪ, ವೃತ್ತಿ ಜೀವನದ ಜೊತೆಗೆ ಭಜನೆ ಹಾಗೂ ಜನಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ದಿ। ಆನಂದ ರಾಯರಿಂದ ಹಿಂದೂಸ್ಥಾನಿ ಸಂಗೀತದಲ್ಲಿ ಆರಂಭಿಕ ಶಿಕ್ಷಣವನ್ನು ಪಡೆದಿದ್ದ ಶ್ರೀ ದೇವಪ್ಪರು ಆಗಲೂ ಸುಶ್ರಾವ್ಯ ಕಂಠಸಿರಿಯಿಂದ ಮಂಗಳೂರಿನ ಭಜನಾವಲಯದಲ್ಲಿ ಸುಪ್ರಸಿದ್ಧರಾಗಿದ್ದರು.

1968ರಲ್ಲಿ ತನ್ನ ಪ್ರಭಾವ ಬೀರಿದ್ದ ಸ್ವಾಮಿ ಈಶ್ವರಾನಂದರ (ಕುದ್ಮುಲ್

ರಂಗರಾಯರು) ಹೆಸರಿನಲ್ಲಿ ಪರಿಶಿಷ್ಟರೇ ಹೆಚ್ಚಾಗಿ ನೆಲೆಸಿದ್ದ ಬಡಾವಣೆಯಲ್ಲಿ (ಕೊಡಿಯಾಲ್ ಬೈಲ್ ಬಳಿ) 'ಸ್ವಾಮಿ ಈಶ್ವರಾನಂದ ಭಜನಾ ಮಂಡಳಿಯನ್ನು ಪ್ರಾರಂಭಿಸಿದರು. ಆಸುಪಾಸಿನ ಪರಿಶಿಷ್ಟ ಜನಾಂಗದ ಮಕ್ಕಳು ಮತ್ತು ಯುವಕರನ್ನು ಸೇರಿಸಿಕೊಂಡು ಪ್ರತಿನಿತ್ಯ ಪ್ರಾತಃಕಾಲ 5 ಗಂಟೆಗೇ ಭಜನೆಯನ್ನು ಪ್ರಾರಂಭಿಸುತ್ತಿದ್ದರು. ಆಸುಪಾಸಿನ ಬೀದಿಗಳಲ್ಲಿ ನಾಮ ಸಂಕೀರ್ತನೆ (ನಗರ ಭಜನೆ ಅಥವಾ ಪ್ರಭಾತ್ ಫೇರಿ) ನಡೆಸುತ್ತಿದ್ದರು. ಸಾಯಂಕಾಲ 6 ಗಂಟೆಗೆ ಮತ್ತೆ ಭಜನೆ ನಡೆಸುತ್ತಿದ್ದರು. ಭಜನೆಯಾದ ಬಳಿಕ ಬೆಳಿಗ್ಗೆ 6 ರಿಂದ 7 ಮತ್ತು ಸಂಜೆ 7 ರಿಂದ 8.30 ರವರೆಗೆ ಆಸುಪಾಸಿನ ಬಡಮಕ್ಕಳಿಗೆ ಉಚಿತವಾಗಿ ಟ್ಯೂಷನ್ ಮತ್ತು ಸಂಸ್ಕಾರ ತರಬೇತಿ (ಭಗವದ್ಗೀತೆ ಕಂಠಪಾಠ, ಪ್ರವಚನ ಇತ್ಯಾದಿ) ಮಾಡುತ್ತಿದ್ದರು. ಇವರ ಈ ಸೇವೆಯನ್ನು ಕಂಡು ಪ್ರಭಾವಿತರಾದ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶ ತೀರ್ಥ ಸ್ವಾಮೀಜಿಯವರು ಈ ಭಜನಾ ಮಂದಿರದಲ್ಲಿ 1972ರಲ್ಲಿ ವಿಠಲ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಸಾಮಾನ್ಯ ಒಬ್ಬ ಅಂಚೆ ಪೇದೆಯಾಗಿದ್ದು ತನ್ನ ಆದಾಯವನ್ನೆಲ್ಲಾ ಪರಿಶಿಷ್ಟರ ಕಲ್ಯಾಣಕ್ಕಾಗಿ ವಿನಿಯೋಗಿಸುತ್ತಿದ್ದ ಶ್ರೀ ದೇವಪ್ಪನವರ ಈ ಸೇವೆಯನ್ನು ಕಂಡು ವಿಶ್ವ ಹಿಂದೂ ಪರಿಷತ್ ಮೊದಲಾದ ಸಂಘ ಸಂಸ್ಥೆಗಳು ಸಹಾಯ ಹಸ್ತವನ್ನು ನೀಡಲು ಮುಂದಾದವು. ಸಂಸ್ಕಾರ ಕೇಂದ್ರದ ಸ್ಥಾಪನೆಯಾಯಿತು. ಆಸುಪಾಸಿನ ಮಕ್ಕಳಿಗೆಲ್ಲಾ ಉಚಿತ ಪಠ್ಯಪುಸ್ತಕ, ಸಮವಸ್ತ್ರ ವಿತರಣೆ, ದಾನಿಗಳ ಸಹಾಯದಿಂದ ಪ್ರತಿವರ್ಷ ನಡೆಸಿಕೊಂಡು ಬಂದರು ದೇವಪ್ಪನವರು. ಹೀಗೆ ಭಜನಾ ಮಂದಿರವನ್ನೇ, ಭಜನೆಯನ್ನೇ ಕೇಂದ್ರವಾಗಿರಿಸಿಕೊಂಡು ಒಂದು ಸೀಮಿತವಾದ ಮಿತಿಯಲ್ಲಿ ಸಾಮಾಜಿಕ ಕ್ರಾಂತಿಗೆ ಕಾರಣರಾದರು ದೇವಪ್ಪನವರು. ಈ ಕೇಂದ್ರಕ್ಕೆ ಬರುತ್ತಿದ್ದ ಮಕ್ಕಳು ಸರ್ವತೋಮುಖವಾದ ಬೆಳವಣಿಗೆಯನ್ನು ದಾಖಲಿಸಲಾರಂಭಿಸಿದರು. ಇವರ ಸಾಮಾಜಿಕ ಸೇವೆಯನ್ನು ಗುರುತಿಸಿದ ಅಂದಿನ ಸರಕಾರ (ದಿ। ಗುಂಡೂರಾವ್ ಅವರು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ) 1981ರಲ್ಲಿ ಶ್ರೀ ದೇವಪ್ಪನವರ ನೇತ್ರತ್ವದ 'ಈಶ್ವರಾನಂದ ಸೇವಾ ಟ್ರಸ್ಟಿಗೆ, ಸೇವಾಕಾರ್ಯಗಳಿಗೆಂದು ಹತ್ತು ಲಕ್ಷ ರೂಪಾಯಿಯನ್ನು ಮಂಜೂರು ಮಾಡಿತು. ಆದರೆ ಕೆಲವು

ಅಧಿಕಾರಿಗಳ ಹಾಗೂ ಸ್ವಸಮಾಜದ ಕೆಲವು ಕುತ್ಸಿತ ಬುದ್ಧಿಯುಳ್ಳವರ ದುಷ್ಪ್ರವೃತ್ತಿಯಿಂದ ಮನನೊಂದು ದೇವಪ್ಪನವರು ಆ ಹಣವನ್ನು ಸರಕಾರಕ್ಕೇ ಹಿಂದಿರುಗಿಸಿದರು. 1987ರಲ್ಲಿ ಅಖಂಡ ಭಜನಾ ಸಪ್ತಾಹವನ್ನು ಯಶಸ್ವಿಯಾಗಿ ಆಯೋಜಿಸಿದರು. 1990 ತಾನೇ ಕಟ್ಟಿ ಬೆಳೆಸಿದ ಭಜನಾಮಂದಿರವನ್ನು ಅನ್ಯರಿಗೆ ಒಪ್ಪಿಸಿದರು. 1993ರಲ್ಲಿ ಬೊಕ್ಕಪಟ್ಣ ಬೆಂಗರೆಯಲ್ಲಿ ಶ್ರೀ ದೇವಪ್ಪನವರ ನೇತೃತ್ವದಲ್ಲಿ ವಿಠೋಬ ಭಜನಾಮಂದಿರವನ್ನು ಸ್ಥಾಪಿಸಲಾಯಿತು. ಬಳಿಕ ಸಕ್ರಿಯ ರಾಜಕಾರಣಕ್ಕಿಳಿದ ಶ್ರೀ ದೇವಪ್ಪನವರು 1995ರಲ್ಲಿ ಮಂಗಳೂರು ಮಹಾನಗರಪಾಲಿಕೆಯ ಸದಸ್ಯರಾಗಿ ಆಯ್ಕೆಯಾದರು. 5 ವರ್ಷಗಳ ತಮ್ಮ ಅವಧಿಯಲ್ಲಿ ಅನೇಕ ಸೇವಾಕಾರ್ಯಗಳನ್ನು ನಡೆಸಿದರು. ಕಾವೂರಿನಲ್ಲಿ ಪರಿಶಿಷ್ಟ

ಜನಾಂಗಕ್ಕೆ ಸೇರಿದ ಓರ್ವ ಮಹಿಳೆ ಪತಿಯನ್ನು ಕಳಕೊಂಡು ಉಳಕೊಳ್ಳಲು ಮನೆಯೂ ಇಲ್ಲದೆ ಮೂವರು ಪುಟ್ಟ ಮಕ್ಕಳೊಂದಿಗೆ ನಿರ್ಗತಿಕಳಾಗಿದ್ದ ಸಂದರ್ಭದಲ್ಲಿ ಕೆಲವು ದಾನಿಗಳಿಂದ ಸಹಾಯವನ್ನು ಪಡೆದು ಕೆಲವೇ ದಿನಗಳ ಅವಧಿಯಲ್ಲಿ ಸುಮಾರು ಒಂದು ಲಕ್ಷ ರೂಪಾಯಿ ಬೆಲೆಯ ಮನೆಯನ್ನು ಕಟ್ಟಿಸಿಕೊಟ್ಟರು. 1995–96ರಲ್ಲಿ ಪರಿಶಿಷ್ಟ ಜನಾಂಗದ 6 ಬಡ ಕುಟುಂಬಗಳಿಗೆ ಮನೆ ಕಟ್ಟಿಸಿಕೊಟ್ಟರು. ಹಲವಾರು ಬಡ ಮಕ್ಕಳಿಗೆ ತನ್ನ ಮನೆಯಲ್ಲಿಯೇ ಆಶ್ರಯವನ್ನು ನೀಡಿ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿದ್ದಾರೆ. ಸುರತ್ಕಲ್‌ನಲ್ಲಿ ಕೋಮುಗಲಭೆಯಾದ ಸಂದರ್ಭದಲ್ಲಿ 10,000 ರೂಪಾಯಿ ಮತ್ತು ಒಂದು ಕ್ವಿಂಟಾಲ್ ಅಕ್ಕಿಯನ್ನು ಸಂತ್ರಸ್ತ ಕುಟುಂಬಗಳಿಗೆ ತನ್ನ ವೈಯಕ್ತಿಕ ನೆಲೆಯಲ್ಲಿ ಹಂಚಿದ್ದಾರೆ. ಇವರ ಈ ಎಲ್ಲಾ ಸೇವಾಕೈಂಕರ್ಯವನ್ನು ಅನೇಕ ಸಾಮಾಜಿಕ ಸಂಸ್ಥೆಗಳು ಗುರುತಿಸಿ ಗೌರವಿಸಿವೆ. ಇದೇ ನವಂಬರ್ 2010ರಲ್ಲಿ ಕಲ್ಕೂರ ಪ್ರತಿಷ್ಠಾನವು ಅವರಿಗೆ 'ಕನಕದಾಸ ಪ್ರಶಸ್ತಿ'ಯನ್ನು ನೀಡಿ ಗೌರವಿಸಿದೆ. ಅನಾರೋಗ್ಯದಿಂದ ಓಡಾಡಲಾಗದಿರುವ ಸ್ಥಿತಿಯಲ್ಲಿದ್ದರೂ ಭಕ್ತಿ ಭಜನೆ ಇಂದಿಗೂ ದೇವಪ್ಪನವರ ಉಸಿರಾಗಿದೆ. ಭಜನೆ ಹಾಡುವಾಗ, ಸ್ವಾಮಿ ಈಶ್ವರಾನಂದರನ್ನು ನೆನೆಯುವಾಗ, ಈಗಲೂ ಅವರ ಕಣ್ಣಾಲಿಗಳು ತುಂಬಿಕೊಳ್ಳುತ್ತವೆ. ಭಕ್ತಿ ಭಜನೆಯನ್ನೇ ಆಧಾರ ಶ್ರುತಿಯಾಗಿರಿಸಿಕೊಂಡು ಸೇವಾ ಕೈಂಕರ್ಯಗಳ ರಾಗಾಲಾಪನೆಯ ಮೂಲಕ ಪರಿಶಿಷ್ಟ ಸಮಾಜಕ್ಕೆ ಬೆಳಕಾದ ಶ್ರೀ ದೇವಪ್ಪನವರು ಭಕ್ತಿ ಸಿದ್ಧಾಂತದಅನುಷ್ಠಾನದ ಮೂಲಕ ಸತ್ ಪರಿವರ್ತನೆ ಸಾಧ್ಯ ಎನ್ನುವುದಕ್ಕೆ ಜೀವಂತ ನಿದರ್ಶನವಾಗಿದ್ದಾರೆ. (ಈ ಎಲ್ಲಾ ಮಾಹಿತಿಯನ್ನು ಅವರ ಸ್ವಗೃಹದಲ್ಲಿ ತಾ.26–12–10ರಂದು ಶ್ರೀ ದೇವಪ್ಪನವರ ಸ್ವಗೃಹದಲ್ಲಿ ನಾನು ನಡೆಸಿದ ಸಂದರ್ಶನದ ಸಂದರ್ಭದಲ್ಲಿ ಅವರೇ ನೀಡಿದ ವಿವರಗಳ ಆಧಾರದಲ್ಲಿ ದಾಖಲಿಸಿರುತ್ತೇನೆ)

## ಪಂಡಿತ್ ಕೆ.ವಿ. ನಂದಕುಮಾರ್

ಖ್ಯಾತ ಹಿಂದೂಸ್ತಾನಿ ಸಂಗೀತಕಾರರಾದ ಪಂಡಿತ್ ಕೆ.ವಿ. ನಂದಕುಮಾರ್, ಬೆಂಗಳೂರು ಇವರ ಅಭಿಪ್ರಾಯ ಇಂತಿದೆ:

"ಭಕ್ತಿಭರಿತವಾದ ಸಂಗೀತಕ್ಕೆ ಮನಸ್ಸನ್ನು ಶುದ್ಧಗೊಳಿಸುವ ಶಕ್ತಿಯಿದೆ. ಮನಸ್ಸು ನಾದದಲ್ಲಿ ಒಂದಾದಾಗ ಮನಸ್ಸಿನ ರಜೋ ಮತ್ತು ತಮೋಗುಣಗಳು ಲುಪ್ತವಾಗಿ ಸಾತ್ವಿಕತೆಯ ಪ್ರಭಾವ ಗಾಢವಾಗುತ್ತದೆ. ಆದರೆ ಈ ಶುದ್ಧತೆಯು ಮನಸ್ಸಿನಲ್ಲಿ ಶಾಶ್ವತವಾಗಿ ಬೇರೂರಬೇಕಾದರೆ ನಿರಂತರ ನಾಮಸ್ಮರಣೆ, ಧ್ಯಾನ, ಸೇವೆ, ಅತೀ ಅಗತ್ಯ. ನಮ್ಮ ತಂದೆಯವರಾದ ವಾಗ್ಗೇಯಕಾರರಾದ ವಿದ್ವಾನ್ ಕುರುಡಿ ವೆಂಕಣ್ಣಚಾರ್ ಇವರು ಬಳ್ಳಾರಿಯಲ್ಲಿರುವಾಗ ನಡೆದ ಒಂದು ಘಟನೆ:

ತಂದೆಯವರೊಮ್ಮೆ ಮನೆಯಲ್ಲಿ ತೋಡಿರಾಗದ ರಾಗಾಲಾಪನೆಯಲ್ಲಿ ತಲ್ಲೀನರಾಗಿದ್ದರು. ಆ ಸಂದರ್ಭದಲ್ಲಿ ಮನೆಯ ಮುಂದೆ ರಸ್ತೆಯಲ್ಲಿ ಹೋಗುತ್ತಿದ್ದ ಹುಚ್ಚನೊಬ್ಬ ಅಪ್ಪರವರೆಗೆ ಕೂಗಾಡುತ್ತಿದ್ದವನು ರಾಗಾಲಾಪನೆಯನ್ನು ಕೇಳಿ ನೇರವಾಗಿ ಮನೆ ಬಾಗಿಲಲ್ಲಿ ಬಂದು ಕುಳಿತ ತಂದೆಯವರು ಹಾಡುತ್ತಿರುವಷ್ಟು ಹೊತ್ತು ಪ್ರಶಾಂತವಾಗಿ ಕುಳಿತು ಕೇಳುತ್ತಿದ್ದ. ಅವರು ಹಾಡುಗಾರಿಕೆಯನ್ನು ನಿಲ್ಲಿಸಿದ ತಕ್ಷಣ ಎದ್ದು ಮತ್ತೆ ಯಥಾಪ್ರಕಾರ ಕೂಗಾಡುತ್ತಾ ಹೊರಟು ಹೋದ. ಸಂಗೀತಕ್ಕೆ ಮನಸ್ಸನ್ನು ಉನ್ನತ ಭಾವಕ್ಕೆ ಏರಿಸುವಂತಹ ಶಕ್ತಿ ಇದೆ." (ಮಂಗಳೂರಿನ ರಮಾಶಕ್ತಿ ಮಿಷನ್ನಿನಲ್ಲಿ ಸೆಪ್ಟೆಂಬರ್ 2010ರಲ್ಲಿ ಅವರನ್ನು ಭೇಟಿಯಾದಾಗ)

## ಶ್ರೀ ಶಂಕರ್ ಶ್ಯಾನುಭೋಗ್ :

ನಾಡಿನ ಖ್ಯಾತ ದಾಸಸಾಹಿತ್ಯದ ಹಾಡುಗಾರರಾದ ಶ್ರೀ ಶಂಕರ್ ಶ್ಯಾನುಭೋಗ್ ಇವರ ಅಭಿಪ್ರಾಯ ಇಂತಿದೆ:

"ನಾವು ಕಲಾವಿದರು ಮನಸ್ಸು ಮಾಡಿದರೆ ದೃಢ ಸಂಕಲ್ಪ ಮಾಡಿದರೆ ಒಂದು ವರ್ಷದಲ್ಲಿ ಸಮಾಜದಲ್ಲಿ ಸತ್‌ಪರಿವರ್ತನೆಯನ್ನು ರೂಢಿಸಲು ಸಾಧ್ಯ. ಕೀಳು ಅಭಿರುಚಿಯ ಯಾವುದೇ ಕಲಾಪ್ರದರ್ಶನವನ್ನು ಸಮಾಜಕ್ಕೆ ನೀಡುವುದಿಲ್ಲ, ಸತ್‌ಸಂಸ್ಕಾರವನ್ನು ನೀಡುವಂತಹ ಕಾರ್ಯಕ್ರಮಗಳನ್ನು ಮಾತ್ರ ಕೊಡುತ್ತೇನೆ.' ಎನ್ನುವ ಸಂಕಲ್ಪ ನಮ್ಮ ಕಲಾವಿದರು ಮಾಡಿದರೆ ಪರಿವರ್ತನೆ ಸಾಧ್ಯ. ಮುಖ್ಯವಾಗಿ ಸಿನಿಮಾ ಹಾಗೂ ದೂರದರ್ಶನದ ಕಲಾವಿದರು, ನಿರ್ಮಾಪಕರು, ನಿರ್ದೇಶಕರಲ್ಲಿ ಈ ಮನೋಭಾವ ಮೂಡಬೇಕು"– (ತಾರೀಕು 26–12–2010ರಂದು ಮಂಗಳೂರಿನಲ್ಲಿ ಅವರನ್ನು ಭೇಟಿ ಮಾಡಿದ ಸಂದರ್ಭದಲ್ಲಿ)

*****

# ಅಧ್ಯಾಯ ೭

# ಉಪಸಂಹಾರ

## ೭.೧ ಅಧ್ಯಯನದ ಫಲಿತಗಳು

ಸಂತರ ಕೃತಿಗಳ ಅಧ್ಯಯನವು ಬದುಕಿನ ಮೌಲ್ಯಗಳ ಅಧ್ಯಯನವೇ ಆಗಿದೆ. ಏಕೆಂದರೆ ಅನುಭಾವದ ಬೆಳಕಿನಲ್ಲಿ ಬದುಕಿನ ಪ್ರತಿಯೊಂದು ಮಜಲನ್ನು ವಿಶ್ಲೇಷಿಸುವ ಪ್ರವೃತ್ತಿಯನ್ನು ಸಂತರ ಕೃತಿಗಳಲ್ಲಿ ನಾವು ಕಾಣಬಹುದು. ಸತ್ಯ ಧರ್ಮಗಳೇ ಚೇತನದ ಉಸಿರಾಗಿವುಳ್ಳವರು ಅವರು. ತಾವು ಕಂಡುಕೊಂಡ ಸತ್ಯದ ಬೆಳಕನ್ನು ತಮ್ಮ ಸುತ್ತಮುತ್ತಲಿನವರಿಗೂ ಹಂಚಿ ಅವರ ಬದುಕನ್ನು ಹಸನು ಮಾಡಲು ಪ್ರಾಮಾಣಿಕ ಪ್ರಯತ್ನ ಮಾಡುವವರು ಅವರು. ಸ್ವಾರ್ಥದ ಸುಳಿವೂ ಇಲ್ಲದೆ ಪರಮಾರ್ಥದ ನೆಲೆಯಲ್ಲಿ ಬದುಕನ್ನು ರೂಪಿಸಿದವರು ಅವರು. ಅಷ್ಟೇ ಅಲ್ಲ ವ್ಯಕ್ತಿಯ ಸ್ವಾರ್ಥ, ಎಲ್ಲೆ ಮೀರಿ ಅಪಾಯ ಅಂಚನ್ನು ಮುಟ್ಟುತ್ತದೋ, ಅದು ಸರ್ವನಾಶಕ್ಕೆ ಹೆದ್ದಾರಿ ಎಂದು ಮನಗಂಡು ಹಾಗೆ ಉಪದೇಶಿಸಿದವರು. ಅವರ ಮಾತಿಗೂ ಕೃತಿಗೂ ಅಂತರವಿರಲಿಲ್ಲ. ತಾವು ನಡೆದಂತೆ ನುಡಿದವರವರು. 'ಹುಲುಕಡ್ಡಿಗಿಂತ ತಾವು ಕನಿಷ್ಠರು' ಎಂಬಂಥ ವಿನಯತ್ವ, ಸರಳತೆಯೊಂದಿಗೆ ಮಹಾಮೇರುವಿನಂತಹ ಆತ್ಮ ವಿಶ್ವಾಸ, ಸವಾಲುಗಳನ್ನೆದುರಿಸುವ ಆಂತರಿಕ ದಾರ್ಢ್ಯತೆಯನ್ನು ರೂಢಿಸಿಕೊಂಡವರು. ಅವರು ಮಾತಿನಲ್ಲೆ ಕೈವಲ್ಯವನ್ನು ಕಂಡವರಲ್ಲ. ಕೈವಲ್ಯದ ಅನುಭೂತಿಯನ್ನು ಆಡು ಮಾತುಗಳಲ್ಲಿ ಕಟ್ಟಿಕೊಟ್ಟವರು. ಲೋಕನೀತಿಯನ್ನು ಅಲ್ಲಗೆಳೆದವರಲ್ಲ, ಹಾಗೆಂದು ಲೋಕರೂಢಿಯಲ್ಲಿ ಕಾಳಿನೊಂದಿಗೆ ಜೊಳ್ಳು ಎಂಬಂತೆ ಸೇರಿಕೊಂಡ ಕಂದಾಚಾರ, ದಂಭಾಚಾರ, ಮೂಢನಂಬಿಕೆಗಳನ್ನು ಹೀಗಳೆಯಲು ಹೇಸಿದವರಲ್ಲ. ಸಂಸಾರವೆಂಬ ಸಾಗರದಲ್ಲಿ ನೀರಿನಲ್ಲಿ ದೋಣಿಯಿರಬಹುದು, ದೋಣಿಯೊಳಗೆ ನೀರಿರಬಾರದು ಎಂಬಂತೆ ನಿರ್ಲಿಪ್ತತೆಯಿಂದ ಬಾಳಿ ಬದುಕಿದವರು. ಮಠ ಮಂದಿರಗಳಲ್ಲಿ ಮಾತ್ರವಲ್ಲ 'ಶುನಿಚೈವ ಶ್ವಪಾಕೇ ಚ' ಎಂಬಂತೆ ಸರ್ವರಲ್ಲೂ ಸರ್ವೋತ್ತಮನಾದ ಆಂತರ್ಯದ ಪ್ರಭುವನ್ನು ಕಂಡವರು ತಮ್ಮ ಸಾಮಾನ್ಯ ಜೀವನದ ಲಘುವಾದ ವಸ್ತು ವಿದ್ಯಮಾನಗಳ ಮೂಲಕ ಘನವಾದ ಸದ್ವಸ್ತುವನ್ನು ಸಾಮಾನ್ಯರಿಗೆ ಪರಿಚಯಿಸಲು ಪ್ರಯತ್ನಿಸಿ ಯಶಸ್ವಿಯಾದವರು. ಹೊಟ್ಟೆಹೊರೆಯಲು ಭಿಕ್ಷೆಯೆತ್ತಬೇಕಾಗಿದ್ದರೂ ಸ್ವಾರ್ಥ ಸಾಧನೆಗಾಗಿ ಅರಸರ, ಸಿರಿವಂತರ ಬಾಗಿಲಲ್ಲಿ ನಿಂತು ಹಾಡಿ ಹೊಗಳುವ ಭಟ್ಟಂಗಿಗಳಾಗಿರಲಿಲ್ಲ ಸಂತರು. ಬಡತನವನ್ನೂ ಸಂತೋಷದಿಂದ ವ್ರತವಾಗಿ ಆಚರಿಸಿದವರು ಅವರು.

ಇಂತಹ ಸಂತರು ನಂಬಿ ನೆಚ್ಚಿಕೊಂಡಿದ್ದ ಮತ, ಸಂಪ್ರದಾಯಗಳು ವಿಭಿನ್ನವಾಗಿರಬಹುದು. ಸಾಧನೆ ಸಿದ್ಧಿಗಳನ್ನು ಪ್ರತಿಪಾದಿಸುವಂತಹ ವಿಧಾನಗಳಲ್ಲಿ ವೈವಿಧ್ಯತೆ, ವೈಲಕ್ಷಣ್ಯಗಳಿರಬಹುದು. ಆದರೆ ಭಕ್ತಿಸೂತ್ರಗಳ ಬೆಳಕಿನಲ್ಲಿ ಕನ್ನಡದ ಸಂತ ಕವಿಗಳ ಸಂದೇಶವನ್ನು ವಿವೇಚಿಸಿದಾಗ ಈ ಕೆಳಗಿನ ಅಂಶಗಳನ್ನು ಗಮನಿಸಬಹುದು:

ಅ. ನಾರದ ಭಕ್ತಿಸೂತ್ರ ಗ್ರಂಥವು ನಾರದರ ಮೂಲ ಉಪದೇಶಗಳನ್ನೊಳಗೊಂಡಿದ್ದರೂ, ಯಾರೋ ಅಜ್ಞಾತ ಕರ್ತೃವು ಕ್ರಿ.ಶ ಹನ್ನೆರಡನೆಯ ಶತಮಾನದಲ್ಲಿ ಇದನ್ನು ಸಂಗ್ರಹಿಸಿ ತಿದ್ದಿ ರಚಿಸಿರಬಹುದೆಂದು ಪಂಡಿತರ ಅಭಿಪ್ರಾಯ.(ದೇ.ನಾ.ಭ., ಸ್ವಾಮಿ ಹರ್ಷಾನಂದ, ಪುಟ ೧೦೨) ಹಾಗೆಯೇ ಶಾಂಡಿಲ್ಯ ಭಕ್ತಿ ಸೂತ್ರಗಳನ್ನು ರಚಿಸಿದ ಶಾಂಡಿಲ್ಯರ ಕಾಲ ಕ್ರಿ.ಶ ಎರಡನೆಯ ಶತಮಾನದಿಂದ ಒಂಬತ್ತನೆಯ ಶತಮಾನದೊಳಗೆ ಇದ್ದಿರಬಹುದೆಂದು ಊಹಿಸಲಾಗಿದೆ (ಶಾಂ.ಭ.ಸೂ. ಸ್ವಾಮಿ ಹರ್ಷಾನಂದ ಪುಟ III).

ಈರ್ವರು ಸೂತ್ರಕಾರರ ಊಹಿತವಾದಂತಹ ಕಾಲದ ಆಧಾರದಲ್ಲಿ ವಚನಕಾರರು, ಹರಿದಾಸರು ಅಥವಾ ಇನ್ನ್ಯಾವುದೇ ಹನ್ನೆರಡನೇ ಶತಮಾನದ ಬಳಿಕದ ಕನ್ನಡ ಸಂತರ ಕೃತಿಗಳ ಮೇಲೆ ಭಕ್ತಿಸೂತ್ರಗಳ ಪ್ರಭಾವವಾಗಿದೆ ಅಥವಾ ಪ್ರಭಾವವಾಗಿಲ್ಲ ಎನ್ನುವ ವಾದವು ಈ ಅಧ್ಯಯನದಲ್ಲಿ ಪ್ರತಿಫಲಿತಗೊಂಡಿಲ್ಲ.

ಭಕ್ತಿ ಸೂತ್ರಗಳಲ್ಲಿ (ಮುಖ್ಯವಾಗಿ ನಾನು ಆಯ್ದುಕೊಂಡಿರುವ ನಾರದ ಭಕ್ತಿ ಸೂತ್ರದಲ್ಲಿ) ಭಕ್ತಿಯ ಸ್ವರೂಪ, ಭಕ್ತಿಯ ಫಲನಿರ್ದೇಶ, ಭಕ್ತಿಯ ಲಕ್ಷಣಗಳು, ಭಕ್ತಿಸಾಧನೆ ಇತ್ಯಾದಿ ಭಕ್ತಿ ಸಾಧಕ ಹಾಗೂ ಆತನ ಸುತ್ತಲಿನ ಸಮಾಜ ಇವುಗಳನ್ನೇ ಕೇಂದ್ರವಾಗಿರಿಕೊಂಡು ಅಧ್ಯಯನವನ್ನು ಗೈದಿರುತ್ತೇನೆ. ಈ ಅಧ್ಯಯನದ ನೆಲೆಗಳನ್ನು ಗುರುತಿಸಿಕೊಳ್ಳಲು ಭಕ್ತಿಸೂತ್ರಗಳನ್ನು ಆಧಾರವಾಗಿ ಬಳಸಿಕೊಂಡಿರುತ್ತೇನೆ.

ಆ. ಭಕ್ತಿ ಸಿದ್ಧಾಂತದ ಪ್ರತಿಪಾದನೆಗಿಂತಲೂ ಭಕ್ತಿಸಾಧನೆ, ಅದರ ಪ್ರಯೋಜನ, ಲಕ್ಷಣಗಳಿಗೆ ಭಕ್ತಿಸೂತ್ರ (ನಾರದ ಭಕ್ತಿಸೂತ್ರಗಳಲ್ಲಿ) ಹೆಚ್ಚಿನ ಮಹತ್ವ ನೀಡಿರುವ ಕಾರಣ, ಅನುಭಾವಿಗಳಾದ ದಾಸರ, ಶರಣರ ಹಾಗೂ ಇನ್ನಿತರ ಸಂತ ಕವಿಗಳ ಕೃತಿಗಳಲ್ಲಿಯೂ ಮೇಲೆ ಹೇಳಿರುವ ವಿಚಾರಗಳ ವಿಶ್ಲೇಷಣೆಗೆ ಹೆಚ್ಚಿನ ಮಹತ್ವ ನೀಡಿರುತ್ತೇನೆ.

ಇ. ಇನ್ನು ವಿವಿಧ ಮತ ಪಂಥ, ಸಂಪ್ರದಾಯಗಳಿಗೆ ಸೇರಿದ ಸಂತರ ಸಂಪ್ರದಾಯ ಅನುಸರಣೆ, ಪೂಜಾದಿ ಬಾಹ್ಯ ಆಚರಣೆಗಳು, ಸಿದ್ಧಾಂತ ಪ್ರತಿಪಾದನೆ, (ಜೀವ, ಜಗತ್ತು, ಬ್ರಹ್ಮಗಳ ಕುರಿತಾದ ಅಭಿಪ್ರಾಯಗಳು), ಆರಾಧ್ಯ ದೇವತೆಗಳು, ಆರಾಧನಾ ವಿಧಾನಗಳು ಇವುಗಳೆಲ್ಲೆಲ್ಲಾ ವೈವಿಧ್ಯ, ವೈಲಕ್ಷಣ್ಯಗಳು ಕಂಡು ಬಂದರೂ ನಾರದರು ಹೇಳುವಂತಹ

**೧. ಭಕ್ತಿಯ ಸ್ವರೂಪ**

**೨. ಭಕ್ತಿಯ ಫಲ ನಿರ್ದೇಶ**

**೩. ಭಕ್ತಿಗೂ ಕಾಮಕ್ಕೂ ಇರುವ ವೈಲಕ್ಷಣ್ಯದ ಕುರಿತಾಗಿ ಅಭಿಪ್ರಾಯಗಳು**

**೪. ಶಾಸ್ತ್ರ ಸಂರಕ್ಷಣೆ**

೫. ಭಕ್ತಿಮಾರ್ಗದ ಮಹತ್ವ ಮತ್ತು ಶ್ರೇಷ್ಠತೆ

೬. ಭಕ್ತಿ ಸಾಧನೆಗಳು

೭. ಮುಕ್ತರಾದ ಭಕ್ತರ ಲಕ್ಷಣಗಳು

ಈ ವಿಚಾರಗಳ ಕುರಿತಾಗಿ ಶರಣರು, ದಾಸರು ಹಾಗೂ ಭಕ್ತಿ ಮಾರ್ಗವನ್ನು ಸಾರುವ ಇತರ ಸಂತರಲ್ಲಿ ಬಹುತೇಕ ವಿಚಾರಗಳಲ್ಲಿ ಅಭಿಪ್ರಾಯ ಸಾಮ್ಯತೆ ಈ ಅಧ್ಯಯನದಿಂದ ವಿದಿತವಾಗುತ್ತದೆ.

ಊ. ಇವಲ್ಲದೆ ಏಕದೇವ ಆರಾಧನೆ, ಭಕ್ತಿಯ ಪಾರಮ್ಯ, ಭಕ್ತಿ ಸಾಧನೆಗೆ ಅವಶ್ಯವಾದ ನೈತಿಕ ಪರಿಶುದ್ಧತೆಯನ್ನು ಸಾಧಿಸಲು ಶಾಸ್ತ್ರವುವಿಧಿಸುವಂತಹ ಕರ್ತವ್ಯಗಳ ಆಚರಣೆ, ನಿಷೇಧಿಸುವಂತಹ ಕರ್ಮಗಳ ತ್ಯಾಗ, ಈ ವಿಚಾರಗಳ ಬಗೆಗೂ ಕನ್ನಡದ ವಿವಿಧ ಭಕ್ತಿ ಪಂಥಗಳ ಸಂತರ ಅಭಿಪ್ರಾಯಗಳಲ್ಲಿ ಸದೃಶತೆಯು ಕಂಡು ಬರುತ್ತದೆ.

ಋ. ಇನ್ನು ನಾರದ ಭಕ್ತಿಸೂತ್ರಗಳಲ್ಲಿ ನಿರೂಪಿತವಾದ ವೈಯಕ್ತಿಕ ಸಾಧನೆಯ ಜೊತೆಗೆ ಸಮುದಾಯದ ಹಿತವನ್ನು ಸಾಧಿಸಬಲ್ಲಂತಹ ಅಂಶಗಳ (ಸತ್ಸಂಗದಲ್ಲಿ ಒಲವು, ದುಸ್ಸಂಗದ ತ್ಯಾಗ, ಕರ್ಮಫಲದ ಬಗ್ಗೆ ಅನಾಸಕ್ತಿ, ಸಮಾನತೆ, ತನ್ಮಯತೆ, ಕಾಮಾದಿ ವಿಷಯಗಳ ತ್ಯಾಗ) ಬಗ್ಗೆ ನಾರದರು ಹೇಳುವ ವಿಚಾರಗಳಿಗೂ ದಾಸರ ಶರಣರ ಮತ್ತು ಇನ್ನಿತರ ಕನ್ನಡದ ಸಂತರ ವಿಚಾರಗಳಿಗೂ ತಾತ್ತ್ವಿಕವಾದ ಸಾಮ್ಯತೆಯನ್ನು ಗುರುತಿಸಿರುವುದು ಈ ಅಧ್ಯಯನದ ಪ್ರಮುಖ ಉಪಲಬ್ಧಿಯಾಗಿದೆ.

ಎ. ನಾನು ಅಧ್ಯಯನಕ್ಕೆ ಪರಿಗಣಿಸಿರುವ ಕನ್ನಡದ ಸಂತರಲ್ಲಿ ಅದ್ವೈತ ಪರಂಪರೆಯ ಕೆಲವು ಹರಿದಾಸರು, ಜ್ಞಾನನಿಷ್ಠ, ಶಿವಯೋಗಿಗಳಾದ ಚಿದಾನಂದ ಅವಧೂತರು, ಶ್ರೀ ಮನ್ನಿಜಗುಣ ಶಿವಯೋಗಿಗಳು ಇವರನ್ನು ಹೊರತುಪಡಿಸಿ ಮಿಕ್ಕೆಲ್ಲಾ ಸಂತ ಕವಿಗಳು ಭಕ್ತಿಯೇ ಸರ್ವಶ್ರೇಷ್ಠ ಸಾಧನಾಮಾರ್ಗ ಎಂದು ಸಾರಿರುವುದು ಕಂಡು ಬರುತ್ತದೆ. ಉಳಿದಂತೆ ಇತರ ಸಂತರು ಜ್ಞಾನವೇ ಮೋಕ್ಷಕ್ಕೆ ಸಾಧನ ಎಂದು ಪ್ರತಿಪಾದಿಸಿದ್ದರೂ ಭಕ್ತಿಗೆ ಸಾಧನೆಯಲ್ಲಿ ಉನ್ನತ ಸ್ಥಾನವನ್ನು ನೀಡಿರುವುದು ಕಂಡು ಬರುತ್ತದೆ. ದೇವರ್ಷಿ ನಾರದರು ಪರಮ ಜ್ಞಾನಿಗಳೆಂದು ಪರಿಗಣಿಸಲ್ಪಟ್ಟಿದ್ದರೂ ಅವರೂ ಕೂಡ ಭಕ್ತಿ ಹಾಗೂ ಭಕ್ತಿ ಸಾಧನೆಗೆ ಇತರ ಎಲ್ಲಾ ಸಾಧನಾ ವಿಧಾನಗಳಿಗಿಂತ ಹೆಚ್ಚಿನ ಮಹತ್ವವನ್ನು ನೀಡಿರುವುದು ಶ್ರೇಷ್ಠ ಚಿಂತನೆಗಳು ಯಾವುದೇ ಕಾಲಘಟ್ಟದಲ್ಲಿ ಅಭಿವ್ಯಕ್ತಗೊಳ್ಳಬಹುದು, ಹಾಗೆ ಅಭಿವ್ಯಕ್ತಗೊಂಡಾಗ ಆ ಚಿಂತನೆಗಳ ಮಧ್ಯೆ ಸಾದೃಶ್ಯವನ್ನು ಗುರುತಿಸಲು ಸಾಧ್ಯ ಎನ್ನುವುದು ಈ ಅಧ್ಯಯನದಿಂದ ನಿರೂಪಿತವಾಗಿರುವುದು.

ಏ. ಪ್ರಮುಖವಾಗಿ ಮುಕ್ತರಾದ ಭಕ್ತರ ಲಕ್ಷಣಗಳನ್ನು ನಾರದ ಭಕ್ತಿ ಸೂತ್ರಗಳಲ್ಲಿ ನಿರೂಪಿಸುವಂತಹ ಸಂದರ್ಭದಲ್ಲಿ, 'ಅಂತಹ ಭಕ್ತರಲ್ಲಿ ಜಾತಿ, ವಿದ್ಯೆ, ರೂಪ, ಕುಲ, ಧನ, ಕ್ರಿಯೆ ಮೊದಲಾದ ಭೇದವಿಲ್ಲ' (ಸೂ. ೭೨) ಎನ್ನುವ ಅನುಭಾವಿಕ ನೆಲೆಯ ಸ್ವಭಾವವನ್ನು ಯಾವುದೇ ಮತ, ಪಂಥಗಳಿಗೆ ಸೇರಿದ ಸಂತರಲ್ಲಿ ಗುರುತಿಸಬಹುದಾಗಿದೆ. ವಿಶೇಷವಾಗಿ ಶರಣರ ಹಾಗೂ ದಾಸರ ಕೃತಿಗಳಲ್ಲಿ ಈ ಭಾವವು ಓತಪ್ರೋತವಾಗಿ

ಅಭಿವ್ಯಕ್ತಗೊಂಡಿವೆ ಎನ್ನುವುದು ಈ ಅಧ್ಯಯನದಿಂದ ಹೆಚ್ಚು ಸ್ಪಷ್ಟವಾಗಿದೆ. ಸಮಾಜದಲ್ಲಿ ಸಮಾನತೆಯನ್ನು ಸಾಧಿಸುವ ಹೊಣೆಗಾರಿಕೆ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡ ಸಂತರಲ್ಲಿ ಸಹಜವಾಗಿ ಅಭಿವ್ಯಕ್ತಗೊಳ್ಳುತ್ತದೆ ಎನ್ನುವ ಮೌಲ್ಯವನ್ನು ನಾರದ ಭಕ್ತಿ ಸೂತ್ರವು ಎತ್ತಿ ಹಿಡಿದಿರುವ ಕಾರಣ, ಈ ಮೌಲ್ಯವು ಕನ್ನಡದ ಸಂತ ಕವಿಗಳ ಕೃತಿಗಳಲ್ಲೆಲ್ಲಾ ಪ್ರತಿಫಲಿತವಾಗಿರುವ ಕಾರಣ ಕನ್ನಡದ ಸಂತ ಕವಿಗಳು ಅನುಭಾವದ ನೆಲೆಯಲ್ಲಿ ಭಕ್ತಿದಸೂತ್ರದ ಪ್ರತಿಪಾದಕರು ಎನ್ನಬಹುದಾಗಿದೆ.

ಐ. ಕಲೆಯು ಭಕ್ತಿಸಿದ್ಧಾಂತದ ಪ್ರಸಾರಕ್ಕೆ ಒಂದು ಪ್ರಬಲವಾದ ಮಾಧ್ಯಮ. ಅದನ್ನು ಅರಿತು ಅನುಷ್ಠಾನ ಪೂರ್ವಕವಾಗಿ ಸೂಕ್ತವಾಗಿ ಬಳಸಿಕೊಂಡಲ್ಲಿ ಸಂಸ್ಕೃತಿಯ ಬೇರುಗಳು ಬಲಗೊಳ್ಳುವುದು ಮಾತ್ರವಲ್ಲದೆ ಸಮಾಜದಲ್ಲಿ ಸೌಹಾರ್ದತೆ, ಏಕತೆ, ಸಮಾನತೆ, ಸತ್ ಸಂಸ್ಕಾರಗಳನ್ನು ರೂಢಿಸಲು ಸಾಧ್ಯ ಎಂದು ಈ ಅಧ್ಯಯನವು ಬೆಳಕು ಚೆಲ್ಲುತ್ತದೆ. ನಾರದ ಭಕ್ತಿ ಸೂತ್ರದ ಸೂತ್ರ ಸಂಖ್ಯೆ ೩೬, ೩೭ ರಲ್ಲಿ ನಿರೂಪಿಸಿರುವಂತೆ ಭಕ್ತಿ ಸಾಧನೆಗೆ ಭಜನೆ, ಕೀರ್ತನೆ, ಕಥಾಶ್ರವಣ ಅತೀ ಆವಶ್ಯಕ. ಈ ಎಲ್ಲಾ ಪ್ರಕ್ರಿಯೆಗಳು ತನ್ಮಯತೆಯನ್ನು ಬಯಸುವುದರಿಂದ ಸಂಗೀತ ಹಾಗೂ ಸಂಗೀತ ಆಧಾರವಾಗಿವುಳ್ಳ ಕಥಾಕೀರ್ತನ, ಯಕ್ಷಗಾನ ಇತ್ಯಾದಿ ಕಲೆಗಳು ಭಕ್ತಿ ಸಾಧನೆಗೆ ಉಪಾದೇಯವಾಗಬಲ್ಲುದು, ಅಲ್ಲದೆ ಭಕ್ತಿ ಸಿದ್ಧಾಂತದ ಪ್ರಚಾರದಲ್ಲಿಯೂ ಪ್ರಮುಖ ಪಾತ್ರವಹಿಸಬಲ್ಲುದು ಎಂಬುವುದನ್ನು ಅಧ್ಯಾಯ ೫ರಲ್ಲಿ ಸಂಕ್ಷಿಪ್ತವಾಗಿ ಸಂಗೀತ, ಯಕ್ಷಗಾನ ಹಾಗೂ ಕಥಾಕೀರ್ತನ ಕಲಾ ಮಾಧ್ಯಮಗಳನ್ನು ಪ್ರಾತಿನಿಧಿಕವಾಗಿ ಬಳಸಿಕೊಂಡು ನಿರೂಪಿಸಲಾಗಿದೆ.

ಓ. ನಾವಿಂದು ಸ್ವಾರ್ಥ ಹಾಗೂ ವೈಯಕ್ತಿಕ ಹಿತಾಸಕ್ತಿಯ ಉದ್ದೇಶದಿಂದ ಜಾತಿ, ಮತ, ಪಂಥ, ಸಂಪ್ರದಾಯಗಳ ಹೆಸರಿನಲ್ಲಿ ಸಂತ ಸಂತರ ನಡುವೆ ವಿಚಾರ ಧಾರೆಗಳ ನಡುವೆ ಗೋಡೆ ಕಟ್ಟುವಂತಹ ಪ್ರವೃತ್ತಿಯನ್ನು ಏನು ಕಾಣುತ್ತಿದ್ದೇವೆಯೋ ಅವೆಲ್ಲವನ್ನೂ ಕೆಡವಿ ಸಮಾನತೆಯ, ಸೌಹಾರ್ದತೆಯ ಆರೋಗ್ಯಕರ ವಾತಾವರಣವನ್ನು ನಿರ್ಮಾಣ ಮಾಡುವ ಶಕ್ತಿ ಭಕ್ತಿ ಸಿದ್ಧಾಂತಕ್ಕಿದೆ ಎನ್ನುವುದು ಭಕ್ತಿ ಸೂತ್ರಗಳ ತಳಹದಿಯಲ್ಲಿ ಸಮಗ್ರ ಸಂತ ವಾಙ್ಮಯವನ್ನು ಅಧ್ಯಯನ ಮಾಡಿದಾಗ ತಿಳಿಯುವುದು. ಈ ಸತ್ಯವು ಪ್ರಸ್ತುತ ಅಧ್ಯಯನದಿಂದ ನಿರೂಪಿತಗೊಳ್ಳುತ್ತದೆ. ನಾರದರ ಭಕ್ತಿಸೂತ್ರಗಳಲ್ಲಿ ನಿರೂಪಿತವಾದ ಭಕ್ತಿಯ ಮೂಲ ತಿರುಳನ್ನು ಸಂತ ವಾಙ್ಮಯದ ಮೂಲಕ ಜನಮಾನಸಕ್ಕೆ ತಲುಪಿಸುವ ಕೆಲಸವನ್ನು ಪ್ರಾಮಾಣಿಕವಾಗಿ ನಿರ್ವಹಿಸಿದರೆ ಸುದೃಢ ಸಮಾಜದ ನಿರ್ಮಾಣ ಸಾಧ್ಯ ಎನ್ನುವುದು ಕ್ಷೇತ್ರಾಧ್ಯಯನದ ವರದಿಗಳಿಂದ ನಿರೂಪಿತವಾಗುವುದು.

## ೭.೨ ಸಫಲತೆ ಮತ್ತು ಮಿತಿಗಳು

1. ಭಕ್ತಿಯ ಕುರಿತಾದಂತಹ ಸೈದ್ಧಾಂತಿಕವಾದ ದೃಷ್ಟಿಕೋನವನ್ನು ಮಾತ್ರವಲ್ಲದೆ ಇಂದಿನ ಪ್ರಸ್ತುತ ಸಮಾಜಕ್ಕೆ ಅನುಸರಣೆಗೆ ಸುಯೋಗ್ಯವಾದ ಅನುಷ್ಠಾನ ಪರವಾದ ಮಾರ್ಗಸೂಚಿಯನ್ನು ನೀಡುವಲ್ಲಿ ಈ ಅಧ್ಯಯನವು ಯಶಸ್ವಿಯಾಗಿದೆ ಎನ್ನಬಹುದು.
2. ಅನುಭಾವದ ನೆಲೆಯಲ್ಲಿ ನೋಡಿದಾಗ ಮಾರ್ಗ ಹಾಗೂ ದೇಸೀ ಪರಂಪರೆಯ ಸಂತರ ಮತ್ತು ಅನುಭಾವಿಗಳ ಚಿಂತನೆಯಲ್ಲಿ ಸಾದೃಶ್ಯವನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.
3. ವಿಭಿನ್ನವಾದ ಮತ ಪಂಥಗಳ ಅನುಯಾಯಿಗಳಾದ ಕನ್ನಡದ ಸಂತ ಕವಿಗಳ ಕೃತಿಗಳನ್ನು ನಾರದ ಭಕ್ತಿ ಸೂತ್ರಗಳ ಬೆಳಕಿನಲ್ಲಿ ವಿಶ್ಲೇಷಿಸಿದಾಗ ಇವುಗಳ ಮಧ್ಯೆ ಇರುವ ಅನುಭಾವದ ನೆಲೆಯ ಏಕಸೂತ್ರತೆಯನ್ನು ಈ ಅಧ್ಯಯನದಿಂದ ಗುರುತಿಸಬಹುದಾಗಿದೆ.
4. ಸಮಾಜಮುಖಿ ಚಿಂತನೆಯ ಮೂಲ ಸೆಲೆ ನಾರದ ಭಕ್ತಿ ಸೂತ್ರಗಳಲ್ಲಿ ಕಂಡು ಬಂದಿದ್ದು, ಅದನ್ನು ಪೋಷಿಸುವಂತಹ ಚಿಂತನೆಗಳು ದಾಸರ ಹಾಗು ಶರಣರ ಕೃತಿಗಳಲ್ಲಿ ಕಾಣಬಹುದಾಗಿದೆ. ಆ ನಿಟ್ಟಿನಲ್ಲಿ ಭಕ್ತಿ ಸೂತ್ರಗಳ ಚಿಂತನೆ ಕನ್ನಡದ ಸಂತ ಕವಿಗಳ ಕೃತಿಗಳಲ್ಲಿ ಅಭಿವ್ಯಕ್ತಿಗೊಂಡಿವೆ ಎಂದು ನಿರೂಪಿಸುವಲ್ಲಿ ಅಧ್ಯಯನವು ಯಶಸ್ವಿಯಾಗಿದೆ ಎನ್ನಬಹುದು.

ಅಧ್ಯಯನದ ಆರಂಭದಲ್ಲೇ ಕಂಡು ಕೊಂಡಿರುವಂತೆ ಈ ಅಧ್ಯಯನವು ವಿಶಾಲ ವ್ಯಾಪ್ತಿಯುಳ್ಳದ್ದಾಗಿದೆ. ಹಾಗಾಗಿ ಈ ಅಧ್ಯಯನಕ್ಕೆ ಹಲವಾರು ಮಿತಿಗಳನ್ನು ವಿಧಿಸಿಕೊಳ್ಳಬೇಕಾಯಿತು.

1. ದೇವರ್ಷಿ ನಾರದರ 84 ಭಕ್ತಿ ಸೂತ್ರಗಳಲ್ಲಿ ಕೇವಲ 60 ಸೂತ್ರಗಳನ್ನು ಮಾತ್ರ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ಅದೇ ರೀತಿ ಶಾಂಡಿಲ್ಯರ 100 ಭಕ್ತಿ ಸೂತ್ರಗಳಲ್ಲಿ ಕೇವಲ 7 ಸೂತ್ರಗಳನ್ನು ಮಾತ್ರ ಬಳಸಿಕೊಳ್ಳಲಾಗಿದೆ.
2. ಕನ್ನಡದ ಎಲ್ಲಾ ಸಂತ ಕವಿಗಳ ಕೃತಿಗಳನ್ನು ಬಳಸಿಕೊಳ್ಳುವುದು ವ್ಯಾಪ್ತಿಯ ಕಾರಣದಿಂದಾಗಿ ಅಸಾಧ್ಯವಾಗಿದೆ. ಪ್ರಾತಿನಿಧಿಕವಾಗಿ ಕೆಲವೇ ವಚನಕಾರರನ್ನು, ದಾಸರನ್ನು ಹಾಗೂ ಇತರ ಸಂತ ಕವಿಗಳನ್ನು ಆಯ್ದುಕೊಳ್ಳಲಾಗಿದೆ. ಪ್ರಮುಖವಾಗಿ 12ನೇ ಶತಮಾನದಿಂದ 16ನೇ ಶತಮಾನದ ಒಳಗಿನ ಕಾಲಾವಧಿಯ ಸಂತ ಕವಿಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ. ಆಯ್ದುಕೊಂಡಿರುವಂತಹ ಸಂತ ಕವಿಗಳಲ್ಲೂ ಅವರ ಎಲ್ಲಾ ಕೃತಿಗಳನ್ನು ಪರಾಮರ್ಶಿಸದೆ ಅಧ್ಯಾಯ ೪ರಲ್ಲಿ ಬಳಸಿಕೊಂಡಿರುವ ವಿಷಯಗಳಿಗೆ ಅನ್ವಯಿಸಲಾಗುವ ಕೃತಿಗಳನ್ನು ಮಾತ್ರ ಬಳಸಿಕೊಳ್ಳಲಾಗಿದೆ.
3. ಭಕ್ತಿ ಸೂತ್ರಗಳು ರಚನೆಯಾದ ಕಾಲವನ್ನು ನಿಖರವಾಗಿ ಗುರುತಿಸಲು ಸಾಧ್ಯವಾಗಿಲ್ಲ.

4. ಅಧ್ಯಾತ್ಮವನ್ನೇ ಜೀವನದ ಉಸಿರಾಗಿಸಿಕೊಂಡು ಬಾಳಿದ, ಬಾಳುತ್ತಿರುವ ಆಧುನಿಕ ಸಾಹಿತ್ಯ ಪರಂಪರೆಗೆ ಸೇರಿದ ಅನೇಕ ಮಹಾ ಚೇತನಗಳು ಕನ್ನಡದ ಸಾರಸ್ವತ ಲೋಕದಲ್ಲಿದ್ದರೂ ಈ ಅಧ್ಯಯನದಲ್ಲಿ ಎಲ್ಲಾ ಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಅಸಾಧ್ಯವೆನಿಸಿದೆ.

5. ಅಧ್ಯಾಯ ೫ ರ – **ಭಕ್ತಿ ಸೂತ್ರಗಳ ಸಿದ್ಧಾಂತದ ಅನುಷ್ಠಾನ ಹಾಗೂ ಪ್ರಸಾರದಲ್ಲಿ ಕಲೆಯ ಪಾತ್ರ** ಈ ವಿಷಯದ ವಿಶ್ಲೇಷಣೆಗಾಗಿ ಪ್ರಾತಿನಿಧಿಕವಾಗಿ ಸಂಗೀತ, ಯಕ್ಷಗಾನ ಹಾಗೂ ಕಥಾಕೀರ್ತನ ಕಲೆಗಳನ್ನು ಬಳಸಿಕೊಳ್ಳಲಾಗಿದೆ. ಇನ್ನೂ ಅನೇಕ ಕಲಾ ಪ್ರಕಾರಗಳನ್ನು ಈ ವಿಷಯದ ವಿಶ್ಲೇಷಣೆಗೆ (ಉದಾಹರಣೆಗೆ ನೃತ್ಯ,, ಚಿತ್ರ, ಶಿಲ್ಪ, ಚಲನ ಚಿತ್ರ ಇತ್ಯಾದಿ) ಬಳಸಿಕೊಳ್ಳಬಹುದಾಗಿದೆ.

6. ಅಧ್ಯಾಯ 6 ರ **'ಭಕ್ತಿಸೂತ್ರಗಳಲ್ಲಿ ಅಡಕವಾಗಿರುವ ಸಿದ್ಧಾಂತದ ಅನುಷ್ಠಾನ, ಪ್ರಚಾರ ಮತ್ತು ಸಮಾಜ'** ಎನ್ನುವ ವಿಷಯವು ವಿಶಾಲ ವ್ಯಾಪ್ತಿಯುಳ್ಳದ್ದಾಗಿದ್ದು ಇಲ್ಲಿ ದಾಖಲಿಸಿರುವಂತಹ ವಿಶ್ಲೇಷಣೆಯು ಸೀಮಿತ ಸ್ವರೂಪದ್ದಾಗಿದೆ. ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಮಾಡಲಾಗಿರುವ ಇನ್ನಷ್ಟು ವ್ಯಾಪಕವಾಗಿ ಹಾಗೂ ಆಳವಾಗಿ ಮಾಡಬಹುದಾಗಿದೆ.

## ೭.೩ ಮುಂದಿನ ಅಧ್ಯಯನದ ಸಾಧ್ಯತೆಗಳು

ಬಹಳ ವಿಶಾಲವಾದ ವ್ಯಾಪ್ತಿಯುಳ್ಳ ಈ ಅಧ್ಯಯನದಲ್ಲಿ ಕೆಲವೇ ಸೂತ್ರಗಳನ್ನು ವಿಶ್ಲೇಷಿಸಲಾಗಿದ್ದು, ದಾಸಸಾಹಿತ್ಯ, ವಚನಸಾಹಿತ್ಯ ಹಾಗೂ ಇನ್ನಿತರ ಭಕ್ತಿ ಕ್ಷೇತ್ರಕ್ಕೆ ಸಂಬಂಧಿಸಿದ ಸಂಶೋಧನೆಗೆ ನಾರದ ಭಕ್ತಿಸೂತ್ರ ಮತ್ತು ಶಾಂಡಿಲ್ಯ ಭಕ್ತಿಸೂತ್ರವನ್ನು ಬಳಸಿಕೊಳ್ಳಬಹುದಾಗಿದೆ

ಪ್ರಸ್ತುತ ಅಧ್ಯಯನದ ಸಫಲತೆ ಹಾಗೂ ಮಿತಿಗಳಲ್ಲಿ ಪ್ರಸ್ತಾಪಿತಗೊಂಡಿರುವಂತಹ ಆಯ್ದುಕೊಂಡಿರುವಂತಹ ಸಂತ ಕವಿಗಳ ಸಂಖ್ಯೆ ಹಾಗೂ ಕೃತಿಗಳಲ್ಲಿರುವ ಮಿತಿಗಳನ್ನು ವಿಸ್ತರಿಸಿಕೊಂಡು ಇನ್ನಷ್ಟು ವ್ಯಾಪಕವಾದ ಸಮಗ್ರವಾದ ಅಧ್ಯಯನವನ್ನು ಮಾಡಬಹುದಾಗಿದೆ.

ಕೇವಲ ಪುರಂದರ ದಾಸರ ಕೃತಿಗಳಿಗೂ ಭಕ್ತಿಸೂತ್ರಗಳಿಗೂ ಅಥವಾ ಕನಕದಾಸರ ಕೃತಿಗಳಿಗೂ ಭಕ್ತಿ ಸೂತ್ರಗಳಿಗೂ ಅಥವಾ ಇನ್ಯಾವುದೇ ಓರ್ವ ಸಂತ ಕವಿಯ ಕೃತಿಗಳನ್ನು ಆಯ್ದುಕೊಂಡು ಅವುಗಳಿಗೂ ಭಕ್ತಿ ಸೂತ್ರಗಳಿಗೂ ವೈಸಾದೃಶ್ಯಗಳ ಕುರಿತಾಗಿ ಆಳವಾದ ಅಧ್ಯಯನವನ್ನು ಮಾಡಬಹುದಾಗಿದೆ.

ಭಕ್ತಿ ಮತ್ತು ಯಾವುದೇ ಒಂದು ಕಲೆಯನ್ನು ಆಧಾರವಾಗಿರಿಸಿಕೊಂಡು ಒಂದು ಸಮಗ್ರವಾದ ಸಾಂಸ್ಕೃತಿಕ ಅಧ್ಯಯನವನ್ನು ಮಾಡಬಹುದಾಗಿದೆ.

*****

## ಅನುಬಂಧ – ೧

### ೧.೧ ಮಹಾಪ್ರಬಂಧದಲ್ಲಿ ಬಳಸಿರುವ ನಾರದ ಭಕ್ತಿ ಸೂತ್ರಗಳು

**ಸೂತ್ರಸಂಖ್ಯೆ**

೧. ಅಥಾತೋ ಭಕ್ತಿಂ ವ್ಯಾಖ್ಯಾಸ್ಯಾಮಃ ॥

೨. ಸಾ ತ್ವಸ್ಮಿನ್ ಪರಮಪ್ರೇಮರೂಪಾ ॥

೩. ಅಮೃತಸ್ವರೂಪಾ ಚ ॥

೪. ಯಲ್ಲಬ್ಧ್ವಾ ಪುಮಾನ್ ಸಿದ್ಧೋ ಭವತಿ, ಅಮೃತೋ ಭವತಿ, ತೃಪ್ತೋ ಭವತಿ ॥

೫. ಯತ್ಪ್ರಾಪ್ಯ ನ ಕಿಂಚಿದ್ ವಾಂಛತಿ, ನ ಶೋಚತಿ, ನ ದ್ವೇಷ್ಟಿ, ನ ರಮತೇ, ನೋತ್ಸಾಹಿ ಭವತಿ ॥

೬. ಯಜ್ಜ್ಞಾತ್ವಾ ಮತ್ತೋ ಭವತಿ, ಸ್ತಬ್ಧೋ ಭವತಿ, ಆತ್ಮಾರಾಮೋ ಭವತಿ ॥

೭. ಸಾ ನ ಕಾಮಯಮಾನಾ, ನಿರೋಧರೂಪತ್ವಾತ್ ॥

೮. ನಿರೋಧಸ್ತು ಲೋಕವೇದವ್ಯಾಪಾರನ್ಯಾಸಃ ॥

೯. ತಸ್ಮಿನ್ನನನ್ಯತಾ ತದ್ವಿರೋಧಿಷು ಉದಾಸೀನತಾ ಚ ॥

೧೦. ಅನ್ಯಾಶ್ರಯಾಣಾಂ ತ್ಯಾಗೋಽನನ್ಯತಾ ॥

೧೧. ಲೋಕವೇದೇಷು ತದನುಕೂಲಾಚರಣಂ ತದ್ವಿರೋಧಿಷು ಉದಾಸೀನತಾ ॥

೧೨. ಭವತು ನಿಶ್ಚಯದಾರ್ಢ್ಯಾದ್ ಊರ್ಧ್ವಂ ಶಾಸ್ತ್ರರಕ್ಷಣಮ್ ॥

೧೩. ಅನ್ಯಥಾ ಪಾತಿತ್ಯಶಂಕಯಾ ॥

೧೪. ಲೋಕೋಽಪಿ ತಾವದೇವ; ಭೋಜನಾದಿವ್ಯಾಪಾರಸ್ತು ಆಶರೀರಧಾರಣಾವಧಿ ॥

೧೫. ತಲ್ಲಕ್ಷಣಾನಿ ವಾಚ್ಯಂತೇ ನಾನಾಮತಭೇದಾತ್ ॥

೧೬. ಪೂಜಾದಿಷು ಅನುರಾಗ ಇತಿ ಪಾರಾಶರ್ಯಃ ॥

೧೭. ಕಥಾದಿಷು ಇತಿ ಗರ್ಗಃ ॥

೧೮. ಆತ್ಮರತ್ಯವಿರೋಧೇನ ಇತಿ ಶಾಂಡಿಲ್ಯಃ ॥

೧೯. ನಾರದಸ್ತು ತದರ್ಪಿತ–ಅಖಿಲಾಚಾರತಾ, ತದ್ವಿಸ್ಮರಣೇ ಪರಮವ್ಯಾಕುಲತಾ ಇತಿ ॥

೨೦. ಅಸ್ತಿ ಏವಮೇವಮ್ ॥

೨೧. ಯಥಾ ವ್ರಜಗೋಪಿಕಾನಾಮ್ ॥

೨೨. ನ ತತ್ರಾಪಿ ಮಾಹಾತ್ಮ್ಯಜ್ಞಾನ–ವಿಸ್ಮೃತಿ–ಅಪವಾದಃ ॥

೨೩. ತದ್ವಿಹೀನಂ ಜಾರಾಣಾಮಿವ ॥

೨೪. ನಾಸ್ತಿ ಏವ ತಸ್ಮಿನ್ ತತ್ಸುಖಸುಖಿತ್ವಮ್ ॥

೨೫. ಸಾ ತು ಕರ್ಮಜ್ಞಾನಯೋಗೇಭ್ಯಃ ಅಪಿ ಅಧಿಕತರಾ ॥

೨೬. ಫಲರೂಪತ್ವಾತ್ ॥

೨೭. ಈಶ್ವರಸ್ಯ ಅಪಿ ಅಭಿಮಾನ-ದ್ವೇಷಿತ್ವಾತ್, ದೈನ್ಯಪ್ರಿಯತ್ವಾಚ್ಚ ॥

೨೮. ತಸ್ಯಾ ಜ್ಞಾನಮೇವ ಸಾಧನಮಿತಿ ಏಕೇ ॥

೨೯. ಅನ್ಯೋನ್ಯಾಶ್ರಯತ್ವಮಿತಿ ಅನ್ಯೇ ॥

೩೦. ಸ್ವಯಂ ಫಲರೂಪತೇತಿ ಬ್ರಹ್ಮಕುಮಾರಃ ॥

೩೧. ರಾಜಗೃಹಭೋಜನಾದಿಷು ತಥೈವ ದೃಷ್ಟತ್ವಾತ್ ॥

೩೨. ನ ತೇನ ರಾಜಪರಿತೋಷಃ ಕ್ಷುಚ್ಛಾಂತಿರ್ವಾ ॥

೩೩. ತಸ್ಮಾತ್ ಸೈವ ಗ್ರಾಹ್ಯಾ ಮುಮುಕ್ಷುಭಿಃ ॥

೩೪. ತಸ್ಯಾಃ ಸಾಧನಾನಿ ಗಾಯಂತಿ ಆಚಾರ್ಯಾಃ ॥

೩೫. ತತ್ತು ವಿಷಯತ್ಯಾಗಾತ್ ಸಂಗತ್ಯಾಗಾಚ್ಚ ॥

೩೬. ಅವ್ಯಾವೃತ್ತ-ಭಜನಾತ್ ॥

೩೭. ಲೋಕೇಽಪಿ ಭಗವದ್ಗುಣ-ಶ್ರವಣ-ಕೀರ್ತನಾತ್ ॥

೩೮. ಮುಖ್ಯತಸ್ತು ಮಹತ್ಕೃಪಯಾ ಏವ ಭಗವತ್-ಕೃಪಾ-ಲೇಶಾದ್ ವಾ ॥

೩೯. ಮಹತ್ಸಂಗಸ್ತು ದುರ್ಲಭೋಽಗಮ್ಯೋಽಮೋಘಶ್ಚ ॥

೪೦. ಲಭ್ಯತೇಽಪಿ ತತ್ಕೃಪಯಾ ಏವ ॥

೪೧. ತಸ್ಮಿನ್ ತಜ್ಜನೇ ಭೇದಾಭಾವಾತ್ ॥

೪೩. ದುಸ್ಸಂಗಃ ಸರ್ವಥೈವ ತ್ಯಾಜ್ಯಃ ॥

೪೪. ಕಾಮ-ಕ್ರೋಧ-ಮೋಹ-ಸ್ಮೃತಿಭ್ರಂಶ-ಬುದ್ಧಿನಾಶ-ಸರ್ವನಾಶ-ಕಾರಣತ್ವಾತ್ ॥

೪೫. ತರಂಗಾಯಿತಾ ಅಪಿ ಇಮೇ ಸಮುದ್ರಾಯಂತೇ ॥

೪೬. ಕಸ್ತರತಿ ಕಸ್ತರತಿ ಮಾಯಾಮ್? ಯಸ್ಸಂಗಂ ತ್ಯಜ್ಯತಿ, ಯೋ ಮಹಾನುಭಾವಂ ಸೇವತೇ, ಯೋ ನಿರ್ಮಮೋ ಭವತಿ ॥

೪೭. ಯೋ ವಿವಿಕ್ತಸ್ಥಾನಂ ಸೇವತೇ, ಯೋ ಲೋಕಬಂಧಾನುನ್ಮೂಲಯತಿ, ನಿಸ್ತ್ರೈ ಗುಣ್ಯೋ ಭವತಿ, ಯೋ ಯೋಗಕ್ಷೇಮಂ ತ್ಯಜತಿ ॥

೪೮. ಯಃ ಕರ್ಮಫಲಂ ತ್ಯಜತಿ, ಕರ್ಮಾಣಿ ಸಂನ್ಯಸ್ಯತಿ, ತತೋ ನಿರ್ದ್ವಂದ್ವೋ ಭವತಿ ॥

೪೯. ಯೋ ವೇದಾನಪಿ ಸಂನ್ಯಸ್ಯತಿ, ಕೇವಲಮ್ ಅವಿಚ್ಛಿನ್ನ-ಅನುರಾಗಂ ಲಭತೇ ॥

೫೦. ಸ ತರತಿ ಸ ತರತಿ ಸ ಲೋಕಾಂಸ್ತಾರಯತಿ ॥

೬೭. ಭಕ್ತಾ ಏಕಾಂತಿನೋ ಮುಖ್ಯಾಃ ॥

೬೮. ಕಂಠಾವರೋಧ–ರೋಮಾಂಚ–ಆಶ್ರುಭಿಃ ಪರಸ್ಪರಂ ಲಪಮಾನಾಃ ಪಾವಯಂತಿ ಕುಲಾನಿ ಪೃಥಿವೀಂ ಚ ॥

೬೯. ತೀರ್ಥೀಕುರ್ವಂತಿ ತೀರ್ಥಾನ, ಸುಕರ್ಮೀಕುರ್ವಂತಿ ಕರ್ಮಾಣಿ, ಸಚ್ಛಾಸ್ತ್ರೀ–ಕುರ್ವಂತಿ ಶಾಸ್ತ್ರಾಣಿ ॥

೭೦. ತನ್ಮಯಾಃ ॥

೭೨. ನಾಸ್ತಿ ತೇಷು ಜಾತಿ–ವಿದ್ಯಾ–ರೂಪ–ಕುಲ–ಧನ–ಕ್ರಿಯಾದಿ–ಭೇದಃ ॥

೭೩. ಯತಸ್ತದೀಯಾಃ ॥

೭೪. ವಾದೋ ನಾವಲಂಬ್ಯಃ ॥

೭೫. ಬಾಹುಲ್ಯ–ಅವಕಾಶತ್ವಾದ್ ಅನಯತತ್ವಾಚ್ಚ ॥

೭೬. ಭಕ್ತಿಶಾಸ್ತ್ರಾಣಿ ಮನೀಯಾನ ತದುದ್ಬೋಧಕ–ಕರ್ಮಾಣಿ ಕರಣೀಯಾನಿ

॥ಅಧ್ಯಯನದ ವ್ಯಾಪ್ತಿಯನ್ನು ವಿಧಿಸಿದಂತಹ ಚೌಕಟ್ಟಿಗೆ ಪರಿಮಿತಗೊಳಿಸುವುದು ಹಾಗೂ ಪುನರಾವರ್ತನೆಯನ್ನು ಸಾಧ್ಯವಾದಷ್ಟು ತಡೆಯುವುದು, ಈ ಎರಡು ಉದ್ದೇಶಗಳಿಂದಾಗಿ ಎಲ್ಲಾ ಎಂಭತ್ತನಾಲ್ಕು ನಾರದೀಯ ಭಕ್ತಿಸೂತ್ರಗಳನ್ನು ಈ ಪ್ರಬಂಧದಲ್ಲಿ ಬಳಸಲಾಗಿಲ್ಲ. ಒಟ್ಟು 60 ಸೂತ್ರಗಳನ್ನು ಮಾತ್ರ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ

ಈ ಪ್ರಬಂಧದಲ್ಲಿ ಬಳಸದೇ ಇರುವ ಸೂತ್ರ ಸಂಖ್ಯೆ ಇಂತಿವೆ:

**೪೨,೫೧,೫೨,೫೩,೫೪,೫೫,೫೬,೫೭,೫೮,೫೯,೬೦,೬೧,೬೨,೬೩,೬೪,೬೫,೬೬,**

**೭೭,೭೮,೭೯,೮೦,೮೧,೮೨,೮೪**

## ೧.೨ ಮಹಾಪ್ರಬಂಧದಲ್ಲಿ ಆನುಷಂಗಿಕವಾಗಿ ಬಳಸಿರುವ ಶಾಂಡಿಲ್ಯ ಭಕ್ತಿ ಸೂತ್ರಗಳು

| | |
|---|---|
| ೧. ಸಾ ಪರಾನುರಕ್ತಿರೀಶ್ವರೇ | ॥ ೨ ॥ |
| ೨. ಸಾ ಮುಖ್ಯಾ ಇತರಾಪೇಕ್ಷಿತತ್ವಾತ್ | ॥ ೧೦ ॥ |
| ೩. ಹೇಯಾ ರಾಗತ್ವಾದಿತಿ ಚೇನ್ನಃ ಉತ್ತಮಾಸ್ಪದತ್ವಾತ್ | ॥ ೨೧ ॥ |
| ೪. ತದ್ವಾಕ್ಯಶೇಷಾತ್ ಪ್ರಾದುರ್ಭಾವೇಷ್ವಪಿ ಸಾ | ॥ ೪೬ ॥ |
| ೫. ಜನ್ಮ ಕರ್ಮವಿದಶ್ಚ ಅಜನ್ಮ ಶಬ್ದಾತ್ | ॥ ೪೭ ॥ |
| ೬. ತಚ್ಚ ದಿವ್ಯಂ ಸ್ವಶಕ್ತಿ ಮಾತ್ರೋದ್ಭವಾತ್ | ॥ ೪೮ ॥ |
| ೭. ಮುಖ್ಯಂ ತಸ್ಯ ಹಿ ಕಾರುಣ್ಯಮ್ | ॥ ೪೯ ॥ |

# ಅನುಬಂಧ – ೨

## ಮಹಾಪ್ರಬಂಧದಲ್ಲಿ ಆಯ್ದುಕೊಳ್ಳಲಾಗಿರುವ ಕನ್ನಡದ ಸಂತ ಕವಿಗಳ ವಿವರ

### ೨.೧. ವಚನಕಾರರ ವಿವರ

| ವಚನಕಾರರು | ಅಂಕಿತ |
|---|---|
| ೧. ಅಂಬಿಗರ ಚೌಡಯ್ಯ | ಅಂಬಿಗ ಚೌಡಯ್ಯ |
| ೨. ಅಲ್ಲಮಪ್ರಭು | ಗೊಹೇಶ್ವರ |
| ೩. ಅದಯ್ಯ | ಸೌರಾಷ್ಟ್ರ ಸೋಮೇಶ್ವರ |
| ೪. ಆಯ್ದಕ್ಕಿ ಮಾರಯ್ಯ | ಅಮರೇಶ್ವರ ಲಿಂಗ |
| ೫. ಉರಿಲಿಂಗದೇವ | ಉರಿಲಿಂಗ·ದೇವ |
| ೬. ದೇವರ ದಾಸಿಮಯ್ಯ | ರಾಮನಾಥ |
| ೭. ನುಲಿಯ ಚಂದಯ್ಯ | ಚಂದೇಶ್ವರ |
| ೮. ಬಸವಣ್ಣ | ಕೂಡಲಸಂಗಮದೇವ |
| ೯. ಮಹಾದೇವಿಯಕ್ಕ | ಚೆನ್ನಮಲ್ಲಿಕಾರ್ಜುನ |
| ೧೦.ಷಣ್ಮುಖಸ್ವಾಮಿ | ಅಖಂಡೇಶ್ವರ |
| ೧೧.ಸಕಳೇಶ ಮಾದರಸ | ಸಕಳೇಶ್ವರ |
| ೧೨.ಸಿದ್ಧರಾಮ | ಯೋಗಿನಾಥ (ಕಪಿಲಸಿದ್ಧಮಲ್ಲಿಕಾರ್ಜುನ) |
| ೧೩.ಹಡಪದಪ್ಪಣ್ಣ | ಬಸವಪ್ರಿಯ ಕೂಡಲಚೆನ್ನ ಸಂಗಮದೇವ (ಬಸವಪ್ರಿಯ ಕೂಡಲ ಚೆನ್ನಬಸವಣ್ಣ) |

## ೨.೧. ದಾಸರ ವಿವರ

| ಅ.ಸಂ. | ದಾಸರ ಹೆಸರು | ಕಾಲ(ಕಿ.ಶ) | ಅಂಕಿತ | ಕೃತಿಗಳು |
|---|---|---|---|---|
| ೧. | ನರಹರಿತೀರ್ಥ | ಕ್ರಿ.ಶ ೧೨೭೫.... | ರಘುಕುಲತಿಲಕ ಅಥವಾ ಶ್ರೀ ರಘುಪತಿ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೨. | ಶ್ರೀಪಾದರಾಯ | ಕ್ರಿ.ಶ ೧೪೨೨-೧೪೮೦ | ರಂಗವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೩. | ವ್ಯಾಸರಾಯ | ಕ್ರಿ.ಶ ೧೪೪೭-೧೫೩೯ | ಶ್ರೀ ಕೃಷ್ಣ ಅಥವಾ ಕೃಷ್ಣ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೪. | ವಾದಿರಾಜ | ಕ್ರಿ.ಶ ೧೪೮೦-೧೬೦೦ | ಹಯವದನ | ಕೀರ್ತನೆ, ವೈಕುಂಠ ವರ್ಣನೆ, ಸ್ವಪ್ನ-ಗದ್ಯ, ಲಕ್ಷ್ಮೀಶೋಭಾನೆ, ಗುಂಡಕ್ರಿಯಾ ಇತ್ಯಾದಿ ಕಾವ್ಯಕೃತಿಗಳು. |
| ೫. | ಪುರಂದರದಾಸ | ಕ್ರಿ.ಶ ೧೪೮೪-೧೫೬೪ | ಪುರಂದರವಿಠಲ (ವಿಟ್ಠಲ) | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೬. | ಕನಕದಾಸ | ಕ್ರಿ.ಶ ೧೫೦೯-೧೬೦೭ | ಕಾಗಿನೆಲೆಯಾದಿಕೇಶವ ಅಥವಾ ಬಾಡದಾದಿಕೇಶವ | ಕೀರ್ತನೆ, ಹಾಗು ಮೋಹನತರಂಗಿಣಿ, ರಾಮಧನ್ಯ ಚರಿತೆ, ನಳಚರಿತ್ರೆ, ಹರಿ ಭಕ್ತಿಸಾರ ಎಂಬ ಕಾವ್ಯಕೃತಿಗಳು, |
| ೭. | ಮಹಿಪತಿದಾಸ | ಕ್ರಿ.ಶ ೧೬೧೧-೧೬೮೧ | ತರಳ/ಬಾಲ/ಚಿಣ್ಣ ಮಹಿಪತಿ | ಕೀರ್ತನೆ, ಕೋಲಾಟಪದ, ಸುವ್ವಿಪದ, ಶೋಭಾನೆ ಪದ, ಜೋಗುಳ ಪದ. ಕೊರವಂಜಿ ಪದ-ಇತ್ಯಾದಿ. |

| ಅ.ಸಂ. | ದಾಸರ ಹೆಸರು | ಕಾಲ(ಕಿ.ಶ) | ಅಂಕಿತ | ಕೃತಿಗಳು |
| --- | --- | --- | --- | --- |
| ೮. | ವಿಜಯದಾಸ | ಕ್ರಿ.ಶ ೧೬೩೭-೧೭೩೫ | ವಿಜಯವಿಠಲ | ಕೀರ್ತನೆ,ಸುಳಾದಿ, ಉಗಾಭೋಗಗಳು |
| ೯. | ಪ್ರಸನ್ನ ವೆಂಕಟದಾಸ | ಕ್ರಿ.ಶ ೧೬೮೦-೧೭೫೨ | ಶ್ರೀನಿವಾಸ ಅಥವಾ ಪ್ರಸನ್ನ ವೆಂಕಟ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೧೦. | ಗೋಪಾಲದಾಸ | ಕ್ರಿ.ಶ ೧೭೨೧-೧೭೬೨ | ಗೋಪಾಲವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೧೧. | ಜಗನ್ನಾಥದಾಸ | ಕ್ರಿ.ಶ ೧೭೨೮-೧೮೦೯ | ಜಗನ್ನಾಥವಿಠಲ | ಕೀರ್ತನೆ, ಹಾಗು ಹರಿಕೃಥಾಮೃತಸಾರ (ಕಾವ್ಯ), ಸುಳಾದಿ, ಉಗಾಭೋಗಗಳು |
| ೧೨. | ಹೆಳವನಕಟ್ಟೆ ಗಿರಿಯಮ್ಮ | ಕ್ರಿ.ಶ ೧೭೫೦........ | ಹೆಳವನಕಟ್ಟೆಯ ರಂಗ | ಕೀರ್ತನೆ, ಚಂದ್ರಹಾಸ ಕಥೆ, ಸೀತಾಕಲ್ಯಾಣ, ಬ್ರಹ್ಮಕೊರವಂಜಿ. |

## ೨.೩. ಇತರ ಸಂತ ಕವಿಗಳ ವಿವರ

| ಅ.ಸಂ. | ಸಂತ ಕವಿ | ಕಾಲ(ಕಿ.ಶ) | ಅಂಕಿತ | ಕೃತಿಗಳು |
|---|---|---|---|---|
| ೧. | ನಿಜಗುಣ ಶಿವಯೋಗಿ | ಕ್ರಿ.ಶ ೧೫೬೯ | ಶಂಭುಲಿಂಗ | ಪರಮಾನುಭ ಬೋಧೆ, ಪರಮಾರ್ಥ ಗೀತೆ ಇತ್ಯಾದಿ |
| ೨. | ಚಿದಾನಂದ ಅವಧೂತ | ೧೭೦೦ – ೧೭೮೧ | ಚಿದಾನಂದ | ಜ್ಞಾನಸಿಂಧು,ಪಂಚೀಕರಣ, ದೇವೀ ಮಹಾತ್ಮ್ಯೆ ಇತ್ಯಾದಿ |
| ೩. | ಸರ್ವಜ್ಞ | ೧೭೦೦ – ೧೮೦೦ | ಸರ್ವಜ್ಞ | ತ್ರಿಪದಿಗಳು |
| ೪. | ಶಂಕರಭಟ್ಟ ಅಗ್ನಿಹೋತ್ರಿ | ೧೮೯೭ – ೧೯೮೭ | ಗುರುಶಂಕರ | ಬೋಧನಾರಾಯಣ, ಸಾಧನ ಪಂಚಕ, ವಿವೇಕ ವೈಭವ ಇತ್ಯಾದಿ |
| ೫. | ಪಾವಂಜೆ ಹರಿದಾಸ ಲಕ್ಷ್ಮೀ ನಾರ್ಣಪ್ಪಯ್ಯ | ೧೮೫೪ – ೧೯೨೪ | ಲಕ್ಷ್ಮೀನಾರಾಯಣ/ ಲಕುಮಿ ನಾರಾಯಣ | ಕೀರ್ತನೆ, ಸಂಕ್ಷಿಪ್ತ ಕಾವ್ಯ |
| ೬. | ಶಿಶುನಾಳ ಷರೀಫ | ೧೮೦೫ –೧೮೮೯ | ಶಿಶುನಾಳಧೀಶ | ಗೀತಗಳು |
| ೭. | ಮೌನೇಶ್ವರ | ೧೨ನೇ ಶತಮಾನ | ಬಸವಣ್ಣ/ ಗುರುಬಸವಣ್ಣ | ತ್ರಿಪದಿಗಳು |
| ೮. | ಕವಿ ಪರಮದೇವ | ೧೭೨೧– ೧೮೦೫ | ಕೋಣೆ ಲಕ್ಷೀನಾರಾಯಣ | ತುರಂಗಭಾರತ, ತತ್ತ್ವ ಚೌಪದಿ ಇತ್ಯಾದಿ |
| ೯. | ಕರ್ಕಿಕೇಶವದಾಸ | ೧೯೦೦ –೧೯೭೫ | ಚನ್ನಕೇಶವ | ಕೀರ್ತನೆಗಳು |
| ೧೦. | ಭದ್ರಗಿರಿ ಅಚ್ಯುತದಾಸ | ೧೯೩೧ –....... | ಮೂಲನಾರಾಯಣ | ಹರಿಕಥಾಮೃತ ಸಿಂಧು, ಶ್ರೀ ಗುರು ಚರಿತ್ರೆ, ಗೀತಾರ್ಥಚಿಂತನೆ ಇತ್ಯಾದಿ |

# ಅನುಬಂಧ – ೩

## ಸಂದರ್ಶನ ಮಾಡಿದ ಮಹನೀಯರ ವಿವರ

| ಕ್ರ.ಸಂ | ಮಹನೀಯರು | ಸಂದರ್ಶನ ಮಾಡಿದ ದಿನಾಂಕ |
|---|---|---|
| 1 | ಸ್ವಾಮಿ ಹರ್ಷಾನಂದಜಿ, ಅಧ್ಯಕ್ಷರು, ರಾಮಕೃಷ್ಣ ಆಶ್ರಮ, ಬೆಂಗಳೂರು | 20–11–2010 |
| 2 | ಸಂತ ಭದ್ರಗಿರಿ ಅಚ್ಯುತದಾಸರು, ಖ್ಯಾತ ಕೀರ್ತನಕಾರರು, ಬೆಂಗಳೂರು | 17–12–2009 ಮತ್ತು 16–11–2010 |
| 5. | ವಿಲಕ್ಷ್ಮಣದಾಸ ವೇಲಣ್‌ಕರ್, ಖ್ಯಾತ ಕೀರ್ತನಕಾರರು, ಬೆಂಗಳೂರು | 27–06–2010 |
| 6. | ಆಚಾರ್ಯಡಾ.ಕೆ.ಶ್ರೀಧರದಾಸ್‌ಜೀ, ಕುಂಭಾಶಿ, ಖ್ಯಾತ ಕೀರ್ತನಕಾರರು, ಚಿಕಿತ್ಸಕರು, ಕುಂಭಾಶಿ | 01–07–2010 |
| 7. | ಹರಿದಾಸ ಪೊಳಲಿ ಜಗದೀಶ ದಾಸ್, ಖ್ಯಾತ ಕೀರ್ತನಕಾರರು, ಮೂಡುಮಾರ್ನಾಡು, ದ.ಕ. | 07–07–2010 |
| 8. | ಶ್ರೀಮತಿ ಮನೋರಮ ಭಟ್ ಜಿ.ವಿ. ನಿರ್ದೇಶಕಿ, ಎಸ್ ಕೆ ಡಿ ಆರ್ ಡಿ ಪಿ, ಗ್ರಾಮೀಣ ಶ್ರೇಷ್ಠತಾಕೇಂದ್ರ | 21–12–2010 |
| 9 | ಶ್ರೀ ವಿವೇಕ್ ಪಾಯಸ್, ಯೋಜನಾಧಿಕಾರಿ, ಜನಜಾಗೃತಿ ವೇದಿಕೆ, ಬೆಳ್ತಂಗಡಿ | 21–12–2010 |
| 3. | ಶ್ರೀ ಎ. ಎಂ. ದೇವಯ್ಯ, ಕಾರ್ಯದರ್ಶಿ, ರಮಾಶಕ್ತಿ ಮಿಶನ್, ಮಂಗಳೂರು | 22–12–2010 |
| 4. | ಶ್ರೀ ಜಿ. ಆನಂದರಾಯ ಕಾಮತ್, ಜತೆಕಾರ್ಯದರ್ಶಿ, ರಮಾಶಕ್ತಿ ಮಿಶನ್, ಮಂಗಳೂರು | 22–12–2010 |
| 10. | ಶ್ರೀ ದೇವಪ್ಪ ಕುದ್ರೋಳಿ, ಸಮಾಜ ಸೇವಾಕರ್ತರು, ಕೊಡಿಯಾಲ್ ಬೈಲ್ ಮಂಗಳೂರು | 26–12–2010 |
| 11. | ಪಂ. ಕೆ.ವಿ.ನಂದಕುಮಾರ್, ಖ್ಯಾತ ಹಿಂದುಸ್ತಾನಿ ಗಾಯಕರು, ಬೆಂಗಳೂರು | ಸೆಪ್ಟಂಬರ್ 2010 |

# ಅನುಬಂಧ – ೪

# ಪರಾಮರ್ಶನ ಗ್ರಂಥಗಳ ವಿವರ

## ಕನ್ನಡ ವಿಭಾಗ


1. **ಅನಂತರಂಗಾಚಾರ್ಯ ಎನ್.ಎಸ್.,** 2002 ಉಪನಿಷತ್ತು, ಭವನದ ಗಾಂಧೀ ಕೇಂದ್ರ, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು–1,

2 **ಅಬ್ದುಲ್ ಗಫ್ಫಾರ್. ಎಸ್., ಅಬ್ದುಸ್ಸಲಾಮ್ ಪುತ್ತಿಗೆ,** 1994, ಕುರ್ ಆನ್ ವ್ಯಾಖ್ಯಾನ, ಶಾಂತಿ ಪ್ರಕಾಶನ, ಹಿದಾಯತ್ ಸೆಂಟರ್, ಬೀಬಿ ಅಲಾಬಿ ರಸ್ತೆ, ಮಂಗಳೂರು–1

3 **ಅರಳು ಮಲ್ಲಿಗೆ ಪಾರ್ಥಸಾರಥಿ(ಸಂ.),** 2000, ಪುರಂದರ ಸಂಪುಟ – 1, ಪುರಂದರದಾಸರ ಹಾಡುಗಳು, ಹರಿದಾಸ ಅಕಾಡೆಮಿ, 194–ಲಕ್ಷ್ಮೀನಿಲಯ, ರಾಘವೇಂದ್ರ ಕಾಲೊನಿ, ಚಾಮರಾಜಪೇಟೆ, ಬೆಂಗಳೂರು–18

4 **ಅರಳುಮಲ್ಲಿಗೆ ಪಾರ್ಥಸಾರಥಿ,** 1989, ಹರಿದಾಸ ಝೇಂಕಾರ ತರಂಗಿಣಿ, ಕನ್ನಡ ಹರಿದಾಸ ಸಾಹಿತ್ಯ–3, ಶೃಂಗಾರ್ ನಾಗರಾಜ್ ಹಾಗೂ ರಾಘವೇಂದ್ರ ಪ್ರಕಾಶನ, 194, ಲಕ್ಷ್ಮೀನಿಲಯ, ರಾಘವೇಂದ್ರ ಕಾಲೊನಿ, ಚಾಮರಾಜ ಪೇಟೆ, ಬೆಂಗಳೂರು – 18.

5 **ಇಂದುಬಾಯಿ. ಟಿ.ಕೆ.(ಸಂ.),** 1987, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಹರಿದಾಸ ಸಾಹಿತ್ಯ ಮಾಲೆ–11, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ

**6 ಎಡ್ವಿನ್ ಡಿ'ಸೋಜ,** 1975, ಕ್ರೈಸ್ತ ತತ್ತ್ವ ದರ್ಶನ, ಪ್ರಧಾನ ಸಂ : ಡಾ.ಕೆ.ವಿ.ಪುಟ್ಟಪ್ಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

7. **ಕಬ್ಬಿನಾಲೆ ವಸಂತಭಾರದ್ವಾಜ್,** 2010, ದಾಸರ ದಾಸ ಭದ್ರಗಿರಿ ಅಚ್ಯುತದಾಸ, 'ನಾಡಿಗೆ ನಮಸ್ಕಾರ', ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ, ಕಾಂತಾವರ ಕನ್ನಡ ಸಂಘ, ಕಾಂತಾವರ– 574129, ಕಾರ್ಕಳ, ಉಡುಪಿ ಜಿಲ್ಲೆ

8. **ಕಾವ್ಯಪ್ರೇಮಿ,(ಸಂ.),** 1989, ಸರ್ವಜ್ಞ ಸಾರ, ವಚನಸಾಹಿತ್ಯ ಮಾಲಿಕೆ, ಸಮಾಜ ಪುಸ್ತಕಾಲಯ, ಧಾರವಾಡ– 1

9 **ಕಾವ್ಯಪ್ರೇಮಿ (ಸಂ.),** 2001, ವ್ಯಾಸರಾಯರ ಹಾಡುಗಳು, ಸಮಾಜ ಪುಸ್ತಕಾಲಯ, ಧಾರವಾಡ– 1

10 **ಕಾವ್ಯಪ್ರೇಮಿ(ಸಂ.),** 1998 ದಾಸಸಾಹಿತ್ಯ ಮಾಲಿಕೆ – 7, ವಿಜಯದಾಸರ ಹಾಡುಗಳು, ಸಮಾಜ ಪುಸ್ತಕಾಲಯ, ಧಾರವಾಡ– 1

11 **ಕಾವ್ಯಪ್ರೇಮಿ(ಸಂ.),** 2000 ದಾಸಸಾಹಿತ್ಯ ಮಾಲಿಕೆ– 8, ಶ್ರೀಪಾದರಾಯರ ಹಾಡುಗಳು, ಸಮಾಜಪುಸ್ತಕಾಲಯ, ಧಾರವಾಡ– 1

12 **ಕಾವ್ಯಪ್ರೇಮಿ (ಸಂ.),** 2001, ವಾದಿರಾಜರ ಹಾಡುಗಳು, ಸಮಾಜ ಪುಸ್ತಕಾಲಯ, ಧಾರವಾಡ–1,

13 **ಕೃಷ್ಣ ಮೂರ್ತಿ ಎಸ್.,** 2002, ಸಂಗೀತ ಸರಿತಾ, ಡಿ.ವಿ.ಕೆ. ಮೂರ್ತಿ, ಮೈಸೂರು – 4

14 **ಕೃಷ್ಣಮೂರ್ತಿ ಜೆ., ಓ. ಎಲ್. ನಾಗಭೂಷಣ ಸ್ವಾಮಿ (ಅನು),** 2005 ಪ್ರೀತಿ ಎಂದರೇನು? ಬೆಂಗಳೂರು ಶಿಕ್ಷಣ ಕೇಂದ್ರ, ಕೃಷ್ಣಮೂರ್ತಿ ಫೌಂಡೇಶನ್ ಇಂಡಿಯಾ, ಬೆಂಗಳೂರು

15 **ಕೃಷ್ಣಸ್ವಾಮಿ ಎನ್.,** 2000, 'ವಿಜ್ಞಾನಯುಗದ ಮಹಾಪ್ರಾಜ್ಞ'- ಮಹಾತ್ಮ ಗಾಂಧೀಜಿಯವರ ನೂರು ಮುಖಗಳ ದರ್ಶನ, ಭಾರತೀಯ ವಿದ್ಯಾಭವನದ ಗಾಂಧೀ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಕೇಂದ್ರ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು-1.

16 **ಕೃಷ್ಣಾಜೀ ಡೋಂಗ್ರಪ್ಪ ಜ್ಞಾನಮೋಠೆ ಹ.ಭ.ಪ(ಸಂ.),** 2001 ಪಂಢರೀ ವಾರಕರೀ ಸಾರ್ಥ ಭಜನೀ ಮಾಲಿಕಾ, ಶ್ರೀ ವಾಸಕರ ವಾರಕರೀ ಸಂಸ್ಥಾ ಟ್ರಸ್ಟ್, (ರ.ನಂ 177/75-76) ಗವಿಮಠ ರೋಡ್, ಕೊಪ್ಪಳ-583231

17 **ಕೆಳದಿ ವೆಂಕಟೇಶ ಜೋಯಿಸ್, ಡಾ.ಡಿ.ಆರ್.ಪಾಂಡುರಂಗ (ಸಂ.),** 2003 ಸಮಗ್ರ ದಾಸ ಸಾಹಿತ್ಯ- ಸಂಪುಟ 33, ಕವಿ ಪರಮದೇವ ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು,

18 **ಕೊರಟಿ ಶ್ರೀನಿವಾಸರಾವ್, ಶ್ರೀ ಕನಕದಾಸರು, ಭಾಗ್ಯಲಕ್ಷ್ಮಿ ಪ್ರಕಾಶನ,** 87, 3ನೇ ಕ್ರಾಸ್, 4ನೇ ಬ್ಲಾಕ್, ಬನಶಂಕರಿ 3ನೇ ಸ್ಟೇಜ್, 3ನೇ ಫೇಸ್, ಬೆಂಗಳೂರು- 85

19 **ಗೋಪಾಲಕೃಷ್ಣ ಶಾಸ್ತ್ರಿ. ಸಿ., ಮೂಡಂಬೈಲು(ಸಂ.),** ಮಹಾಭಾರತಕೋಶ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ

20 **ಚಕ್ರವರ್ತಿ ಶ್ರೀನಿವಾಸ ಗೋಪಾಲ ಆಚಾರ್ಯ,** ಬಾಲಮನೋಹರ ವ್ಯಾಖ್ಯಾನ, ಶಬ್ದಾರ್ಥ ಕೌಸ್ತುಭ, ಭಾಗ 6,

20 **ಚಿಕ್ಕ ರಾಮಾರೂಢಸ್ವಾಮಿ (ಸಂ.),** 1984, ಶ್ರೀಮನ್ನಿಜಗುಣ ಶಿವಯೋಗಿಗಳಿಂದ ವಿರಚಿತ **'ಕೈವಲ್ಯ ಪದ್ಧತಿ',** , ಶ್ರೀ ರಾಮಾರೂಢಸ್ವಾಮಿ ಸ್ವಾಮಿ ಬ್ರಹ್ಮವಿದ್ಯಾಶ್ರಮ, ಮಲ್ಲಾಪೂರ, ಬಾಗಲಕೋಟ,

21 **ಚಿದಾನಂದ ಅವಧೂತರು (ಮೂಲ),** ಸಟೀಕಾ ಶ್ರೀ ದೇವೀ ಮಹಾತ್ಮೆ, ಟೀಕೆ ಮತ್ತು ಪ್ರಕಾಶಕರು: ಶ್ರೀಮತಿ ವಿಶಾಲಾಕ್ಷಾಂಬಾತಾಯಿ, ಪಂ.ದೇ. ತೋಟಪ್ಪಯ್ಯ ಶಾಸ್ತ್ರಿಗಳು ಹಿರೇಮಠ, ಗದಗ

22 **ಚಿದಾನಂದಮೂರ್ತಿ ಎಂ.,** 2006, ಕನ್ನಡ ಸಂಸ್ಕೃತಿ: ನಮ್ಮ ಹೆಮ್ಮೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

23 **ಜಗನ್ನಾಥ ಶಾಸ್ತ್ರಿ.ಕೆ.,** 1998, ಚಿದಾನಂದಾವಧೂತ, ಮುತ್ತಿನ ಹಾರ ಮಾಲಿಕೆ, ಕರ್ನಾಟಕ ಸಾಹಿತ್ಯ ಆಕಾಡೆಮಮಿ, ನೃಪತುಂಗ ರಸ್ತೆ, ಸಿದ್ಧಯ್ಯ ಪುರಾಣಿಕ ವೃತ್ತ, ಬೆಂಗಳೂರು-1,

24 **ಜಯದಯಾಲಜೀ ಗೋಯಂದಕ (ಮೂಲ - ಹಿಂದಿ),** ಲಕ್ಷ್ಮಣ್‌ದಾಸ್ ವೇಲಣ್‌ಕರ್ (ಅನು.), 2007, ಸಾಧನ ನವನೀತ, ಗೀತಾ ಪ್ರೆಸ್, ಗೋರಖ್‌ಪುರ - 273005

25 **ಜಯದಯಾಲಜೀ ಗೋಯಂದಕ (ಹಿಂದೀ ಮೂಲಾನುವಾದ),** ಮೂರ್ತಿ ತಂಡಗ ತಂ. ಶ್ರೀ. ನ. (ಕನ್ನಡ ಅನುವಾದ), 1999, ಶ್ರೀಮದ್ಭಗವದ್ಗೀತಾ, ಗೀತಾಪ್ರೆಸ್, ಗೋರಖಪುರ್ - 273005

26 **ಡಿ.ವಿ.ಜಿ,** 2003, ಮಂಕುತಿಮ್ಮನ ಕಗ್ಗ (ತಾತ್ಪರ್ಯ ಸಹಿತ), ತಾತ್ಪರ್ಯ: ವಿದ್ಯಾವಾಚಸ್ಪತಿ ಕವಿತಾಕೃಷ್ಣ, ತನು -ಮನು ಪ್ರಕಾಶನ, ತೃಪ್ತಿ 42, 'ಜಿ' ಬ್ಲಾಕ್, 3ನೇ ತಿರುವು, ರಾಮಕೃಷ್ಣ ನಗರ, ಮೈಸೂರು-22

27 **ಡಿ.ವಿ.ಜಿ.,** 1996, ಸಂಸ್ಕೃತಿ, ಕಾವ್ಯಾಲಯ ಪ್ರಕಾಶಕರು, ಮೈಸೂರು.

28 ಡಿ.ವಿ.ಜಿ., 1997, ಜೀವನ ಸೌಂದರ್ಯ ಮತ್ತು ಸಾಹಿತ್ಯ, ಕಾವ್ಯಾಲಯ ಪ್ರಕಾಶಕರು, ಜಯನಗರ, ಮೈಸೂರು - 570014

29. **ದೇಶಪಾಂಡೆ ಮನೋಹರ ರಾಯರು (ಅನು.),** ಆರ್.ಡಿ.ರಾನಡೆ(ಮೂಲ), 1969, ಕನ್ನಡ ಸಂತರ ಪರಮಾರ್ಥ ಪಥ, ಕ.ವಿ.ವಿ., ಧಾರವಾಡ

29 **ನಾಗರತ್ನ ಟಿ.ಎನ್.,** 2010, ಹರಿದಾಸರ ಭಕ್ತಿಸ್ವರೂಪ, ಶ್ರೀಸುಶಮೀಂದ್ರ ಸೇವಾ ಪ್ರತಿಷ್ಠಾನ, ನಂಜನಗೂಡು.

30 **ನಾಗರತ್ನ ಟಿ.ಎನ್., ಮಂದಾಕಿನಿ,** 1996, ಹರಿದಾಸರ ಜನಪ್ರಿಯ ಹಾಡುಗಳು, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರುನಾಗರತ್ನ ಟಿ.ಎನ್.(ಸಂ.), 1987, ಶ್ರೀ ಗೋಪಾಲದಾಸರ ಕೃತಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ.

31 **ನಾಗರತ್ನ ಟಿ.ಎನ್.(ಸಂ.),** 1987, ಶ್ರೀ ಜಗನ್ನಾಥದಾಸರ ಕೃತಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ.

32 **ನಾಗರಾಜ್ ಡಿ.ಆರ್.,** 2006, ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ– 577417

33 **ನಾಗರಾಜ ರಾವ್, ಎಚ್.ವಿ.,** 2002, ವೇದ – ವೇದಾಂಗ, ಭವನದ ಗಾಂಧೀ ಕೇಂದ್ರ, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ರೇಸ್ಕೋರ್ಸ್ ರಸ್ತೆ, ಬೆಂಗಳೂರು – 560001

34 **ನಾವಡ ಎ.ವಿ., ಗಾಯತ್ರಿ ನಾವಡ (ಸಂ.),** 2002, ಸಾವಿರಾರು ಕೀರ್ತನೆಗಳು, ಅಂಕಿತ ಪುಸ್ತಕ, 53, ಶ್ಯಾಮ್ ಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನ ಗುಡಿ, ಬೆಂಗಳೂರು–4.

35 **ಪಂ। ಪೀತಾಂಬರಜೀ (ಮೂಲ – ಹಿಂದಿ),** ಶ್ರೀಮತಿ ವಿಶಾಲಾಕ್ಷಾಂಬಾತಾಯಿ, ಪಂ.ವೇ. ತೋಟಪ್ಪಯ್ಯ ಶಾಸ್ತ್ರೀಜಿ ಹಿರೇಮಠ, (ಸಂ. ಮತ್ತು ಪ್ರ.) ಸಟೀಕಾ ತಾತ್ಪರ್ಯ ಸಹಿತ ವಿಚಾರ ಚಂದ್ರೋದಯ, ಶ್ರೀ ತೋಂಟದಾರ್ಯ ಬುಕ್ ಡಿಪೋ, ಸ್ಟೇಷನ್ ರೋಡ್, ಗದಗ.

36 **ಪಾಂಡುರಂಗ ಡಿ. ಆರ್. (ಸಂ.),** ಸಮಗ್ರ ದಾಸ ಸಾಹಿತ್ಯ ಸಂಪುಟ :25, ಚಿದಾನಂದ ಅವಧೂತರು ಮತ್ತು ಕೆಳದಿ ವೆಂಕಣ್ಣ ಕವಿ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–2

37 **ಪಾವಂಜೆ ಗುರುರಾಯರು(ಸಂ.),** ಪರಿಶೋಧಕರು: ಡಾ। ಪಾದೇಕಲ್ಲು ವಿಷ್ಣು ಭಟ್ಟ, 2010 ಪುರಂದರದಾಸರ ಕೀರ್ತನೆಗಳು (ಸಂಯುಕ್ತ ಸಂಪುಟ), ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ರಥಬೀದಿ, ಉಡುಪಿ– 576101

38 **ಪ್ರಭುದತ್ತ ಬ್ರಹ್ಮಚಾರಿ,** 1989, ಶ್ರೀಚೈತನ್ಯ ಚರಿತಾವಲಿ (ಹಿಂದಿ), ಗೋವಿಂದಭವನ ಕಾರ್ಯಾಲಯ, ಗೀತಾ ಪ್ರೆಸ್, ಗೋರಖಪುರ – 273005

39 **ಪ್ರಜ್ಞಾ ಅಮ್ಮೆಂಬಳ,** 2009 'ಶ್ರೀ ಕ್ಷೇತ್ರ ಧರ್ಮಸ್ಥಳ ಬಹುಮುಖ ಅಧ್ಯಯನ', ಶ್ರೀ ನರಹರಿ ತೀರ್ಥ ದಾಸಸಾಹಿತ್ಯ ಅಧ್ಯಯನ ಕೇಂದ್ರ, ರಾಯಚೂರು

40 **ಬಸವರಾಜು ಎಲ್. (ಸಂ.),** 2008, ಅಕ್ಕನ ವಚನಗಳು, ಗೀತಾಬುಕ್ ಹೌಸ್, ಮೈಸೂರು,

41 **ಬಸವರಾಜು ಎಲ್. (ಸಂ.),** 2008, ಬಸವಣ್ಣನವರ ವಚನಗಳು, ಗೀತಾ ಬುಕ್ ಹೌಸ್, ಮೈಸೂರು–1

42 **ಬಿ. ವಿ. ಕೆ ಶಾಸ್ತ್ರೀ,** 1994, ಕಲೆಯಗೊಂಚಲು, ಜನಪ್ರಿಯ ಪುಸ್ತಕಮಾಲೆ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು

43 **ಬಿ. ವಿ. ಕೆ. ಶಾಸ್ತ್ರೀ(ಸಂ.),** 1995, ಗಾನ ಕಲಾ ಮಂಜರಿ, ಸಂಪುಟ 1, ಸಂಗೀತ ಪ್ರಬಂಧ ಸಂಕಲನ, ಸಂ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು–2,

44 **ಬಿ. ವಿ. ಕೆ. ಶಾಸ್ತ್ರೀ(ಸಂ.),** 1998, ಗಾನ ಕಲಾ ಮಂಜರಿ, ಸಂಪುಟ 2, ಸಂಗೀತ ಪ್ರಬಂಧ ಸಂಕಲನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು–2,

45 **ಬೆನಗಲ್ ರಾಮರಾವ್, ಪಾನ್ಯಂ ಸುಂದರಶಾಸ್ತ್ರಿ,** 2001, ಪುರಾಣ ನಾಮ ಚೂಡಾಮಣಿ, ಲೇ: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ

46 **ಬೇಲೂರು ಕೇಶವದಾಸರು,** 2000, ಶ್ರೀ ಕರ್ನಾಟಕ ಭಕ್ತವಿಜಯ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

47 **ಬೇಲೂರು ಕೇಶವದಾಸರು,** 2005, ಹರಿದಾಸ ಸಾಹಿತ್ಯ ಒಂದು ಅಧ್ಯಯನ, ಭಾರತಿ ಪ್ರಕಾಶನ, ಸರಸ್ವತಿ ಪುರಂ, ಮೈಸೂರು 570 009

48 **ಭದ್ರಗಿರಿ ಅಚ್ಯುತದಾಸರು,** 1992, ಶ್ರೀ ಹರಿಕಥಾಮೃತ ಸಿಂಧು (ರಾಮ ಕಥಾ ವಾಹಿನಿ), , ಪ್ರ: ಶ್ರೀಸುಧೀಂದ್ರ ಪಬ್ಲಿಷಿಂಗ್ ಹೌಸ್, 8 ನೇ ಅಡ್ಡ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–3

49 **ಭೂಸನೂರಮಠ ಸಂ.ಶಿ. (ಸಂ),** 2006 ವಚನ ಸಾಹಿತ್ಯ ಸಂಗ್ರಹ, ಸುವರ್ಣ ಸಾಹಿತ್ಯ ಗ್ರಂಥ ಮಾಲೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು – 560002

50 **'ಮ' ಮೂಲವಂಗ ಲೇಖಕರು,** 1996, ಶ್ರೀ ರಾಮಕೃಷ್ಣ ವಚನವೇದ, ಪೂರ್ವಾರ್ಧ, ಶ್ರೀ ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು – 570 020

51 **ಮಧುಸೂದನ ಸರಸ್ವತಿ (ಮೂಲ),** ಎಂ.ಎ.ಹೆಗಡೆ (ಅನುವಾದ ಮತ್ತು ವ್ಯಾಖ್ಯಾನ), 2008 ಭಗವದ್ಭಕ್ತಿರಸಾಯನಂ, ಉದಯ ಪ್ರಕಾಶನ, ನಂ. 984, 11ನೇ 'ಎ' ಮುಖ್ಯರಸ್ತೆ, 3ನೇ ವಿಭಾಗ, ರಾಜಾಜಿ ನಗರ, ಬೆಂಗಳೂರು– 10

52 **ಮಿರ್ಜಿ ಅಣ್ಣಾರಾಯ,** 1952, ಜೈನ ಧರ್ಮ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿ ಪುರಂ, ಮೈಸೂರು–4

53 **ಮೀನಗುಂಡಿ ಸುಬ್ರಮಣ್ಯ,** 1988, ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ, ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು– 1

54 **ಮುಗಳಿ ರಂ.ಶ್ರೀ.,** 2005, ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್ ಹೌಸ್, ಮೈಸೂರು–1

55 **ಮುರಳೀಧರ ಹೆಚ್.ಎನ್.(ಅನು),** 2001, ವಿವೇಕಾನಂದ ಕವಿತಾವಳಿ (ಸ್ವಾಮಿ ವಿವೇಕಾನಂದರ ಕವಿತೆಗಳ ಕನ್ನಡ ಅನುವಾದ), ವಿವೇಕಹಂಸ ಪ್ರಕಾಶನ, 3ನೇ ಅಡ್ಡರಸ್ತೆ, ಶ್ರೀನಿವಾಸ ನಗರ, ಬೆಂಗಳೂರು – 50

56 **ಮುರಳೀಧರ ಹೆಚ್.ಎನ್.,** 1984, 'ಉಪನಿಷತ್ತುಗಳು ಹಾಗೂ ವಚನ ಸಾಹಿತ್ಯ: ಒಂದು ತೌಲನಿಕ ಸಮೀಕ್ಷೆ' (ಬೆಂಗಳೂರು ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ಸಂಶೋಧನಾ ಪ್ರಬಂಧ)

57 **ಮೋಹನದಾಸ ಕರಮಚಂದ ಗಾಂಧೀಜಿ (ಮೂಲ– ಇಂಗ್ಲಿಷ್),** 1995, ಗೊರೂರು ರಾಮಸ್ವಾಮಿ ಅಯ್ಯಂಗಾರ್(ಭಾಷಾಂತರ), ನನ್ನ ಸತ್ಯಾನ್ವೇಷಣೆ, ನವಜೀವನ ಪ್ರಾಶನ ಮಂದಿರ, ಅಹಮದಾಬಾದ್–380014

58 **ಮಂಜುನಾಥ್ ಎಲ್. ಎಚ್.( ಸಂ.),** ಅವಲೋಕನ, ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮೀಣಾಭಿವೃದ್ಧಿ ಯೋಜನೆ, ಧರ್ಮಸ್ಥಳ

59 **ರಂಗನಾಥ್ ಶರ್ಮಾ ಎನ್. (ಅನು),** 1997, ಶ್ರೀ ಮಾಧವಿಯ ಶ್ರೀ ಮಚ್ಚಂಕರ ದಿಗ್ವಿಜಯಃ (ಶ್ರೀವಿದಾರಣ್ಯ ಪ್ರಣೀತಃ) ಭಾಗ–2. ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಮ್, ದಕ್ಷಿಣಾಮ್ನಾಯ ಶ್ರೀಶಾರದಾ ಪೀಠಂ, ಶೃಂಗೇರಿ – 577139

60 **ರಂಗನಾಥ ಶರ್ಮಾ ಎನ್.(ಸಂ.),** 1996, ಅಮರಸಿಂಹನ ನಾಮಲಿಂಗಾನುಶಾಸನ ಅಥವಾ ಅಮರಕೋಶ, ಸುವಿದ್ಯಾ ಪ್ರಕಾಶನ, ಬಸವನಗುಡಿ, ಬೆಂಗಳೂರು – 4

61 **ರಂಗನಾಥಶರ್ಮಾ ಎನ್. (ಅನು.),** 2000, ಶ್ರೀ ವಿಷ್ಣುಪುರಾಣಮ್, ರಾಮಕೃಷ್ಣ ಮಠ, ಬೆಂಗಳೂರು–19

62 **ರಂಗನಾಥ ಶರ್ಮಾ ಎನ್. (ಗದ್ಯಾನುವಾದ),** 2009, ಕನಕದಾಸ ವಿರಚಿತ ಹರಿಭಕ್ತಿಸಾರ, ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18

63 **ರಂಗಸ್ವಾಮೀ. ಹೆಚ್. ಎನ್. (ಆದಿ ಸಂ.),** 1999, ರಾಮೇಶ್ವರಾವಧಾನೀ, ಶ್ರೀಹರಿ, ಶ್ರೀನಿವಾಸರಾಯ ನೆ.ವೆಂ. (ಸಂ) ಶ್ರೀ ಮದ್ಭಾಗವತ, ಭಾರತ ದರ್ಶನ ಪ್ರಕಾಶನ, 163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು – 560028

64 **ರಂ.ಶ್ರೀ.ಮುಗಳಿ**, 2005, ಕನ್ನಡ ಸಾಹಿತ್ಯ ಚರಿತ್ರೆ ಗೀತಾಬುಕ್ ಹೌಸ್: ಪ್ರಕಾಶಕರು: ಮೈಸೂರು– 570001

65 **ರಾಘವೇಂದ್ರಾಚಾರ್ಯ ಸ್ವಾಮಿರಾಯಾಚಾರ್ಯ ಪಂಚಮುಖಿ**, 1952, ಕರ್ನಾಟಕದ ಹರಿದಾಸ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್, ಚಾಮರಾಜಪೇಟೆ, ಬೆಂಗಳೂರು.

66 **ರಾಜಗೋಪಾಲಾಚಾರ್ಯ ಎಂ.**, 1993, 'ಹರಿದಾಸರ ಸಂಪ್ರದಾಯದ ಹಾಡುಗಳು.' ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ, ಎಂ.ಜಿ.ಎಂ.ಕಾಲೇಜು, ಉಡುಪಿ–576102

67 **ರಾಮಚಂದ್ರರಾವ್ ಎಸ್.ಕೆ. (ಮೂಲ – ಇಂಗ್ಲಿಷ್)**, ಕನ್ನಡಕ್ಕೆ : ಶ್ರೀ ನೀಲತ್ತಹಳ್ಳಿ ಕಸ್ತೂರಿ, 2008, ಭಾರತೀಯ ಸಂಸ್ಕೃತಿ ತಿರುಳು ಮತ್ತು ಪರಂಪರೆ 'ಭೋಜಸ್ಮೃತಿ', ವಿ.ಸೀ. ಸಂಪದ, ರಾಜೀವ ನಗರ, ಬನಶಂಕರಿ 3ನೇ ಸ್ಟೇಜ್, ಬೆಂಗಳೂರು–85,

68 **ರಾಮಚಂದ್ರರಾವ್ ಸಾ.ಕೃ.**, 2003, ದಾಸಸಾಹಿತ್ಯ ಮತ್ತು ಸಂಸ್ಕೃತಿ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ

69 **ರಾಮಶೇಷನ್ ಎಸ್. ಕೆ.**, 1991, ಹರಿದಾಸ ಆಂದೋಲನ – ಒಂದು ಅಧ್ಯಯನ, 1474, ಕೃಷ್ಣಮೂರ್ತಿಪುರಂ, ಮೈಸೂರು – 570004

70 **ರಾಮಸ್ವಾಮಿ. ಎಸ್. (ಸಂ), ನೀಲತ್ತಹಳ್ಳಿ ಕಸ್ತೂರಿ (ಕನ್ನಡ ಅನುವಾದ)**, 1999, ಸಂಸ್ಕೃತಿ, ಭಾರತೀಯ ವಿದ್ಯಾಭವನದ ಗಾಂಧೀ ವಿಜ್ಞಾನ ಹಾಗೂ ಮಾನವೀಯ ಮೌಲ್ಯಗಳ ಕೇಂದ್ರ, ಬೆಂಗಳೂರು– 1

71 **ಲಕ್ಷ್ಮಣದಾಸ ವೇಲಣಕರ್**, 1994, ಕಥಾಕೀರ್ತನ ಕಲೆ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, 14/3, **ಕೆನರಾ ಫೈನಾನ್ಸ್ ಕಟ್ಟಡ**, ನೃಪತುಂಗ ರಸ್ತೆ, ಬೆಂಗಳೂರು– 2

72 **ಲಕ್ಷ್ಮಣದಾಸ ವೇಲಣಕರ್**, 2004, ಕಥಾಕೀರ್ತನ ಸಿರಿ, ಪುರಂದರ ವಿಠಲ ಸೇವಾಶ್ರಮ. 'ದಾಸ ಜ್ಯೋತಿ', ಅಂಚೆ : ಮೂಡುಮಾರ್ನಾಡು, ದ.ಕ. – 574 213

73 **ವರದರಾಜರಾವ್ ಜಿ.**, 1987, ಶ್ರೀ ಪಾದರಾಜರ ಕೃತಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ

74 **ವಸಂತ ಕುಷ್ಟಗಿ (ಸಂ.)**, 2003, ಸಮಗ್ರ ದಾಸ ಸಾಹಿತ್ಯ, ಸಂಪುಟ–4, ಪುರಂದರದಾಸರ ಉಗಾಭೋಗಗಳು ಮತ್ತು ಸುಳಾದಿಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು– 2

75 **ವಾಸುದೇವಾಚಾರ್ಯ ದೊಡ್ಡಬಳ್ಳಾಪುರಂ (ಅನು.)**, ನಾರದೀಯಮಹಾಪುರಾಣ, ಮೂಲ : ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ, ತಂತ್ರಾಂಶ ಆಕರ: ಶ್ರೀ ರಂಗ ಡಿಜಿಟಲ್ ಸಾಫ್ಟವೇರ್ ಟೆಕ್ನಾಲಜೀಸ್,

76 **ವಿಜಯಕುಮಾರ್ ಹ. ನಂ. (ಸಂ.)**, ಮಾರ್ಗದರ್ಶಕ: ಡಾ। ಎಂ. ಚಿದಾನಂದಮೂರ್ತಿ, 'ವಚನಕಾರರ ಆಂದೋಲನ ವಿಶ್ವ ಆಂದೋಲನದ ಹಿನ್ನೆಲೆಯಲ್ಲಿ' – ಸಂಶೋಧನಾ ಪ್ರಬಂಧ ಬೆಂಗಳೂರು ವಿಶ್ವವಿದ್ಯಾಲಯ

77 **ವಿದ್ಯಾಶಂಕರ್ (ಸಂ.)**, 1995, ನಿಜಗುಣರ ಸಮಗ್ರ ಕೃತಿಗಳು, ಭಾಗ–1, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು– 2

78 **ವೆಂಕಟರಾಮಯ್ಯ. ಸಿ. ಕೆ. (ಸಂ.)**, ಸಂಸ್ಕೃತಿ, 2007, ಸುವರ್ಣ ಪರಂಪರೆ ಮಾಲೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ

79 **ವೆಂಕಟೇಶ್ ಮೂರ್ತಿ ಎಸ್.** (ಸಂಗ್ರಹ ಮತ್ತು ಅನುವಾದ), 2002, ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ ದ್ವಾದಶಸ್ತೋತ್ರಮ್, ಪವನಜ ಪ್ರಕಾಶನ, ಬನಶಂಕರಿ, ಮೊದಲನೆಯ ಸ್ಟೇಜ್, ಬೆಂಗಳೂರು–50

80 **ಶತಾವಧಾನಿ ಆರ್.ಗಣೇಶ್**, 1997, ಷಡ್ದರ್ಶನ ಸಂಗ್ರಹ, , ಭಾರತೀಯ ವಿದ್ಯಾಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು– 560001,

81 **ಶಾಂತರಸ**, 2000, ತತ್ವ ಪದಗಳು, ಪ್ರಾತಿನಿಧಿಕ ಸಂಕಲನ, ಪ್ರಸಂ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು– 2

82 **ಶಿವಾನಂದ ಗುಬ್ಬಣ್ಣವರ(ಸಂ.)**, 2002, ಶಿಶುನಾಳ ಷರೀಫ ಗೀತೆಗಳು, ಅಕ್ಷಯ ಪ್ರಕಾಶನ, ಧಾರವಾಡ– 580007

83 **ಶ್ರೀ ಶಬ್ದಾರ್ಥ ಕೌಸ್ತುಭಃ** – ಸಂಸ್ಕೃತ ಕನ್ನಡ ಶಬ್ದಕೋಶ – ಸಂಪುಟ 5

84 **ಶ್ರೀನಿವಾಸ ರಾವ್ ಕೊರಟಿ**, 1984, ಶ್ರೀ ಪುರಂದರದಾಸರು, ಭಾಗ್ಯಲಕ್ಷ್ಮಿ ಪ್ರಕಾಶನ, 87, 3ನೇ ಕ್ರಾಸ್, 4ನೇ ಬ್ಲಾಕ್, ಬನಶಂಕರಿ 3ನೇ ಸ್ಟೇಜ್, 3ನೇ ಫೇಸ್, ಬೆಂಗಳೂರು– 85

85 **ಸಂತೋಷಕುಮಾರ ಗುಲ್ವಾಡಿ, ನಿ.ಮುರಾರಿ ಬಲ್ಲಾಳ (ಸಂ.)**, 1997, ಭಕ್ತಿ ಭಾರತಿ, (ಸ್ವತಂತ್ರ ಭಾರತದ ಸ್ವರ್ಣೋತ್ಸವ ಕಾಣಿಕೆ), ಸಂಗೀತ ಸಭಾ, ಉಡುಪಿ.

86 **ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳು (ಅನು)**, 2005, ಶ್ರೀ ಭಗವದ್ರಾಮಾನುಜಾಚಾರ್ಯ ವಿರಚಿತ 'ವೇದಾರ್ಥ ಸಂಗ್ರಹ', ಅಧ್ಯಾತ್ಮ ಪ್ರಕಾಶ ಕಾರ್ಯಾಲಯ. ಹೊಳೆನರಸೀಪುರ – 11

87 **ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು**, 1992, ಭಕ್ತಿಚಂದ್ರಿಕೆ (ನಾರದ ಭಕ್ತಿಸೂತ್ರಗಳ ವಿವರಣೆ) ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ – 11

88 **ಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು**, 2000, ಭಾಗವತ ಸಂಪ್ರದಾಯ, ಅಧ್ಯಾತ್ಮಪ್ರಕಾಶ ಗ್ರಂಥಾಲಯ, ಹೊಳೆನರಸೀಪುರ – 11

89 **ಸತ್ಯನಾರಾಯಣ ಟಿ.ವಿ.**, ಧರ್ಮಶಾಸ್ತ್ರ ಮತ್ತು ಅರ್ಥಶಾಸ್ತ್ರ, ಯುವ ಜನರಿಗಾಗಿ ಸಂಸ್ಕೃತ ವಾಙ್ಮಯ, ಭವನದ ಗಾಂಧೀಕೇಂದ್ರ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು–1

90 **ಸತ್ಯವತಿ ಟಿ. ಎಸ್.**, 2002, ಚತುಷ್ಷಷ್ಟಿ ಕಲೆ – ಭವನದ ಗಾಂಧೀ ಕೇಂದ್ರ, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ಬೆಂಗಳೂರು–1,

91 **ಸುಧಾಕರ್** (ಸಂ.), 1999, ಕನಕ ಸಾಹಿತ್ಯ ದರ್ಶನ ಸಂಪುಟ – 4, ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ

92 **ಸ್ವಾಮಿ ಆದಿದೇವಾನಂದ**, 1987, ಶ್ರೀ ಶಂಕರಭಗವತ್ಪಾದಪ್ರಣೀತ ವಿವೇಕಚೂಡಾಮಣಿ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು–570002,

93 **ಸ್ವಾಮಿ ನಿತ್ಯಸ್ಥಾನಂದ**, 2006, ಪರಿಪೂರ್ಣ ವ್ಯಕ್ತಿತ್ವ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು– 570020 ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 56.

94 **ಸ್ವಾಮಿ ಪರಮಾನಂದ ಭಾರತೀ**, 2004, ವೇದಾಂತ ಪ್ರಬೋಧ, ಜ್ಞಾನ ಸಂವರ್ಧನೀ ಪ್ರತಿಷ್ಠಾನಮ್, ಸುಮುಖ ರೆಸಿಡೆನ್ಸಿ, 302, 3ನೇ ಮಹಡಿ, ವಿ. ಸೀತರಾಮಯ್ಯ ರಸ್ತೆ, ಗವಿಪುರಂ, ಬೆಂಗಳೂರು–19,

95 **ಸ್ವಾಮಿ ಪರಮಾನಂದ**, 2000 ಭಕ್ತಿಮಾರ್ಗ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು–20

96 **ಸ್ವಾಮಿ ವಿವೇಕಾನಂದ**, 1985, ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ – ಸಂಪುಟ 5, ಶ್ರೀ ರಾಮಕೃಷ್ಣಾಶ್ರಮ, ಮೈಸೂರು–570020

97 **ಸ್ವಾಮಿ ಸೋಮನಾಥಾನಂದ**, 1989, ಉಪನಿಷತ್‌ಭಾವಧಾರೆ, ಶ್ರೀರಾಮಕೃಷ್ಣಾಶ್ರಮ, ಮೈಸೂರು–570020

98 **ಸ್ವಾಮಿ ಹರ್ಷಾನಂದ**, 1996, ಮಹರ್ಷಿ ಪತಂಜಲಿಯ ಯೋಗಸೂತ್ರಗಳು, ರಾಮಕೃಷ್ಣ ಮಠ, ಬೆಂಗಳೂರು–19,

85 **ಸ್ವಾಮಿ ಹರ್ಷಾನಂದ**, 2000, ಶಾಂಡಿಲ್ಯ ಭಕ್ತಿ ಸೂತ್ರ, , ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು– 570020,

86 **ಹಂಪಿಹೊಳಿ. ಎ. ಕೆ.** 2004.'ಕಾಮ ಒಂದು ಪುರುಷಾರ್ಥ' ಅಭಿಜ್ಞಾನ, ನಂ. 7-8, ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ಆವರಣ, ಬಸವನಗುಡಿ ರಸ್ತೆ ನರಸಿಂಹರಾಜ ಕಾಲೊನಿ, ಬೆಂಗಳೂರು – 19

87 **ಹೆರಂಜೆ ಕೃಷ್ಣ ಭಟ್ಟ ಮತ್ತು ಪಾದೇಕಲ್ಲು ವಿಷ್ಣು ಭಟ್ಟ** (ಸಂ.), 2005, ಹರಿದಾಸ ಕೀರ್ತನ (ಪಾವಂಜೆ ಹರಿದಾಸರ ಕೃತಿ ಸಂಪುಟ), ಹೆರಂಜೆ ಕೃಷ್ಣ ಭಟ್ಟ ಅಭಿನಂದನೆ ಸಮಿತಿ, c/o ಯಕ್ಷಗಾನ ಕಲಾರಂಗ, ಅದಮಾರು ಮಠ ಓಣಿ, ಉಡುಪಿ – 576101

## ಇಂಗ್ಲಿಷ್ ವಿಭಾಗ

1. Development, Divinity and Dharma - The role of religion in development and microfinance institutions by Malcom Harper, D.S.K Rao and Ashis Kumar Sahu, Practical Action Publishing, 2008

2. Divine Mother Rama Devi, , 1980, Bhakti- means and the end, Rama Shakti Mission, Shakti Nagar, Mangalore-16

3. Divine Mother Sree Rama Devi, 1972, Path to Beatific Peace, volume II, Rama Sakti Mission, Shakti nagar, Mangalore – 575016

4. Indian classical music - Prof. Sunil Bose, Vikas Publishing House,.Pvt.Ltd, 576, Masjid Road, Jangpura, New Delhi–14, 1990

5. Saints and mystics, Published by: The President, Sri Ramakrishna Math, Mylapore, Chennai-600004

## ಪತ್ರಿಕೆ/ ಕೈಪಿಡಿಗಳು

1 'Katha Keertan' ಪ್ರಬಂಧಗಳ ಸಂಕಲನ, 1983, ಪ್ರ: ಕೇಂದ್ರ ಸಂಗೀತ ನಾಟಕ ಅಕಾಡೆಮಿ, ನವದೆಹಲಿ, ಹಾಗೂ ಭಾರತೀಯ ವಿದ್ಯಾಭವನ ಬೆಂಗಳೂರು,

2 ಆಂಗ್ಲ ಪತ್ರಿಕೆ 'Bhavan's Journal' 1984, ಏಪ್ರಿಲ್ 16 ಈ ಸಂಚಿಕೆಯಲ್ಲಿ ಪ್ರಕಟವಾದ ಡಾ.ಹೆಚ್.ಕೆ.ರಂಗನಾಥ್ ಇವರ ಲೇಖನ The Art of Katha- Kirtan

3 ಕರಾವಳಿಯ ದಿನಪತ್ರಿಕೆ 'ಹೊಸದಿಗಂತ', 1–12–2010 ಕಟೀಲು ಯಕ್ಷಗಾನ ಮೇಳಗಳ ಕುರಿತಾದ ವಿಶೇಷ ಪುರವಣಿ **'ದುರ್ಗಾನಯನೋತ್ಸವ'**

4 ಮದ್ಯವರ್ಜನ ಶಿಬಿರ ಸಂಹಿತೆ, 2010, ಡಾ.ಎಲ್.ಎಚ್.ಮಂಜುನಾಥ್, ವಿವೇಕ್ ವಿ. ಪಾಯಸ್, ಪ್ರ: ಜಿಲ್ಲಾ ಜನಜಾಗೃತಿ ವೇದಿಕೆ, ಬೆಳ್ತಂಗಡಿ,

5 . ರಾಮಕೃಷ್ಣ ಮಠ ಮತ್ತು ರಾಮಕೃಷ್ಣ ಮಿಷನ್ ಇತಿಹಾಸ, ಆದರ್ಶ, ಚಟುವಟಿಕೆ– ಕೈಪಿಡಿ, 2007, ಶ್ರೀ ರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು–20,

## ಮಾಹಿತಿ ತಂತ್ರಾಂಶ ಆಕರ

1. ಸಾಯಣ ಭಾಷ್ಯ ಸಹಿತ ಋಗ್ವೇದ ಸಂಹಿತಾ ಮತ್ತು ಗ್ರಂಥಮಾಲಾ, ಮೂಲ: ಶ್ರೀ ಜಯಚಾಮರಾಜೇಂದ್ರ ವೇದ ರತ್ನಮಾಲಾ, ತಂತ್ರಾಂಶ : ಶ್ರೀ ರಂಗ ಡಿಜಿಟಲ್ ಆಂಡ್ ಸಾಫ್ಟ್‌ವೇರ್ ಟೆಕ್ನಾಲಜೀಸ್, ಶ್ರೀ ರಂಗಪಟ್ಟಣ, www.srirangadigital.com

